




# ಸುಕುಮಾರ ದೀಪ್ತಿ

ಶಿವಯೋಗ ಮಂದಿರ ಸಂಸ್ಥೆಯ ಶತಮಾನೋತ್ಸವ
ಸಂಸ್ಮರಣ ಸಂಚಿಕೆ





- ಶ್ರೀ ಕುಮಾರದೇವರು ರಾಜೂರು (ಬೆಳಗಾವಿ)

ಶಿವಯೋಗಮಂದಿರ ಸಂಸ್ಥೆಯ ಶತಮಾನೋತ್ಸವ ಸಮಿತಿ
ಶಿವಯೋಗಮಂದಿರ

# ಸುಕುಮಾರ ದೀಪ್ತಿ

## ಶ್ರೀ ಶಿವಯೋಗಮಂದಿರ ಸಂಸ್ಥೆಯ ಶತಮಾನೋತ್ಸವ ಸಂಸ್ಮರಣ ಸಂಚಿಕೆ

ಸಂಪಾದಕರು

**ಕುಮಾರ ದೇವರು,**

ರಾಜೂರ (ಬೆಳಗಾವಿ)



ಪ್ರಕಾಶಕರು

**ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯ ಶತಮಾನೋತ್ಸವ ಸಮಿತಿ**

ತಾ. ಬಾದಾಮಿ ಶಿವಯೋಗಮಂದಿರ ಜಿ. ಬಾಗಲಕೋಟ

**SUKUMAR DEEPTI** : Centenary Celebration Volume of *Shivayogamandir.*

**Editor** : Kumar Devaru, Rajoor

**Published by** : Shivayogamandir Centenary Celebration Committee,
Shivayogamandir Tq.Badami, Dist. Bagalkot.





**First Edition** : 2010

**Pages** : xxiv + 178

**Price** : **Rs. 100 /-**

ಸುಕುಮಾರ ದೀಪ್ತಿ : ಶ್ರೀ ಶಿವಯೋಗಮಂದಿರ ಸಂಸ್ಥೆಯ ಶತಮಾನೋತ್ಸವ ಸಂಸ್ಮರಣ ಸಂಚಿಕೆ

ಸಂಪಾದಕರು : ಕುಮಾರ ದೇವರು, ರಾಜೂರ (ಬೆಳಗಾವಿ)

ಪ್ರಕಾಶಕರು : ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯ ಶತಮಾನೋತ್ಸವ ಸಮಿತಿ,
ಶಿವಯೋಗಮಂದಿರ ತಾ. ಬದಾಮಿ, ಜಿ. ಬಾಗಲಕೋಟ

ಮೊದಲ ಮುದ್ರಣ : ೨೦೧೦

ಪುಟಗಳು : xxiv + ೧೭೮

ಬೆಲೆ : ರೂ. ೧೦೦/-



ಮುದ್ರಕರು :
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಕಾಗದಗೇರಿ ಓಣಿ, ಗದಗ – 582 101.
✆ : (08372) 237566, 235509 (O) 236578 (R)
Email : chaitanya_offset@yahoo.co.in

## ಪರಿವಿಡಿ

- ಹಾಲಕೆರೆ ಶ್ರೀ ಅನ್ನದಾನ ಮಹಾಸ್ವಾಮಿಗಳು

  ಡಾ. ಬಿ. ವಿ. ಶಿರೂರ
- ನವಲಗುಂದ ಶ್ರೀ ಬಸವಲಿಂಗ ಮಹಾಸ್ವಾಮಿಗಳು

  ಡಾ. ಸಂಗಮೇಶ ಹಂಡಗಿ
- ನಾಗನೂರು ಶ್ರೀ ಡಾ. ಶಿವಬಸವ ಮಹಾಸ್ವಾಮಿಗಳು

  ಡಾ. ಬಸವರಾಜ ಜಗಜಂಪಿ
- ಹಾನಗಲ್ಲ ಶ್ರೀ ಸದಾಶಿವ ಮಹಾಸ್ವಾಮಿಗಳು

  ಶ್ರೀ ಚನ್ನಬಸವ ಶಾಸ್ತ್ರಿ, ಇಟಗಿ
- ಹುಬ್ಬಳ್ಳಿಯ ಡಾ. ಮೂಜಗಂ

  ಶ್ರೀ ಶಿವಯೋಗಿ ದೇವರು, ಬೆಳಗಾವಿ
- ಶಿರ್ಶಿಯ ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು

  ಶ್ರೀ ಎಸ್.ಬಿ. ಹಿರೇಮಠ
- ಹೊಸಪೇಟೆಯ ಶ್ರೀ ಜ. ಸಂಗನಬಸವ ಮಹಾಸ್ವಾಮಿಗಳು

  ಡಾ. ಬಿ. ವಿ. ಮಲ್ಲಾಪುರ
- ಮುಂಡರಗಿ ಶ್ರೀ ಜ.ಡಾ. ಅನ್ನದಾನೀಶ್ವರ ಮಹಾಸ್ವಾಮಿಗಳು

  ಡಾ. ವಿಜಯಶ್ರೀ ಹಿರೇಮಠ

■■

- ಹಾಲಕೆರೆ ಶ್ರೀ ಅನ್ನದಾನ ಮಹಾಸ್ವಾಮಿಗಳು

  ಡಾ. ಬಿ. ವಿ. ಶಿರೂರ

- ನವಲಗುಂದ ಶ್ರೀ ಬಸವಲಿಂಗ ಮಹಾಸ್ವಾಮಿಗಳು

  ಡಾ. ಸಂಗಮೇಶ ಹಂಡಗಿ

- ನಾಗನೂರು ಶ್ರೀ ಡಾ. ಶಿವಬಸವ ಮಹಾಸ್ವಾಮಿಗಳು

  ಡಾ. ಬಸವರಾಜ ಜಗಜಂಪಿ

- ಹಾನಗಲ್ಲ ಶ್ರೀ ಸದಾಶಿವ ಮಹಾಸ್ವಾಮಿಗಳು

  ಶ್ರೀ ಚನ್ನಬಸವ ಶಾಸ್ತ್ರಿ, ಇಟಗಿ

- ಹುಬ್ಬಳ್ಳಿಯ ಡಾ. ಮೂಜಗಂ

  ಶ್ರೀ ಶಿವಯೋಗಿ ದೇವರು, ಬೆಳಗಾವಿ

- ಶಿರ್ಶಿಯ ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು

  ಶ್ರೀ ಎಸ್.ಬಿ. ಹಿರೇಮಠ

- ಹೊಸಪೇಟೆಯ ಶ್ರೀ ಜ. ಸಂಗನಬಸವ ಮಹಾಸ್ವಾಮಿಗಳು

  ಡಾ. ಬಿ. ವಿ. ಮಲ್ಲಾಪುರ

- ಮುಂಡರಗಿ ಶ್ರೀ ಜ.ಡಾ. ಅನ್ನದಾನೀಶ್ವರ ಮಹಾಸ್ವಾಮಿಗಳು

  ಡಾ. ವಿಜಯಶ್ರೀ ಹಿರೇಮಠ

■■

# ಅಧ್ಯಕ್ಷರ ನುಡಿ

ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ನಮ್ಮ ನಾಡು ಕಂಡ ಮಹಾನ್ ತಪಸ್ವಿಗಳಲ್ಲಿ ಒಬ್ಬರು. ಆಧುನಿಕ ಭಾರತದ ಚರಿತ್ರೆಯಲ್ಲಿ ಅವರ ಹೆಸರು ಚಿರಸ್ಥಾಯಿಯಾಗಿರುವಂತಹದು. ಕರ್ನಾಟಕವು 'ಬಹುಧರ್ಮಗಳ ಆಡೊಂಬಲ' ಎಂಬುದು ಶಾಸನಕವಿಯೊಬ್ಬನ ಹೇಳಿಕೆ. ಇಲ್ಲಿ ಅನೇಕ ಧರ್ಮಗಳು ಮಾನವ ಕುಲದ ಐಕ್ಯತೆಗಾಗಿ, ಶಾಂತಿಗಾಗಿ ಶ್ರಮಿಸುತ್ತಿವೆ. ಅಂಥ ಪವಿತ್ರ ಧರ್ಮಗಳಲ್ಲಿ ವೀರಶೈವ ಲಿಂಗಾಯತ ಧರ್ಮವು ಪ್ರಧಾನವಾದುದು. ಈ ಧರ್ಮದ ತತ್ವ ಸಿದ್ಧಾಂತಗಳು ವಿಶ್ವಮಾನ್ಯವಾಗಿರುವಂತಹವು. ಸಮಗ್ರ ಮಾನವ ಕುಲದ ಕಲ್ಯಾಣಕ್ಕಾಗಿ ಸಮಾನತೆ-ಸಮನ್ವಯದ ಸೂತ್ರ ಪ್ರತಿಪಾದಿಸಿದ ವೀರಶೈವ ಲಿಂಗಾಯತ ಧರ್ಮವು ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ಜಡವಾಗಿ ನಿಸ್ತೇಜಗೊಂಡಿತು. ವಿಶ್ವಮಾನ್ಯ ತತ್ವಗಳನ್ನು ಒಳಗೊಂಡಿದ್ದರೂ, ಸರಿಯಾದ ತಿಳುವಳಿಕೆಯಿಲ್ಲದೆ ಅಜ್ಞಾನ-ಅಂಧಕಾರದಲ್ಲಿ ಮುಳುಗಿ ಹೋಗಿತ್ತು. ಹೀಗೆ ಮುಳುಗಿಹೋಗಿದ್ದ ಈ ಧರ್ಮಕ್ಕೆ ಮತ್ತೆ ಹೊಸ ಚೈತನ್ಯ, ಬೆಳಕು ನೀಡಿದವರು ಹಾನಗಲ್ಲ ಕುಮಾರ ಶಿವಯೋಗಿಗಳು.

ಆ ಕಾಲದ ಸಂಕ್ರಮಣ ಸ್ಥಿತಿಯಲ್ಲಿ ಧರ್ಮಜಾಗೃತಿಗಾಗಿ ಏನೆಲ್ಲ ಪ್ರಯತ್ನಗಳು ಸಾಗಿದ್ದವು. ಸಕ್ಕರಿ ಕರಡೆಪ್ಪನವರು, ಡೆಪ್ಯೂಟಿ ಚೆನ್ನಬಸಪ್ಪನವರು, ವಾರದ ಮಲ್ಲಪ್ಪನವರು, ಗಿಲಗಂಚಿ ಗುರುಸಿದ್ಧಪ್ಪನವರು ಮೊದಲಾದ ಅನೇಕ ಪ್ರಜ್ಞಾವಂತ ಮುಂದಾಳುಗಳು ಹಲವು-ಹತ್ತು ಕ್ರಿಯಾ ಯೋಜನೆಗಳನ್ನು ರೂಪಿಸಿದರು. ಈ ಎಲ್ಲ ಮುಂದಾಳುಗಳಿಗೆ ಮಾರ್ಗದರ್ಶನ-ಪ್ರೇರಣೆ ನೀಡಿದವರು ಹಾನಗಲ್ಲ ಕುಮಾರ ಶಿವಯೋಗಿಗಳು.

೧೯೦೩ರಲ್ಲಿ ಕುಮಾರ ಶಿವಯೋಗಿಗಳು ಮುಖಂಡರನ್ನು ಕೂಡಿಸಿ ಸಭೆ ಕರೆದು, ಸಮಾಜದ ಸಂಘಟನೆಗಾಗಿ ಒಂದು ಮಹಾಸಭೆ ಸ್ಥಾಪಿಸಬೇಕೆಂಬ ವಿಚಾರ ಮುಂದಿಟ್ಟರು. ಶ್ರೀಗಳ ಕನಸು ನನಸಾಯಿತು. ಮರುವರ್ಷವೇ (೧೯೦೪) ಶ್ರೀ ಮದ್ವೀರಶೈವ ಮಹಾಸಭೆ ಅಧಿವೇಶನ ಜರುಗಿತು. ಸಿರಸಂಗಿ ಲಿಂಗರಾಜರು ಅದರ ಘನ ಅಧ್ಯಕ್ಷರು. ಮಹಾಸಭೆಯು ೪ ವರ್ಷಗಳಲ್ಲಿ ಪರಿಣಾಮಕಾರಿಯಾದ ಸಾಧನೆ ಮಾಡಿತು. ಆದರೆ ಕುಮಾರ ಶಿವಯೋಗಿಗಳವರಿಗೆ ಇನ್ನೂ ತೃಪ್ತಿ ಇರಲಿಲ್ಲ. ಈ ಧರ್ಮದ ಮಠಾಧಿಪತಿಗಳಾಗುವವರು ಸರಿಯಾದ ತರಬೇತಿ ಇಲ್ಲದ ಕಾರಣ ಆರೂಢ ಸಂಪ್ರದಾಯದತ್ತ ಒಲವು ತೋರಿಸುತ್ತ ಸಮಾಜಮುಖಿಯಾಗಿದ್ದ ಧರ್ಮವನ್ನು ಇನ್ನಷ್ಟು ಅಂಧಕಾರದಲ್ಲಿಡಲು ಪ್ರಯತ್ನಿಸುತ್ತಿದ್ದರು. ಇದನ್ನು ಗಮನಿಸಿದ ಕುಮಾರ ಶಿವಯೋಗಿಗಳು ಸ್ವಾಮಿಗಳ ತರಬೇತಿಗಾಗಿ ಒಂದು ಬೃಹತ್ ತರಬೇತಿ ಕಮ್ಮಟವನ್ನು ಸ್ಥಾಪಿಸಬೇಕೆಂದು ಸಂಕಲ್ಪ ಮಾಡಿದರು. ತಮ್ಮ ಸಂಕಲ್ಪದ ಆಶಯವನ್ನು ಮಹಾಸಭೆಯ ಮೂಲಕ ಸಮುದಾಯದ ಮುಂದಿಟ್ಟರು. ಸಮುದಾಯದ ಅಧಿಕೃತ ಒಪ್ಪಿಗೆ ಪಡೆದ ನಂತರ 'ಶಿವಯೋಗಮಂದಿರ' ಸ್ಥಾಪನೆಯ ರೂಪುರೇಷೆ ಸಿದ್ಧಪಡಿಸಿದರು.

೭-೨-೧೯೦೯ ರಂದು ವಿಧ್ಯುಕ್ತವಾಗಿ ಪ್ರಾರಂಭಗೊಂಡ ಶಿವಯೋಗಮಂದಿರವು ಯೋಗ್ಯ ಮಠಾಧಿಪತಿಗಳನ್ನು ಸಮಾಜಕ್ಕೆ ನೀಡಿತು. ಭಾಲ್ಕಿ, ನಾಗನೂರು, ಹುಬ್ಬಳ್ಳಿ ಶ್ರೀಗಳೇ ಮೊದಲಾದ ಅನೇಕ ಶಿಷ್ಯ-ಪ್ರಶಿಷ್ಯರು ಶೈಕ್ಷಣಿಕ-ಸಾಹಿತ್ಯಿಕ-ಸಾಮಾಜಿಕ ಕ್ರಾಂತಿಯನ್ನೇ ಮಾಡಿದರು. ಇಂದು ಶ್ರೀ ಕುಮಾರ ಶಿವಯೋಗಿಗಳು ಮತ್ತು ಶಿವಯೋಗಮಂದಿರ ಸಂಸ್ಥೆಗಳು ಇಲ್ಲದಿದ್ದರೆ ಲಕ್ಷಾಂತರ ಬಡಮಕ್ಕಳು ಅಕ್ಷರಜ್ಞಾನದಿಂದ ವಂಚಿತರಾಗಿರುತ್ತಿದ್ದರು.

ಇಂದು ಗೋವಂಶ ಅಭಿವೃದ್ಧಿಗಾಗಿ ಸರ್ಕಾರ-ಸಮಾಜ ಅನೇಕ ಯೋಜನೆಗಳನ್ನು ರೂಪಿಸುತ್ತಿದೆ. ಆದರೆ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ನೂರು ವರ್ಷಗಳ ಹಿಂದೆಯೇ ಆ ಕುರಿತು ಆಲೋಚಿಸಿ ಗೋರಕ್ಷಣೆಗೆ ಮುಂದಾದರು. ಇಂದಿನ ಪ್ರಸಾರ ಮಾಧ್ಯಮಗಳ ಹಾವಳಿಯಲ್ಲಿ ಹಿಂದೆ ಮಾಡಿದ ಇಂಥ ಅಮೋಘ ಪ್ರಯತ್ನಗಳು ಮರೆಮಾಚುತ್ತಿರುವುದು ವಿಷಾದನೀಯ.

ಒಟ್ಟಾರೆ ಸಮಾಜದ ಅಭಿವೃದ್ಧಿಗಾಗಿ ಹಗಲಿರುಳು ಪರಿಶ್ರಮಿಸಿದ ಪೂಜ್ಯಶ್ರೀ ಕುಮಾರ ಶಿವಯೋಗಿಗಳು ಸಂಸ್ಥಾಪಿಸಿದ ಎರಡು ಬೃಹತ್ ಸಂಸ್ಥೆಗಳು ಇಂದು ಶತಮಾನೋತ್ಸವ ಆಚರಿಸಿಕೊಳ್ಳಲು ಅಣಿಯಾಗಿವೆ.

ಶತಮಾನೋತ್ಸವವನ್ನು ಅತ್ಯಂತ ರಚನಾತ್ಮಕವಾಗಿ ಆಚರಿಸಬೇಕೆಂದು ಆಲೋಚಿಸಿದ ನಾವು ಕುಮಾರ ಜ್ಯೋತಿ ರಥಯಾತ್ರೆ ಹಮ್ಮಿಕೊಂಡು ನಾಡಿನಾದ್ಯಂತ ಸಂಚರಿಸಿದೆವು. ಆ ಸಂದರ್ಭದಲ್ಲಿ ನಾಡಿನ ಜನತೆ ತೋರಿದ ಭಕ್ತಿ-ಗೌರವ ವಿಶ್ವಾಸಗಳು ಅನನ್ಯವಾದುವು. ಕುಮಾರ ಶಿವಯೋಗಿಗಳ ಬಗೆಗೆ ಇಂದಿಗೂ ನಾಡಜನತೆ ಇಟ್ಟ ಗೌರವ ಅನೂಹ್ಯವಾದುದು.

ಅಖಿಲ ಭಾರತ ವೀರಶೈವ ಮಹಾಸಭೆ ಮತ್ತು ಶಿವಯೋಗಮಂದಿರ ಸಂಸ್ಥೆಗಳ ಶತಮಾನೋತ್ಸವ ಕಾರ್ಯಕ್ರಮವು ಸದಾಕಾಲ ಸ್ಮರಣೀಯವಾಗಬೇಕೆಂಬ ಆಶಯದಿಂದ ಅನೇಕ ಮಹತ್ವದ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ೬೩ ದಿನಗಳ ವರೆಗೆ ಜರುಗಿದ ಬಸವ ಪುರಾಣ ಕಾರ್ಯಕ್ರಮವು ಶತಮಾನೋತ್ಸವಕ್ಕೆ ಪೂರ್ವಪೀಠಿಕೆಯನ್ನು ಹಾಕಿದೆ. ೧.೨೫ಕೋಟಿ ವೆಚ್ಚದಲ್ಲಿ ನಿರ್ಮಾಣವಾದ, ಇಡೀ ದೇಶದಲ್ಲಿಯೇ ಎತ್ತರವಾದ ಬೃಹತ್ ಸುಂದರ ಕುಮಾರೇಶ್ವರ ರಥವು ಇದೇ ಸಂದರ್ಭದಲ್ಲಿ ಸಮಾಜಕ್ಕೆ ಸಮರ್ಪಿತವಾಗುತ್ತಿದೆ. ಶತಮಾನೋತ್ಸವದ ಸಮಾರಂಭದಲ್ಲಿ ಶಿಕ್ಷಣ-ಸಾಹಿತ್ಯ-ಕೃಷಿ-ಯುವಜನಾಂಗ ಮೊದಲಾದ ವಿಷಯಗಳ ಕುರಿತು ವಿಶೇಷ ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಗಿದೆ. ಹಾಗೆಯೇ ಮೌಲಿಕ ಗ್ರಂಥಗಳನ್ನು ಪ್ರಕಟಿಸಲಾಗುತ್ತಿದೆ.

ಪ್ರಸ್ತುತ ಪ್ರಕಟಗೊಳ್ಳುತ್ತಿರುವ ಸುಕುಮಾರ ದೀಪ್ತಿ ಕೃತಿಯಲ್ಲಿ ಕುಮಾರ ಶಿವಯೋಗಿಗಳ ಕುರಿತಾದ ಮಹತ್ವದ ಲೇಖನಗಳು, ಶಿವಯೋಗಮಂದಿರ ಸಂಸ್ಥೆಯ ಸಾಧನೆ-ಸಿದ್ಧಿಗಳನ್ನು ತಿಳಿಸುವ ಮಹತ್ವದ ಲೇಖನಗಳು ಮತ್ತು ಶಿವಯೋಗಮಂದಿರ ಸಂಸ್ಥೆಯನ್ನು ಈವರೆಗೆ ಮುನ್ನಡೆಸಿದ ಹಿಂದಿನ ಅಧ್ಯಕ್ಷರ ಜೀವನ ಸಾಧನೆಗಳನ್ನು ಕುರಿತಾದ ವಿಸ್ತೃತ ಲೇಖನಗಳು ಇಲ್ಲಿವೆ. ಅತ್ಯಮೂಲ್ಯ ಆಕರಕೃತಿಯಾಗಿರುವ ಈ ಸಂಪುಟವನ್ನು ಸಂಪಾದಿಸಿದವರು ಮಂದಿರದಲ್ಲಿಯೇ ಅಧ್ಯಯನ ಮಾಡಿದ ಶ್ರದ್ಧಾ ಮನೋಭಾವದ ಸಾಧಕರಾದ ಶ್ರೀ ಕುಮಾರದೇವರು. ಸಮಗ್ರ ಮಾಹಿತಿ ಸಂಗ್ರಹಿಸುವಲ್ಲಿ ಅವರು ತೋರಿರುವ ಶ್ರಮ ಸಾರ್ಥಕ್ಯವಾದುದು.

ಈ ಸಂತೋಷದ ಸಂದರ್ಭದಲ್ಲಿ ಯಾರನ್ನು ನೆನೆಯಲಿ ಯಾರನ್ನು ಬಿಡಲಿ ? ಸಮಾಜದ ಎಲ್ಲ ಸ್ವಾಮೀಜಿಗಳು, ಹಿರಿಯರು, ಭಕ್ತರು ಈ ಕಾರ್ಯಕ್ಕೆ ನೆರವು ನೀಡಿದ್ದಾರೆ. ಸಮಸ್ತರಿಗೂ ಕುಮಾರೇಶ್ವರರು ಸನ್ಮಂಗಲವನ್ನುಂಟು ಮಾಡಲಿ ಎಂದು ಅಂತಃಕರಣಪೂರ್ವಕ ಹಾರೈಸುತ್ತ 'ನ ಭೂತೋ ನ ಭವಿಷ್ಯತಿ' ಎಂಬಂತೆ ಜರುಗುತ್ತಿರುವ ಶತಮಾನೋತ್ಸವಕ್ಕೆ ಈ ಮೂಲಕ ಶುಭ ಹಾರೈಸುವೆವು.

ಪೂಜ್ಯಶ್ರೀ ಜಗದ್ಗುರು ಸಂಗನ ಬಸವ ಮಹಾಸ್ವಾಮಿಗಳು
ಕೊಟ್ಟೂರೇಶ್ವರ ಸಂಸ್ಥಾನಮಠ, ಬಳ್ಳಾರಿ-ಹೊಸಪೇಟೆ
ಅಧ್ಯಕ್ಷರು ಶ್ರೀ ಶಿವಯೋಗಮಂದಿರ ಸಂಸ್ಥೆ

# ಸಂಪಾದಕೀಯ

ಪ್ರಪಂಚದ ಇತಿಹಾಸದಲ್ಲಿ ಅನ್ಯಾಯ, ಅನೀತಿ, ಅನಾಚಾರ ಅಧರ್ಮದ ವಿರುದ್ಧವಾಗಿ ಸದಾಚಾರ, ಸದ್ವಿಚಾರ, ಸಮಭಾವ ಬಿತ್ತಿ ಬೆಳೆಯಲು ಯುಗಪ್ರವರ್ತಕರ ಉದಯವಾಗುತ್ತದೆ. ಹನ್ನೆರಡನೆಯ ಶತಮಾನದ ಶರಣರ ವಿಚಾರ ಮತ್ತು ಆಚಾರ ಕ್ರಾಂತಿ ಜನಸಮುದಾಯದ ಮೇಲೆ ಮಾಡಿದ ಪರಿಣಾಮ ಅನನ್ಯವಾಗಿದೆ. ಕಾಲಾಂತರದಲ್ಲಿ ವೀರಶೈವ ಲಿಂಗಾಯತ ಸಮಾಜದ ಮೇಲೆ ಅಜ್ಞಾನ-ಅಂಧಕಾರ, ಮೂಢನಂಬಿಕೆ, ಕಂದಾಚಾರ, ಅನಕ್ಷರತೆ, ಬಡತನ, ಮೇಲು-ಕೀಳು ಭಾವಗಳ ಕಾರ್ಮೋಡ ಕವಿದಿತ್ತು. ಪ್ರಗತಿಯನ್ನು ಭದ್ರಬಾಹುಗಳಿಂದ ಬಂಧಿಸಿತ್ತು. ಈ ಸಂದರ್ಭದಲ್ಲಿ ಸಮಾಜೋ-ಧಾರ್ಮಿಕ ಸುಧಾರಣೆಗಾಗಿ ಅವತರಿಸಿದ ಮಹಾಪುರುಷರೇ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು. ರೋಗಗ್ರಸ್ತ ಸಮಾಜಕ್ಕೆ ಸಮರ್ಥ ವೈದ್ಯಭಾನುವಾದವರು. ಸಂಘಟನೆ ಹಾಗು ಶಿಕ್ಷಣದ ಮೂಲಕ ಸುಧಾರಣಾ ಚಳುವಳಿ ಪ್ರಾರಂಭಿಸಿದರು. ಮಹಾರಾಷ್ಟ್ರದ ಸ್ವಾತಂತ್ರ್ಯ ಹೋರಾಟಗಾರ ವೀರಸಾವರ್ಕರ್ 'ಹಿಂದೂ ಮಹಾಸಭೆ'ಯನ್ನು ಕಟ್ಟುವ ಪೂರ್ವದಲ್ಲಿಯೇ ಹರಿದು ಹಂಚಿ ಹೋಗಿದ್ದ ಲಿಂಗಾಯತ ಸಮಾಜವನ್ನು ಸಂಘಟಿಸುವ ಸಲುವಾಗಿ ನಾಡಿನ ಪ್ರತಿಷ್ಠಿತ ವ್ಯಕ್ತಿಗಳಾದ ಶ್ರೀಮಂತ ಸಿರಸಂಗಿ ಲಿಂಗರಾಜರು, ವಾರದ ಮಲ್ಲಪ್ಪನವರು, ಅರಟಾಳ ರುದ್ರಗೌಡರು, ಕಿತ್ತೂರು ರೇವಣಸಿದ್ಧಪ್ಪನವರು, ವಂಟಮುರಿ ದೇಸಾಯಿ ಮೊದಲಾದ ಸಮಾಜವೇ ಪ್ರಾಣವೆಂದು ಬದುಕಿದ ವ್ಯಕ್ತಿಗಳನ್ನು ಒಂದೆಡೆ ಸೇರಿಸಿ ೧೯೦೪ರಲ್ಲಿ ಲಿಂ. ಕುಮಾರ ಶಿವಯೋಗಿಗಳು ಅಖಿಲ ಭಾರತ ವೀರಶೈವ ಮಹಾಸಭೆಯನ್ನು ಅಸ್ತಿತ್ವಕ್ಕೆ ತಂದರು. ಮಹಾಸಭೆಯ ಅಧಿವೇಶನಗಳು ಮೇಲಿಂದ ಮೇಲೆ ಜರುಗಿ ಸಮಾಜದ ಕತ್ತಲೆಯನ್ನು ಕಳೆಯುತ್ತ ಬೆಳಕು ಚೆಲ್ಲುತ್ತ ಶಿಕ್ಷಣಕ್ಕೆ ಅತ್ಯಂತ ಮಹತ್ವ ಕೊಡುತ್ತ ಮುನ್ನಡೆದವು. ಇದರ ಫಲವಾಗಿ ಕರ್ನಾಟಕ-ಮಹಾರಾಷ್ಟ್ರದಲ್ಲಿ ಶೈಕ್ಷಣಿಕ ಗಾಳಿ ಬೀಸಿತು. ನಾಡವರ ಅಜ್ಞಾನದ ಪೊರೆ ಹರಿಯಿತು.

ನಿರಂತರವಾಗಿ ಸಮಾಜವನ್ನು ಮುನ್ನಡೆಸುವ ಮಠಾಧಿಪತಿಗಳ ಸ್ಥಿತಿಯು ಅಷ್ಟೇನು ಪಕ್ವವಾಗಿರಲಿಲ್ಲ. ಮಠಗಳು ಸೇವಾ ಸದನಗಳಾಗದೇ ಹೋದದ್ದು ಶ್ರೀ ಕುಮಾರ ಶಿವಯೋಗಿಗಳಿಗೆ ಸಹಿಸಲಾಗಲಿಲ್ಲ. ಸಮಾಜದ ಶ್ರದ್ಧೆ ಮತ್ತು ಭಕ್ತಿಯ ಕೇಂದ್ರಗಳಾದ ಮಠಗಳಿಗೆ ಸಮರ್ಥ ಮಠಾಧಿಪತಿಗಳನ್ನು ಸಿದ್ಧಗೊಳಿಸುವ ಮಹಾಕಾರ್ಯ ಕೈಕೊಳ್ಳಲು ಸಂಕಲ್ಪಿಸಿದರು. ಬಾಗಲಕೋಟೆಯಲ್ಲಿ (೧೯೦೮) ಜರುಗಿದ ೪ನೇ ಅಖಿಲ ಭಾರತ ವೀರಶೈವ ಮಹಾಸಭೆ ಅಧಿವೇಶನದಲ್ಲಿ 'ಶಿವಯೋಗಮಂದಿರ ಸಂಸ್ಥೆ'ಯನ್ನು ಸ್ಥಾಪಿಸುವ ಮಹತ್ವದ ನಿರ್ಣಯ ಕೈಗೊಂಡರು. ಶ್ರೀಗಳ ನಿರ್ಣಯಕ್ಕೆ ಪೂರಕವಾಗಿ ಗುರುಬಸಪ್ಪ ಹಳಕಟ್ಟಿ, ರಾಜಾಲಖಮಗೌಡರು ಮೊದಲಾದ ಅನೇಕ ಹಿರಿಯರು ಅನುಮೋದನಾ ಪರ ವಿಚಾರ ಮಂಡಿಸಿದರು. ನಮ್ಮ ಸಮಾಜದ ಹಿರಿಯ ಮುಂದಾಳಾಗಿದ್ದ ವಾರದ ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ಅಸ್ತಿತ್ವಕ್ಕೆ ಬಂದು ಶಿವಯೋಗಮಂದಿರ ಸಂಸ್ಥೆಯ ಸಮಗ್ರ ರೂಪ ರೇಷೆ ಸಿದ್ಧವಾಯಿತು. ಮಹಾತಪಸ್ವಿ ಚಿತ್ತರಗಿ ಇಳಕಲ್ಲ ವಿಜಯ ಮಹಾಂತ ಶಿವಯೋಗಿಗಳು ಶಿವಯೋಗ ಮಂದಿರದ ಸ್ಥಳ ನಿರ್ದೇಶನ ಮಾಡಿದರು. ಅವರ ಅಭಯಹಸ್ತ, ಸಮಾಜ ಬಾಂಧವರ ಸಹಾಯದಿಂದ ಹಾನಗಲ್ಲ ಕುಮಾರ ಶಿವಯೋಗಿಗಳು ಶಿವಯೋಗಮಂದಿರ ಸಂಸ್ಥೆಯನ್ನು ೭-೨-೧೯೦೯ರಂದು ಮಲಪಹಾರಿ ನದಿ ತಟದ ನಿರ್ಜನ ಮತ್ತು ಪ್ರಶಾಂತ ರಮಣೀಯ ಪ್ರದೇಶದಲ್ಲಿ ಪ್ರಾರಂಭಿಸಿದರು. ಕೇವಲ ಏಳು ಜನ ಸಾಧಕರಿಂದ ಪ್ರಾರಂಭಗೊಂಡ ಸಂಸ್ಥೆಯು ಅಲ್ಪಾವಧಿಯಲ್ಲಿ ಬೃಹತ್ ಪ್ರಮಾಣದಲ್ಲಿ ಬೆಳೆಯಿತು. ಶಿವಯೋಗಮಂದಿರದಲ್ಲಿ ತರಬೇತಿ ಪಡೆದ ಸ್ವಾಮಿಗಳು ನಾಡಿನ ಮೂಲೆಮೂಲೆಗೂ ತಮ್ಮ ಚಿದ್ಬೆಳಗನ್ನು ಪಸರಿಸತೊಡಗಿದರು.

ಬೆಳ್ಳಿಚುಕ್ಕಿಯು ಮೂಡುವುದಕ್ಕಿಂತ ಮುನ್ನವೆ ಎದ್ದು ಮಲಪ್ರಭೆಯಲ್ಲಿ ಮಿಂದು, ಪರ್ಣಕುಟೀರದಲ್ಲಿ ಪ್ರಾಣಾಯಾಮ, ಯೋಗ, ಶಿವಯೋಗ ಸಾಧನೆ ಮಾಡಿ ಮಹಾತೇಜೋಮೂರ್ತಿಗಳು ಕಂಗೊಳಿಸಹತ್ತಿದರು. ಅಂದು ಹಚ್ಚಿದ ಶಿವಯೋಗದ ಹೊಂಬಳ್ಳಿ ಇಂದು ಎಲ್ಲೆಡೆ ಹಬ್ಬಿದೆ, ಸಮಾಜ ಸೇವಾ ಸೌಗಂಧದ ಹೂಗಳು ಅರಳಿವೆ.

ಉದಾರ ಚರಿತರೂ, ಧೀರೋದಾತ್ತರಾದ ಶ್ರೀ ಕುಮಾರ ಶಿವಯೋಗಿಗಳು ಸ್ಥಾಪಿಸಿದ ಸಮಾಜದ ಕಣ್ಣುಗಳಾದ ಅಖಿಲ ಭಾರತ ವೀರಶೈವ ಮಹಾಸಭೆ ಮತ್ತು ಶಿವಯೋಗಮಂದಿರ ಸಂಸ್ಥೆಗಳು ಇದೀಗ ಶತಮಾನದ ಸಂಭ್ರಮದಲ್ಲಿವೆ. ಶತಸಂವತ್ಸರಗಳ ಪರ್ಯಂತ ನಾಡವರ ಸೇವೆಗಾಗಿ, ಏಳ್ಗೆಗಾಗಿ ತಮ್ಮನ್ನೇ ತಾವು ಸಮರ್ಪಿಸಿಕೊಂಡಿವೆ.

ಶತಮಾನೋತ್ಸವ ಕಾರ್ಯಕ್ರಮವು ಸದಾಕಾಲ ಸ್ಮರಣೀಯವಾಗಿರಲೆಂಬ ಸದುದ್ದೇಶದಿಂದ ಅಧ್ಯಕ್ಷರೂ, ಪೂಜ್ಯರೂ ಆದ ಶ್ರೀ ಜಗದ್ಗುರು ಸಂಗನ ಬಸವ ಮಹಾಸ್ವಾಮಿಗಳು ಕೊಟ್ಟೂರೇಶ್ವರ ಸಂಸ್ಥಾನಮಠ, ಹೊಸಪೇಟೆ-ಬಳ್ಳಾರಿ-ಹಾಲಕೆರೆ ಅವರು ಮೌಲಿಕ ಗ್ರಂಥಗಳ ಸಿದ್ಧತೆಗಾಗಿ ನಮ್ಮ ನಾಡಿನ ಅನೇಕ ಹಿರಿಯ ವಿದ್ವಾಂಸರಿಗೆ ಒಪ್ಪಿಸಿದರು. ಶಿವಯೋಗಮಂದಿರ ಮತ್ತು ಹಾನಗಲ್ಲ ಕುಮಾರ ಶಿವಯೋಗಿಗಳ ಕುರಿತಾದ ಮಹತ್ವದ ಸಾಹಿತ್ಯವು ಭಕ್ತ ಸಮುದಾಯಕ್ಕೆ ತಲುಪಲಿ ಎಂಬ ಉದ್ದೇಶದಿಂದ ಹತ್ತಾರು ಕೃತಿಗಳ ಪ್ರಕಟಣೆಗೆ ಮುಂದಾದರು.

ಪ್ರಸ್ತುತ ಪ್ರಕಟಗೊಳ್ಳುತ್ತಿರುವ 'ಸುಕುಮಾರ ದೀಪ್ತಿ' ಸಂಪಾದನೆಯನ್ನು ಹೊಣೆಯನ್ನು ಪೂಜ್ಯರು ನನ್ನ ಮೇಲೆ ಹೊರಿಸಿದರು. ಪೂಜ್ಯರ ಆದೇಶ ಮತ್ತು ನಾಗನೂರು ರುದ್ರಾಕ್ಷಿಮಠದ ಪೂಜ್ಯಶ್ರೀ ಸಿದ್ಧರಾಮ ಮಹಾಸ್ವಾಮಿಗಳವರ ಪ್ರೇರಣೆ-ಪ್ರೋತ್ಸಾಹ-ಮಾರ್ಗದರ್ಶನದಲ್ಲಿ ಪ್ರಸ್ತುತ ಕೃತಿಯನ್ನು ನನ್ನ ಅಲ್ಪಮತಿಗೆ ತಿಳಿದಂತೆ ಸಂಪಾದಿಸುವ ಸಾಹಸ ಮಾಡಿದ್ದೇನೆ. ಮೂರು ಭಾಗಗಳಲ್ಲಿರುವ ಇಲ್ಲಿಯ ಲೇಖನಗಳು, ಮೊದಲನೆಯ ಭಾಗದಲ್ಲಿ ಹಾನಗಲ್ಲ ಕುಮಾರ ಶಿವಯೋಗಿಗಳ ಕುರಿತಾದ ಮೌಲಿಕ ಲೇಖನಗಳಿಗೆ. ಎರಡನೆಯ ಭಾಗದಲ್ಲಿ ಶಿವಯೋಗಮಂದಿರ ಸಂಸ್ಥೆಯ ಇತಿಹಾಸ, ಮಂದಿರದಲ್ಲಿ ಅಧ್ಯಯನ ಮಾಡಿದ ಮಹಾಸ್ವಾಮಿಗಳವರ ರೋಚಕ ಅನುಭವಗಳು ಮೂಡಿ ಬಂದಿವೆ. ಮೂರನೆಯ ಭಾಗವು ಈವರೆಗೆ ಶಿವಯೋಗಮಂದಿರ ಸಂಸ್ಥೆಯನ್ನು ಮುನ್ನಡೆಸಿದ ಶಿವಶಿಲ್ಪಿಗಳ ಜೀವನ ಮತ್ತು ಸಾಧನೆಗಳ ಕುರಿತಾದ ಪರಿಚಯಾತ್ಮಕ ಲೇಖನಗಳನ್ನು ಒಳಗೊಂಡಿದೆ.

ಶತಸಂವತ್ಸರಗಳ ಕಾಲ ಸ್ಮರಣೀಯವಾಗುವ ಇಂಥ ಮಹಾ ಸುಯೋಗವನ್ನು ಒದಗಿಸಿಕೊಟ್ಟ ಹೊಸಪೇಟೆ-ಹಾಲಕೆರೆಯ ಪೂಜ್ಯಶ್ರೀ ಜಗದ್ಗುರು ಸಂಗನ ಬಸವ ಮಹಾಸ್ವಾಮಿಗಳು ಮತ್ತು ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಪೂಜ್ಯಶ್ರೀ ಸಿದ್ಧರಾಮ ಮಹಾಸ್ವಾಮಿಗಳವರಿಗೆ ನನ್ನ ಅನಂತ ಭಕ್ತಿಯ ಪ್ರಣಾಮಗಳು.

ಮಾಹಿತಿಯನ್ನು ಒದಗಿಸಿದ ಎಲ್ಲ ಪೂಜ್ಯರಿಗೂ, ಶಿವಯೋಗ ಮಂದಿರದ ಸಂಸ್ಥೆಯವರಿಗೂ, ಆಕರ ಗ್ರಂಥಗಳನ್ನು ನೀಡಿದ ಬೆಳಗಾವಿ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ ಶ್ರೀ ಬಿ.ಬಿ. ಹೊಸಮನಿ ಅವರಿಗೂ, ಸಲಹೆ-ಸೂಚನೆ ನೀಡಿದ ಆತ್ಮೀಯರಾದ ಪೂಜ್ಯ ಮಡಿವಾಳ ರಾಜಯೋಗೀಂದ್ರ ಮಹಾಸ್ವಾಮಿಗಳವರಿಗೂ, ಹಾವೇರಿ ಹುಕ್ಕೇರಿಮಠದ ಸದಾಶಿವ ದೇವರು, ಶೇಗುಣಸಿ ವಿರಕ್ತಮಠದ ಮಹಾಂತ ದೇವರು, ಶಿವಯೋಗಿ ದೇವರು ಅವರಿಗೂ ಸುಂದರವಾಗಿ ಅಕ್ಷರ ಸಂಯೋಜನೆ ಮಾಡಿದ ಪ್ರಕಾಶ ಗಿರಿಮಲ್ಲನವರ ಅವರಿಗೂ ನನ್ನ ಕೃತಜ್ಞತೆಗಳು.

ಅಲ್ಪಾವಧಿಯಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ತ್ವರಿತ ಮುದ್ರಣಾಲಯದ ಶ್ರೀ ಕೆ. ಅಶೋಕ ಅವರಿಗೂ ಕುಮಾರೇಶ್ವರರು ಸನ್ಮಂಗಲವನ್ನುಂಟು ಮಾಡಲಿ ಎಂದು ಆಶಿಸುವೆ.

-ಕುಮಾರ ದೇವರು (ರಾಜೂರು)



**ಹಾನಗಲ್ಲ ಪೂಜ್ಯಶ್ರೀ ಕುಮಾರ ಶಿವಯೋಗಿಗಳು**

ಸಂಸ್ಥಾಪಕರು

ಅಖಿಲ ಭಾರತ ವೀರಶೈವ ಮಹಾಸಭೆ ಮತ್ತು ಮದ್ವೀರಶೈವ ಶಿವಯೋಗಮಂದಿರ



ಪೂಜ್ಯಶ್ರೀ ಬಸವಲಿಂಗ ಮಹಾಶಿವಯೋಗಿಗಳು

ಎಳಂದೂರ



**ಪೂಜ್ಯಶ್ರೀ ವಿಜಯ ಮಹಾಂತ ಶಿವಯೋಗಿಗಳು**

ಚಿತ್ತರಗಿ-ಇಳಕಲ್ಲ



ಪೂಜ್ಯಶ್ರೀ ಶಿವಬಸವ ಶಿವಯೋಗಿಗಳು
ಹಾವೇರಿ



ಪೂಜ್ಯಶ್ರೀ ಅನ್ನದಾನ ಶಿವಯೋಗಿಗಳು
ಹಾಲಕೆರೆ

## ಶತಮಾನೋತ್ಸವ ಕಾರ್ಯಕ್ರಮ ದಿವ್ಯಶಕ್ತಿ



**ಪೂಜ್ಯಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು**

ಕೊಟ್ಟೂರೇಶ್ವರ ಸಂಸ್ಥಾನಮಠ, ಹೊಸಪೇಟೆ-ಬಳ್ಳಾರಿ-ಹಾಲಕೆರೆ

ಅಧ್ಯಕ್ಷರು, ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಶಿವಯೋಗಮಂದಿರ



ಪೂಜ್ಯಶ್ರೀ ಸದಾಶಿವ ಮಹಾಸ್ವಾಮಿಗಳು
ಶಿವಯೋಗಮಂದಿರ

## ಶತಮಾನೋತ್ಸವ ಕಾರ್ಯಕ್ರಮ ದಿವ್ಯಶಕ್ತಿ



### ಪೂಜ್ಯಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು

ಕೊಟ್ಟೂರೇಶ್ವರ ಸಂಸ್ಥಾನಮಠ, ಹೊಸಪೇಟೆ-ಬಳ್ಳಾರಿ-ಹಾಲಕೆರೆ

ಅಧ್ಯಕ್ಷರು, ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ, ಶಿವಯೋಗಮಂದಿರ

## ಶತಮಾನೋತ್ಸವ ಕಾರ್ಯಕ್ರಮ ಸಂಯೋಜಕರು



**ಪೂಜ್ಯಶ್ರೀ ಸಿದ್ಧರಾಮ ಸ್ವಾಮಿಗಳು**
ರುದ್ರಾಕ್ಷಿಮಠ ನಾಗನೂರು-ಬೆಳಗಾವಿ



## ಪೂಜ್ಯಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು

**ಅಧ್ಯಕ್ಷರು, ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ**
**ಶ್ರೀ ಕೊಟ್ಟೂರುಸ್ವಾಮಿ ಸಂಸ್ಥಾನಮಠ ಹೊಸಪೇಟೆ-ಬಳ್ಳಾರಿ**

### ಶುಭ ಸಂದೇಶ

ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಸ್ಥಾಪಿಸಿದ ಅಖಿಲ ಭಾರತ ವೀರಶೈವ ಮಹಾಸಭೆ ಮತ್ತು ಶಿವಯೋಗಮಂದಿರ ಸಂಸ್ಥೆಗಳು ಆಧುನಿಕ ಕರ್ನಾಟಕ ನಿರ್ಮಾಣದಲ್ಲಿ ವಹಿಸಿದ ಪಾತ್ರ ಅನನ್ಯ-ಅಪರೂಪ. ಜಡಗೊಂಡಿದ್ದ ಸಮಾಜಕ್ಕೆ ಜಂಗಮತ್ವವನ್ನು ಕಲ್ಪಿಸಲು ಅಹೋರಾತ್ರಿ ಶ್ರಮಿಸಿದವು. ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಧಾರ್ಮಿಕವಾಗಿ ಸಮಾಜದಲ್ಲಿ ಸ್ವಾಭಿಮಾನ-ಸ್ವಂತಿಕೆಗಳನ್ನು ಮೂಡಿಸಿದ ಶ್ರೇಯಸ್ಸು ಈ ಎರಡು ಸಂಸ್ಥೆಗಳಿಗೆ ಸಲ್ಲುತ್ತದೆ.

೧೯ನೇ ಶತಮಾನದ ಉತ್ತರಾರ್ಧ ಮತ್ತು ೨೦ನೇ ಶತಮಾನದ ಪೂರ್ವಾರ್ಧದ ಈ ಕಾಲಘಟ್ಟವು ಧಾರ್ಮಿಕವಾಗಿ ಸಾಮಾಜಿಕವಾಗಿ ಬದಲಾಗುತ್ತಿದ್ದ ಕಾಲಘಟ್ಟ. ಇಂತಹ ಸಂಕೀರ್ಣ ಸಂಧಿಘಟ್ಟದಲ್ಲಿ ಜನ್ಮತಾಳಿದ ಪೂಜ್ಯರು ತಮ್ಮನ್ನು ಪೂರ್ಣ ಪ್ರಮಾಣದಲ್ಲಿ ಕ್ರಿಯಾಶೀಲಗೊಳಿಸಿಕೊಂಡು ಸಮಾಜವನ್ನು ಉದ್ಧಾರಮಾಡುವ ಹೊಣೆಹೊತ್ತರು. ಅವರು ಸಂಧಿಕಾಲಘಟ್ಟದಲ್ಲಿ ಕತ್ತಲೆ ಕವಿದಿದ್ದ ಸಮಾಜವನ್ನು ಶುದ್ಧ ಮತ್ತು ಸಮೃದ್ಧ ನೆಲೆಯತ್ತ ಕೊಂಡೊಯ್ದು ಉದ್ಧರಿಸುವ ಏಕೈಕ ಉದ್ದೇಶವನ್ನು ಶ್ರೀ ಮದ್ವೀರಶೈವ ಶಿವಯೋಗಮಂದಿರದ ಮೂಲಕ ಕೈಕೊಂಡರು. ಅಂತಹ ಶಿವಯೋಗಮಂದಿರವು ನೂರು ಸಂವತ್ಸರಗಳನ್ನು ಪೂರೈಸುತ್ತಿರುವುದು ಆಧುನಿಕ ಭಾರತದ ಧಾರ್ಮಿಕ ಚರಿತ್ರೆಯಲ್ಲಿಯೇ ಮಹತ್ವದ ಮೈಲುಗಲ್ಲಾಗಿ ಪರಿಣಮಿಸಿದೆ.

ಸಧ್ಯ ನಮ್ಮ ಮಾತೃಸಂಸ್ಥೆ ಶ್ರೀ ಶಿವಯೋಗಮಂದಿರಕ್ಕೆ ಶತಸಂವತ್ಸರದ ಸಂಭ್ರಮ. ಇದೇ ಸಂದರ್ಭದಲ್ಲಿ ನಮಗೆ ಒದಗಿಬಂದ ಶಿವಯೋಗಮಂದಿರ ಸಂಸ್ಥೆಯ ಅಧ್ಯಕ್ಷತೆಯು ಪೂಜ್ಯರ ಕಾರುಣ್ಯವೆಂದೇ ನಾವು ಭಾವಿಸಿದ್ದೇವೆ. ಶಿವಯೋಗಮಂದಿರ ಪುಣ್ಯ ಪರಿಸರದಲ್ಲಿ ನಿರ್ಮಾಣ, ಪುನರ್ ನಿರ್ಮಾಣ, ನವೀಕರಣ ಕಾರ್ಯಗಳನ್ನು ನಮ್ಮ ಪಾಲಿನ ಸೇವಾಭಾಗ್ಯವೆಂದೇ ಸ್ವೀಕರಿಸಿ ಕಾರ್ಯಗತಗೊಳಿಸಿದ್ದೇವೆ. ಅದರೊಂದಿಗೆ ಸುಂದರವಾದ ಕಾಷ್ಠಶಿಲ್ಪದ ಬೃಹತ್‌ರಥ (ತೇರು) ಸಮರ್ಪಣೆ, ಶತಮಾನೋತ್ಸವ ಸಂಸ್ಮರಣ ಗ್ರಂಥ ಪ್ರಕಟನೆ ಮುಂತಾದ ಸೇವಾ ಯೋಜನೆಗಳನ್ನು ನಮ್ಮ ಶ್ರೀಮಠದ ಶ್ರೀ ಕೊಟ್ಟೂರುಸ್ವಾಮಿ ಕಲ್ಯಾಣ ಕೇಂದ್ರದಿಂದ ಕೈಗೆತ್ತಿಕೊಂಡು ಪೂರೈಸಿದ್ದೇವೆ.

ಪ್ರಸ್ತುತ ಪ್ರಕಟಗೊಳ್ಳುತ್ತಿರುವ ಸುಕುಮಾರ ದೀಪ್ತಿ ಸ್ಮರಣ ಸಂಚಿಕೆಯು ಕುಮಾರ ಶಿವಯೋಗಿಗಳವರ ಕುರಿತಾದ ಮೌಲಿಕ ಲೇಖನ, ಶಿವಯೋಗಮಂದಿರ ಸಂಸ್ಥೆಯ ಕುರಿತಾದ ಅಧಿಕೃತ ದಾಖಲೆ ಮತ್ತು ಈವರೆಗಿನ ಅಧ್ಯಕ್ಷರ ಜೀವನ ಮತ್ತು ಸಾಧನೆಗಳನ್ನು ಒಳಗೊಂಡು ಮೂಡಿಬರುವಲ್ಲಿ ಶ್ರಮಿಸಿದ ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಸಾಧಕರಾದ ಕುಮಾರದೇವರು (ರಾಜೂರು) ಇವರ ಸೇವೆ ಸಾರ್ಥಕವಾದುದು. ಸಂಪುಟ ಸರ್ವಾಂಗ ಸುಂದರವಾಗಿ ಪ್ರಕಟಗೊಳ್ಳಲಿ ಎಂದು ಅಂತಃಕರಣಪೂರ್ವಕ ಹಾರೈಸುವೆವು.

ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು

## ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು

ಜಗದ್ಗುರು ಶ್ರೀ ವೀರಸಿಂಹಾಸನ ಮಹಾಸಂಸ್ಥಾನ ಮಠ

ಸುತ್ತೂರು ಶ್ರೀಕ್ಷೇತ್ರ - ೫೭೧ ೧೨೯




### ಶುಭ ಸಂದೇಶ

'ಶಿವಯೋಗಮಂದಿರ' (೧೯೦೯) ಶಿವಯೋಗ ಸಾಧಕರ ಜಾಗೃತ ಸ್ಥಾನ. ಹಾನಗಲ್ ಶ್ರೀ ಕುಮಾರಸ್ವಾಮಿಗಳವರು ಅಖಿಲ ಭಾರತ ವೀರಶೈವ ಮಹಾಸಭೆಯನ್ನು ಸ್ಥಾಪನೆ ಮಾಡಿದ ಕೆಲವು ವರ್ಷಗಳಲ್ಲಿಯೇ ಶಿವಯೋಗಮಂದಿರವನ್ನು ಸ್ಥಾಪಿಸಿದ್ದರ ಹಿಂದೆ ಒಂದು ಮಹೋನ್ನತ ಉದ್ದೇಶವೇ ಇದೆ. 'ಮಹಾಸಭಾ' ವೀರಶೈವರನ್ನು ಸಾಮಾಜಿಕವಾಗಿ ಸದೃಢಗೊಳಿಸುವ ಗುರಿಯನ್ನು ಹೊಂದಿದ್ದರೆ, 'ಶಿವಯೋಗಮಂದಿರ' ಅದಕ್ಕೆ ಧಾರ್ಮಿಕ ಚೈತನ್ಯವನ್ನು ತುಂಬುವ ಕೈಂಕರ್ಯವನ್ನು ತನ್ನದಾಗಿಸಿಕೊಂಡಿತು. ಸ್ಥೂಲವಾಗಿ ಹೇಳುವುದಾದರೆ ವೀರಶೈವ ಮಹಾಸಭಾ ದೇಹವಾದರೆ, ಶಿವಯೋಗ ಮಂದಿರ ಅದರ ಆತ್ಮವಾಯಿತು.

ವೀರಶೈವರು ಲಿಂಗಾಯತರು ತಮ್ಮ ಗ್ರಾಮಗಳಲ್ಲಿ ಒಂದು ಮಠವಿರಬೇಕು ಎಂದು ಬಯಸುತ್ತಾರೆ; ಅದು ಒಪ್ಪತಕ್ಕದ್ದೆ. ಆದರೆ ಆ ಮಠಗಳಿಗೆ ಸ್ವಾಮಿಗಳನ್ನು ನಿಯುಕ್ತಿಗೊಳಿಸುವ ಪ್ರಶ್ನೆ ಬಂದಾಗ ನಿಜವಾದ ಸಮಸ್ಯೆ ಪ್ರಾರಂಭವಾಗುತ್ತದೆ. ಏಕೆಂದರೆ, ಮಠವೊಂದಕ್ಕೆ ಗುರುಗಳಾಗಿ ಸೇವೆ ಸಲ್ಲಿಸಲು ಯಾರೂ ಮುಂದೆ ಬರುವುದಿಲ್ಲ. ಇದನ್ನು ಆಗಲೇ ಮನಗಂಡಿದ್ದ ಶ್ರೀ ಕುಮಾರಸ್ವಾಮಿಗಳು ಮಠಗಳಿಗೆ ಸೂಕ್ತರಾದ ತಪೋನಿಷ್ಠ ಸಮಾಜಮುಖಿ ಸೇವಾದೃಷ್ಟಿಯುಳ್ಳ ಪೀಠಾಧಿಕಾರಿಗಳಾಗುವ ಯೋಗ್ಯತೆಯುಳ್ಳವರನ್ನು ಆಯ್ಕೆಮಾಡಿ, ಅವರಿಗೆ ತರಬೇತಿ ನೀಡುವ ಸಲುವಾಗಿ ಇದನ್ನು ಪ್ರಾರಂಭ ಮಾಡಿದರು. ಈ ಕಾಯಕದಲ್ಲಿ ಪೂಜ್ಯರಿಗೆ ಒತ್ತಾಸೆಯಾಗಿ ನಿಂತಂಥ ಶ್ರೀ ಕಿತ್ತೂರ ರೇವಣಸಿದ್ದಪ್ಪನವರು, ಅಬ್ಬಿಗೇರಿ ಸಂಗನಗೌಡರು, ಹಾಲಕೆರೆಯ ಬಸವಣ್ಣಗೌಡರು, ಮಾಸ್ತರ ಲಿಂಗಪ್ಪನವರ ಸೇವೆ ಸ್ಮರಣೀಯವಾದುದು.

ಕೇವಲ ಏಳು ಜನ ವಟುಗಳಿಂದ ಪ್ರಾರಂಭವಾದ ಶಿವಯೋಗಮಂದಿರ ಮುಂದೆ ಬಹುದೊಡ್ಡ ಸಂಸ್ಥೆಯಾಗಿ ಬೆಳೆದದ್ದು ಈಗ ಇತಿಹಾಸ. ಆರಂಭದಲ್ಲಿ ಶಿವಯೋಗ ಶಿಕ್ಷಣಕ್ಕೆ ಮಾತ್ರ ಮೀಸಲಾಗಿದ್ದ ಮಂದಿರ ಮುಂದೆ ಗೋಮಯ ಬೆರಣಿ ಸುಟ್ಟು ವಿಧಿಬದ್ಧವಾಗಿ ಸಂಸ್ಕರಿಸಿ ವಿಭೂತಿಯನ್ನು ತಯಾರಿಸಲು ತೊಡಗಿದಾಗ ಜನರು ಗೋವುಗಳನ್ನೇ ದಾನಮಾಡುತ್ತಿದ್ದುದು ಒಂದು ಗಮನಾರ್ಹ ಸಂಗತಿ. ಜೊತೆಗೆ, ಧಾರ್ಮಿಕ ಗ್ರಂಥಗಳ ಪ್ರಕಟಣೆಯಲ್ಲಿಯೂ ಮಂದಿರ ಅನೇಕ ವಿಕ್ರಮಗಳನ್ನು ಸ್ಥಾಪಿಸಿದೆ.

ಕಾಲದ ಓಟದಲ್ಲಿ ಶಿವಯೋಗಮಂದಿರ ಹನ್ನೆರಡನೆಯ ಶತಮಾನದ ಶಿವಶರಣರ 'ಕಲ್ಯಾಣರಾಜ್ಯ'ದ ಕಲ್ಪನೆಗಳು ಮತ್ತು ಗಾಂಧೀಜಿಯವರ 'ಗ್ರಾಮಸ್ವರಾಜ್ಯ'ದ ಕಲ್ಪನೆಗಳನ್ನು ಮೈಗೂಡಿಸಿಕೊಂಡಿತು. ಇಂಥ ಪ್ರಜ್ವಲ ಇತಿಹಾಸವುಳ್ಳ ಶಿವಯೋಗ ಮಂದಿರದ ಶತಮಾನೋತ್ಸವವನ್ನು ಈಗ ಆಚರಿಸಲಾಗುತ್ತಿದೆ. ಇದೇ ಸಂದರ್ಭದಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾದ ಶತಮಾನೋತ್ಸವವೂ ಒಟ್ಟಿಗೆ ಮೇಳೈಸಿರುವುದು ಅರ್ಥಪೂರ್ಣ.

ಶ್ರೀಮದ್ವೀರಶೈವ ಶಿವಯೋಗಮಂದಿರ ಇತೋಪ್ಯತಿಶಯನಾಗಿ ಅಭಿವರ್ಧಿಸಲೆಂದು, ಅದರ ಶತಮಾನೋತ್ಸವವು ವಿಜೃಂಭಣೆಯಿಂದ ಅರ್ಥಪೂರ್ಣವಾಗಿ ನಡೆಯಲೆಂದು ಆಶಿಸುತ್ತ ಶತಮಾನೋತ್ಸವದ ಸವಿನೆನಪಿಗಾಗಿ ಹೊರತರುತ್ತಿರುವ ಸ್ಮರಣಸಂಚಿಕೆ ಮೌಲಿಕ ಲೇಖನಗಳನ್ನೊಳಗೊಂಡು ಅರ್ಥಪೂರ್ಣವಾಗಿ ಹೊರಬರಲೆಂದು ಹಾರೈಸುತ್ತೇವೆ.

೨೯-೦೩-೨೦೧೦

**ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು**

## ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು

ಶ್ರೀ ಸಿದ್ಧಗಂಗಾಮಠ, ತುಮಕೂರು.



### ಶುಭ ಸಂದೇಶ

ಲಿಂ. ಹಾನಗಲ್ಲ ಕುಮಾರಸ್ವಾಮಿಗಳು ಸಂಸ್ಥಾಪಿಸಿದ ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ ಸಂಸ್ಥೆಗಳ ಶತಮಾನೋತ್ಸವ ಸಮಾರಂಭ ದಿನಾಂಕ ೯-೪-೨೦೧೦ ರಿಂದ ೧೩-೪-೨೦೧೦ ರವರೆಗೆ ಆಯೋಜಿತವಾಗಿರುವ ಶಿವ ಸಂದರ್ಭದಲ್ಲಿ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಪರಮ ಸಂತೋಷವನ್ನುಂಟು ಮಾಡಿದೆ.

ಲಿಂ. ಹಾನಗಲ್ ಕುಮಾರಸ್ವಾಮಿಗಳು ಸಮಾಜ ದ್ರಷ್ಟಾರರಾಗಿದ್ದರು. ಜಂಗಮ ದಯಾಘನರಾಗಿದ್ದರು. ಸ್ಥಾವರವಾಗದಂತೆ ಸಮಾಜವನ್ನು ಮುನ್ನಡೆಸುವ ಮಹಾದರ್ಶನವನ್ನು ಕಂಡವರು. ಶ್ರೀಗಳವರು ತಾವು ಸ್ಥಾಪಿಸಿದ ವೀರಶೈವ ಮಹಾಸಭೆ ಭವ್ಯ ದಿವ್ಯವಾಗಿ ಬೆಳೆಯಲು ಆಶೀರ್ವದಿಸಿದ ಪುಣ್ಯ ಪುರುಷರು. ಬಸವಾದಿ ಮಹಾಶರಣರ ತತ್ವಗಳನ್ನು ಆಚರಣೆಯಲ್ಲಿ ಜೀವಂತವಾಗಿಡಲು ಶ್ರಮಿಸಿದವರು. ಜಂಗಮ ರೂಪಿಯಾದ ಸಮಾಜದ ಅಭಿವೃದ್ಧಿಯಲ್ಲಿ ಆತ್ಮ ಕಲ್ಯಾಣವನ್ನು ಸಾಧಿಸಿದ ಅನುಭಾವಿ ಸ್ಮರಣೀಯರು. ಶ್ರೀಗಳವರ ಮತ್ತೊಂದು ಸೃಷ್ಟಿ ಶಿವಯೋಗ ಮಂದಿರ. ಸ್ವಾಮಿಗಳು, ಮಠಾಧಿಪತಿಗಳಾಗುವವರೆಲ್ಲ ಶಿವಯೋಗ ಸಂಪನ್ನರಾಗಿರಬೇಕೆಂದು ಅಷ್ಟಾಂಗ ಯೋಗಗಳೆಲ್ಲವುಗಳ ಶಿಖರವೇ ಶಿವಯೋಗವೆಂಬುದನ್ನು ಮನಗಂಡ ಪವಿತ್ರಾತ್ಮರು ಹಾನಗಲ್ಲು ಪ್ರಭುಗಳು. ಊರಮುಂದೆ ಹಾಲ ಹಳ್ಳ ಹರಿಯುತ್ತಿರಲು ಬೇರೆ ಬಾವಿಯ ತೋಡಿ ಉಪ್ಪನೀರನುಂಬುವ ಸ್ಥಿತಿ ವೀರಶೈವ ಸಮಾಜದ್ದಾಗಬಾರದು ಎಂಬ ಸತ್ಯ ಶ್ರೀ ಕುಮಾರ ಮಹಾಸ್ವಾಮಿಗಳದ್ದಾಗಿತ್ತು. ಸಮಾಜವು ಶ್ರೀಗಳವರು ತೋರಿಸಿದ ಗುರುಪಥದಲ್ಲಿ ನಡೆದು ಶಿವಪಥಗಾಮಿಯಾಗುವುದೇ ಲಿಂ. ಹಾನಗಲ್ಲ ಕುಮಾರಸ್ವಾಮಿಗಳವರಿಗೆ ತ್ರಿಕರಣ ಶುದ್ಧಿಯಿಂದ ಅರ್ಪಿಸಬಹುದಾದ ಭಕ್ತಿ ಕಾಣಿಕೆಯೆಂದು ಭಾವಿಸುತ್ತೇವೆ.

ಸಮಾರಂಭ ಯಶಸ್ವಿಯಾಗಲಿ ಎಂದು ಆಶಿಸುತ್ತ, ಸ್ಮರಣ ಸಂಚಿಕೆ ಶ್ರೀಗಳವರ ಜೀವನ ದರ್ಪಣವಾಗಿ ಪ್ರಕಟವಾಗಲಿ ಎಂದು ಹಾರೈಸಲು ಸಂತೋಷಿಸುತ್ತೇವೆ.

ಶ್ರೀ ಶಿವಕುಮಾರ ಮಹಾಸ್ವಾಮಿಗಳು

ತ್ರಿವಿಧ ದಾಸೋಹಿ ಶ್ರೀಮನ್ನಿರಂಜನ

**ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು**

ಎಡೆಯೂರು ಶ್ರೀ ಜ. ತೋಂಟದಾರ್ಯ ಸಂಸ್ಥಾನಮಠ

ಡಂಬಳ-ಗದಗ



## ಶುಭ ಸಂದೇಶ

ಲಿಂಗೈಕ್ಯ ಹಾನಗಲ್ ಕುಮಾರ ಮಹಾಸ್ವಾಮಿಗಳು ಲಿಂಗಾಯತ ಧರ್ಮದ ಯುಗಪುರುಷರು. ೧೯ನೇ ಶತಮಾನದ ಆಂಗ್ಲರ ಆಡಳಿತ, ಲಿಂಗಾಯತ ಸಮಾಜಕ್ಕೆ ಸಂಕ್ರಮಣ ಕಾಲ. ಸಮಾಜಬಾಂಧವರಲ್ಲಿ ವಿದ್ಯೆಯ ಸಂಚಲನ, ಪ್ರಸಾದ ನಿಲಯಗಳ ಸ್ಥಾಪನ, ವಿದ್ಯೆಯ ಕಡೆ ಗಮನ. ಇಂಥ ಕಾಲದಲ್ಲಿಯೇ ಲಿಂಗೈಕ್ಯ ಹಾನಗಲ್ ಕುಮಾರಸ್ವಾಮಿಗಳು ಲಿಂಗಾಯತ ಧರ್ಮದ ಆ ಕಾಲದ ಮುಖಂಡರೊಂದಿಗೆ ಸಮಾಲೋಚಿಸಿ, ೧೯೦೪ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭಾ ಎಂಬ ಸಾಮಾಜಿಕ ಸಂಘಟನೆಗೆ ಪೂರಕವಾದ ಸಂಸ್ಥೆಯನ್ನು ಸ್ಥಾಪಿಸಿದರು. ಸಂಘ-ಸಂಸ್ಥೆಗಳ ಸುಳಿವೇ ಇಲ್ಲದ ಆ ಕಾಲದಲ್ಲಿ ಪೂಜ್ಯ ಸ್ವಾಮಿಗಳು ಸಾಮಾಜಿಕ ಸಂಘಟನೆಗಾಗಿ ಈ ಸಂಸ್ಥೆಯನ್ನು ಸ್ಥಾಪಿಸಿದುದು ಅವರ ದೂರದೃಷ್ಟಿ ಸಾಮಾಜಿಕ ಕಳಕಳಿಗೆ ಸಾಕ್ಷಿಯಾಗಿದೆ. ಮಹಾಸಭಾ ಸ್ಥಾಪನೆಯಾದ ವರ್ಷವೇ ತ್ಯಾಗವೀರ ಶಿರಸಂಗಿ ಲಿಂಗರಾಜರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ಮೊದಲನೆಯ ಮಹಾಸಭೆ, ಬೆಂಗಳೂರಿನಲ್ಲಿ ಎರಡನೇ ಮಹಾಸಭೆ ನಡೆದುದು ಉತ್ತರ ಹಾಗೂ ದಕ್ಷಿಣ ಕರ್ನಾಟಕದ ಲಿಂಗಾಯತ ಸಮಾಜದ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಮಹತ್ವದ ಸಮ್ಮೇಳನಗಳೆನಿಸಿವೆ. ೧೯೦೮ರಲ್ಲಿ ಬಾಗಲಕೋಟೆಯಲ್ಲಿ ಜರುಗಿದ ೪ನೇ ಮಹಾಸಭೆಯಲ್ಲಿ ಸಮಾಜದ, ಸಂಘಟನೆ, ಸಂಸ್ಕೃತಿ ಪ್ರಚಾರಕ್ಕಾಗಿ ಗುರುಜಂಗಮರನ್ನು ತರಬೇತುಗೊಳಿಸುವ ಶಿವಯೋಗಮಂದಿರವೆಂಬ ಆಧ್ಯಾತ್ಮಿಕ ಸಂಸ್ಥೆಯನ್ನು ಸ್ಥಾಪಿಸುವ ತೀರ್ಮಾನವಾಯಿತು. ಈ ಸಂಸ್ಥೆ ೧೯೦೯ರ ಫೆಬ್ರುವರಿ ತಿಂಗಳಲ್ಲಿ ಮಲಪಹಾರಿ ತೀರದಲ್ಲಿ ಸ್ಥಾಪನೆಯಾಯಿತು. ಅಲ್ಲಿ ರೂಪುಗೊಂಡ ಸಾಧಕರು ತಮ್ಮ ಸಾಧನೆ ಸಿದ್ಧಿಗಳಿಂದ ಮಹಾಸ್ವಾಮಿಗಳಾಗಿ, ಮಹಾತ್ಮರಾಗಿ, ಸಮಾಜದ ಸೇವೆಗೈದುದು ಸ್ಮರಣೀಯ.

ಸದ್ಯ ಮಹಾಸಭೆ ಹಾಗೂ ಶಿವಯೋಗಮಂದಿರದ ಶತಮಾನೋತ್ಸವ ಜತೆ ಜತೆಯಾಗಿ ನೆರವೇರುತ್ತಿರುವುದು ಅವುಗಳು ಹೊಂದಿದ ಅನ್ಯೋನ್ಯ ಸಂಬಂಧದ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗಿದೆ. ಎರಡೂ ಸಂಸ್ಥೆಗಳು ದೇಶ ಕಾಲಮಾನಕ್ಕೆ ತಕ್ಕಂತೆ ಬೆಳೆಯಬೇಕಿದೆ. ಒಂದು ಶತಮಾನದಷ್ಟು ದೀರ್ಘ ಇತಿಹಾಸ ಹೊಂದಿದ ಮಹಾಸಭೆಯಿಂದ ಹೇಳಿಕೊಳ್ಳುವ ಕಾರ್ಯವಾಗಲಿಲ್ಲ. ೨೦೦೫ರ ವರೆಗೂ ಬೆಂಗಳೂರಿನಲ್ಲಿ ಒಂದು ಕೇಂದ್ರ ಕಛೇರಿಯ ಸ್ವಂತ ಕಟ್ಟಡ ಹೊಂದದಿರುವದು ದೊಡ್ಡ ಜನಾಂಗಕ್ಕೆ ತಕ್ಕುದಲ್ಲ. ಶಿವಯೋಗಮಂದಿರ ಚರಿತ್ರೆಯ ಪೂರ್ವಾರ್ಧದಲ್ಲಿ ರೂಪುಗೊಂಡ ಮಹಾಸ್ವಾಮಿಗಳ ಸಾಧನೆ, ಸಿದ್ಧಿ, ಘನತೆ ಐತಿಹಾಸಿಕ. ಉತ್ತರಾರ್ಧದಲ್ಲಿ ಪಾದ್ರಿ ನಿಷ್ಠೆಯ ಮಷಿನರಿ ಶ್ರದ್ಧೆಯುಳ್ಳ ಸ್ವಾಮಿಗಳು ಅಷ್ಟಾಗಿ ಬರಲಿಲ್ಲ. ಇಂದು ಶಿವಯೋಗಮಂದಿರ ಬಹಳಷ್ಟು ಬದಲಾವಣೆ ಹೊಂದಬೇಕಿದೆ. ಅದರಲ್ಲಿ ಮುಖ್ಯವಾದುದು ಲಿಂಗಾಯತ ಸಮಾಜದ ಎಲ್ಲ ಒಳಪಂಗಡಗಳ ಸಾಧಕರಿಗೆ ಅವಕಾಶ ಕೊಡುವದು. ರಾಮಕೃಷ್ಣ ಮಿಶನ್ ಹಾಗೂ ಕ್ರೈಸ್ತ ಮಿಶನ್ ಸನ್ಯಾಸಿಗಳಿಗೆ ದೊರೆಯುವ ಬಹುಭಾಷಾ, ಬಹುಧರ್ಮ, ಬಹುಸಂಸ್ಕೃತಿಗಳ ಅಭ್ಯಾಸ ಅವಶ್ಯವಾಗಿದೆ. ಇದು ಕಾಲದ ಬೇಡಿಕೆಯೂ ಆಗಿದೆ.

ಜಯಬಸವ

**ಡಾ. ಸಿದ್ಧಲಿಂಗ ಮಹಾಸ್ವಾಮಿಗಳು**

**ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು**
**ತರಳಬಾಳು ಜಗದ್ಗುರು ಬೃಹನ್ಮಠ, ಸಿರಿಗೆರೆ - ೫೭೭ ೫೪೧**
**ಚಿತ್ರದುರ್ಗ ಜಿಲ್ಲೆ**



## ಶುಭ ಸಂದೇಶ

ಅಖಿಲ ಭಾರತ ವೀರಶೈವ ಮಹಾಸಭಾ ಹಾಗೂ ಶ್ರೀ ಶಿವಯೋಗಮಂದಿರ ಸಂಸ್ಥೆಗಳು ಈಗ ಶತಮಾನೋತ್ಸವಕ್ಕೆ ಸಜ್ಜಾಗಿರುವುದು ತುಂಬಾ ಸಂತೋಷದ ಸಂಗತಿ. ಈ ಸಂದರ್ಭದಲ್ಲಿ ಸ್ಮರಣ ಸಂಚಿಕೆಯೊಂದು ಸಿದ್ಧವಾಗುತ್ತಿರುವುದೂ ಸಹ ಸ್ತುತ್ಯರ್ಹವಾಗಿದೆ.

ನಿಮ್ಮ ಎಲ್ಲ ಕಾರ್ಯಕ್ರಮಗಳು ಯಶಸ್ವಿ ಆಗಲಿ, ಸ್ಮರಣ ಸಂಚಿಕೆಯು ಹಾನಗಲ್ಲ ಶ್ರೀ ಕುಮಾರ ಶಿವಯೋಗಿ ಮಹಾಸ್ವಾಮಿಗಳವರ ಸಾಧನೆ ಸಿದ್ಧಿಗಳನ್ನು ಪರಿಚಯಿಸುವ ಅಮೂಲ್ಯ ಲೇಖನಗಳು ಮತ್ತು ಭಾವಚಿತ್ರಗಳನ್ನು ಒಳಗೊಂಡ ಸಂಗ್ರಹ ಯೋಗ್ಯ ಹೊತ್ತಗೆಯಾಗಿ ರೂಪುಗೊಳ್ಳಲಿ ಎಂದು ಮನವಾರೆ ಹಾರೈಸುತ್ತೇವೆ.

ಇತಿ ಶುಭಾಶಂಸನೆಗಳು,

೨೪-೦೩-೨೦೧೦ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು

## ಶ್ರೀ ಗವಿಸಿದ್ಧೇಶ್ವರ ಮಹಾಸ್ವಾಮಿಗಳು

ಸಂಸ್ಥಾನ ಶ್ರೀ ಗವಿಮಠ, ಕೊಪ್ಪಳ
ಜಿ. ಕೊಪ್ಪಳ, ಕರ್ನಾಟಕ ರಾಜ್ಯ.



### ಶುಭ ಸಂದೇಶ

ಶಿವಯೋಗಮಂದಿರ ಹಾಗೂ ಅಖಿಲ ಭಾರತ ವೀರಶೈವ ಮಹಾಸಭೆಯನ್ನು ಸಂಸ್ಥಾಪಿಸುವ ಮೂಲಕ ವೀರಶೈವ ಪುನರುತ್ಥಾನದ ಪೂಜ್ಯರೆಂದೇ ಖ್ಯಾತಿಗೊಂಡವರು ಹಾನಗಲ್ಲ ಕುಮಾರಸ್ವಾಮಿಗಳು.

ಪೂಜ್ಯ ಶ್ರೀಗಳವರು ಸಂಸ್ಥಾಪಿಸಿದ ಸಂಸ್ಥೆಗಳು ನೂರು ಸಂವತ್ಸರಗಳನ್ನು ಪೂರೈಸಿ, ಈಗ ಶತಮಾನೋತ್ಸವ ಸಂಭ್ರಮದಲ್ಲಿರುವುದು ಅತ್ಯಂತ ಹೆಮ್ಮೆಯ ಸಂಗತಿಯಾಗಿದೆ.

೧೯೦೪ರಲ್ಲಿ ಬಳ್ಳಾರಿಯಲ್ಲಿ ಸೊಲ್ಲಾಪುರದ ವಾರದ ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿದ ಅಖಿಲ ಭಾರತ ವೀರಶೈವ ಮಹಾಸಭೆಯಲ್ಲಿ, ನಮ್ಮ ಶ್ರೀಮಠದ ೧೫ನೇ ಪೀಠಾಧಿಪತಿಗಳಾಗಿದ್ದ ಜ. ಶಿವಶಾಂತವೀರ ಮಹಾಸ್ವಾಮಿಗಳವರು ಭಾಗವಹಿಸಿದ ಕಾರ್ಯಕ್ರಮಗಳನ್ನು ಯಶಸ್ವಿಗೊಳಿಸಿದ ಸಂಗತಿ ಐತಿಹಾಸಿಕ ದಾಖಲೆಯಾಗಿದೆ.

ಇಂತಹ ಮಹೋನ್ನತ ಸಂಸ್ಥೆಗಳು ಆಚರಿಸುತ್ತಿರುವ ಶತಮಾನೋತ್ಸವ ಸಮಾರಂಭಗಳು ತನ್ನಿಮಿತ್ತ ಆಯೋಜಿಸಿರುವ ಎಲ್ಲ ಕಾರ್ಯಕ್ರಮಗಳು ಯಶಸ್ವಿಯಾಗಿ ನೆರವೇರಲಿ ಹಾಗೂ ಶತಮಾನೋತ್ಸವದ ಸ್ಮರಣ ಸಂಚಿಕೆ ಮೌಲಿಕ ಲೇಖನಗಳೊಂದಿಗೆ ಸುಂದರವಾಗಿ ಮೂಡಿ ಬರಲಿ ಎಂದು ತುಂಬು ಮನದಿ ಶುಭ ಕೋರುವೆವು.

ಶ್ರೀ ಗವಿಸಿದ್ಧೇಶ್ವರ ಮಹಾಸ್ವಾಮಿಗಳು

**ಡಿ. ವೀರೇಂದ್ರ ಹೆಗ್ಗಡೆಯವರು**
**ಶ್ರೀಧರ್ಮಸ್ಥಳ - ೫೭೪೨೧೬**
**ದಕ್ಷಿಣ ಕನ್ನಡ, ಕರ್ನಾಟಕ**



## ಶುಭ ಸಂದೇಶ

ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ ಸಂಸ್ಥೆಯು ೧೦೦ ವರ್ಷಗಳ ಸಾರ್ಥಕ, ಸಾಮಾಜಿಕ ಸೇವೆಯನ್ನು ಸಲ್ಲಿಸಿದ್ದು, ಶತಮಾನೋತ್ಸವವನ್ನು ಆಚರಿಸಲಿರುವ ವಿಚಾರ ತಿಳಿದು ಸಂತೋಷವಾಯಿತು.

ಸಂಸ್ಥೆಯ ಪ್ರಗತಿಗಾಗಿ ಶ್ರಮಿಸಿರುವ ಆಡಳಿತ ಮಂಡಳಿಯ ಪದಾಧಿಕಾರಿಗಳನ್ನು ಹಾಗೂ ಸಕ್ರೀಯ ಸದಸ್ಯರನ್ನು ಅಭಿನಂದಿಸುತ್ತಾ, ಮುಂದೆಯೂ ಕೂಡಾ ಈ ಸಂಸ್ಥೆಯು ಉತ್ತರೋತ್ತರ ಪ್ರಗತಿ ಸಾಧಿಸಿ ಕೀರ್ತಿಗಳಿಸುವಂತಾಗಲೆಂದು ಆಶಿಸುತ್ತೇನೆ.

ಶತಮಾನೋತ್ಸವದ ಈ ಶುಭ ಸಂದರ್ಭದ ಸವಿನೆನಪಿಗಾಗಿ ಹಾನಗಲ್ಲ ಕುಮಾರ ಶಿವಯೋಗಿಗಳವರ ಸಾಧನೆಯ ವಿವರವುಳ್ಳ ವಿಶೇಷ ಸ್ಮರಣ ಸಂಚಿಕೆಯೊಂದನ್ನು ಹೊರತರಲಿರುವುದು ಔಚಿತ್ಯಪೂರ್ಣವಾಗಿದೆ. ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀಶಿವಯೋಗಮಂದಿರಗಳ ಪ್ರಗತಿ-ಸಾಧನೆ ಹಾಗೂ ಸಮಗ್ರ ಕಾರ್ಯಚಟುವಟಿಕೆಗಳನ್ನು ಪ್ರತಿಬಿಂಬಿಸಬಲ್ಲ ವಿವಿಧ ವೈಚಾರಿಕ ಲೇಖನಗಳಿಂದೊಡಗೂಡಿ ಸ್ಮರಣ ಸಂಚಿಕೆ ಆಕರ್ಷಕವಾಗಿ ಪ್ರಕಟವಾಗಲೆಂದು ಹಾರೈಸುತ್ತೇನೆ.

ಈ ದಿಶೆಯಲ್ಲಿ ನಿಮ್ಮೆಲ್ಲ ಪ್ರಯತ್ನ-ಪರಿಶ್ರಮ ಸಫಲವಾಗುವಂತೆ ಶ್ರೀ ಮಂಜುನಾಥಸ್ವಾಮಿ ಹರಸಲೆಂದು ಪ್ರಾರ್ಥಿಸುತ್ತೇನೆ.

೦೭-೦೩-೨೦೧೦ **ಡಿ. ವೀರೇಂದ್ರ ಹೆಗ್ಗಡೆ**



**ಪೂಜ್ಯ ಡಾ. ಶರಣಬಸವಪ್ಪ ಅಪ್ಪ**
**ಮಹಾದಾಸೋಹ ಪೀಠಾಧಿಪತಿಗಳು**
**ಶರಣಬಸವೇಶ್ವರ ಸಂಸ್ಥಾನ, ಗುಲಬರ್ಗಾ.**

## ಶುಭ ಸಂದೇಶ

ಅಖಿಲ ಭಾರತ ವೀರಶೈವ ಮಹಾಸಭೆಯು ಹಾನಗಲ್ಲ ಕುಮಾರಮಹಾಸ್ವಾಮಿಗಳಿಂದ ಜನ್ಮಪಡೆದು ಇಂದು ಶತಮಾನೋತ್ಸವದ ಸಂಭ್ರಮ ಕಾಣುತ್ತಿರುವುದು ಅದರ ಅಧ್ಯಕ್ಷರಾಗಿದ್ದ ನಮಗೆ ಅತೀವ ಹರುಷವನ್ನುಂಟುಮಾಡಿದೆ. ದೇಶ-ವಿದೇಶಗಳಲ್ಲಿ ವೀರಶೈವ ಧರ್ಮ-ಸಂಸ್ಕೃತಿಯ ಪ್ರಸಾರಕ್ಕಾಗಿ ವೀರಶೈವ ಮಹಾಸಭೆಯು ಅವತರಣಗೊಂಡಂತೆ, ಪೂಜ್ಯ ಕುಮಾರಮಹಾಸ್ವಾಮಿಗಳ ತಪಸ್ಸಿನ ಸ್ಥಳವಾಗಿರುವ ಶಿವಯೋಗಮಂದಿರವು ಹೆಸರಿಗೆ ತಕ್ಕಂತೆ ಶಿವಯೋಗದ ಸಾಧನೆಯ ಸ್ಥಲವಾಗಿ ನೂರು ವರ್ಷಗಳ ಅವಧಿ ಪೂರೈಸಿದ್ದು ಇನ್ನೊಂದು ಸಂತಸದ ಸಂಗತಿ. ಶಿವಯೋಗ ಮಂದಿರವು ನಾಡಿನುದ್ದಗಲಕ್ಕಿರುವ ಹತ್ತು ಹಲವಾರು ಮಠಗಳಿಗೆ ಯೋಗ್ಯ ವಟುಗಳನ್ನು ರೂಪಗೊಳಿಸಿ ಕೊಟ್ಟಿರುವುದು, ಕೊಡುತ್ತಿರುವುದು ಶ್ಲಾಘನೀಯ ಕಾರ್ಯವಾಗಿದೆ.

ಉಭಯ ಸಂಸ್ಥೆಗಳೂ ಸಮಾಜಮುಖಿಯಾಗಿ ಸ್ತುತ್ಯಕಾರ್ಯ ನಿರ್ವಹಿಸುತ್ತ ಶತಮಾನದ ಸಂತೋಷವನ್ನು ತಾವು ಅನುಭವಿಸಿ; ನಮಗೂ ಅದರ ದಾಸೋಹ ಮಾಡುತ್ತಲಿವೆ. ಅವುಗಳ ದಾಸೋಹ ಸೇವೆಗೆ ಪ್ರತಿಯಾಗಿ ನಮ್ಮ ಉಪಕಾರ ಸ್ಮರಣೆಯ ಗೌರವದ ದ್ಯೋತಕವಾಗಿ ಶತಮಾನೋತ್ಸವದ ಸಮಾರಂಭ ಆಚರಿಸುತ್ತ ; ಅದರ ಸ್ಮರಣ ಸಂಪುಟವೊಂದನ್ನು ಹೊರತರುತ್ತಿರುವುದು ದಾಸೋಹ ಸೇವೆಯಾಗಿದೆ. ತಮ್ಮ ಸಕಲ ಕಾರ್ಯಗಳಿಗೂ ಮಹಾಮಹಿಮರಾದ ಮಹಾದಾಸೋಹಿ ಶರಣಬಸವೇಶ್ವರರು ಸನ್ಮಂಗಲವನ್ನುಂಟು ಮಾಡಲಿ.

೧೧ನೇ ಮಾರ್ಚ ೨೦೧೦

**ಶರಣಬಸವಪ್ಪ ಅಪ್ಪ**

## ಶ್ರೀ ಶಿವಮೂರ್ತಿ ಮುರುಘಾ ಶರಣರು

**ಶ್ರೀ ಮುರುಘಾಮಠ, ಚಿತ್ರದುರ್ಗ - ೫೭೭ ೫೦೭**



### ಶುಭ ಸಂದೇಶ

ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರಗಳೆರಡೂ ಶತಮಾನೋತ್ಸವ ಸಂಭ್ರಮದಲ್ಲಿರುವುದು ಸಂತಸದ ಸಂಗತಿ. ಇದನ್ನು ಸಂಸ್ಮರಣೀಯವಾಗಿಸಲು ವಿಶೇಷ ಸಂಚಿಕೆಯೊಂದನ್ನು ಹೊರತರುತ್ತಿರುವುದು ಉಚಿತವೇ ಆಗಿದೆ.

ಸಮಾಜದ ಎರಡು ಕಣ್ಣುಗಳಂತಿರುವ ಈ ಸಂಸ್ಥೆಗಳು ಲಿಂ. ಹಾನಗಲ್ಲ ಕುಮಾರಸ್ವಾಮಿಗಳ ಕರ್ತೃತ್ವಶಕ್ತಿ ಹಾಗೂ ದೂರದರ್ಶಿತ್ವದ ಪ್ರತೀಕಗಳಾಗಿವೆ. ಸಮಾಜದ ಅಭ್ಯುದಯಕ್ಕಾಗಿ ಶ್ರಮಿಸುತ್ತಿರುವ ಈ ಸಂಸ್ಥೆಗಳು ವರುಷಗಳುರುಳಿದಂತೆ ಇನ್ನಷ್ಟು ಸದೃಢ ಮತ್ತು ಸಕ್ರೀಯವಾಗುತ್ತ ಸಾಗಿರುವುದು ಅವುಗಳ ಜೀವಂತಿಕೆ ಮತ್ತು ಪ್ರಸ್ತುತತೆಗೆ ಸಾಕ್ಷಿಯಾಗಿರುವಂತೆಯೇ ಜನ ಜಾಗೃತಿಗೂ ಹಿಡಿದ ಕೈಗನ್ನಡಿಯಾಗಿದೆ. ಈ ಬೆಳವಣಿಗೆಯ ಗ್ರಾಫ್ ಏರುಮುಖದಲ್ಲೆ ಸಾಗಲಿ ಎಂದು ಹೃದಯತುಂಬಿ ಹಾರೈಸುತ್ತೇನೆ.

ಅಖಿಲ ಭಾರತ ವೀರಶೈವ ಮಹಾಸಭೆಯು ಇಂದು ಇಷ್ಟು ಸದೃಢವಾಗುವಲ್ಲಿ ನಮ್ಮ ಹಿರಿಯರೂ, ಪ್ರಾತಃಸ್ಮರಣೀಯರೂ ಆದ ಲಿಂ. ಜಗದ್ಗುರು ಶ್ರೀ ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳ ಕೊಡುಗೆ ಅತ್ಯಂತ ಮಹತ್ವಪೂರ್ಣವಾದದ್ದು ಎಂಬುದನ್ನು ಇಲ್ಲಿ ಸ್ಮರಿಸಬಯಸುತ್ತೇನೆ. ಮಹಾಸಭೆಯ ಸಂಕಷ್ಟದ ದಿನಗಳಲ್ಲಿ ಶ್ರೀಗಳು ಅದಕ್ಕೆ ನವಚೈತನ್ಯ ತುಂಬಿ ಉಳಿಸಿ, ಬೆಳೆಸಿದ್ದು ಚರಿತ್ರಾರ್ಹ ಸಂಗತಿ. ಅಂದಿನಿಂದ ಇಂದಿನವರೆಗೂ ಶ್ರೀಮಠವು ಮಹಾಸಭೆಗೆ ಒತ್ತಾಸೆಯಾಗಿ ನಿಂತಿದೆ ಮತ್ತು ಮುಂದೆಯೂ ಇರುತ್ತದೆಂದು ಭಾವಿಸುತ್ತಾ, ಸಮಾರಂಭಕ್ಕೆ ಸಕಲ ಯಶಸ್ಸನ್ನೂ ಕೋರುತ್ತೇನೆ.

ಬಸವಾದಿ ಶರಣ-ಶರಣೆಯರ ಆಶೀರ್ವಾದದಿಂದ ನಿಮಗೆಲ್ಲರಿಗೆ ಆಯುರಾರೋಗ್ಯ ಭಾಗ್ಯ-ಶಾಂತಿ ಸಮಾಧಾನ ಸದಾ ಇರಲೆಂದು ಹಾರೈಸುತ್ತೇನೆ.

ಬಸವಸ್ಮರಣೆಗಳೊಂದಿಗೆ

೦೨-೦೩-೨೦೧೦

**ಡಾ. ಶಿವಮೂರ್ತಿ ಮುರುಘಾ ಶರಣರು**

**ಶ್ರೀ ಜಗದೀಶ ಶೆಟ್ಟರ**
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್‌ರಾಜ್ ಸಚಿವರು



## ಶುಭ ಸಂದೇಶ

ಲಿಂಗೈಕ್ಯ ಹಾನಗಲ್ಲ ಕುಮಾರಸ್ವಾಮಿಗಳು ಸಂಸ್ಥಾಪಿಸಿದ ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ ಸಂಸ್ಥೆಗಳು ಶತಮಾನೋತ್ಸವದ ಸಂಭ್ರಮದಲ್ಲಿರುವ ವಿಷಯ ತಿಳಿದು ಅತೀವ ಸಂತೋಷವಾಯಿತು.

ಲಿಂ. ಹಾನಗಲ್ಲ ಕುಮಾರಸ್ವಾಮಿಗಳ ಅವಿರತ ಪ್ರಯತ್ನದ ಫಲವಾಗಿ ಲಿಂಗಾಯತ ಸಮುದಾಯ ಅಖಿಲ ಭಾರತ ವೀರಶೈವ ಮಹಾಸಭೆಯ ಹೆಸರಿನಲ್ಲಿ ಒಗ್ಗಟ್ಟಾಗಿ ಸಾಮಾಜಿಕ ಕಳಕಳಿಯಿಂದ ಸಮಾಜದ ಸಂಘಟನೆಗೆ ಕಾರಣವಾಯಿತು. ಇದರಿಂದ ಲಿಂಗಾಯತರು ಶೈಕ್ಷಣಿಕವಾಗಿ ಪ್ರಗತಿಯನ್ನು ಸಾಧಿಸಿದುದಲ್ಲದೆ ಸಾಮಾಜಿಕವಾಗಿ ಮುಂಚೂಣಿಗೆ ಬರಲು ಸಾಧ್ಯವಾಯಿತು. ಶಿವಯೋಗಮಂದಿರ ಒಂದು ವಿಶಿಷ್ಟ ಧಾರ್ಮಿಕ ಶಿಕ್ಷಣ ಸಂಸ್ಥೆಯಾಗಿದ್ದು, ಲಿಂಗಾಯತ ಧಾರ್ಮಿಕ ಆಚರಣೆ ಹಾಗೂ ನೈತಿಕ ಶಿಕ್ಷಣದ ಅಡಿಪಾಯದ ಮೇಲೆ ಸಮಾಜಬಾಂಧವರಲ್ಲಿ ಚಾರಿತ್ರ್ಯ ರೂಪಿಸಿ ಅವರನ್ನು ಸದಾಚಾರ ಸಂಪನ್ನರಾಗುವಂತೆ ಮಾಡುವಲ್ಲಿ ಅತಿ ಪ್ರಮುಖ ಪಾತ್ರವಹಿಸುತ್ತಾ ಬಂದಿರುತ್ತದೆ. ಅಲ್ಲದೆ ಧರ್ಮ, ಶಿಕ್ಷಣ, ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರಗಳಿಗೆ ಇದು ನೀಡಿದ ಕೊಡುಗೆಗಳು ಅಪಾರ.

ಈ ಸಂಸ್ಥೆಗಳ ಶತಮಾನೋತ್ಸವ ಸಮಾರಂಭವು ಅತ್ಯಂತ ಯಶಸ್ವಿಯಾಗಿ ನೆರವೇರಲಿ. ಈ ಸುಸಂದರ್ಭದಲ್ಲಿ ಬಿಡುಗಡೆಯಾಗಲಿರುವ ಸ್ಮರಣ ಸಂಚಿಕೆಯು ವೀರಶೈವ ಮಹಾಸಭಾ ಮತ್ತು ಶಿವಯೋಗಮಂದಿರದ ಸಾಧನೆಗಳ ಕುರಿತು ಮೌಲಿಕ ಲೇಖನಗಳನ್ನೊಳಗೊಂಡ ಒಂದು ಅಮೂಲ್ಯ ಮತ್ತು ಉಪಯುಕ್ತ ಮಾಹಿತಿಯ ಭಂಡಾರವಾಗಿ ಹೊರಬರಲಿ ಎಂದು ಆಶಿಸುತ್ತೇನೆ.

೦೮-೦೩-೨೦೧೦

**ಜಗದೀಶ್ ಶೆಟ್ಟರ**





**ಶ್ರೀ ಲಕ್ಷ್ಮಣ. ಸ. ಸವದಿ**
**ಸಹಕಾರ ಸಚಿವರು ವಿಧಾನ ಸೌಧ**
**ಬೆಂಗಳೂರು**

## ಶುಭ ಸಂದೇಶ

ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ ಸಂಸ್ಥೆಗಳು ಶತಮಾನೋತ್ಸವ ಸಂಭ್ರಮದಲ್ಲಿರುವುದರ ಜೊತೆಗೆ ಸ್ಮರಣ ಸಂಚಿಕೆಯನ್ನು ಹೊರ ತರುತ್ತಿರುವುದು ಸಂತೋಷವೆನಿಸಿದೆ. ಸಾಮಾಜಿಕ ಕಳಕಳಿಯಿಂದ ಶೈಕ್ಷಣಿಕ ಪ್ರಗತಿಯನ್ನು ಸಾಧಿಸಿರುವುದಲ್ಲದೆ ಔದ್ಯೋಗಿಕ, ಸಾಹಿತ್ಯಿಕ, ಸಾಂಸ್ಕೃತಿಕ ವಿಕಾಸಕ್ಕೆ ಅಮೂಲ್ಯ ಸೇವೆ ಸಲ್ಲಿಸಿರುವುದು ಶ್ಲಾಘನೀಯ. ಶತಮಾನೋತ್ಸವ ಸಮಾರಂಭವು ಅತ್ಯಂತ ಯಶಸ್ವಿಯಾಗಿ ಜರುಗಲೆಂದು ಹಾಗೂ ಪೂಜ್ಯರ ಮಾರ್ಗದರ್ಶನದಲ್ಲಿ ಸಮಸ್ತ ಸದ್ಭಕ್ತರುಗಳಿಗೆ ಎಲ್ಲಾ ಕ್ಷೇತ್ರಗಳಲ್ಲೂ ಇನ್ನು ಹೆಚ್ಚಿನ ಕೊಡುಗೆ ನೀಡುವಂತೆ ಹಾಗೂ ನಮ್ಮೆಲ್ಲರಲ್ಲೂ ಚೈತನ್ಯ ತುಂಬುವಂತೆ ಗುರುಶರಣರುಗಳಲ್ಲಿ ಪ್ರಾರ್ಥಿಸುವ.

೦೬-೦೩-೨೦೧೦ **ಲಕ್ಷ್ಮಣ. ಸ. ಸವದಿ**



**ಶ್ರೀ ಪಿ. ಸಿ. ಗದ್ದಿಗೌಡರ**
**ಲೋಕಸಭಾ ಸದಸ್ಯರು, ಬಾಗಲಕೋಟ.**



## ಶುಭ ಸಂದೇಶ

ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳು ಸಂಸ್ಥಾಪಿಸಿದ "ಅಖಿಲ ಭಾರತ ವೀರಶೈವ ಮಹಾಸಭೆ ಹಾಗೂ ಶ್ರೀ ಶಿವಯೋಗಮಂದಿರ ಸಂಸ್ಥೆಗಳು" ಸಮಾಜದ ಅಭ್ಯುದಯಕ್ಕಾಗಿ ಶ್ರಮಿಸುತ್ತಿದ್ದು , ಈ ಎರಡೂ ಸಂಸ್ಥೆಗಳು ಶತಮಾನೋತ್ಸವ ಸಂಭ್ರಮದಲ್ಲಿರುವುದನ್ನು ತಿಳಿದು ಅತೀವ ಹರ್ಷವಾಗಿದೆ.

ಸಂಸ್ಥೆಯು ಶತಮಾನೋತ್ಸವವನ್ನು ಆಚರಿಸಿಕೊಳ್ಳುತ್ತಿರುವ ಈ ಶುಭ ಸಂದರ್ಭದಲ್ಲಿ ಶಿವಯೋಗಮಂದಿರ ಮತ್ತು ಅಖಿಲ ಭಾರತ ವೀರಶೈವ ಮಹಾಸಭೆಗೆ ಸಂಬಂಧಿಸಿದ ಮೌಲಿಕ ಲೇಖನಗಳುಳ್ಳ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವದು ತುಂಬಾ ಸಂತೋಷಕರವಾದ ಸಂಗತಿಯಾಗಿದೆ. ತಮ್ಮ ಸಂಸ್ಥೆಯು ಇನ್ನು ಹೆಚ್ಚಿನ ರೀತಿಯಲ್ಲಿ ಸಮಾಜದ ಶ್ರೇಯೋಭಿವೃದ್ಧಿಗೆ ಸಹಕಾರಿಯಾಗಲೆಂದು ಆಶಿಸುತ್ತಾ ಸ್ಮರಣ ಸಂಚಿಕೆಯು ಅತ್ಯಂತ ಉತ್ತಮವಾಗಿ ಹೊರಹೊಮ್ಮಲೆಂದು ಶುಭ ಕೋರುತ್ತೇನೆ.

**ಪಿ. ಸಿ. ಗದ್ದಿಗೌಡರ**

## ಕುಮಾರೇಶ್ವರ ಸ್ತುತಿಪಂಚಕ

**(ಚಂಪಕ ಮಾಲಾ)**

ನೀನೆ ದಯಾಳು ನಿನ್ನ ವಚನಂ ನಿಗಮಾಗಮದರ್ಥಸಾರವೈ
ನೀನೆ ವಿರಾಗಿ ನಿನ್ನತುಲ ಶೀಲವೆ ಸತ್ವಮಹೇಂದ್ರ ಸಮ್ಮತಂ
ನೀನೆ ಗುಣಾಬ್ಧಿ ನಿನ್ನಮಲವೃತ್ತಿಯೆ ಲೋಕವಿತಾನಪಾವನಂ
ನೀನೆ ವಿಚಾರಿ ನಿನ್ನ ಸರಿಯಾರು? ವಿರಾಟ್ಪುರದೀಶಯೋಗಿಯೆ ॥ ೧ ॥

ನೆರೆಸಕಲೇಂದ್ರಿಯಂಗಳೊಳು ಲಿಂಗಸಮನ್ವಿತನಾಗಿ ಸಂತತಂ
ಪರಶಿವಯೋಗವೈಭವದಬಾಧಿತ ಪೂರ್ಣಸುಖಾನುಭಾವದಿಂ
ಪರಿಣಮಿಸುತ್ತದೆಂತು ಶಿವಧರ್ಮಸುಧಾರಣೆಗೈವ ಕಷ್ಟದೊಳ್
ಚರಿಸಿದೆ ವೀರಶೈವಮತ ಪಾಲಕ ನೀನಹುದೈ ಕುಮಾರನೇ ॥ ೨ ॥

ಕಾಯವಿಕಾರಮಿಲ್ಲ ಮನದುಲ್ಬಣಮಿಲ್ಲ ಮದಾಳಿಯಿಲ್ಲವಾ
ವಾಯುಗುಣಂಗಳಿಲ್ಲ ನಿಖಿಲೇಂದ್ರಿಯ ಚೇಷ್ಟೆಗಳಿಲ್ಲವಾವಗಂ
ಮಾಯೆಯ ಕಾಟಮಿಲ್ಲ ವಿಷಯಂಗಳ ಲಾಲಸೆಯಿಲ್ಲ ಜೀವನಾ
ಪಾಯಮದಿಲ್ಲ ನಿನ್ನೊಳೆ ಮಹಾಪ್ರಭುಲಿಂಗಕುಮಾರಯೋಗಿಯೆ ॥ ೩ ॥

ನಿನ್ನಯ ಮೂರ್ತಿಯೆನ್ನೆರಡು ಕಣ್ಣೊಳು ಕಟ್ಟಿಹುದಾರ್ಯ ಚೆಲ್ವಿನಿಂ
ನಿನ್ನಯ ತತ್ವಪೂರಿತ ಮೃದೂಕ್ತಿಗಳೆನ್ನ ವಿಚಾರಭಾವದೊಳ್
ಸನ್ನುತ ಶಾಂತಿಯಂ ಕುಡುತಲಿರ್ಪುವು ನಿನ್ನಯ ರೀತಿ ನೀತಿಗಳ್
ನನ್ನಿಯೊಳೆನ್ನ ನೆಚ್ಚರಿಪವಾತ್ಮದೆ ನಿಂದು ಕುಮಾರಯೋಗಿಯೆ ॥ ೪ ॥

ನಿನ್ನನು ಪಾಡುವೀರಸನೆ ನಿನ್ನದು ದೇವ ಮಹಾನುಭಾವಕೇ-
ಳ್ನಿನ್ನನು ಜಾನಿಪೀಮನವೆ ನಿನ್ನದು ನೋಡು ತ್ರಿತಾಪಲೋಪಕ
ನಿನ್ನಯ ರೂಪಮಂ ತಿಳಿವ ಮನ್ಮತಿ ನಿನ್ನದು ಲಿಂಗಭಾವವೇ
ನಿನ್ನದು ನಿನ್ನದಯ್ಯ ಕರುಣಾಳು ಕುಮಾರ ಮಹಾಯತೀಶ್ವರಾ ॥ ೫ ॥

– 'ಕವಿರತ್ನ' ಚೆನ್ನಕವಿ

# ಮಂಗಳಾರತಿ ದೇವಗೆ

ಮಂಗಳಾರತಿ ದೇವಗೆ ಶಿವಯೋಗಿಗೆ ।
ಕಂಗಳಾಲಯ ಸಂಗಗೆ ।
ಜಂಗಮಲಿಂಗ ಭೇದದ ಸ್ವಯ ಚರ ಪರ ।
ದಿಂಗಿತವರುಪಿದಂತಾಚರಿಸಿದ ಮಹಿಮಗೆ । ॥ಪ॥

೧

ಒಂದೆ ಮಠದಿ ವಾಸಿಸಿ ಸದ್ಭಕ್ತಿಯಿಂ ।
ಬಂದ ಬಂದವರನು ಬೋಧಿಸಿ ॥
ನಿಂದು ಏಕಾಂತದಾನಂದದ ಯೋಗದ ।
ಚಂದವನರಿದನುಷ್ಠಾನಿಪ ಶಿವ ಸ್ವಯಗೆ ॥

೨

ಚರಿಸಿ ಭಕ್ತರ ಭಕ್ತಿಯ ಕೈಕೊಳ್ಳುತ್ತ ।
ಭರದಿ ಪರತರಬೋಧೆಯ ॥
ನಿರದೆ ಬೋಧಿಸಿ ಶಿಷ್ಯ ಭಕ್ತರನುದ್ಧರಿಸಿ ।
ಚರತಿಂಥಿಣಿಯೊಳಾಡಿ ಗುರುವೆನಿಪ ಚರವರಗೆ ॥

೩

ಪಾಪಮಣ್ಣಗಳ ಮೀರಿ ಸ್ವಾತಂತ್ರ್ಯದಿ ।
ಕೋಪಾದಿ ಗುಣವ ತೂರಿ ॥
ತಾಪಗೊಳ್ಳದೆ ಜಗಜ್ವಾಲದ ಧಿಕ್ಕರಿಸಿ ।
ಕಾಪಟ್ಯವಳಿದು ಶಿವ ತಾನಹ ಪರತರಗೆ ॥

೪

ಅಷ್ಟಾವರಣವ ಸಾಧಿಸಿ ಸದ್ಭಕ್ತಿಯಿಂ ।
ಶಿಷ್ಟ ಚರವರನೆನಿಸಿ ॥
ಶ್ರೇಷ್ಠ ಪ್ರಮಥನಾಮ ಪ್ರೇಮದಿಂದುಚ್ಚರಿಸಿ ।
ಕಷ್ಟತರದ ಮಾಯೆಯನು ಗೆಲಿದ ಯತಿವರಗೆ ॥

೫

ಸಚ್ಚಿದಾನಂದವೆನಿಪ ಅಥಣೀಮಠ ।
ಗಚ್ಚಿನಮಠ ಮಂಟಪ
ಅಚ್ಚರಿಗೊಳಿಪ ಷಟ್‌ಸ್ಥಲ ಬ್ರಹ್ಮವಾಸದಿಂ ।
ಬಿಚ್ಚಿ ಬೇರಿರಿಸಿದ ಮುರುಘ ಶಿವಯೋಗಿಗೆ ॥

–ಪೂಜ್ಯ ಕುಮಾರ ಶಿವಯೋಗಿಗಳು

# ಕುಮಾರ ಶಿವಯೋಗಿಗಳ ಕುರಿತು ಕೆಲವು ನೆನಹುಗಳು

• ಡಾ. ಫ. ಗು. ಹಳಕಟ್ಟಿ

೧

ಶ್ರೀ ಶಿವಯೋಗಮಂದಿರದ ಸಂಸ್ಥಾಪಕರಾದ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳವರು ನೆರವೇರಿಸಿದ ಕಾರ್ಯಗಳು ಬಹುಮುಖವಾಗಿವೆ. ಅವುಗಳನ್ನು ಸವಿಸ್ತಾರವಾಗಿ ವಿವೇಚಿಸುವುದೆಂದರೆ ಒಂದು ಸ್ವತಂತ್ರ ದೊಡ್ಡ ಗ್ರಂಥವನ್ನೆ ಬರೆದಂತೆ. ಆದುದರಿಂದ ಶ್ರೀಗಳವರ ಬಗೆಗೆ ನನ್ನ ಲಕ್ಷ್ಯದಲ್ಲಿ ಈಗ ಉಳಿದ ಕೆಲವು ವಿಷಯಗಳನ್ನು ಕುರಿತು ನಾನು ಇಲ್ಲಿ ನಿರ್ದೇಶಿಸುತ್ತೇನೆ.

ನನಗೆ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರು ಮೊದಲು ಪರಿಚಯವಾದುದು ಧಾರವಾಡದಲ್ಲಿಯ ಮೊದಲನೆಯ ವೀರಶೈವ ಮಹಾಸಭೆಯ ಅಧಿವೇಶನದ ಕಾಲದಲ್ಲಿ. ಅದರ ಹಿಂದಿನ ವರುಷ, ಅಂದರೆ ೧೯೦೩ನೆಯ ಇಸ್ವಿಯಲ್ಲಿ ಧಾರವಾಡದಲ್ಲಿ ಒಂದು ರಾಜಕೀಯ ಪ್ರಾಂತಿಕ ಪರಿಷತ್ತು ಶ್ರೀಯುತ ಖರೆ ಇವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಈ ಸಭೆಗೆ ಕೈ. ವಾ. ಬಾಲಗಂಗಾಧರ ಟಿಳಕ, ನಾ. ಗೋಖಲೆ ಮೊದಲಾದ ಅನೇಕ ರಾಜಕೀಯ ಪಟುಗಳು ಆಗಮಿಸಿದ್ದರು. ಈ ಕಾಲದಲ್ಲಿ ಧಾರವಾಡ ಜಿಲ್ಲೆಯಲ್ಲಿಯ ಮುಖ್ಯ ಗ್ರಾಮಗಳಲ್ಲಿಯ ನೂರಾರು ಜನ ವೀರಶೈವ ವ್ಯಾಪಾರಸ್ಥರೂ ವಿದ್ಯಾವಂತರೂ ಸೇರಿದ್ದರು. ಅವರೆಲ್ಲರೂ ಇರಲಿಕ್ಕೆ ಒಂದು ವಿಶಾಲವಾದ ಮಂದಿರವನ್ನು ಸತ್ಕಾರಕ ಸಂಘದವರು ಧಾರವಾಡದಲ್ಲಿಯೇ ಏರ್ಪಡಿಸಿದ್ದರು. ಆಗ ನಾಡಿನ ಹಿತಾಹಿತಗಳ ಸಂಬಂಧವಾಗಿ ಚರ್ಚೆಗಳು ಕೂಡಿದ ವೀರಶೈವರಲ್ಲಿ ಉದ್ಭವಿಸುತ್ತಿದ್ದವು. ಇವುಗಳಲ್ಲಿ ಮುಖ್ಯಭಾಗವನ್ನು ವಹಿಸಿದವರು ಶ್ರೀಯುತ ಗದಿಗೆಯ್ಯ ಹೊನ್ನಾಪುರಮಠ, ಧಾರವಾಡ. ಬನಹಟ್ಟಿಯ ತಮ್ಮಣ್ಣಪ್ಪ ಸತ್ಯಪ್ಪ ಚಿಕ್ಕೋಡಿ, ಧಾರವಾಡದ ಮೂಗಪ್ಪ ಸವದತ್ತಿ ಈ ಮೊದಲಾದವರು ಇರುತ್ತಿದ್ದರು. ಈ ಚರ್ಚೆಗಳ ಪರಿಣಾಮವಾಗಿ, ಹೇಗೆ ರಾಜಕೀಯ ಪ್ರಾಂತಿಕ ಪರಿಷತ್ತು ಸೇರಿದೆಯೋ ಹಾಗೆಯೇ ವೀರಶೈವರ ಹಿತಾಹಿತಗಳನ್ನು ವಿಚಾರಿಸಲು ಒಂದು ವೀರಶೈವ ಪರಿಷತ್ತನ್ನು ನೆರವೇರಿಸುವುದು ಅಗತ್ಯವೆಂದು ತೋರಿ ಬಂದಿತು. ಆ ಮೇಲೆ ಒಂದು ವಾರದಲ್ಲಿಯೇ ಪಟ್ಟಣದಲ್ಲಿಯ ೨೦-೩೦ ಪ್ರಮುಖರ ಒಂದು ಚಿಕ್ಕ ಸಭೆಯನ್ನು ಧಾರವಾಡದಲ್ಲಿ ಸೇರಿಸಲಾಗಿ, ಅವರು ವೀರಶೈವ ಮಹಾಸಭೆಯನ್ನು ಕೂಡಿಸಲೇಬೇಕೆಂದು ನಿರ್ಧರಿಸಿದರು. ಇದರಲ್ಲಿ ವಿಶೇಷ ಪ್ರೋತ್ಸಾಹವನ್ನು ಕೊಟ್ಟವರು ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳು; ಅವರಿಗೆ ಬೆಂಬಲವಾಗಿ ಕೈವಾ.ರೇವಣಸಿದ್ಧಪ್ಪ ಕಿತ್ತೂರು, ಕೈ. ವಾ. ಕೊಂಗವಾಡ ಮೊದಲಾದವರೂ ಇದ್ದರು.

ಮುಂದೆ ಕೆಲವು ದಿವಸಗಳಾದ ಮೇಲೆ ಆರ್ಯ ಸಮಾಜದವರು ಒಂದು ಗುರುಕುಲವನ್ನು ನಾಡಿನಲ್ಲಿ ಸ್ಥಾಪಿಸಿ ಅದಕ್ಕೋಸ್ಕರ ಅದ್ಭುತವಾಗಿ ಪ್ರಯತ್ನ ಮಾಡುತ್ತಿರುವ ವಾರ್ತೆಗಳು ವೃತ್ತ ಪತ್ರಿಕೆಗಳಲ್ಲಿ ಪ್ರಸಿದ್ಧವಾಗಹತ್ತಿದವು. ೧೯೦೭ನೇ ಇಸ್ವಿಯಲ್ಲಿ ಸೊಲ್ಲಾಪುರದಲ್ಲಿ ೩ನೇ ಮಹಾಸಭೆಯು ಜರುಗಿತು. ಈ ಸಭೆಗೆ ಹಾನಗಲ್ಲ ಮಹಾಸ್ವಾಮಿಗಳವರು ಕಾಲು ಮಾರ್ಗದಿಂದ ಸೊಲ್ಲಾಪುರ ಪಟ್ಟಣಕ್ಕೆ ಆಗಮಿಸಿದರು. ಮಹಾತ್ಮಾ ಗಾಂಧಿಯವರು ಜನತೆಯಲ್ಲಿ ಒಂದು ಮಹತ್ವದ ಸಂದೇಶವನ್ನು ಬೀರಲು ಪಾದಚಾರಿಗಳಾಗಿ ಹೇಗೆ ಮಾರ್ಗಕ್ರಮಣ ಮಾಡುತ್ತಿದ್ದರೋ ಅದೇ ಮೇರೆಗೆ ಹಾನಗಲ್ಲ ಕುಮಾರ ಸ್ವಾಮಿಗಳವರು ತಾವು ಇಳಿದ ಗ್ರಾಮದಲ್ಲಿ ವೀರಶೈವರಿಗೋಸ್ಕರ ಒಂದು ಗುರುಕುಲವನ್ನು ಒಂದು ಕಡೆಗೆ ಸ್ಥಾಪಿಸಬೇಕೆಂಬ ವಿಚಾರಗಳನ್ನು ವಿಶದಪಡಿಸುತ್ತಲೇ ಬಂದರು.

ಮುಂದೆ ೧೯೦೮ರಲ್ಲಿ ಬಾಗಲಕೋಟೆಯಲ್ಲಿ ವೀರಶೈವ ಮಹಾಸಭೆಯು ಶ್ರೀಮಂತ ರಾಜಾ ಲಖಮಗೌಡ ಸರ ದೇಸಾಯಿ ವಂಟಮುರಿ ಇವರ ಅಧ್ಯಕ್ಷತೆಯಲ್ಲಿ ನೆರವೇರಿತು. ಈ ಸಭೆಯಲ್ಲಿ ಆದ ನಿರ್ಣಯಗಳಲ್ಲಿ ಶಿವಯೋಗಮಂದಿರವನ್ನು ಸ್ಥಾಪಿಸಬೇಕೆಂಬ ನಿರ್ಣಯವು ಮಹತ್ವವಾದದ್ದು, ಈ ನಿರ್ಣಯವಾದ ಬಳಿಕ ಮರುವರುಷವೇ ಈಗಿನ ಬದಾಮಿಯ ನೆರೆಯಲ್ಲಿ ಮಹಾಕೂಟ ಪುಣ್ಯಕ್ಷೇತ್ರದ ಸಮೀಪವಾಗಿ ಮಲಾಪಹಾರಿ ನದೀ ತೀರದಲ್ಲಿ ಶಿವಯೋಗಮಂದಿರವು ಸ್ಥಾಪಿತವಾಯಿತು. ಅಂದಿನಿಂದ ಈವರೆಗೆ ಈ ಸಂಸ್ಥೆಯ ಮೂಲಕ ವೀರಶೈವ ಅನೇಕ ಮಠಾಧಿಪತಿಗಳೂ ಯೋಗ್ಯ ಶಿಕ್ಷಣವನ್ನು ಹೊಂದಿ ವೀರಶೈವ ಧರ್ಮದ ಮಹತ್ವವನ್ನು ಎಲ್ಲ ಕಡೆಗೂ ಈವರೆಗೆಯೂ ಬೀರುತ್ತ ಬಂದಿದ್ದಾರೆ.

ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರು ಹೇಗೆ ಧನಸಂಚಯ ಮಾಡುತ್ತ ಬಂದರೋ ಹಾಗೆಯೇ ಅವರು ಗ್ರಂಥ ಸಂಚಯವನ್ನು ಸಹ ಮಾಡುತ್ತ ಬಂದರು. ಅವರ ಈ ಕಾರ್ಯವು ಅತ್ಯಂತ ಮಹತ್ತರವಾದುದು. ಶ್ರೀ ಸ್ವಾಮಿಗಳವರ ದರ್ಶನ ಹೊಂದಲು ಎಲ್ಲ ಕಡೆಯಿಂದಲೂ ಪ್ರಮುಖ ವ್ಯಕ್ತಿಗಳು ಈ ಮಂದಿರಕ್ಕೆ ಬರುವುದು ರೂಢಿಯಾಗಿತ್ತು. ಅವರನ್ನು ಶ್ರೀ ಸ್ವಾಮಿಗಳು ಕಂಡು ಅವರ ಗ್ರಾಮದಲ್ಲಿ ತಾಡವೋಲೆಯ ಗ್ರಂಥಗಳು ಇವೆಯೋ ಹೇಗೆ ಎಂಬುದನ್ನು ಪ್ರಶ್ನೆ ಮಾಡದೇ ಬಿಡುತ್ತಿದ್ದಿಲ್ಲ. ಯಾರಾದರೂ ತಮ್ಮಲ್ಲಿ ಇಂಥ ಗ್ರಂಥಗಳು ಇವೆ ಎಂದು ಉತ್ತರ ಕೊಟ್ಟಲ್ಲಿ ಅವುಗಳನ್ನು ಮಂದಿರಕ್ಕೆ ಕಳಿಸಬೇಕೆಂದು ಶ್ರೀ ಸ್ವಾಮಿಗಳು ತಪ್ಪದೆ ಹೇಳುವರು. ಅವರನ್ನು ಕಾಣ ಬಂದವರಲ್ಲಿ ಯಾರೂ ತಾವು ಕಳಿಸುವುದಿಲ್ಲ ಎಂದು ಅನ್ನುತ್ತಿದ್ದಿಲ್ಲ. ಎಲ್ಲರೂ ಭಕ್ತಿಯಿಂದ ತಮ್ಮಲ್ಲಿಯ ಗ್ರಂಥಗಳನ್ನು ಅವರ ಕಡೆಗೆ ಸಮರ್ಪಿಸುತ್ತಿದ್ದರು. ಈ ಪ್ರಕಾರ ಮಂದಿರದಲ್ಲಿ ವೀರಶೈವ ಗ್ರಂಥಗಳ ಒಂದು ದೊಡ್ಡ ಸಂಗ್ರಹವು ಸ್ವಲ್ಪ ದಿವಸಗಳಲ್ಲಿ ಉಂಟಾಯಿತು.

ಶ್ರೀ ಸ್ವಾಮಿಗಳವರು ಮಂದಿರದ ಒಂದು ದೊಡ್ಡನಿಧಿಯನ್ನು ಕೂಡಿಸಿದ್ದೂ, ಅಲ್ಲಿ ಕಟ್ಟಡಗಳನ್ನು ನಿರ್ಮಾಣ ಮಾಡಿದ್ದೂ ಮಹತ್ವದ ಕಾರ್ಯಗಳೆಂಬುದು ನಿಸಂದೇಹವಾದದ್ದು. ಆದರೆ ಹಣಕ್ಕಿಂತಲೂ ಮಹತ್ವವೆನಿಸಿಕೊಳ್ಳುವ ಗ್ರಂಥಗಳ ಸಂಗ್ರಹ ಮಾಡುವುದು ಅಷ್ಟೇ ಶ್ರೇಯಸ್ಕರವಾದದ್ದು ಇರುತ್ತದೆ. ಇಂಥ ಗ್ರಂಥಗಳು ಸಮಾಜದಲ್ಲಿ ಇರದಿದ್ದರೆ ಸಂಸ್ಕೃತಿಯು ಬಾಳುವ ಸಂಭವವೇ ಇಲ್ಲ.

ಇದೇ ಕಾಲದಲ್ಲಿ ನಾನು ವಚನಶಾಸ್ತ್ರದ ಉಕ್ತಿಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ತೊಡಗಿದ್ದೆನು. ಈ ಸಂಗತಿಯನ್ನು ನಾನು ಸ್ವಾಮಿಗಳವರ ನಿದರ್ಶನಕ್ಕೆ ಆಗಿಂದಾಗ್ಗೆ ತರುತ್ತಿದ್ದೆನು. ಅವರು ಇದನ್ನು ನೋಡಿ ಬಹಳ ಸಂತೋಷಿಸುತಿದ್ದರು ಮತ್ತು ನನಗೆ ಅದರಲ್ಲಿ ಪ್ರೋತ್ಸಾಹವನ್ನು ಕೊಡುತ್ತಿದ್ದರು.

ಮುಂದೆ ನಾನು 'ವಚನ ಶಾಸ್ತ್ರಸಾರ' ಎಂಬ ಗ್ರಂಥವನ್ನು ನಿರ್ಮಾಣ ಮಾಡಿ ಅದರಲ್ಲಿ ನಾಲ್ಕು ಭಾಗಗಳನ್ನು ತಯಾರಿಸಿದ್ದೆನು. ಮೊದಲನೆಯ ಭಾಗವು ಪೂರ್ಣವಾದುದನ್ನು ಬಾಗಲಕೋಟೆಯ ಕೆಲ ಮಹನೀಯರು ಸ್ವಾಮಿಗಳವರಿಗೆ ಹೇಳಲು ಅವರು ಖುದ್ದಾಗಿ ನಾನಿದ್ದ ಮನೆಯ ಸಮೀಪದಲ್ಲಿ ಸೊನ್ನದ ಶ್ರೀಮಂತ ಗಂಗಪ್ಪ ದೇಸಾಯಿಯವರ ಕಟ್ಟಡವು ಇದ್ದಿತು. ಅದೇ ಮನೆಯಲ್ಲಿ ಅವರು ಇಳಿದರು. ಆಗ ನಾನು ವಿಷಮಜ್ವರ ಪೀಡಿತನಾಗಿದ್ದೆ; ಚೆನ್ನಾಗಿ ಕುಳ್ಳಿರಲಿಕ್ಕೆ ಬರುತ್ತಿದ್ದಿಲ್ಲ. ಆದರೂ ಶ್ರೀ ಸ್ವಾಮಿಗಳು ನನ್ನ ಅನುಕೂಲತೆಗಾಗಿ ಈ ಗೃಹದಲ್ಲಿ ಇಳಿದು ಕೆಲವು ದಿವಸಗಳವರೆಗೆ ನಾನು ಸಂಗ್ರಹಿಸಿದ ಉಕ್ತಿಗಳನ್ನು ನನ್ನ ಕಡೆಯಿಂದ ಓದಿಸಿಕೊಳ್ಳುತ್ತಿದ್ದರು. ಅವುಗಳಲ್ಲಿರುವ ವಚನಗಳಲ್ಲಿಯ ಉಚ್ಚ ವಿಚಾರ ಮತ್ತು ಸುಂದರ ನುಡಿಗಳನ್ನು ಕೇಳಿ ಅವರು ಹರ್ಷಿಸುತ್ತಿದ್ದರು ಮತ್ತು ನನಗೆ ಈ ಗ್ರಂಥವನ್ನು ಅಚ್ಚು ಹಾಕಲಿಕ್ಕೆ ಪ್ರೋತ್ಸಾಹಿಸಿದರು. ಈ ಅಚ್ಚು ಹಾಕುವ ಕಾರ್ಯದಲ್ಲಿ ನನಗೆ ಶ್ರೀಮಂತ ಗಂಗಪ್ಪ ದೇಸಾಯಿಯವರು ಧನ ಸಹಾಯವನ್ನು ಮಾಡಲು ಒಪ್ಪಿದರು. ಶ್ರೀ ಸ್ವಾಮಿಗಳು ಅದನ್ನು ಕೇಳಿ ಸಂತೋಷ ಪ್ರದರ್ಶನವನ್ನು ಮಾಡಿದರು. ಗ್ರಂಥದ ಮುದ್ರಣವು ಬೆಳಗಾವಿಯಲ್ಲಿ ಮುಗಿದ ಬಳಿಕ ನಾನು ಅದನ್ನು ಅವರಿಗೆ ಅರ್ಪಿಸಿದೆನು.

ಸ್ವಾಮಿಗಳವರ ಹಸ್ತದಲ್ಲಿ ಈ ಗ್ರಂಥವು ಬಂದ ಬಳಿಕ ಅವರು ತಮ್ಮ ಭೋಜನೋತ್ತರ ಕಾಲದಲ್ಲಿ ಅದರಲ್ಲಿಯ ಶ್ರೇಷ್ಠ ಉಕ್ತಿಗಳನ್ನು ತಮ್ಮನ್ನು ಕಾಣಲಿಕ್ಕೆ ಬಂದ ಜನರಿಗೆ ತಿಳಿಸಿ ಹೇಳುವರು. ಈ ಕಾರ್ಯವನ್ನು ಅವರು ಬಹುದಿನ ಮಾಡುತ್ತ ಬಂದರು. ಹೀಗೆ ತಾವಷ್ಟೇ ಅಲ್ಲ, ಮಂದಿರಕ್ಕೆ ಬಂದ ಮಠಾಧಿಕಾರಿಗಳಿಗೂ ಶಾಸ್ತ್ರಿಗಳಿಗೂ 'ಶಿವಶರಣರು ಎಂಥ ಮಹತ್ವದ ಕಾರ್ಯವನ್ನು ಮಾಡಿದ್ದಾರೆ ನೋಡಿರಿ' ಎಂದು ತಿಳಿಸಿ ಹೇಳುವರು.

ಮುಂದೆ ಶ್ರೀಯುತ ರಂಗನಾಥ ದಿವಾಕರ, ಶ್ರೀಯುತ ಬಿ.ಎಂ. ಶ್ರೀಕಂಠಯ್ಯ, ಶ್ರೀಯುತ ಎಂ. ಆರ್. ಶ್ರೀನಿವಾಸಮೂರ್ತಿ ಮೊದಲಾದ ಮಹನೀಯರು ಶಿವಶರಣರ ಬಗ್ಗೆ ಬಹಳ ಉಚ್ಚತರದ ಲೇಖ-ಗ್ರಂಥಗಳನ್ನು ಬರೆದು ಪ್ರಕಟಿಸಿದರು. ಹೀಗೆ ಶಿವಶರಣರ ವಚನಗಳನ್ನು ಮೊದಲು ಪ್ರಸಾರ ಮಾಡಿದವರು ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳೇ ಆಗಿದ್ದಾರೆ. ಅವರು ಹೋದಲ್ಲೆಲ್ಲ ಶಿವಶರಣರ ವಿಚಾರಗಳನ್ನು ತಮ್ಮ ಅಧಿಕಾರವಾಣಿಯಿಂದ ಜನರ ಮುಂದೆ ಪ್ರಸ್ತಾಪಿಸಿ ಅವುಗಳನ್ನು ಮುಂದಕ್ಕೆ ತಂದರು.

ಶ್ರೀ ಸ್ವಾಮಿಗಳು ನಿಜಗುಣರ ಶಾಸ್ತ್ರವನ್ನು ಚೆನ್ನಾಗಿ ಪರಿಶೀಲಿಸಿದ್ದರು. ಈ ಗ್ರಂಥಗಳಲ್ಲಿ ಯೋಗಾಭ್ಯಾಸದ ತತ್ವಗಳು ವಿಸ್ತಾರವಾಗಿ ಬಂದಿರುತ್ತವೆ. ಶಿವಶರಣರ ಗ್ರಂಥಗಳಲ್ಲಿ ಬರುವ ಕ್ಲಿಷ್ಟ ಆಂತರಂಗಿಕ ವಿಚಾರಗಳನ್ನು ಶ್ರೀ ಸ್ವಾಮಿಗಳವರು ಬಹಳ ಹಗುರಾಗಿ ಜನರಿಗೆ ತಿಳಿಸಿ ಹೇಳುವರು. ಇದರಿಂದ ವಚನ ವಾಙ್ಮಯದ ಮಹತ್ವವು ಅವರಿಗೆ ಚೆನ್ನಾಗಿ ಬಿಂಬಿಸುತ್ತಿತ್ತು. ಮುಂದೆ ಇದರ ಪ್ರಭಾವವು ಬೆಳೆಯುತ್ತಲೇ ಬಂದಿತು. ಈ ಪ್ರಭಾವವು ಬೆಳೆಯುತ್ತ ಇನ್ನೂ ವಿಶಾಲ ಸ್ಥಿತಿಯನ್ನು ಹೊಂದುವುದರಲ್ಲಿ ಇದೆ. ಇದು ಪೂರ್ಣತೆಗೆ ಬರಲಿಕ್ಕೆ ಇನ್ನೂ ಕೆಲಕಾಲವು ಬೇಕಾಗಬಹುದು. ಈ ಮಹತ್ವದ ಕಾರ್ಯವು ಶ್ರೀ ಶಿವಯೋಗಮಂದಿರದ ಸ್ಥಾನದಲ್ಲಿಯೇ ಸ್ವಲ್ಪ ಕಾಲದಲ್ಲಿ ಪೂರ್ಣತೆಗೆ ಬರಬಹುದೆಂದು ನಿರೀಕ್ಷಿಸಲ್ಪಟ್ಟಿದೆ.

ಶಿವಶರಣರ ವಾಙ್ಮಯದಲ್ಲಿ ಸಂಕುಚಿತ ಭಾವನೆಗಳು ಎಷ್ಟು ಮಾತ್ರವೂ ಇರುವುದಿಲ್ಲ. ಹಾನಗಲ್ಲ ಶ್ರೀ ಕುಮಾರಸ್ವಾಮಿಗಳಲ್ಲಿ ಯಾವಾಗಲೂ ಶಿವಶರಣರ ಉದಾರಭಾವವು ಹೊರಹೊಮ್ಮುತ್ತಿತ್ತು. ಅವರನ್ನು ಕಾಣಬಂದವರು ಯಾವ ಜಾತಿಯವರಿದ್ದರೂ ಅವರನ್ನು ಅವರು ಆದರಿಸದೆ ಇರುತ್ತಿದ್ದಿಲ್ಲ.

ಸ್ವಾಮಿಗಳವರು ಒಕ್ಕಲುತನ, ಪಶುಸಂಗೋಪನ, ಈ ಮೊದಲಾದ ಕಾರ್ಯಗಳಿಗೆ ಉತ್ತೇಜನ ಕೊಡುತ್ತಿದ್ದರು. ಇಂಥ ಕಾರ್ಯಗಳಲ್ಲಿ ಅವರು ಸ್ವತಃ ಲಕ್ಷ್ಯ ಹಾಕುತ್ತಿದ್ದರು. ಮಂದಿರದಲ್ಲಿ ಅನೇಕ ಜನ ವಟುಗಳು ಇರುತ್ತಿದ್ದರು. ಅವರೆಲ್ಲರಿಗೆ ಧಾರ್ಮಿಕ ಶಿಕ್ಷಣ ಕೊಡಲಿಕ್ಕೆ ಅವರು ತಕ್ಕ ಏರ್ಪಾಡುಗಳನ್ನು ಮಾಡಿದ್ದರು. ಹೀಗೆ ಶಿಕ್ಷಣ ಹೊಂದಿದವರಲ್ಲಿ ಅನೇಕರು ನಾಡಿನಲ್ಲಿ ಇದ್ದು ಅವರು ಈಗ ಉಚ್ಚಪೀಠಗಳಿಗೆ ಅಧಿಕಾರಿಗಳಾಗಿದ್ದಾರೆ. ಇವರು ಯಾವಾಗಲೂ ಸಮಾಜ ಸೇವೆಯಲ್ಲಿರುವಂತೆ ಕಂಡು ಬರುತ್ತದೆ.

ಸ್ವಾಮಿಗಳವರು ಇಂಗ್ಲೀಷ್ ಭಾಷೆಯು ಪರಕೀಯ ಭಾಷೆಯೆಂದು ತಿಳಿದು ಎಂದೂ ಅದನ್ನು ತಿರಸ್ಕರಿಸಲಿಲ್ಲ. ಮಂದಿರದಲ್ಲಿ ಇಂಗ್ಲಿಷಿನ ಶಿಕ್ಷಣಕ್ಕೋಸ್ಕರವೂ ಅವರು ಕೆಲವು ಕಾಲ ಒಂದು ಶಾಲೆಯನ್ನು ಸ್ಥಾಪಿಸಿದ್ದರು.

ಅವರು ಸಾಕಷ್ಟು ನಿಧಿ ಕೂಡಿದ ಕೂಡಲೇ ಬಾಗಲಕೋಟೆಯಲ್ಲಿ ಒಂದು ಕಾರ್ಯಾಲಯವನ್ನು ಅಥವಾ ಗಿರಣಿಯನ್ನು ಸ್ಥಾಪಿಸಿದರು. ಅವರು ಮಂದಿರದ ಸುತ್ತಲೂ ಕೃಷಿಯನ್ನು ಹೆಚ್ಚಿಸಿದರು; ಧಾರ್ಮಿಕ ವಿಧಿ-ವಿಧಾನಗಳು ಸರಿಯಾಗಿ ನಡೆಯಬೇಕೆಂದು ಯೋಗ್ಯ ವ್ಯವಸ್ಥೆ ಮಾಡಿದರು. ಅವರ ಈ ಎಲ್ಲ ಯೋಜನೆಗಳು ಈಗಲೂ ಉತ್ತಮ ಸ್ಥಿತಿಯಲ್ಲಿ ಇರುತ್ತವೆ.

೨

ಶ್ರೀ ಹಾನಗಲ್ಲು ಕುಮಾರಸ್ವಾಮಿಗಳವರು ೧೯-೨-೩೦ನೇ ದಿವಸ ಸಂಜೆಯ ಆರುವರೆ ಗಂಟೆಗೆ ಶಿವಯೋಗಮಂದಿರದಲ್ಲಿ ಲಿಂಗೈಕ್ಯರಾದದ್ದಕ್ಕೆ ನಾವು ಅತ್ಯಂತ ವಿಷಾದಪಡುತ್ತೇವೆ. ಕರ್ನಾಟಕದಲ್ಲಿ ಆಗಿಹೋದ ಮಹಾಪುರುಷರಲ್ಲಿ ಇವರನ್ನು ನಾವು ಅವಶ್ಯವಾಗಿ ಗಣಿಸಬಹುದಾಗಿದೆ. ಇವರು ತಮ್ಮ ಜೀವಿತಕಾಲದಲ್ಲಿ ಸಾರ್ವಜನಿಕ ಹಿತಕ್ಕಾಗಿ ಎಡೆಬಿಡದೆ ದುಡಿದರು. ಅವರು ಅನೇಕ ಮಹತ್ವದ ಕಾರ್ಯಗಳನ್ನು ಮಾಡುತ್ತ ಬಂದರು. ಅದಕ್ಕೋಸ್ಕರ ಇಡೀ ಕರ್ನಾಟಕವು ಅದರಲ್ಲಿ ವಿಶೇಷವಾಗಿ ವೀರಶೈವ ಸಮಾಜವು ಇವರಿಗೆ ಅತ್ಯಂತ ಋಣಿ ಯಾಗಿರುವುದು.

ಸಮಾಜವು ಹಿಂದೆ ಬಿದ್ದ ಕಾಲಕ್ಕೆ ಅದನ್ನು ಮುಂದಕ್ಕೆ ದೂಡಲು ಒಬ್ಬಾನೊಬ್ಬನು ಮೊದಲು ಪ್ರವೃತ್ತನಾಗುತ್ತಾನೆ. ಅವನು ಈ ಪ್ರಕಾರ ಉದ್ಭವಿಸಿ ಅದಕ್ಕೆ ಯೋಗ್ಯ ದಾರಿಯನ್ನು ತೋರಿಸಿಕೊಡುತ್ತಾನೆ. ಆಮೇಲೆ ಅವನ ತರುವಾಯ ಅವನು ಹಾಕಿಕೊಟ್ಟ ಹಾದಿಯಂತೆ ಸಮಾಜವು ಕೆಲದಿವಸ ಹೋದ ಬಳಿಕ ಅದು ಪುನಃಸ್ತಬ್ಧವಾಗುವ ಪ್ರಸಂಗವು ಬರಲು ಮತ್ತೊಬ್ಬರು ಉತ್ಪನ್ನರಾಗಿ ಅದರಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸುತ್ತಾರೆ. ಇಂಥವರೆಲ್ಲರೂ ಮಹಾವಿಭೂತಿಗಳೇ ಸರಿ. ಇಂಥವರ ವರ್ಗದಲ್ಲಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಇರುತ್ತಾರೆ. ಹೋದ ಶತಮಾನದ ಮಧ್ಯದಲ್ಲಿ ಬರೇ ಲಿಂಗಾಯತರಿಗಷ್ಟೇ ಅಲ್ಲ, ಇಡೀ ಕರ್ನಾಟಕಕ್ಕೆ ಯೋಗ್ಯ ಹಾದಿಯನ್ನು ತೋರಿಸಿ ಕೊಟ್ಟವರು ಕೈ. ವಾ. ಚನ್ನಬಸಪ್ಪ ಧಾರವಾಡ ಇರುತ್ತಾರೆ. ಕರ್ನಾಟಕತ್ವದ ಬೀಜಾರೋಪಣವನ್ನು ಕನ್ನಡ ನಾಡಿನಲ್ಲಿ ಮೊದಲು ಊರಿದವರು ಇವರೇ ಇದ್ದಾರೆ. ಇವರ ಕಾಲಕ್ಕೆ ಅನೇಕ ವಿದ್ವಾಂಸರು ಹುಟ್ಟಿ ಕನ್ನಡವನ್ನು ಬೆಳಕಿಗೆ ತಂದರು. ಆ ಮೇಲೆ ಕೈವಾ. ಗುರುಸಿದ್ಧಪ್ಪ ಗಿಲಗಂಚಿ ಮತ್ತು ರಾ.ಬ. ರುದ್ರಗೌಡ ಅರಟಾಳ ಇವರು ವೀರಶೈವ ಸಮಾಜದಲ್ಲಿ ಉತ್ಪನ್ನರಾಗಿ ಆಧುನಿಕ ಸಂಸ್ಕೃತಿಯ ಜ್ಞಾನವನ್ನು ಹಬ್ಬಿಸಲಿಕ್ಕೆ ಪ್ರಯತ್ನಿಸಿದರು. ಈ ಮಹನೀಯರು ತಮ್ಮ ಪ್ರಯತ್ನಗಳನ್ನು ೧೫-೨೦ ವರ್ಷ ನಡೆಸುವಷ್ಟರಲ್ಲಿಯೇ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಮುಂದಕ್ಕೆ ಬಂದು ವೀರಶೈವ ಸಮಾಜದಲ್ಲಿ ಧರ್ಮದ ನಿಜವಾದ ಸಂಸ್ಕೃತಿಯನ್ನು ಹಬ್ಬಿಸಲಿಕ್ಕೆ ಕಾರಣವಾದರು. ಧರ್ಮ ಸಂಸ್ಕೃತಿಯೇ ಸಮಾಜದ ತಳಹದಿಯಾಗಿರುತ್ತದೆಂದು ಭಾವಿಸಿ ಅದಕ್ಕೋಸ್ಕರವೇ ಅವರು ತಮ್ಮ ಇಡೀ ಆಯುಷ್ಯವನ್ನೇ ಅರ್ಪಿಸಿದರು.

ವೀರಶೈವ ಮಹಾಸಭೆಯು ಇರುವ ವರೆಗೆ ವೀರಶೈವ ಜನ ಸಮುದಾಯದಲ್ಲಿ ಅದು ವಿಶೇಷ ಚಳವಳಿಯನ್ನು ಹಬ್ಬಿಸಲಿಕ್ಕೆ ಸಾಧನೀಭೂತವಾಯಿತು. ಅದರ ಮೂಲಕ ಸಾರ್ವಜನಿಕ ಕಾರ್ಯಮಾಡಲಿಚ್ಛಿಸುವವರಿಗೆ ತಮ್ಮ ಚಳುವಳಿಗಳನ್ನು ಸಾಗಿಸಲಿಕ್ಕೆ ಬಹಳ ಉಪಯೋಗವಾಯಿತು. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಈ ಮಹಾಸಭೆಯನ್ನು ಆರಂಭಿಸಿ, ಅದರ ೭-೮ ಅಧಿವೇಶನಗಳಲ್ಲಿ ಪ್ರತ್ಯಕ್ಷ ಕಾರ್ಯ ಮಾಡಿ, ಜನರಲ್ಲಿ ಜಾಗೃತಿಯನ್ನು ಹುಟ್ಟಿಸಿದರು. ಇದು ಅವರು ಮಾಡಿದ ಮಹತ್ವದ ಕಾರ್ಯವಾಗಿದೆ. ಶ್ರೀ ಸ್ವಾಮಿಗಳು ಧಾರ್ಮಿಕ ಕಾರ್ಯಗಳಲ್ಲಿ ಅತ್ಯಂತ ಉತ್ಸುಕರಾದ್ದರಿಂದ ಮಹಾಸಭೆಯ ಜಾಗ್ರತೆಯ ಮೂಲಕ ಅವರು ಬದಾಮಿ ಮಹಾಕೂಟದಲ್ಲಿಯ ಶಿವಯೋಗಮಂದಿರವೆಂಬ ಮಹತ್ವದ ಸಂಸ್ಥೆಯನ್ನು ಸ್ಥಾಪಿಸಿದರು. ಇದು ಅವರು ಮಾಡಿದ ಎರಡನೇ ಮಹತ್ವದ ಕಾರ್ಯವಾಗಿದೆ.

ಶಿವಯೋಗವು ವೀರಶೈವಧರ್ಮದಲ್ಲಿ ಒಂದು ವಿಶಿಷ್ಟ ಯೋಗಪದ್ಧತಿಯಾಗಿರುತ್ತದೆ. ಇದನ್ನು ಪ್ರಸಾರಗೊಳಿಸಬೇಕೆಂಬುದೇ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳ ಮುಖ್ಯ ಧ್ಯೇಯವಾಗಿತ್ತು. ಇದಕ್ಕೋಸ್ಕರವಾಗಿಯೇ ಅವರು ಶಿವಯೋಗಮಂದಿರವನ್ನು ಸ್ಥಾಪಿಸಿದರು. ಹೀಗೆ ಶಿವಯೋಗಮಂದಿರದಲ್ಲಿ ಶಿಕ್ಷಣ ಹೊಂದಿದ ಮಠಾಧಿಕಾರಿಗಳು ಮಠಗಳಲ್ಲಿ ಪಟ್ಟಾಧ್ಯಕ್ಷರಾಗುವುದರಿಂದ ಸಮಾಜದ ಪ್ರಗತಿಯು ಬಹು ಬೇಗನೆ ಆಗುವದೆಂದು ಅವರ ಪೂರ್ಣ ತಿಳುವಳಿಕೆಯಾಗಿತ್ತು. ಈ ದೃಷ್ಟಿಯಿಂದಲೇ ಅವರು ೨೨ ವರ್ಷಗಳ ವರೆಗೆ ಈ ಸಂಸ್ಥೆಯನ್ನು ನಡೆಸುತ್ತ ಬಂದರು. ಈ ಶಿವಯೋಗ ಸಾಧನೆಗೋಸ್ಕರ, ಅತ್ಯಂತ ಬಿಗಿತರವಾದ ವರ್ತನೆಯು ಆವಶ್ಯವೆಂದು ಅವರ ಭರವಸೆ ಇದ್ದದರಿಂದ ಅವರು ಅಲ್ಲಿ ಶಿಕ್ಷಣ ಹೊಂದುವವರಿಗೆ ಬಹು ಕಟ್ಟಾಚರಣೆಗಳನ್ನು.ಕಲ್ಪಿಸಿದರು. ಆ ಪ್ರಕಾರ ಈ ಆಚರಣೆಗೆ ಒಳಗಾಗಿ ಈ ಸಂಸ್ಥೆಯಿಂದ ಅನೇಕರು ಹೊರಬಿದ್ದು ಬಹುಕಡೆಗೆ ಮಠಾಧಿಕಾರಿಗಳಾಗಿದ್ದದ್ದೂ ಅವರು ಅನೇಕ ಬಗೆಯ ಸಮಾಜ ಕಾರ್ಯಗಳಲ್ಲಿ ತೊಡಗಿದ್ದೂ ತೋರಿಬರುತ್ತದೆ. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಮಾಡಿದ ಈ ಕಾರ್ಯವು ಸಾಮಾನ್ಯವಾದುದಲ್ಲ.

ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಈ ಪ್ರಕಾರ ಕೇವಲ ಧಾರ್ಮಿಕ ಭಾವನೆಯುಳ್ಳವ ರಾಗಿದ್ದರೂ ಅವರು ವ್ಯವಹಾರವನ್ನು ತಿರಸ್ಕರಿಸಿಬಿಡಲಿಲ್ಲ. ಅವರು ಆಧುನಿಕ ಸುಧಾರಣೆಗಳನ್ನು ಕೈಕೊಳ್ಳಲು ಯಾವಾಗಲೂ ಉತ್ಸುಕರಾಗಿರುತ್ತಿದ್ದರು. ಅವರು ಅಸಂಖ್ಯ ವಿದ್ಯಾರ್ಥಿಗಳಿಗೆ ಆಧುನಿಕ ಶಿಕ್ಷಣವನ್ನು ದೊರಕಿಸಲು ಬಹಳ ಸಹಾಯ ಮಾಡಿದರು. ಮತ್ತು ತಮ್ಮ ಶಿವಯೋಗಮಂದಿರ ದಲ್ಲಿಯೇ ಒಂದು ಇಂಗ್ಲಿಷ್ ಶಿಕ್ಷಣ ಸಂಸ್ಥೆಯನ್ನೂ ಸ್ಥಾಪಿಸಿದರು. ಅವರು ಶಿವಯೋಗಮಂದಿರದ ಹಣದಿಂದಲೇ ಗಿರಣಿಯನ್ನು ಸ್ಥಾಪಿಸಿದ್ದು ಅದು ಯಾವಾಗಲೂ ಊರ್ಜಿತ ಸ್ಥಿತಿಯಲ್ಲಿಯೇ ಇದೆ. ಅವರು ಶಿವಯೋಗಮಂದಿರದ ಜಮೀನುಗಳಲ್ಲಿ ಹೊಸ ತರದ ಒಕ್ಕಲುತನ ಸುಧಾರಣೆಗಳನ್ನು ಕೈಗೊಳ್ಳಲು ಬಹಳ ಆತುರ ಪಡುತ್ತಿದ್ದರು. ಮತ್ತು ಈ ದೃಷ್ಟಿಯಿಂದಲೇ ಅವರು ಅನೇಕ ಕಡೆಗೆ ಶಿವಯೋಗ ಮಂದಿರಕ್ಕೋಸ್ಕರ ಜಮೀನುಗಳನ್ನು ಸಂಪಾದಿಸಿರುವರು. ಅವರ ಮನಸ್ಸಿನಲ್ಲಿ ಶಿವಯೋಗಮಂದಿರದ ಮುಖಾಂತರ ಇಡೀ ದೇಶದಲ್ಲಿ ಪ್ರಚಾರ ಕಾರ್ಯ ಮಾಡಬೇಕೆಂದು ಬಹಳ ಇದ್ದುದರಿಂದ ಅವರು ಅನೇಕ ಕಡೆಗೆ ಕೀರ್ತನಕಾರರೂ ಉಪನ್ಯಾಸಕರೂ ಹೋಗಿ ಉಪದೇಶ ಮಾಡಲು ಬಹಳ ಪ್ರೋತ್ಸಾಹಿಸುತ್ತಿದ್ದರು. 'ಹಾಗೆಯೇ ಅವರು ಗವಾಯಿಗಳಿಗೂ ಉತ್ತೇಜನ ಕೊಡುತ್ತಿದ್ದರು. ಎಲ್ಲಿಯಾದರೂ ಸಭೆಗಳಾಗುತ್ತಿದ್ದರೆ, ಅವರಿಗೆ ಆಮಂತ್ರಣ ಬರುವುದೇ ತಡ, ಅವರು ಅವುಗಳಿಗೆ ತಪ್ಪದೇ ಹೋಗುತ್ತಿದ್ದರು. ಮತ್ತು ಅವರು ಹೋದಲ್ಲಿ ಬಂದ ಜನರಿಗೆ ಉಚ್ಚತರದ ಸಮಾಜ ಸುಧಾರಣೆಯ ವಿಚಾರಗಳನ್ನೇ ಹೇಳುವರು. ಅವರ ಈ ಶ್ರೇಷ್ಠ ವರ್ತನೆಗೆ ಜನರು ಅತ್ಯಂತ ಪೂಜ್ಯಭಾವವನ್ನು ತಾಳಿದವರಾಗಿ ಅವರ ನುಡಿಗಳನ್ನು ಅತ್ಯಾದರದಿಂದ ಆದರಿಸುವರು. ಅವರ ಸಾನ್ನಿಧ್ಯದಲ್ಲಿ ಯಾವಾಗಲೂ ಉಚ್ಚ ವಿಚಾರತರಂಗಗಳೇ ಹೊರಡುತ್ತಿದ್ದವು. ಕೆಡಕಿಗೆ ಅದರಲ್ಲಿ ಆಸ್ಪದವಿರಲಿಲ್ಲ. ಈ ಪ್ರಕಾರ ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳವರು ಈಗಿನ ಕಾಲಕ್ಕೆ ಒಬ್ಬ ಶ್ರೇಷ್ಠ ಸಮಾಜ ಸುಧಾರಕರಂತೆ ವರ್ತಿಸಿ ಹೋದರು.

ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳು ಈಗಿನ ಕಾಲದಲ್ಲಿ ಷಟ್‌ಸ್ಥಲ ಶಾಸ್ತ್ರದಲ್ಲಿ ಬಹಳ ಪ್ರಾವೀಣ್ಯತೆಯನ್ನು ಹೊಂದಿದವರಾಗಿದ್ದರು. ಅದರ ಮರ್ಮಗಳು ಅವರಿಗೆ ಗೊತ್ತಿದ್ದಷ್ಟು ಬೇರೆ ಯಾರಿಗೂ ಬಹುಶಃ ಗೊತ್ತಿರಲಿಕ್ಕಿಲ್ಲ. ವಚನ ಶಾಸ್ತ್ರದಲ್ಲಿ ಅವರು ಪಾರಂಗತರಾಗಿದ್ದರಿಂದಲೇ ಈ ಸಂಗತಿಗಳು ಅವರಿಗೆ ಪೂರ್ಣ ಮನವರಿಕೆಯಾಗಿದ್ದವು. ಅವರ ಬಗ್ಗೆ ಈ ಸಂಗತಿಯನ್ನು ನಾವು ಸ್ವತಃ ಬಲ್ಲೆವು. ನಾನು ವಚನಶಾಸ್ತ್ರ-೧ನೇ ಭಾಗವನ್ನು ರಚಿಸಿದ ಕಾಲಕ್ಕೆ ಈ ಸಂಗತಿಯನ್ನು ಅವರು ಕೇಳಿದ ಕೂಡಲೆ ಅವರು ಕೆಲವು ಶಾಸ್ತ್ರಿಗಳನ್ನು ಕರೆದುಕೊಂಡು ವಿಜಾಪುರಕ್ಕೆ ಸಮಕ್ಷಮ ಬಂದು ಆ ಗ್ರಂಥದ ಬಹುಭಾಗವನ್ನು ನನ್ನಿಂದ ಓದಿಸಿದರು. ಆಗ ನಾನು ವಿಷಮಜ್ವರದಿಂದ ಅಶಕ್ತನಾಗಿದ್ದ ಕಾರಣ ಅವರು ತಾವೇ ವಿಜಾಪುರಕ್ಕೆ ಹೀಗೆ ಕೇಳಲಿಕ್ಕೆ ಬಂದಿದ್ದರ ಮೇಲಿಂದ ಅವರು ಈ ವಿಷಯದ ಬಗ್ಗೆ ಎಷ್ಟು ಮಹತ್ತರ ಪ್ರೀತಿಯುಳ್ಳವರಾಗಿದ್ದರೆಂಬುದು ಯಾರಾದರೂ ಊಹಿಸಬಹುದಾಗಿದೆ. ಮತ್ತು ಅವರೇ ಈ ಗ್ರಂಥವನ್ನು ಅಚ್ಚು ಹಾಕಲು ನನಗೆ ಉತ್ತೇಜನ ಕೊಟ್ಟರು. ಅವರು ಶಿವಯೋಗ ಮಂದಿರದಲ್ಲಿ ಅಸಂಖ್ಯ ಪುರಾತನ ತಾಡವಾಲೆ ಗ್ರಂಥಗಳನ್ನು ಸಂಗ್ರಹಿಸಿರುವರು. ಅವುಗಳಲ್ಲಿ ಅನೇಕವುಗಳು ಬಹಳ ಬೆಲೆಯುಳ್ಳ ಗ್ರಂಥಗಳಾಗಿವೆ. ನನಗೆ ಬೇಕಾಗುವ ಗ್ರಂಥಗಳ ಬಗ್ಗೆ ಶಿವಯೋಗ ಮಂದಿರಕ್ಕೆ ನಾನು ಬರೆದ ಕೂಡಲೇ ಅವರು ಅವುಗಳನ್ನು ನನ್ನ ಕಡೆಗೆ ತಪ್ಪದೆ ಕಳಿಸಿಕೊಡುವ ವ್ಯವಸ್ಥೆ ಮಾಡಿದರು. ಇದರ ಮೇಲಿಂದ ಧಾರ್ಮಿಕ ಶೋಧ ಮಾಡುವವರಿಗೆ ಅವರು ಎಷ್ಟು ಪ್ರೋತ್ಸಾಹಿಸುತ್ತಿದ್ದರೆಂಬುದು ತಿಳಿದು ಬರುತ್ತದೆ.

ಶ್ರೀ ಸ್ವಾಮಿಗಳು ಸಮಾಜದಲ್ಲಿನ ರೂಢವಾಗಿರುವ ಭೇದಗಳನ್ನು ಮುರಿಯಲಿಕ್ಕೆ ಯಾವಾಗಲೂ ಬಹಳ ಪ್ರಯತ್ನಿಸುತ್ತಿದ್ದರು. ಇದಕ್ಕೋಸ್ಕರ ಅವರು ಕರ್ನಾಟಕದಲ್ಲೆಲ್ಲ ಬಹಳ ಸಂಚಾರಮಾಡುತ್ತ ಬಂದರು. ಯಾವ ಊರಲ್ಲಾದರೂ ಏನಾದರೂ ತಂಟೆಗಳು ಉತ್ಪನ್ನವಾದರೆ ಸಾಕು, ಅವರನ್ನು ಕರೆಯಲಿಕ್ಕೆ ಯಾರಾದರೂ ಬಂದರೆ ಅವರು ತಟ್ಟನೇ ಅಲ್ಲಿಗೆ ಹೋಗಿ ಎಲ್ಲ ಜನರಿಗೂ ಸಮಾಧಾನ ಹೇಳಲು ಸಿದ್ಧರಾಗಿರುತ್ತಿದ್ದರು. ಈ ವಿಷಯದಲ್ಲಿ ಅವರು ತೋರಿಸುತ್ತಿದ್ದ ಚಟುವಟಿಕೆಗಳು ಅವರ್ಣನೀಯವಾಗಿರುತ್ತವೆ. ಇದರಲ್ಲಿ

ಅವರಿಗೆ ಜನರು ಸರಿಯಾಗಿ ನಡೆಯಬೇಕೆಂದು ಅಭಿಲಾಷೆಯೇ ಹೊರತು ಬೇರೆ ಯಾವ ಉದ್ದೇಶವೂ ಇರಲಿಲ್ಲ. ಇದರಿಂದ ಅವರು ಎಲ್ಲರಿಗೂ ಬೇಕಾಗಿದ್ದರು. ಅವರು ಮಾಡಿದ ಮತ್ತೊಂದು ಮಹತ್ವದ ಕಾರ್ಯವೆಂದರೆ, ಸಮಯ ಭೇದಗಳನ್ನು ಮುರಿದದ್ದು. ವಿರಕ್ತವರ್ಗದವರಲ್ಲಿರುವ ಈ ಭೇದಗಳ ಮೂಲಕ ದೇಶದಲ್ಲಿ ಅನೇಕ ಮನಸ್ತಾಪಗಳು ಬಹು ದಿವಸಗಳಿಂದಲೂ ನಡೆದಿದ್ದವು. ಆದರೆ ಶ್ರೀ ಸ್ವಾಮಿಗಳವರು ಈ ಸಮಯಗಳನ್ನು ಸಂಪೂರ್ಣ ಮುರಿದು ಹಾಕಿದರು. ಇದರ ಶ್ರೇಯಸ್ಸು ಇವರಿಗೇ ಇರುತ್ತದೆ. ಇವರಿಂದ ಈಗ ಮುರಗೀ, ಕುಮಾರ, ಕೆಂಪಿನ, ಚಿಲ್ಲಾಳ ಎಂಬ ಸಮಯ ಭೇದಗಳು ಬಹಳ ಕಡಿಮೆಯಾಗಿವೆ. ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಈ ಪ್ರಕಾರ ಒಂದು ಮಹತ್ತರವಾದ ಕಾರ್ಯವನ್ನು ಸಮಾಜಕ್ಕೆ ಮಾಡಿರುವರು.

ಶ್ರೀ ಸ್ವಾಮಿಗಳು ದೀರ್ಘೋದ್ಯೋಗಿಗಳು. ಸ್ವಲ್ಪ ತೊಂದರೆ ಬಂದಕೂಡಲೇ ಅವರು ಎಂದು ಹಿಂದೆಗೆಯುವವರಲ್ಲ. ಮಹಾಕೂಟಸ್ಥಾನದಲ್ಲಿ ಮಂದಿರವನ್ನು ಸ್ಥಾಪಿಸಿದ ವರುಷ ಅವರಿಗೆ ಅನೇಕ ತೊಂದರೆಗಳು ಉತ್ಪನ್ನವಾದವು. ಈ ಪ್ರದೇಶವು ವನ್ಯಮೃಗಗಳಿಂದ ತುಂಬಿದ ಅರಣ್ಯಭಾಗವು. ಆಗ ಅಲ್ಲಿ ಇರಲಿಕ್ಕೆ ಸ್ಥಳವಿಲ್ಲ. ಅಲ್ಲಿ ಇದ್ದವರಿಗೆ ಭಯಂಕರ ಮಲೇರಿಯಾ ಜ್ವರವು ವ್ಯಾಪಿಸಿತು. ಆಗ ಅನೇಕರು ಶ್ರೀ ಸ್ವಾಮಿಗಳಿಗೆ ಈ ಕಾರ್ಯವನ್ನು ಬಿಟ್ಟು ಕೊಡಲು ಉಪದೇಶಿಸಿದರು. ಆದರೆ ಶ್ರೀ ಸ್ವಾಮಿಗಳು ಅಚಲವಾದ ಧೈರ್ಯದಿಂದ ಆ ಸ್ಥಳದಲ್ಲಿಯೇ ಇದ್ದುಕೊಂಡು ಸುತ್ತಲಿನ ಗ್ರಾಮಗಳಲ್ಲಿ ಸಂಚರಿಸಿ ಹಣವನ್ನು ಶೇಖರಿಸಿ ಇರಲಿಕ್ಕೆ ಕಟ್ಟಡಗಳನ್ನೂ ಯೋಗ್ಯ ಜಲಾಶಯವನ್ನೂ ಬೇಕಾದ ವ್ಯವಸ್ಥೆಗಾರರನ್ನೂ ಏರ್ಪಡಿಸಿಕೊಂಡು ಆ ನಿರ್ಜನ ಪ್ರದೇಶವನ್ನು ಊರ್ಜಿತಸ್ಥಿತಿಗೆ ತಂದರು. ಒಂದು ಸಂಸ್ಥೆಯನ್ನು ಸ್ಥಾಪಿಸಿರುವುದು ದುಸ್ತರವು. ಆದರೆ ಅದನ್ನು ಕೈಕೊಂಡು ಶಾಶ್ವತ ತಳಹದಿಯ ಮೇಲೆ ಹಾಕುವುದು ಎಲ್ಲಕ್ಕೂ ದುಸ್ತರವಾದ ಕೆಲಸವು. ಈ ಕಾರ್ಯವು ಒಬ್ಬ ಯೋಜಕನ ಹೊರತು ಯಾರಿಗೂ ಆಗಲಾರದು. ಇಂಥ ಯೋಜನಾ ಸಾಮರ್ಥ್ಯವನ್ನು ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಪಡೆದದ್ದರಿಂದಲೇ ಅವರಿಂದ ಈ ಮಹತ್ಕಾರ್ಯವು ಸಿದ್ಧಿಸಿತು.

ಶ್ರೀ ಸ್ವಾಮಿಗಳು ಧರ್ಮದ ಮತ್ತು ಸಮಾಜದ ಯೋಗ್ಯತೆಗೆ ಕುಂದು ಬರುವ ಪ್ರಸಂಗಗಳು ಬಂದ ಕೂಡಲೇ ಅವರಲ್ಲಿ ಒಂದು ವಿಲಕ್ಷಣ ಶಕ್ತಿಯೇ ಉತ್ಪನ್ನವಾಗುತ್ತಿತ್ತು. ಅವರ ಆಯುಷ್ಯದಲ್ಲಿ ಈ ಬಗೆಯ ಅನೇಕ ಪ್ರಸಂಗಗಳು ಒದಗಿದವು. ೧೯೦೨ರಲ್ಲಿ ಹುಬ್ಬಳ್ಳಿಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳವರ ಆಂದೋಲನೋತ್ಸವಕ್ಕೆ ಆತಂಕ ಬರಲು ಅದರಲ್ಲಿ ಅವರು ಬಹಳ ಸಾಹಸಮಾಡಿದರು. ೧೯೧೯ನೇ ಇಸ್ವಿಯಲ್ಲಿ ಮಹಾಸಭೆಯನ್ನು ಮಾಡುವ ಕಾಲಕ್ಕೆ ಶ್ರೀ ಉಜ್ಜನಿ ಮಹಾಪೀಠದಲ್ಲಿದ್ದ ವ್ಯಾಜ್ಯಗಳು ಅಡ್ಡಬರುವುವೆಂದು ತಿಳಿದ ಕೂಡಲೆ ಅವರು ಅನೇಕ ಮಹನೀಯರನ್ನು ಕರೆದುಕೊಂಡು ಹೋಗಿ ಅವುಗಳನ್ನು ಸರಿಪಡಿಸಲು ಪ್ರಯತ್ನಿಸಿದರು. ಪರಳೀವ್ಯಾಜ್ಯದಲ್ಲಿ ಅವರು ಮಾಡಿದ ದೀರ್ಘೋದ್ಯೋಗಗಳು ಎಲ್ಲರಿಗೂ ಗೊತ್ತೇ ಇವೆ. ಆ ಕಾಲಕ್ಕೆ ಅವರು ಅನೇಕ ಶಾಸ್ತ್ರಗಳನ್ನು ಬರಮಾಡಿಕೊಂಡು ವ್ಯಾಜ್ಯಕ್ಕೆ ಬೇಕಾಗುವ ಸಲಹೆಗಳನ್ನು ಒದಗಿಸಿಕೊಟ್ಟರು. ಇಷ್ಟೇ ಅಲ್ಲ, ಅದಕ್ಕೆ ಹಣದ ಅಡಚಣೆಯಾಗಲು ದೇಶ ಮಧ್ಯದಲ್ಲಿ ಹೋಗಿ ಬಹಳ ಶ್ರಮಪಟ್ಟು ಹಣವನ್ನು ಕೂಡಿಸಿ ಕಾರ್ಯಕ್ಕೆ ವಿಶೇಷ ಸಹಾಯವಾದರು. ಈ ಬಗೆಯ ಉದಾಹರಣೆಗಳು ಅವರ ಆಯುಷ್ಯದಲ್ಲಿ ಅಸಂಖ್ಯಾತವಾಗಿರುತ್ತವೆ.

ಈ ಪ್ರಕಾರ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ತಮ್ಮ ಆಯುಷ್ಯವನ್ನೆಲ್ಲ ಧರ್ಮ ಜಾಗೃತಿ, ಸಮಾಜ ಸುಧಾರಣೆಗೋಸ್ಕರ ವೆಚ್ಚ ಮಾಡಿದರು. ಅವರು ೧೮೬೭ನೇ ಇಸ್ವಿಯಲ್ಲಿ ಜನಿಸಿ ತಮ್ಮ ಆಯುಷ್ಯದ ೬೩ನೇ ವರ್ಷದಲ್ಲಿ ಲಿಂಗೈಕ್ಯರಾದರು. ಅವರು ಸಮಾಜ ಕಾರ್ಯಗಳನ್ನು ತಮ್ಮ ವಯಸ್ಸಿನ ೨೨ನೇ ವರ್ಷದಲ್ಲಿ ಆರಂಭಿಸಿ ಅವುಗಳಲ್ಲಿಯೇ ತಮ್ಮ ದೇಹವನ್ನು ಸವಿಸಿದರು. ಇಂಥ ಮಹಾನುಭಾವರಿಗೋಸ್ಕರ ಸಮಾಜವೆಲ್ಲವು ಚಿರಋಣಿಯಾಗಿರುತ್ತದೆ.

ಈಗಿನ ಕಾಲಕ್ಕೆ ಶಿವಯೋಗಮಂದಿರದಲ್ಲಿಯೇ ಶ್ರೀ ಸ್ವಾಮಿಗಳವರು ಲಿಂಗೈಕ್ಯರಾಗಿದ್ದು ಈ ಸಂಸ್ಥೆಯನ್ನು ಅತ್ಯುತ್ಕೃಷ್ಟರೀತಿಯಿಂದ ನಡೆಸುವುದರಲ್ಲಿಯೇ ಅವರ ನಿಜವಾದ ಸ್ಮಾರಕವಿರುತ್ತದೆ. ಇದು ಉಚ್ಚತಮ ಸ್ಥಿತಿಗೆ ಬರಲಿಕೆ ಆವಶ್ಯವಾಗಿರುವ ಎಲ್ಲ ಸಾಮಗ್ರಿಗಳನ್ನು ಅವರು ಏರ್ಪಡಿಸಿರುವರು. ಈ ಸಾಮಗ್ರಿಗಳನ್ನು ಸರಿಯಾಗಿ ಉಪಯೋಗಿಸುವುದರಲ್ಲಿಯೇ ಸಮಾಜದ ಉತ್ಕೃಷ್ಟತೆ ಮತ್ತು ಯೋಗ್ಯತೆಯು ಇರುತ್ತದೆ. ಈ ಬಗ್ಗೆ ಅದರ ಟ್ರಸ್ಟಿಗಳು ಜಾಗರೂಕರಾಗಿರಬೇಕೆಂದು ಅವರಿಗೆ ನಮ್ಮ ಸವಿನಯ ಸೂಚನೆಯಿದೆ. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಸ್ಥಾಪಿಸಿದ ಈ ಮಂದಿರವನ್ನು ಈ ಪ್ರಕಾರ ಅತ್ಯುನ್ನತಸ್ಥಿತಿಗೆ ಒಯ್ದು ಅವರ ಕೀರ್ತಿಯನ್ನು ಇನ್ನು ಹೆಚ್ಚಾಗಿ ಬೆಳೆಯುವಂತೆ ಇವರು ಮಾಡಲೆಂದು ಹಾರೈಸಿ ನಾವು ನಮ್ಮ ಲೆಕ್ಕಣಿಕೆಯನ್ನು ಇಲ್ಲಿಯೇ ನಿಲ್ಲಿಸುತ್ತೇವೆ.

(ಹಳಕಟ್ಟಿ ಸಮಗ್ರ ಸಂಪುಟ-೧೪ ಪು. ೧೨೦-೧೨೩)

■■

# ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು

• ಡಾ. ಬಿ. ವ್ಹಿ. ಮಲ್ಲಾಪುರ

**ಪ್ರವೇಶ :**

ಕ್ರಿ.ಶ.೧೮೬೭ರಲ್ಲಿ ಜನಿಸಿ, ಕ್ರಿ.ಶ. ೧೯೩೦ರ ಮಾಘ ಬಹುಳ ಸಪ್ತಮಿಯಂದು ಲಿಂಗೈಕ್ಯರಾದ ಪೂಜ್ಯ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರ ಚರಿತ್ರೆ ಈಗಾಗಲೆ ಕಾವ್ಯ, ಗದ್ಯಕೃತಿ, ಕವಿತೆ ಹಾಗೂ ಲೇಖನಗಳ ರೂಪದಲ್ಲಿ ಬೇಕಾದಷ್ಟು ಬಂದಿದೆ. ಇನ್ನೂ ಬರುತ್ತಲಿದೆ. ಈ ಕೃತಿಗಳಲ್ಲಿ ಕೆಲವು ಕೇವಲ ಚರಿತ್ರಾತ್ಮಕವಾಗಿದ್ದರೆ, ಇನ್ನು ಕೆಲವು ಅವರ ಚರಿತ್ರೆ ಮತ್ತು ಚಾರಿತ್ರ್ಯಗಳೆರಡರ ಹಾಸುಹೊಕ್ಕು, ಸಮಾಜಕ್ಕೆ ಕುಮಾರ ಶ್ರೀಗಳವರು ಸಲ್ಲಿಸಿದ ಅಪಾರಸೇವೆ, ಮಾಡಬೇಕಾದುದನ್ನು ಬರೀ ಯೋಜನೆಯ ಮಟ್ಟಕ್ಕೆ ನಿಲ್ಲಿಸದೆ ಕಾರ್ಯರೂಪಕ್ಕೂ ಇಳಿಸಿದ ಅವರ ವಿಶಿಷ್ಟ ವಿಧಾನ, ಇಂತಹ ಹಲವು ಹತ್ತು ವಿಷಯಗಳನ್ನು ವಿವರಿಸುವ ಬೇರೆ ಕೆಲವು ಕೃತಿಗಳೂ ಇವೆ. ಇವುಗಳಲ್ಲಿ ಕೆಲವು ಕುಮಾರ ಶ್ರೀಗಳವರ ವ್ಯಕ್ತಿತ್ವಕ್ಕೆ ಮಾರುಹೋದವರಿಂದ, ಅವರ ಬಗ್ಗೆ ಅಗಾಧ ಭಕ್ತಿ ಗೌರವಗಳನ್ನಿರಿಸಿಕೊಂಡ ಭಾವಜೀವಿಗಳಿಂದ ರಚನೆಗೊಂಡವು. ಆದುದರಿಂದ ಅವರ ಕೃತಿಗಳಲ್ಲಿ ವಸ್ತುನಿಷ್ಠತೆ, ವಾಸ್ತವಿಕತೆಗಳ ಜೊತೆಗೆ ಪ್ರಶಸ್ತಿ, ಪ್ರಶಂಸೆಗಳೂ ಬೆರೆತಿರುವುದು ಸಹಜ. ಇಂದಿನ ವಿಚಾರವಾದಿಗಳಿಗೆ ಅದು ಹಿಡಿಸದಿರಬಹುದು. ಬೇರೆ ಕೆಲವರಿಗೆ ಅದೇ ಸರಿಯೆಂದು ಅನಿಸಬಹುದು. ಅದು ಅವರವರ ಭಾವ-ಸ್ವಭಾವಾದಿಗಳಿಗೆ ಸಂಬಂಧಿಸಿದ್ದು. ಆದರೆ ಮುಂದಣ ಪೀಳಿಗೆಯ ಆಲೋಚನಾ ವಿಧಾನ ಹೇಗೆ ರೂಪಗೊಂಡರೆ ಸಮಾಜಕ್ಕೆ, ತನ್ಮೂಲಕ ದೇಶಕ್ಕೆ ಹಿತಕರ ಎಂಬ ಪ್ರಜ್ಞೆ ಲೇಖಕನಿಗಿರಬೇಕಾದುದು ಮುಖ್ಯ ಮತ್ತು ಅಪೇಕ್ಷಣೀಯವೆಂದು ನನ್ನ ಅನಿಸಿಕೆ.

ಇಂದಿನ ತರುಣ ಪೀಳಿಗೆಯಲ್ಲಿ ಬೇರೆಯವರು ಹೇಳಿದುದೆಲ್ಲವನ್ನು, ಹಿಂದಿನವರು ಮಾಡಿದುದೆಲ್ಲವನ್ನು ಒಮ್ಮೆಲೇ ಒಪ್ಪುವ ಮನೋಭಾವನೆ ಕಡಿಮೆಯಾಗುತ್ತ, ವೈಚಾರಿಕತೆ ಹಾಗೂ ಚಿಕಿತ್ಸಕ ಬುದ್ಧಿಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲಿವೆ. ಸ್ಥಾವರತೆಯಿಂದ ಜಂಗಮತ್ವದ ಕಡೆಗೆ ನಡೆದಿರುವ ಚಿಂತನಶೀಲ ಜನಾಂಗದ ಸಲ್ಲಕ್ಷಣವದು. ಆದರೆ ಹಾನಗಲ್ ಶ್ರೀಗಳವರು ಸಮಾಜ ಕಾರ್ಯದಲ್ಲಿ ತಮ್ಮನ್ನು ತಾವು ಸಂಪೂರ್ಣ ತೊಡಗಿಸಿಕೊಂಡಾಗ ಇದ್ದಿರಬಹುದಾದ ಸಾಮಾಜಿಕ ಸ್ಥಿತಿಗತಿಗಳು ಎಂತಹವು. ಜನತೆ ಆಗ ಯಾವ ಬಗೆಯ ಧ್ಯೇಯ-ಧೋರಣೆಗಳಿಗೆ ಬದ್ಧವಾಗಿತ್ತು. ಅವರ ಆಚಾರ-ವಿಚಾರಾದಿಗಳು ಯಾರ ಪ್ರಭಾವಕ್ಕೆ, ಏಕೆ ಒಳಗಾದವು. ಅದರ ಪರಿಣಾಮವೇನಾಗಿತ್ತು. ಇಂತಹ ಇನ್ನೂ ಕೆಲವನ್ನು ದೃಷ್ಟಿಯಲ್ಲಿರಿಸಿ, ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಅಂದಿನ ಯುಗಧರ್ಮದ ಹಿನ್ನೆಲೆಯಲ್ಲಿ ಮಾತ್ರ ಶ್ರೀಗಳವರ ಕಾರ್ಯಗಳನ್ನು ಬೆಲೆಕಟ್ಟುವ, ಅವರ ಸಾಧನೆ ಸಿದ್ಧಿಗಳನ್ನು ಗುರುತಿಸುವ ಪ್ರಯತ್ನ ನಮ್ಮದಾಗಿರಬೇಕು.

**ಯುಗಧರ್ಮ**

ಈ ಶತಮಾನದ ಆರಂಭದ ಒಂದೆರಡು ದಶಕಗಳ ಅವಧಿಯಲ್ಲಿ ವೀರಶೈವದಲ್ಲಿ ವಿಘಟನೆಯ ಲಕ್ಷಣಗಳು ಕಾಣಲಾರಂಭಿಸಿದವು. ಮುಂದೆ ಅದು ಉಲ್ಬಣಿಸಲು ಕಾರಣ. ಕೆಲವು ಜನ ಪಂಡಿತರು ಮತ್ತು ಮಠಾಧೀಶರೆಂದು ಹೇಳುತ್ತಾರೆ. ನಿಜಕ್ಕೂ ಇದು ಆಶ್ಚರ್ಯಕರ ಸಂಗತಿ. ಸಮಾಜದ ಶಕ್ತಿಯ ಕೇಂದ್ರಗಳಂತಿರುವ ಮಠಗಳ ಅಧಿಪತಿಗಳು ಮತ್ತು ಪಂಡಿತರು ಸಮಾಜದಲ್ಲಿ ಶಕ್ತಿಯ ಸಂವರ್ಧನೆಗೆ, ಸಂಚಲನೆಗೆ ಸಹಕರಿಸುವುದನ್ನು ಬಿಟ್ಟು ಅದರ ದುರ್ಬಲತೆ ಹಾಗೂ ವಿಘಟನೆಗೆ ಕಾರಣರಾದುದು ಅತ್ಯಂತ ಖೇದಕರ ಸಂಗತಿ. ಹಿಂದೆ ಹೇಳಿದಂತೆ ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಮಹತ್ವಪೂರ್ಣ ಸ್ಥಾನ ಪಡೆದಿದ್ದ ಲಕುಲೀಶ ಪಾಶುಪತಕ್ಕೆ ಸೇರಿರಬಹುದಾದ ಕಾಳಾಮುಖ ಮಠಗಳು ಇಂದಿನ ಗುರುಸ್ಥಲ ಮಠಗಳಾಗಿ ಪರಿವರ್ತನೆಗೊಳ್ಳುತ್ತ ಬಂದು, ತೋಂಟದ ಸಿದ್ಧಲಿಂಗ (೧೫ನೆಯ ಶತಮಾನ) ಯತಿ, ಅವನ ಶಿಷ್ಯ-ಪ್ರಶಿಷ್ಯರ ಕಾಲಕ್ಕೆ ವಿರಕ್ತಮಠಗಳು ಉತ್ಕರ್ಷಕ್ಕೆ ಬಂದವು. ಈ ಎರಡೂ ಬಗೆಯ ಮಠಗಳೂ ಅಂದು ಏರ್ಪಟ್ಟಿರಬಹುದಾದ ಒಪ್ಪಂದ ಮತ್ತು ವ್ಯವಸ್ಥೆಗನುಗುಣವಾಗಿ ತಮತಮಗೆ ಒಪ್ಪಿಸಿದ ಕಾರ್ಯಗಳನ್ನು ನಿರ್ವಹಿಸುತ್ತ, ಇಡೀ ಸಮಾಜದ ಆರೋಗ್ಯಕರ ಬೆಳವಣಿಗೆಗೆ ಸಹಕರಿಸುತ್ತ, ಅದರ ಅಭಿವೃದ್ಧಿಗೆ ಪೂರಕ-ಪರಿಪೂರಕವಾಗಿ ಕೆಲಸ ಮಾಡುತ್ತ, ಅನ್ಯೋನ್ಯವಾಗಿ ಮುಂದುವರಿದು ಬಂದವು. ಆದರೆ ಒಬ್ಬಿಬ್ಬ ವಿದ್ವಾಂಸರ ಹಾಗೂ ಸ್ವಾಮಿಗಳ ವೈಯಕ್ತಿಕ ದ್ವೇಷ ಹಾಗೂ ಛಲದ ಫಲವಾಗಿ ಸಿಡಿದ ಅಸಮಾಧಾನದ 'ಕಿಡಿ-ಮೊಗೆದುದು ಪೊತ್ತಿದತ್ತು' ಎಂದು ಹರಿಹರ ಕವಿ

ಬಣ್ಣಿಸಿದಂತೆ ಹೊಗೆಯಿಟ್ಟು ಉರಿಯೆದ್ದು ನಾಲಗೆ ಚಾಚಿ, ಅದರ ಕಡುಬಿಸಿ ಇಡೀ ಸಮಾಜಕ್ಕೆ ತಾಗುವಂತಾಯಿತು. ತತ್ಫಲವಾಗಿ ಸಂಘಟನೆಯ ಬೆಸುಗೆ ಬಿಚ್ಚಲಾರಂಭಿಸಿತು. ಗುರು–ವಿರಕ್ತರ ಕಲಹ ಸಮಾಜದಲ್ಲಿ ಕೋಲಾಹಲವನ್ನೇ ಎಬ್ಬಿಸಿತು. ಸಮಾಜವನ್ನು ಕಟ್ಟಬೇಕಾದವರೇ ಅದನ್ನು ಕೆಡವಲು ಟೊಂಕ ಕಟ್ಟಿದರು. ಬೇಲಿಯೇ ಎದ್ದು ಹೊಲವನ್ನು ಮೇಯಲಾರಂಭಿಸಿದ ಪರಿಸ್ಥಿತಿ, ವೀರಶೈವಕ್ಕೆ ಬಂತು.

ಗುರು–ವಿರಕ್ತರ ಇಂತಹ ಧಿಗಿತೋಂ ಧಿತ್ತೋಂ ಎಂಬ ಕಲಹ ಕೋಲಾಹಲದ ಕುಣಿತ, ದೊಡ್ಡಾಟದ ಕುಣಿತ ಒಂದು ಕಡೆ ನಡೆದಿದ್ದರೆ ಇನ್ನೊಂದು ಕಡೆ ಭರ್ಜರಿ ರೋಷರಾಗಾಲಾಪದ ಸಣ್ಣಾಟವೂ ನಡೆದಿತ್ತು. ಈ ಸಣ್ಣಾಟದ ಕಥಾವಸ್ತು ವಿರಕ್ತರಲ್ಲಿಯ ಸಮಯಸಮರ, ಶಿವಯೋಗಾನುಷ್ಠಾನದ ಮೂಲಕ ಆತ್ಮವಿಕಾಸ, ಸಮಾಜದ ಧಾರ್ಮಿಕ, ತಾತ್ವಿಕ ಮತ್ತು ನೈತಿಕ ಸ್ಥಿತಿಗತಿಗಳ ಪರೀಕ್ಷೆ ಪರಿವೀಕ್ಷಣೆಗಳ ಮೂಲಕ ಸಮಾಜದ ವಿಕಾಸವನ್ನೇ ಸಾಧಿಸಬೇಕಾದ ವಿರಕ್ತರಲ್ಲಿ ಸಮಯಭೇದ ತಲೆದೋರಿದ್ದು ನಮ್ಮ ಸಮಾಜಕ್ಕೆ ಅಂಟಿಕೊಂಡ ಯಾವ ಜನ್ಮದ ಪಾಪದ ಫಲವೊ! ಅದೇನೇ ಇರಲಿ ಮುರುಘಾ, ಚೀಲಾಳ, ಕುಮಾರ ಮುಂತಾದ ಸಮಯಗಳು ವಿರಕ್ತರಲ್ಲಿ ತಲೆದೋರಿರುವುದಂತೂ ನಿಜ. ಈ ಸಮಯಗಳು ತಮ್ಮಷ್ಟಕ್ಕೆ ತಾವು ವೀರಶೈವದ ಸ್ವಾಸ್ಥ್ಯ ಪರಿಪೋಷಣಾ ಕಾರ್ಯದಲ್ಲಿ ತೊಡಗಿಕೊಂಡಿದ್ದರೆ ಅಡ್ಡಿಯಿರಲಿಲ್ಲ. ಆದರೆ ಪರಸ್ಪರರಲ್ಲಿ ಪೈಪೋಟಿಗೆ ನಿಂತವು. ನನ್ನದು ಮೇಲು, ಅವನದು ಹಾಗಲ್ಲ, ನನ್ನ ಸಮಯವೇ ಪ್ರಾಚೀನ ಅವನದು ಇತ್ತೀಚಿನದು ಇತ್ಯಾದಿ ಅರ್ಥರಹಿತ ಭ್ರಮೆಗಳಿಗೆ ಅವು ಒಳಗಾಗಿ ಸಮಾಜದಲ್ಲಿ ವಿವಿಧ ಬಣಗಳ ಹುಟ್ಟಿಗೆ ಕಾರಣವಾದವು. ಒಂದು ಸಮಯದವರು ಮತ್ತೊಂದು ಸಮಾಯದವರ ಮಠಗಳಿಗೆ ಹೋಗುತ್ತಿರಲಿಲ್ಲವೆಂದೂ ೀಳಿದ್ದೇನೆ. ಇದರಿಂದ ಸಮಯಗಳ ಮಧ್ಯೆ ಎಂತಹ ಮಸೆದಾಟ ನಡೆದಿರಬಹುದೆಂಬುದರ ಕಲ್ಪನೆ ಬರುತ್ತದೆ.

ಈ ಮಠ–ಮಠಗಳ ಮತ್ತು ಸಮಯ–ಸಮಯಗಳ ಪರಸ್ಪರ ತಿಕ್ಕಾಟ ಪೈಪೋಟಿಗಳಿಂದಾಗಿ ತಾವು ಸಮಾಜಕ್ಕೆ ಸಲ್ಲಿಸಬೇಕಾದ ಸೇವೆಯೇನೆಂಬುದನ್ನು ಪೀಠಾಧಿಪತಿಗಳು ಮರೆತರು. ಹಿರಿಯಸ್ವಾಮಿಗಳೇ ಹೀಗಾದಾಗ ಮರಿಸ್ವಾಮಿಗಳ ಪಾಡೇನು? ಅವರೂ ಉಂಡುಟ್ಟು ತಣ್ಣಗೆ ಕೂತರು. ಜನತೆಯಲ್ಲಿ ವೀರಶೈವ ಸಂಸ್ಕೃತಿ ಹಾಗೂ ತತ್ವಗಳ ಬೋಧೆ ಮತ್ತು ಅವುಗಳ ಆಚರಣೆಗಳ ಪರೀಕ್ಷೆ ನಿರೀಕ್ಷಣೆಗಳಿಗೆ ಪೂರ್ಣವಿರಾಮವೇ ಬಿದ್ದಂತಾಯಿತು. ಲೆಕ್ಕಕ್ಕೆ ಮಾತ್ರ ಮಠಗಳು, ಕರ್ತವ್ಯಕ್ಕಲ್ಲ ಎಂಬಂತಹ ಸ್ಥಿತಿಯುಂಟಾಯಿತು. ಇನ್ನು ಭಕ್ತರಾದವರು ಮಠಮಾನ್ಯಗಳ ಈ ಹದಗೆಟ್ಟ ಪರಿಸ್ಥಿತಿಯನ್ನು ಸರಿಪಡಿಸಬಹುದಿತ್ತು. ಆದರೆ ಅವರಲ್ಲಿಯೂ ಆಯಾ ಸ್ವಾಮಿಗಳ ಬೆಂಬಲಿಗರಿದ್ದುದರಿಂದ ಆ ಬಗ್ಗೆ ಅವರೂ ಆಲೋಚಿಸಲಿಲ್ಲ. ತಮ್ಮ ತಮ್ಮ ಸ್ವಾಮಿಗಳ ಬಗೆಗಿದ್ದ ಅವರ ಭಯವೋ, ಸ್ವಾರ್ಥ ಸಾಧನೆಯೋ ಅಥವಾ ಇನ್ನಾವುದೋ, ಕೆಲವು ಭಕ್ತರನ್ನು ಸುಮ್ಮನಾಗಿಸಿದಂತೆ ತೋರುತ್ತದೆ. ತಮ್ಮ ಬೇಳೆ ಬೇಯಿಸಿಕೊಳ್ಳಲು ಸ್ವಾಮಿಗಳ ಮಧ್ಯದ ಈ ಬಗೆಯ ತಿಕ್ಕಾಟಕ್ಕೆ ಪುಟ ಕೊಡುವ ಭಕ್ತರೂ ಇದ್ದಿರಬೇಕು, ಇದ್ದರು.

ಭಕ್ತವರ್ಗದ ಇನ್ನೊಂದು ಮುಖವೂ ಇದೆ. ಅದೆಂದರೆ ಅವರವರಲ್ಲಿಯೇ ಇದ್ದ ಭೇದಗಳು. ನಾನು ಬಣಜಿಗ, ಇವನು ಪಂಚಮಸಾಲಿ, ಅವನು ಜಂಗಮ, ಇವನು ಗಾಣಿಗ; ಅವನಂತೂ ಜೇಡ. ಇವು ಬಸವಪೂರ್ವಯುಗದಲ್ಲಿ ಹೇಗಿದ್ದವೋ ಹಾಗೆಯೆ ಉಳಿದುಕೊಂಡು, ಮುಂದುವರಿದುಕೊಂಡು ಬಂದವು. ಅಷ್ಟೇ ಅಲ್ಲ, ಒಂದೊಂದರಲ್ಲೂ ಮತ್ತೆ ಒಳಪಂಗಡಗಳು, ಉಪಪಂಗಡಗಳು, ಜಂಗಮರಲ್ಲಿ ಮಠಸ್ಥ, ಮಠಪತಿ, ಗಣಾಚಾರಿ, ವಸ್ತ್ರದವರು ಇತ್ಯಾದಿ ಒಳಪಂಗಡಗಳಿದ್ದರೆ ಜೇಡರಲ್ಲಿ ಕರಿಜಾಡ, ಬಿಳಿಜಾಡ, ಗಾಣಿಗರಲ್ಲಿ ಕರಿಗಾಣಿಗ, ಸಜ್ಜನ; ರೆಡ್ಡಿಗಳಲ್ಲಿ ಪಾಕನಾಕ, ಮಟಮಟ ಇತ್ಯಾದಿ ಒಳಭೇದಗಳಿವೆ. ಬಣಜಿಗ, ಪಂಚಮಸಾಲಿಯವರಲ್ಲಿಯೂ ಇಂತಹ ಒಳಭೇದಗಳಿಲ್ಲದಿಲ್ಲ. ಈ ಒಳಭೇದಗಳಲ್ಲಿಯೂ ತಾರತಮ್ಯ ಭಾವನೆಗಳು. ಅವರಿಗಿಂತ ನಾವೇ ಹೆಚ್ಚು ಎನ್ನುವ ಒಣ ಅಭಿಮಾನ. ಉದಾಹರಣೆಗೆ ಜಂಗಮರಲ್ಲಿ ಮಠಸ್ಥರಿಗೆ, ಉಳಿದ ಜಂಗಮರಿಗಿಂತ ತಾವೇ ಮೇಲೆಂಬ ಭಾವನೆ. ಇತರ ಒಳಪಂಗಡಗಳಲ್ಲಿಯೂ ಇದೇ ಬಗೆಯ ಭಾವನೆಗಳು ಇಳಿದುಬಂದಿದ್ದವು. ಇದರಿಂದಾಗಿ ಒಂದೇ ಪಂಗಡದ ಕೆಲವು ಒಳಪಂಗಡಗಳಲ್ಲಿ ಪರಸ್ಪರ ಸಹಭೋಜನ, ಸಹಪಂಕ್ತಿಗಳು ಕೂಡ ನಡೆಯುತ್ತಿರಲಿಲ್ಲ. ಶರೀರ ಸಂಬಂಧವಂತೂ ದೂರವೇ ಉಳಿಯಿತು. ಕೆಲವು ಒಳಪಂಗಡಗಳಲ್ಲಿ ಪರಸ್ಪರ ಹೊಕ್ಕು ಬಳಕೆ ಊಟ–ಉಪಚಾರಗಳು ನಡೆಯುತ್ತಿದ್ದರೂ ಶರೀರ ಸಂಬಂಧ ಬಹಳ ಕ್ವಚಿತ್ತಾಗಿತ್ತು. ಎಲ್ಲೋ ಒಂದೆರಡು ಅಂತಹ ಮನೆತನಗಳಿದ್ದವು. ಅವುಗಳನ್ನು ಉಳಿದವರು ಒಳ್ಳೆಯ ದೃಷ್ಟಿಯಿಂದ ಕಾಣುತ್ತಿರಲಿಲ್ಲ.

ಇನ್ನು ವಿದ್ಯಾಭ್ಯಾಸದ ಬಗ್ಗಂತೂ ಹೇಳದಿರುವುದೇ ಮೇಲು. ಮಠ–ಮಾನ್ಯಗಳ ಸ್ವಾಮಿಗಳು, ಗಾವಠಿಶಾಲೆ ಹಾಕಿದ ಜಂಗಮರು–ಇವರನ್ನು ಬಿಟ್ಟರೆ ಉಳಿದಂತೆ ಎಲ್ಲಿಯೋ ಒಬ್ಬಿಬ್ಬರು ಓದು–ಬರಹ ಬಲ್ಲವರಾಗಿದ್ದರು. ಪುರಾಣಿಕರಿಂದ, ಕೀರ್ತನಕಾರರಿಂದ ಆಗಾಗ ಪುರಾಣ–ಪ್ರವಚನಗಳು ನಡೆಯುತ್ತಿದ್ದವು. ಬಸವಪುರಾಣ, ರಾಜಶೇಖರ ವಿಳಾಸದಂತಹ ಒಂದೆರಡು ಪ್ರಮುಖ ವೀರಶೈವ ಕನ್ನಡ ಕೃತಿಗಳ ಜೊತೆಗೆ ಕೆಲವು ಸಂಸ್ಕೃತ ಗ್ರಂಥಗಳ ಅಧ್ಯಯನ, ಅಧ್ಯಾಪನಗಳು ಸೀಮಿತ ವಲಯಗಳಲ್ಲಿ ಮಾತ್ರ ನಡೆಯುತ್ತಿದ್ದವು. ವೀರಶೈವ ತತ್ತ್ವವಿವೇಚನೆ, ಅದರ ಧಾರ್ಮಿಕ ಹಾಗೂ ಸಾಮಾಜಿಕ ರೀತಿ–ನೀತಿ–ಆಚರಣೆಗಳ ಪ್ರಮುಖ ಆಕರಗಳೆನ್ನಿಸಿದ ವಚನ ಗ್ರಂಥಗಳ ಅಭ್ಯಾಸ. ಡಾ. ಫ.ಗು.ಹಳಕಟ್ಟಿಯವರು ಅವನ್ನು ಪ್ರಕಟಿಸುವ (೧೯೨೩) ಪೂರ್ವದಲ್ಲಿ

ನಡೆದಿರಲಿಲ್ಲವೆಂದು ಹೇಳಿದರೆ ಆಶ್ಚರ್ಯವೆನಿಸಿದರೂ ಸತ್ಯಸಂಗತಿ. ಆಧುನಿಕ ಆಂಗ್ಲ ವಿದ್ಯಾಭ್ಯಾಸದತ್ತ ಒಲವು ತೋರಿದರು ಕೂಡ ಬಹಳ ವಿರಳವೆಂದೇ ಹೇಳಬೇಕು.

ಒಟ್ಟಿನಲ್ಲಿ ಬಸವಾದಿ ಪ್ರಮಥರು, ಸ್ಥಾಪಿತ ಮತ್ತು ಸ್ಥಗಿತ ವ್ಯವಸ್ಥೆಯ ವಿರುದ್ಧ ಒಂದು ಅಭೂತಪೂರ್ವ ಮಹಾ ಆಂದೋಲನವನ್ನು ನಡೆಸಿ, ಎಂತಹ ಆದರ್ಶ ಧರ್ಮ, ಸಮಾಜ ಹಾಗೂ ಸ್ಥಾವರವಲ್ಲದ ಜಂಗಮ ವ್ಯವಸ್ಥೆಯ ಸ್ಥಾಪನೆಗೆ ಹೆಣಗಿ, ಅದರಲ್ಲಿ ಯಶಸ್ವಿಯಾದರೂ ಅದೆಲ್ಲ ಸಂಪೂರ್ಣ ಕೊಚ್ಚಿಕೊಂಡು ಹೋದಮತಹ ಪರಿಸ್ಥಿತಿ ನಿರ್ಮಾಣಗೊಂಡಿತ್ತು. ಬಸವಣ್ಣನವರ ಕಾಲದಲ್ಲಿ ಹಿಂದೂಧರ್ಮದಲ್ಲಿದ್ದ ಲೋಪದೋಷ, ತಿಕ್ಕಾಟ, ಶೋಷಣೆ, ಸ್ವಾರ್ಥ, ಅಜ್ಞಾನ ಇತ್ಯಾದಿ ಸಮಾಜಶಕ್ತಿಯ ಹಾಸ್ಯಕ್ಕೆ ಕಾರಣವಾಗಬಲ್ಲ ಅಂಶಗಳೆಲ್ಲ ವೀರಶೈವದಲ್ಲಿ ತಲೆದೋರಿದ್ದವು. ಬಸವಾದಿ ಶರಣರ ಪ್ರಯತ್ನದ ವೈಫಲ್ಯಕ್ಕೆ ಹಿಡಿದ ಕನ್ನಡಿಯಾಗಿತ್ತು. ನಮ್ಮ ಸಮಾಜ. 'ಬಸವಣ್ಣ ಸೋತ ಸೋತ ಸೋತ!' ಎಂಬ ಧ್ವನಿ ಎಲ್ಲೆಡೆ ಅನುರಣಿಸುತ್ತಿದ್ದ ಕಾಲವದು. ಆಗ 'ಬಸವಣ್ಣ ಸೋತಿಲ್ಲ ಸರ್ವಥಾ ಸೋತಿಲ್ಲ. ಕೊಲ್ಲುವೆನೆಂಬ ಭಾಷೆ ದೇವನದಾದರೆ, ಗೆಲ್ಲುವೆನೆಂಬ ಭಾಷೆ ಭಕ್ತನದು ಎಂದು ಸಾರಿದ ಧೀರನವ. ಆದುದರಿಂದ ಅವನಿಗೆ ಸೋಲೆಂಬುದಿಲ್ಲ. ಅವನು ಹೊತ್ತಿಸಿದ್ದು ಚಿರಜ್ಯೋತಿ; ಅದರಿಂದ ಹೊರಹೊಮ್ಮುತ್ತಿದ್ದುದು ಶಿವಪ್ರಕಾ. ಆ ಜ್ಯೋತಿಯ ಬತ್ತಿಯ ಕುಡಿಗೆ ಮಂಕು ಬಂದಿರಬಹುದು. ಆದರೆ ಎಣ್ಣೆ ಬತ್ತಿಲ್ಲ, ಎಂದಿಗೂ ಮುಗಿಯದ ಭಕ್ತಿತೈಲವದು. ಬಸವ ಜ್ಯೋತಿಯ ಬತ್ತಿಯೆಳೆಗಿಡದ ಆ ಮಂಕನ್ನು ತೆಗೆಯಲು ನಾನು ಚಾಚು ಕಡ್ಡಿಯಾಗಿರಬೇಕು' ಎಂಬ ಅಚಲ ನಿರ್ಧಾರವೆಂಬಂತೆ ಹಾನಗಲ್ಲ ಕುಮಾರಶ್ರೀಗಳವರು ಸಮಾಜರಂಗಕ್ಕೆ ಪಾದಾರ್ಪಣೆ ಮಾಡಿದರು. ದಿಟ್ಟ, ದೃಢ, ಹೆಜ್ಜೆಯಿಡುತ್ತ, ಮುಂದುವರಿದರು. ಇಷ್ಟಲಿಂಗಪೂಜೆಯಿಂದ ವ್ಯಷ್ಟಿಯ ಉದ್ಧಾರವಾದರೆ, 'ಸಮಾಜಲಿಂಗ' ಪೂಜೆಯಿಂದ ಸಮಷ್ಟಿಯ ಉದ್ಧಾರ. ಆದುದರಿಂದ ಇಷ್ಟಲಿಂಗ ಪೂಜೆಯಂತೆ ಇಂದಿನ ಸಂದರ್ಭದಲ್ಲಿ ಸಮಾಜಲಿಮಗಪೂಜೆಯೂ ಪ್ರಸ್ತುತ. ಅದೇ ವಿಹಿತ ಎಂಬ ನಿರ್ಧಾರಕ್ಕೆ ಅವರು ಬಂದರು. ತಾವು ವಿರಕ್ತರಾದರೂ ಸಮಾಜಾನುರಕ್ತಿಗೆ ಪಕ್ಕಾಗಿ ಸಮಾಜೋದ್ಧಾರಕ್ಕೆ, ಅದರ ಪುನರುಜ್ಜೀವನಕ್ಕೆ ತಮ್ಮನ್ನು ತಾವು ಅರ್ಪಿಸಿಕೊಳ್ಳಲು ಸಿದ್ಧರಾದರು.

ಮೇಲೆ ವಿವರಿಸಿದ ತೀರಾ ನಿರಾಶಾದಾಯಕ ಸಾಮಾಜಿಕ ಪರಿಸ್ಥಿತಿ ಈ ಬಗೆಯ ನಿರ್ಣಯ ತೆಗೆದುಕೊಳ್ಳಲು ಅವರಿಗೆ ಒಂದು ಪ್ರಮುಖ ಬಾಹ್ಯಪ್ರೇರಣೆಯಾದರೆ, ಕೆಲವು ಆಂತರಿಕ ಪ್ರೇರಣೆಗಳೂ ಇವೆ. ಅವುಗಳಿಗೆ ಒಂದು ಬಗೆಯ ಚಾಲನೆ ಒದಗಿಸಿದ ಮಹನೀಯರೂ ಇದ್ದಾರೆ. ಹಲವಾರು ಶಕ್ತಿಗಳ ಒಂದು ಮಹಾಸಂಪುಟದಂತಿದ್ದ ಶ್ರೀಗಳವರನ್ನು ಗುರುತಿಸಿ, ಸಂಪೂರ್ಣ ಭಟ್ಟಿಯೇ ಕೆಟ್ಟು ಹೋದಂತಿದ್ದ ನಿಸ್ತೇಜ ನಿಸ್ಸತ್ವ ಕುಟು-ಕುಟು ಜೀವ ಹಿಡಿದ ಸಮಾಜಕ್ಕೆ ಶ್ರೀಗಳವರನ್ನು ಸಂಮುಖಿಗೊಳಿಸಿ ಅದಕ್ಕೆ ಜೀವಕಳೆ ತುಂಬುವಂತೆ ಎಚ್ಚರಿಸಿದ ಶ್ರೇಯಸ್ಸು ಇಂತಹ ಮಹನೀಯರಿಗೆ ಸಲ್ಲುತ್ತದೆ. ಕುಮಾರಸ್ವಾಮಿಗಳ ಜೀವನವನ್ನು, ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವಾಡಿದ ಇವರ ಪರಿಚಯ, ಶ್ರೀಗಳವರ ಜೀವನ ಚರಿತ್ರೆಯ ಪರಿವೀಕ್ಷಣೆಯ ಸಂದರ್ಭದಲ್ಲಿ ಹಾಸುಹೊಕ್ಕಾಗಿ ಬರುತ್ತದೆ. ಈ ಹಿನ್ನೆಲೆಯಲ್ಲಿ ಅವರ ಜೀವನ-ಸಾಧನೆ-ಸಿದ್ಧಿಗಳನ್ನು ಕುರಿತು, ಅವರ ಕಾರ್ಯಗಳು ಸಮಾಜದ ಮೇಲೆ ಬೀರಿದ ಪ್ರಭಾವಾದಿಗಳನ್ನು ಕುರಿತು ಇಲ್ಲಿ ಸಂಗ್ರಹವಾಗಿ ಪರಿಶೀಲಿಸಬಹುದು.

### ಜನನ-ಬಾಲ್ಯ-ವಿದ್ಯಾಭ್ಯಾಸ-ಗೃಹತ್ಯಾಗ

ಹಾನಗಲ್ಲ ಕುಮಾರ ಸ್ವಾಮಿಗಳವರ ಪೂರ್ವಾಶ್ರಮದ ಹೆಸರು ಹಾಲಯ್ಯ. ಧಾರವಾಡ ಜಿಲ್ಲೆಯ ರಾಣಿಬೆನ್ನೂರು ತಾಲೂಕಿನ ಜೋಯಿಸರ ಹರಳಳ್ಳಿಯ ಬಸವಯ್ಯ-ನೀಲಮ್ಮ ದಂಪತಿಗಳ ಎರಡನೆಯ ಮಗು ಅವರು. 'ಹೊಲೆಗಂಡಲ್ಲದೆ ಪಿಂಡದ ನೆಲೆಗೆ ಆಶ್ರಯವಿಲ್ಲ, ಜಲಬಿಂದುವಿನ ವ್ಯವಹಾರವೊಂದೇ...ಕರ್ಣದಲ್ಲಿ ಜನಿಸಿದವರುಂಟೆ?' ಎಂದು ಬಸವಣ್ಣ ಕೇಳುವಂತೆ ಹಾಲಯ್ಯ ಹುಟ್ಟಿದುದು ಕೂಡ ನಮ್ಮ ನಿಮ್ಮಂತೆಯೇ. ಆದರೆ ತಂದೆ-ತಾಯಿಗಳಿಟ್ಟ ಹೆಸರನ್ನು ಅದರ ಪರಿಪೂರ್ಣಾರ್ಥದಲ್ಲಿ ಸಾರ್ಥಕ ಪಡಿಸಿಕೊಂಡ ಅತ್ಯಂತ ವಿರಳ ವ್ಯಕ್ತಿಗಳಲ್ಲಿ ಅವರೂ ಒಬ್ಬರೆಂಬುದು ನಿರ್ವಿವಾದ. ರೋಗಿಷ್ಟ ಸಮಾಜಕ್ಕೆ ಹಲವಂದದ ವಿಧಾಯಕ ಕಾರ್ಯಕ್ರಮರೂಪೀ ಹಾಲನ್ನು, ಅದರ ಮಂಕು ಕವಿದ ಮನಕೆ, ಬೋಧಾಮೃತವನ್ನು ಧಾರೆಯೆರೆದು, ಅದು ನಿರೋಗಿಯಾಗಿ ದಷ್ಟಪುಷ್ಟವಾಗಿ ಬೆಳೆಯುವಂತೆ ಮಾಡಿದವರು. ಅದರಿಂದಾಗಿ 'ಹಾಲಯ್ಯ' ಹೆಸರನ್ನು ಸಾರ್ಥಕಪಡಿಸಿಕೊಂಡವರು.

ಕ್ರಿ.ಶ. ೧೮೬೭ರಲ್ಲಿ ಜನಿಸಿದ ಹಾಲಯ್ಯನ ವಿದ್ಯಾಭ್ಯಾಸಕ್ಕೆ ಶ್ರೀಕಾರ ಬಿದ್ದುದು ಆತನ ಹುಟ್ಟೂರಾದ ಜೋಯಿಸರ ಹರಳಳ್ಳಿಯಲ್ಲಿ ಆತನ ಅಜ್ಜನ ಗಾವಠಿ ಶಾಲೆಯಲ್ಲಿ. ಅಲ್ಲಿ ಮೂರನೆಯ ಇಯತ್ತೆಯವರೆಗೆ ಮಾತ್ರ ಇತ್ತು. ಹಾಲಯ್ಯನ ಅಭ್ಯಾಸ ಅಲ್ಲಿಯವರೆಗೆ ಬಂದು ನಿಂತಿತು. ಹಾಲಯ್ಯ ಸುಮಾರು ಹನ್ನೆರಡು ವರ್ಷದವನಿರಬೇಕು. ಆಗ ಆತನ ಜೀವನಕ್ಕೊಂದು ಹೊಸ ತಿರುವನ್ನು ಕೊಡುವ ಘಟನೆ ನಡೆಯಿತು. ಹಾಲಯ್ಯನ ತಂದೆ ಬಸವಯ್ಯನದು ಬಡತನದ ಮನೆತನ. ದಿನಾಲು ಮುಂಜಾನೆ ಹಿಟ್ಟಿನ ಭಿಕ್ಷೆಗೆ ಅವರ ಮನೆಯಲ್ಲಿ ಯಾರಾದರೂ ಹೋಗುತ್ತಿದ್ದರು. ಹಾಲಯ್ಯನ ಊರ ಶಾಲೆಯಲ್ಲಿಯ ಅಭ್ಯಾಸ ಮುಗಿದದ್ದರಿಂದ ಒಂದು ಮನೆಯಲ್ಲಿ ಒಬ್ಬ ಲಿಂಗಾಯತ ಮುದುಕ ಭಿಕ್ಷೆಗೆ ಬಂದ ಹಾಲಯ್ಯನನ್ನು ನೋಡಿ ಅವನಿಗೆ ಏಕೆ ಬಂದಿತ್ತೋ ಅಥವಾ ದೈವೀಪ್ರೇರಣೆಯೋ.

ಬಾಲಕನ ಮೇಲೆ ಹರಿಹಾಯ್ದು 'ಬಿಕ್ಷಾ ಬೇಡಿದರ ಏನ ಬರ್‍ರೈತಪಾ ದೇಹ ಬೆಳಿತ್ರೆತಿ ತೀರಿತು. ಬುದ್ಧಿ ಬೆಳೆಯೋದಿಲ್ಲ. ಬುದ್ಧಿ ಬೆಳೀಬೇಕಾದರೆ ಓದಬೇಕಪಾ. ಓದಿ ಸಮಾಜ ಸೇವೆ ಮಾಡಬೇಕಪಾ. ನಿನ್ನಂಥವರು ಹುಟ್ಟದಿದ್ದರ ಏನ ಲೋಕ ಹಾಳಾಗ್ತಿತ್ತ' ಎಂದು ಆವೇಶದಲ್ಲಿ ಆಡಿಬಿಟ್ಟ. ಎಲೆಯ ಜೀವ ತತ್ತರಿಸಿ ಹೋಯಿತು. ಆದರೆ ಅಳಲಿಲ್ಲ. ವಿಚಾರಕ್ಕೆ ತೊಡಗಿದ. ಮುದುಕ ಹೇಳಿದ ಮಾತುಗಳನ್ನು ಮತ್ತೆ ಮತ್ತೆ ಹಾಲಯ್ಯ ಮೆಲುಕು ಹಾಕಿದ. ಒಂದು ನಿರ್ಧಾರಕ್ಕೆ ಬಂದ. 'ಓದಬೇಕು. ಜಂಗಮನು ಮುಖ್ಯವಾಗಿ ಮಾಡಬೇಕಾದ ಕರ್ತವ್ಯವದು. ಓದಿದ್ದನ್ನು ಇತರರಿಗೆ ತಿಳಿಸಿಕೊಡಬೇಕು. ಓದಿಗೆ ವಿರಾಮ ಹಾಕಿ, ಜೋಳಿಗೆ ಹಾಕಿದುದು ತಪ್ಪು. ಸಮಾಜ ವ್ಯವಸ್ಥೆಯಲ್ಲಿ ಒಬ್ಬನಿಗೆ ಒಂದೊಂದು ಕಾಯಕ ನಿಯೋಜಿಸಲಾಗಿದೆ. ನನಗೆ ನಿಯೋಜಿಸಲಾದ ಕರ್ತವ್ಯ ಮಾಡದೆ ಭಿಕ್ಷೆ ಬೇಡುವುದು ತರವಲ್ಲ. ಮುದುಕನ ಮಾತಿನಲ್ಲಿ ತಪ್ಪಿಲ್ಲ ಎಂದು ತನ್ನಲ್ಲಿ ತಾನೇ ತಿಳಿದು ಜೋಳಿಗೆಯನ್ನು ಮನೆಯಲ್ಲಿಟ್ಟು, ಬಟ್ಟೆ ತೊಳೆಯಲು ಹೋಗಿ, ಬಟ್ಟೆ ತೊಳೆಯುತ್ತಿರುವಾಗಲೆ 'ಈ ಬಟ್ಟೆಗೆ ಹಿಡಿದ ಮೈಲಿಗೆಯನ್ನು ತೊಳೆಯುವಂತೆ ಸಮಾಜ ಬಾಂಧವರ ಮನವನ್ನು ಆವರಿಸಿದ ಅಜ್ಞಾನದ ರಜವನ್ನು ತೊಳೆಯಬೇಕು. ಶಿವಯೋಗ ಸಾಧಿಸಬೇಕು. ಆಗ ನನಗೆ ಸಮಾಜವನ್ನು ಸುಧಾರಿಸುವ ಯೋಗ್ಯತೆ ಪ್ರಾಪ್ತವಾದೀತು' ಎಂದು ಆಲೋಚಿಸಿ, ತೊಳೆದ ಬಟ್ಟೆಗಳನ್ನು ಯಾರ ಕೈಯಲ್ಲಿಯೋ ಮನೆಗೆ ಕಳಿಸಿ, ಯಾರಿಗೂ ಹೇಳದೆ ಕೇಳದೆ ವಿದ್ಯಾಭ್ಯಾಸ ಮುಂದುವರಿಸಲು ಕಜ್ಜರಿ ಗ್ರಾಮಕ್ಕೆ ಬಂದ ಹಾಲಯ್ಯ. ಅಂತಹ ಕಿರುವಯಸ್ಸಿನಲ್ಲಿಯೇ, ಮುದುಕನ ಬಯ್ಗಳವನ್ನು ಒಮದು 'ಛಾಲೆಂಜ್' ಆಗಿ ಸ್ವೀಕರಿಸಿ, ಆ ಬಯ್ಗಳ ಮರೆಯಲ್ಲಿ ಅಡಗಿರುವ ಅರ್ಥದ ಬಗ್ಗೆ ಆಲೋಚಿಸಿ, ಒಮದು ನಿರ್ಧಾರಕ್ಕೆ  ಬಂದು, ಊರನ್ನು ಬಿಡುವ ಸಾಹಸಕ್ಕಿಳಿಯುತ್ತಾನೆ ಹಾಲಯ್ಯ. ಇದು, ಹಾಲಯ್ಯನ ವ್ಯಕ್ತಿತ್ವ ಎಂತಹ ಧಾತುವಿನಿಂದ ನಿರ್ಮಾಣಗೊಂಡಿತ್ತೆಂಬುದರತ್ತ ಬೆರಳು ತೋರಿಸುತ್ತದೆ. ಸಮಾಜೋದ್ಧಾರದ ಕಾರ್ಯದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಬಲ್ಲ ವ್ಯಕ್ತಿಗೆ ಇಂತಹ ನಿಂದನೆಗಳನ್ನು ಒಂದು ಆಹ್ವಾನವಾಗಿ ಸ್ವೀಕರಿಸುವ ಛಲ, ಹಿಡಿದ ಕಾರ್ಯವನ್ನು ಬಿಡಬಾರದೆಂಬ ಜಿಗುಟತನ, ಮನಸ್ಸಿನಂತೆ ಮಹಾದೇವನೆಂಬ ಅನುಭವವಾಣಿಯಲ್ಲಿ ನಂಬಿಗೆ ಇತ್ಯಾದಿಗಳಿರಬೇಕು. ಇವೆಲ್ಲ ಬೀಜರೂಪದಲ್ಲಿ ಈ ಬೆಳೆಯುವ ಚೇತನದಲ್ಲಿ ಇದ್ದುದಕ್ಕೆ, ಬಾಲ್ಯದ ಈ ಘಟನೆಗಳು ಸಾಕ್ಷಿ ನುಡಿಯುತ್ತವೆ. 'ಬೆಳೆಯ ಸಿರಿ ಮೊಳಕೆಯಲ್ಲಿ' ಎಂದು ಅದಕ್ಕೆ ಹೇಳುವುದು.

## ಕಜ್ಜರಿಯಲ್ಲಿ ಹಾಲಯ್ಯ–ವಿದ್ಯಾಭ್ಯಾಸ

ವಿದ್ಯಾಭ್ಯಾಸವನ್ನು ಮುಂದುವರಿಸುವ ನಿರ್ಧಾರವೇನೋ ಹಾಲಯ್ಯನನ್ನು ಕಜ್ಜರಿ ಗ್ರಾಮಕ್ಕೆ ಎಳೆತಂದಿತು. ಪರಿಚಯವಿಲ್ಲದ ಊರಲ್ಲಿ ಇರುವುದೆಲ್ಲಿ? ಊಟವೆಲ್ಲಿ? ಮುಖ ಒಣಗಿಸಿ ಗಿಡದ ಕೆಳಗೆ ಕುಳಿತ ಹಾಲಯ್ಯನಿಗೆ ದೈವ, ಹಿರೇಮಠ ರಾಚಯ್ಯನ ರೂಪದಲ್ಲಿ ನೆರವಿಗೆ ಬಂತು. ಬಾಲಕನ ವಿದ್ಯಾದಾಹವನ್ನು ಮನಗಂಡ ಅವರು ಹಾಲಯ್ಯನ ಊಟ–ವಸತಿಗೆ ಸಹಾಯ ಮಾಡಿದರು. ಅಲ್ಲಿಯ ಪ್ರಾಥಮಿಕ ಶಾಲೆಯ ಶಿಕ್ಷಕ ಮಹಾದೇವಪಂತ ಜೋಗಳೇಕರ ಅವರಲ್ಲಿ ಹಾಲಯ್ಯನ ವಿದ್ಯಾಭ್ಯಾಸ ಏಳನೆಯ ಇಯತ್ತೆಯ ವರೆಗೆ ಮುಂದುವರೆಯುತ್ತದೆ. ಧಾರವಾಡ ಕೇಂದ್ರಕ್ಕೆ  ನಡೆಯುತ್ತಲೇ ಹೋದ ಹಾಲಯ್ಯ ಮುಲ್ಕೀ ಪರೀಕ್ಷೆ (ಕನ್ನಡ ಏಳನೆಯ ಇಯತ್ತೆ) ಕೊಟ್ಟು ಬಂದ. ಪರೀಕ್ಷೆಯ ಪರಿಣಾಮ ಬಂದಾಗ ಹಾಲಯ್ಯ ಫೇಲಾಗಿದ್ದ, ಅವನಿಗೆ ನಾಚಿಕೆ, ನಿರಾಶೆ. ಒಮ್ಮೆ ಸಹಾಯವೀಯುತ್ತ, ಇನ್ನೊಮ್ಮೆ ಪೆಟ್ಟುಕೊಡುತ್ತ ನಿಯತಿ ಮೆಲ್ಲನೆ ಹಾಲಯ್ಯನನ್ನು ಫುಟ್‌ಬಾಲ್ ಆಟದ ಚೆಂಡಿನಂತೆ ಸಮಾಜಸೇವೆಯ ಗೋಲಿನತ್ತ ತಳ್ಳುತ್ತಿರುವುದು ಇಲ್ಲಿ ಕಂಡುಬರುತ್ತದೆ. ಅಲ್ಲಿ ಮುದುಕನಿಂದ ಹಾಲಯ್ಯನನ್ನು ಬಯ್ಯಲು ಹಚ್ಚಿ, ಇಲ್ಲಿ ಕಜ್ಜರಿಯಲ್ಲಿ ರಾಚಯ್ಯನಿಂದ ಸಹಾಯ ಒದಗಿಸಿ, ಈಗ ಪರೀಕ್ಷೆಯಲ್ಲಿ ಫೇಲಾಗುವಂತೆ ಮಾಡಿ ದೈವ ನಮ್ಮ ಸಮಾಜಕ್ಕೆ ಒಳ್ಳೆಯದನ್ನೇ ಮಾಡಿತು. ಹಾಲಯ್ಯ ಮುಲ್ಕೀ ಪರೀಕ್ಷೆ ಪಾಸಾಗಿದ್ದರೆ ಮುಂದೆ ಟ್ರೇನಿಂಗ್ ಮುಗಿಸಿ ಪ್ರಾಥಮಿಕ ಶಾಲೆಯಲ್ಲಿ ಮಾಸ್ತರ ಆಗಿ ಸೀಮಿತ ವಿದ್ಯಾರ್ಥಿಗಳಿಗೆ ಶಿಕ್ಷಕನಾಗುವದನ್ನು ತಪ್ಪಿಸಿ ಲೋಕಶಿಕ್ಷಕನಾಗುವ ವಿಶ್ವವಿಸ್ತಾರ ಆಯಾಮವನ್ನು ಅವನಿಗೆ ತೆರೆಯಿತು. ಅದಕ್ಕೇ ಹೇಳುವುದು 'ನಿಯತಿಯನಾರ್ ಮೀರ್ದಪರ್' ಎಂದು.

ಸೋಲಾದಾಗ, ಮುಗಿಲೇ ತಲೆಯ ಮೇಲೆ ಬಿದ್ದವರಂತೆ ಚಿಂತಿಸುತ್ತ ಕೂಡುವ ಜಾಯಮಾನದವನಲ್ಲ ಹಾಲಯ್ಯ. ಸೋಲು ಅವನ ಜೀವನಕ್ಕೆ ಇನ್ನೊಂದು ದಿಕ್ಕನ್ನು ಹಿಡಿಸಿತು. ಮುಂದೆ ತಾನು ಕೈಕೊಳ್ಳಲಿರುವ ಸಮಾಜ ಶಿಕ್ಷಣದ ಮಹಾಮಣಿಹಕ್ಕೆ ಒಮದು ಬಗೆಯ ತರಬೇತಿಯೆಂಬಂತೆ ಹದಿಹರಯದ ಹಾಲಯ್ಯ, ತನ್ನ ತಾಯಿಯ ತವರುಮನೆ ಲಿಂಗದಹಳ್ಳಿಗೆ ಬಂದು, ಅಲ್ಲಿ ಒಂದು ಗಾವಠಿ ಶಾಲೆ ಪ್ರಾರಂಭಿಸಿದ. ಯಾವುದೋ ಸಂದರ್ಭದಲ್ಲಿ ಹಾಲಯ್ಯನ ಕಣ್ಣಿಗೆ ನಿಜಗುಣರ ಗ್ರಂಥಗಳ ಬಿದ್ದವು. ಮೊದಲು ನಿಜಗುಣರ ಕೆಲವು ಹಾಡುಗಳನ್ನು ಬಿಡಿಬಿಡಿಯಾಗಿ ಹಾಲಯ್ಯ ಓದಿದ್ದನಾದರೂ, ಇಡಿಯಾಗಿ ಅವುಗಳನ್ನು ಓದಿರಲಿಲ್ಲ. ಈಗ ಅವರ ಕೃತಿಗಳ ಅಧ್ಯಯನ, ಅಲ್ಲಿಯ ತತ್ವವಿವೇಚನೆ ಹಾಲಯ್ಯನ ಮನಸ್ಸನ್ನು ಬಹುವಾಗಿ ಆಕರ್ಷಿಸಿತು. ಇದು ಹಾಲಯ್ಯನ ಸಹಜ ವೈರಾಗ್ಯಪರ ಮನೋಭಾವನೆಯ ಸೂಚಕವಾಗಿದೆ. ಅದೇ ಊರಲ್ಲಿದ್ದ ಸಮಾಳದ ಬಸಪ್ಪನೂ ನಿಜಗುಣರ ಆರಾಧಕ. ಸರಿ, ಇಬ್ಬರಿಗೂ ಕೂಡಿತು. ಅಲ್ಲಿ ನಿಜಗುಣರ ಗ್ರಂಥಗಳ ಅಧ್ಯಯನ ನಡೆದರೆ, ಶಾಲೆಯಲ್ಲಿ ಮಕ್ಕಳಿಗೆ ಅಧ್ಯಾಪನ ಕಾರ್ಯ ಮುಂದುವರಿಯಿತು.

### ಮದುವೆಯ ನಿರಾಕರಣೆ

ಹುಟ್ಟಿನೊಡಗೂಡಿ ಬಂದಂತಿದ್ದ ಬೀಜರೂಪದ ಹಾಲಯ್ಯನ ವಿರಕ್ತ ಮನೋಭಾವನೆಯನ್ನು ನಿಜಗುಣರ ಕೃತಿಗಳ ಅಧ್ಯಯನ ಮೆಲ್ಲಮೆಲ್ಲನೆ ಹದಗೊಳಿಸಲಾರಂಭಿಸಿತ್ತು. ಅದೇ ಸಮಯಕ್ಕೆ ಮದುವೆಯ ವಯಸ್ಸಿಗೆ ಬಂದ ಮಗನಿಗೆ ಮದುವೆ ಮಾಡಿಸುವ ಸಹಜ ಬಯಕೆಯಿಂದ ತಾಯಿ ನೀಲಮ್ಮ ಮಗನನ್ನು ಕಾಣಲು ಲಿಂಗದಹಳ್ಳಿಗೆ ಬಂದೇಬಿಟ್ಟಳು. ತಾಯಿಯ ಬಯಕೆಯನ್ನು ತಿಳಿದ ಹಾಲಯ್ಯ, ಒಂದು ವರ್ಷದ ಮೇಲೆ ತನ್ನ ನಿರ್ಧಾರ ತಿಳಿಸುವುದಾಗಿ ಹೇಳಿ ಕಳುಹಿಸಿದ. ಹದಿಹರೆಯದ ಮೆಲ್ಲಮೆಲ್ಲನೆ ತಾರುಣ್ಯ ಪುಟದೇಳುತಿರುವ ಹಾಲಯ್ಯನಿಗೆ, ಜನ್ಮವಿತ್ತ ತಾಯಿ ಮದುವೆಯ ಪ್ರಸ್ತಾಪವೆತ್ತಿದಾಗ ಕೂಡಲೇ ನಿರ್ಧಾರ ತಿಳಿಸುವುದು ಇಲ್ಲಿ ಸಾಧ್ಯವಾಗಿಲ್ಲದುದನ್ನು ಗಮನಿಸಬೇಕು. ಎರಡು ವರ್ಷಗಳುರುಳಿದವು. ತಾಯಿ ಮದುವೆಯ ಪ್ರಸ್ತಾಪವೆತ್ತುವುದನ್ನು ಬಿಡಲಿಲ್ಲ. ವಿರಕ್ತಮಾರ್ಗದ ಕರಕಷ್ಟತೆ-ನಿಷ್ಠುರತೆಯ ಬಗ್ಗೆ ಅದಕ್ಕೆ ಬೇಕಾದ ಮನೋದಾರ್ಢ್ಯದ ಬಗ್ಗೆ ಮತ್ತೆ ಮತ್ತೆ ಆಲೋಚಿಸಿ, ಕೊನೆಗೆ ಅದೇ ಮಾರ್ಗಗಾಮಿಯಾಗುವ ನಿರ್ಧಾರ ಕೈಕೊಂಡ ಹಾಲಯ್ಯ. ಮತ್ತೊಮ್ಮೆ ತನ್ನ ತಾಯಿ ಬಂದಾಗ 'ಅಮ್ಮಾ ನಿನಗೆ ಇನ್ನೊಬ್ಬ ಮಗನಿದ್ದಾನೆ. ದುಡಿಯುವುದರಲ್ಲಿ ಅವನ ಮುಂದೆ ನಾನಾವ ಗಿಡದ ತೊಪ್ಪಲು! ಅವನು ನಿನ್ನ ರಕ್ಷಣೆಯನ್ನೂ ಮಾಡಬಲ್ಲನೆಂಬ ವಿಶ್ವಾಸ ನನಗಿದೆ. ಅವನಿಂದ ನಮ್ಮ ವಂಶ ಮುಂದುವರಿಯುತ್ತದೆ. ನನಗೆ ಮದುವೆಯಾಗುವ ಇಚ್ಛೆಯಿಲ್ಲ. ಅದಕ್ಕಾಗಿ ಚಿಂತಿಸಬೇಕಾಗಿಲ್ಲ. ನನ್ನ ಮೇಲಿನ ಮಮತೆಯನ್ನು ನಿಮ್ಮ ಇನ್ನೊಬ್ಬ ಮಗನ ಮೇಲಿಟ್ಟು ತೃಪ್ತರಾಗಿ. ನಾನು ಈಗ ಹಿಡಿಯಲು ನಿರ್ಧರಿಸುವ ಹಾದಿಗೆ ಅಡ್ಡ ಬರಬೇಡಿ. ಅಡ್ಡಿ ತರಬೇಡಿ. ನನಗೆ ಜನ್ಮವಿತ್ತು ಸಾಕಿ ಸಲಹಿದ ತಾಯಿಯ ಋಣ ತೀರದಂತಹದು. ಆದರೂ ಆ ಋಣಭಾರ ಸ್ವಲ್ಪವಾದರೂ ಕಡಿಮೆಯಾಗಬೇಕಿಲ್ಲ, ಇಗೋ ನನ್ನ ಕಾಯಕದಿಂದ ಬಂದ ಸಂಪಾದನೆ ಈ ಮುನ್ನೂರು ರೂಪಾಯಿ ಉಡಿಯಲ್ಲಿ ಹಾಕಿ, ಅವಳು ಬೆಕ್ಕಸಬೆರಗಾಗಿ ಬಿಟ್ಟ ಬಾಯ್, ನೆಟ್ಟ ಕಣ್ಣಾಗಿ ನೋಡುತ್ತಿರುವಂತೆಯೇ ಹುಬ್ಬಳ್ಳಿಯತ್ತ ದಾಪುಗಾಲು ಹಾಕಿದ ಹಾಲಯ್ಯ. ಅವನ ರಕ್ತದ ಕಣಕಣಗಳಲ್ಲಿ ವಿರಕ್ತಿಯೇ ಅನುರಣಿತವಾಗುತ್ತಿದ್ದುದಕ್ಕೆ ಈ ಘಟನೆ ಹಿರಿಯ ಸಾಕ್ಷಿಯಾಗಿದೆ. ತಾಯಿಗೆ ಒಬ್ಬ ಒಳ್ಳೆಯ ಮಗ ಮಾಡಬೇಕಾದ ಕರ್ತವ್ಯವನ್ನು ಹಾಲಯ್ಯ ಮಾಡಲಿಲ್ಲವೆಂದು ಸಂಸಾರವನ್ನೇ ಸರ್ವಸ್ವವೆಂದು ತಿಳಿದ ನಮ್ಮಂತಹ ಸಾಮಾನ್ಯರಿಗೆ ಅನ್ನಿಸಬಹುದು. ಆದರೆ ಸಮಸ್ತ ಸಮಾಜಕ್ಕೆ ಕವಿದ ಕಾಳಿಕೆ ಕಳೆದು, ಅದರ ಉದ್ಧಾರವನ್ನೇ ತಮ್ಮ ಪರಮಧ್ಯೇಯವಾಗಿಸಿಕೊಳ್ಳಬಯಸಿದ ಮಹಿಮರಿಗೆ ಅದು ತಪ್ಪೆನಿಸುವುದಿಲ್ಲ. ಅವರದು ವಿಶ್ವವಿಶಾಲದೃಷ್ಟಿ. ನಮ್ಮದು ಸಂಕುಚಿತ ದೃಷ್ಟಿ. ಇಲ್ಲಿಗೆ ಹಾಲಯ್ಯನ ಜೀವನದ ಒಂದು ಘಟ್ಟ ಮುಗಿಯುತ್ತದೆ.

### ಹುಬ್ಬಳ್ಳಿಯ ಸಿದ್ಧಾರೂಢರ ಮಠದಲ್ಲಿ ಹಾಲಯ್ಯ

ಹುಟ್ಟಿದ ಮನೆ ಹಾಗೂ ಬಂಧು-ಬಾಂಧವರ ಸಂಬಂಧದ ಕೊಂಡಿಯನ್ನು ಕಡಿದುಕೊಂಡ ಹಾಲಯ್ಯನವರು, ಈಗ ಒಂದು ಬಗೆಯಲ್ಲಿ ಸ್ವತಂತ್ರರು. ಹುಬ್ಬಳ್ಳಿಗೆ ಬಂದ ಹಾಲಯ್ಯನವರಿಗೆ ಇದ್ದ ಒಂದು ಮುಖ್ಯ ಉದ್ದೇಶ, ಆಗ ಆರೂಢಶ್ರೇಷ್ಠರೆಂದು ಎಲ್ಲೆಡೆ ಪ್ರಸಿದ್ಧಿಪಡೆದ ಸಿದ್ಧಾರೂಢರಲ್ಲಿ ವಿದ್ಯಾರ್ಥಿಯಾಗಿ. ನಿಜಗುಣರ ಎಲ್ಲ ಗ್ರಂಥಗಳನ್ನು, ಪಂಚದಶಿಯಂತಹ ಕೃತಿಗಳನ್ನು ಆಳವಾಗಿ ಅಭ್ಯಸಿಸಬೇಕೆಂಬುದು. ತಾವು ಬೆಳೆದು ಬಂದ ಒಂದು ಧಾರ್ಮಿಕ ಪರಿಸರದಿಂದ ಹಾಲಯ್ಯನವರು ಮತ್ತೊಂದು ಪಂಥದ ಪರಿಸರದಲ್ಲಿ ಈಗ ಪ್ರವೇಶಿಸಿದಂತಾಯಿತು. ಅಲ್ಲಿಯ ವಾತಾವರಣಕ್ಕಿಂತ ಇದು ತೀರ ಭಿನ್ನವಾಗಿತ್ತು. ಅಲಲಿಯ ಆಚಾರ-ವಿಚಾರಗಳೂ ಬೇರೆ ಬಗೆಯವು. ಆದುದರಿಂದ ಹಾಲಯ್ಯನವರು ಹುಬ್ಬಳ್ಳಿಯ ರುದ್ರಾಕ್ಷಿಮಠದಲ್ಲಿಯೇ ಸ್ನಾನ ಪೂಜೆ, ಪ್ರಸಾದಾದಿಗಳನ್ನು ತೀರಿಸಿಕೊಂಡು ಪಾಠ, ಪ್ರವಚನಕ್ಕೆ ಮಾತ್ರ ಸಿದ್ಧಾರೂಢರ ಮಠಕ್ಕೆ ಹೋಗಿ ಬರುತ್ತಿದ್ದರು.

ಆರೂಢರಲ್ಲಿ ಅಧ್ಯಯನಕ್ಕೆ ನಿಂತ ಹಾಲಯ್ಯನವರಲ್ಲಿ ಅಭ್ಯಾಸ ಮುಂದುವರಿದಂತೆ ಅನೇಕ ಅಮಸ್ಯೆಗಳು, ಸಂಶಯಗಳು ಹುತ್ತಗಟ್ಟಲಾರಂಭಿಸಿದವು. ಅವುಗಳಲ್ಲಿ ಹಾಲಯ್ಯನವರನ್ನು ಹೆಚ್ಚು ಆಲೋಚನೆಗೆ ತೊಡಗಿಸಿದ್ದು ಆತ್ಮವಿದ್ಯೆಯ ಸಿದ್ಧಿಗಾಗಿ ತಾನೂ ಸಿದ್ಧಾರೂಢರಂತೆ ಇಷ್ಟಲಿಂಗ ರಹಿತವಾಗಿ ಸಾಧನೆ ನಡೆಸಬಹುದೆ? ಇಷ್ಟಲಿಂಗ ತ್ಯಜಿಸಬೇಕೆ? ಎಂಬುದು. ಈ ಬಗೆಯ ಚಿಕಿತ್ಸಕ ಬುದ್ಧಿ ಹಾಲಯ್ಯನಲ್ಲಿದ್ದುದು ಅವರ ಬೆಳೆಯಬಲ್ಲ ಚೇತನದ ಕುರುಹಾಗಿದೆ. ಗುರು ಹೇಳಿದ್ದನ್ನು ಕುರಿಯಂತೆ ಕೇಳಿಕೊಂಡು ಸುಮ್ಮನಿರುವ ಶಿಷ್ಯರ ಸಂಖ್ಯೆಯೇ ಅಧಿಕವಾಗಿದ್ದ ಅಂದಿನ ದಿನಮಾನಗಳಲ್ಲಿ ಕೇಳಿದುದನ್ನು ಚಿಕಿತ್ಸೆಗೆ ಗುರಿಪಡಿಸುವ ವಂಶದತ್ತ ಕ್ರಮವನ್ನು ಪುನರಾವಲೋಕನಕ್ಕೆ ಒಳಪಡಿಸುವ ಕುತೂಹಲವುಳ್ಳವರು ಬಹಳ ವಿರಳ. ಅಂತಹ ವಿರಳ ವಿದ್ಯಾರ್ಥಿಗಳಲ್ಲಿ ಹಾಲಯ್ಯ ಒಬ್ಬರಾಗಿದ್ದುದರಿಂದಲೇ ಅವರ ತಲೆಯಲ್ಲಿ ಸಂಶಯ ಮೊಳಕೆಯೊಡೆದುದು ಸಹಜವೇ ಆಗಿದೆ. ಇದು ಅವರಲ್ಲಿದ್ದ ವೈಚಾರಿಕತೆಯ ಕುರುಹು. ಒಂದು ಸಂಶಯ ಇಲ್ಲವೆ ಸಮಸ್ಯೆ ತಲೆಯಲ್ಲಿ ಹೊಕ್ಕಿತೆಂದರೆ ಅದು ಪರಿಹಾರವಾಗುವವರೆಗೆ ಹಾಲಯ್ಯನವರಿಗೆ ಸಮಾಧಾನವಿರುತ್ತಿರಲಿಲ್ಲ. ವಂಶ ಪಾರಂಪರ್ಯವಾಗಿ ತಲೆತಲಾಂತರದಿಂದ ಸಾಗಿಬರುತ್ತಿದ್ದ ತನ್ನ ಧರ್ಮಕ್ಕೆ ಪ್ರಾಣಪ್ರಾಯವಾದ ಮತ್ತು ಅತ್ಯಂತ ಆವಶ್ಯಕವಾದ ಇಷ್ಟಲಿಂಗಧಾರಣೆಯ ಬಗ್ಗೆಯೇ ಈ ಸಂಶಯ ಮೂಡಿರುವಾಗ ಹಾಲಯ್ಯನವರ ಚಡಪಡಿಕೆ ಹೇಳತೀರದು.

ಹಿರಿಯರನ್ನು ಕೇಳಿದರು. ಶಾಸ್ತ್ರಿ-ಪಂಡಿತರನ್ನು ವಿಚಾರಿಸಿದರು. ಕೊನೆಗೆ ಹುಬ್ಬಳ್ಳಿಯ ಎರಡೆತ್ತಿನಮಠದ ಅಂದಿನ ಸ್ವಾಮಿಗಳೊಡನೆ ಚರ್ಚಿಸಿದರು. ಆದರೂ ಅವರಿಗೆ ತೃಪ್ತಿಯೆನಿಸಲಿಲ್ಲ. ಆಗ ಶ್ರೀಗಳು ಹಾಲಯ್ಯನವರಿಗೆ ಬಳ್ಳಾರಿ ಜಿಲ್ಲೆಯ ಎಮ್ಮಿಗನೂರು ಜಡೆಯಸಿದ್ಧರ ದರ್ಶನ ಪಡೆಯಲು ಸಲಹೆಯಿತ್ತರು.

## ಜಡೆಯಸಿದ್ಧರ ದರ್ಶನ-ಸಂಶಯ ನಿವಾರಣೆ

ಹಾಲಯ್ಯನವರನ್ನು ಪರಿಪೂರ್ಣತೆಯತ್ತ ಸಾಗಿಸುವ ಮಹಾಮಣಿಹದಲ್ಲಿ ಪಾಲುಗಾರರಾದ ಪವಿತ್ರ ಚೇತನಗಳಲ್ಲಿ ಜಡೆಯಸಿದ್ಧರು ಒಬ್ಬರು. ಅವರ ಬಗ್ಗೆ ಹಾಲಯ್ಯನವರು ಕೇಳಿದ್ದರಾದರೂ ಕಂಡಿರಲಿಲ್ಲ. ಈಗ ಎರಡೆತ್ತಿನ ಮಠದ ಶ್ರೀಗಳ ಸಲಹೆಯ ಮೇರೆಗೆ ಅವರು ಜಡೆಯಸಿದ್ಧರನ್ನು ಕಾಣಲು ಹೊರಟರು. ಮೈಗೆ ಕಾವಿಯ ಶಾಟಿ, ತಲೆಗೆ ಕಂಬಳಿಯ ಕೊಪ್ಪಿ, ಕೈಯೊಳಗೊಂದು ತಂಬಿಗೆ, ಕೌಪೀನಧಾರಣೆ ಮತ್ತು ತೋಳಾಧಾರ-ಇಷ್ಟನ್ನು ಮಾತ್ರ ಆಗ ಉಳ್ಳವರಾಗಿದ್ದರು ಹಾಲಯ್ಯನವರು. ಜಡೆಯಸಿದ್ಧರು ಯಾವುದೋ ಊರಲ್ಲಿರುವರೆಂದು ಅವರಿಗೆ ತಿಳಿಯಿತು. ಅವರು ಒಂದು ಊರಿನಲ್ಲಿ ಇರುವವರೆ? ಜಟಾಜೂಟರಾದ ಅವರು ಬಟ್ಟೆ-ಬರಿಗಳನ್ನು ಕೂಡ ತ್ಯಾಗ ಮಾಡಿದವರು. ಬಹಿರಂಗದ ಇಷ್ಟಲಿಂಗ ಕೂಡ ಅವರಿಗೆ ಇರಲಿಲ್ಲ. ಯಾವಾಗಲೂ ಎಲೆ ಅಡಿಕೆ ಬಾಯಲ್ಲಿರುತ್ತಿತ್ತು. ಭಾವಿಕರ ಮನೋಗತವನ್ನು ತಿಳಿದು ಸಂಜ್ಞೆ-ಸಂಕೇತಗಳ ಮೂಲಕವೇ ಅದಕ್ಕೆ ಉತ್ತರ ಕೊಡುವವರು. ಹಳ್ಳಿಗರಿಂದ ಇದೆಲ್ಲವನ್ನು ತಿಳಿದ ಹಾಲಯ್ಯನವರು, ಗೋದಿಹಿಟ್ಟು, ತಂಬಾಕು, ಎಲೆ, ಅಡಿಕೆ ಮತ್ತು ಸುಣ್ಣಗಳನ್ನು ತೆಗೆದುಕೊಂಡು ಅವರಿದ್ದ ಹಳ್ಳಿಗೆ ಹೋದರು. ಅತ್ತ ಜಡೆಯಸಿದ್ಧರು ತಮ್ಮನ್ನು ಕಾಣಲು ಬಂದವರನ್ನುದ್ದೇಶಿಸಿ 'ಶಿವಯೋಗಿಗಳು ಬರುತ್ತಾರೆ. ಹಾದಿ ಹಸನ ಮಾಡಿರಿ. ದೂರ ಸರಿದು ನಿಲ್ಲಿರಿ' ಎಂದು ಹೇಳುತ್ತಿದ್ದರು. ಹಾಲಯ್ಯನವರು ಸಮೀಪಕ್ಕೆ ಬರುತ್ತಿದ್ದಂತೆಯೇ, ಅವರು ಒಬ್ಬನ ಮೈಮೇಲಿನ ಪಂಚೆಯನ್ನೆತ್ತಿಕೊಂಡು, ಅದನ್ನು ಚೌಕಾಕಾರವಾಗುವಂತೆ ಮಡಚಿ, ಲಿಂಗವಸ್ತ್ರವಾಗಿ ಮಾಡಿ, ಕೊರಳಲ್ಲಿ ಕಟ್ಟಿ, ಹಾಲಯ್ಯನವರೆದುರು ಕೈಕಟ್ಟಿ ನಿಂತರಂತೆ! ಅದನ್ನು ನೋಡಿದ ಸುತ್ತಲಿನವರಿಗೆಲ್ಲ ವಿಸ್ಮಯ. ಹಾಲಯ್ಯನವರು ಬಂದು ಜಡೆಯಸಿದ್ಧರಿಗೆ ನಮಸ್ಕರಿಸಿದಾಗ, ಅವರು 'ಓಹೋ ಶಿವಯೋಗಿಗಳು, ಬರಬೇಕು ಬರಬೇಕು' ಎಂದು ಸಂಬೋಧಿಸಿ ಎಬ್ಬಿಸಿದರು. ಇಷ್ಟಲಿಂಗದ ಬಗ್ಗೆ ತಮಗಿದ್ದ ಸಂಶಯವನ್ನು ತಾವು ಕೇಳುವ ಪೂರ್ವದಲ್ಲಿಯೆ ತಿಳಿದು, ಅದಕ್ಕೆ ಸಾಂಕೇತಿಕ ಉತ್ತರವನ್ನೂ ಕೊಟ್ಟ ಜಡೆಯಸಿದ್ಧರನ್ನು ಕಂಡು ಹಾಲಯ್ಯನವರಿಗೆ ಅತ್ಯಾಶ್ಚರ್ಯ. ಸಿದ್ಧರ ವೈರಾಗ್ಯಸ್ಥಿತಿ, ನಗ್ನಾವಸ್ಥೆ, ಮುಖದಿಂದ ಹೊರಸೂಸುತ್ತಿದ್ದ ಶಿವಕಳೆ ಇತ್ಯಾದಿಗಳನ್ನು ಕಂಡು ಹಾಲಯ್ಯನವರು ರೋಮಾಂಚಿತರಾದರು. 'ಉಣ್ಣಲಿಕ್ಕೆ ಏನಾದರೂ ಇದೆಯಾ?' ಎಂದು ಸಿದ್ಧರು ಕೇಳಿದಾಗ, ಅವರ ನಿಜವೈರಾಗ್ಯವನ್ನು ಪರೀಕ್ಷಿಸುವ ಚಾಪಲ್ಯ ಹಾಲಯ್ಯನವರಿಗುಂಟಾಯಿತು. ಕೂಡಲೇ ಅವರು ಗೋದಿಹಿಟ್ಟನ್ನೇ ಕೊಟ್ಟರು. ಅದನ್ನವರು ಅಮೃತದಂತೆ ಸೇವಿಸಿದರು. ತದನಂತರ ತದನಂತರ ಸಿದ್ಧರು ಎಲೆಯನ್ನು ಕೇಳಿದಾಗ ತಂಬಾಕವನ್ನೂ, ತಂಬಾಕವನ್ನು ಕೇಳಿದಾಗ ಸುಣ್ಣವನ್ನು ಕೇಳಿದಾಗ ಅಡಿಕೆಯನ್ನು ಹೀಗೆ ಬದಲಿಸಿಕೊಟ್ಟರೂ ಸಿದ್ಧರು ಅವನ್ನು ತಾವು ಬೇಡಿದ ಆಯಾ ವಸ್ತುಗಳೆಂದೇ ಭಾವಿಸಿ ಪ್ರಸಾದ ಭಾವನೆಯಿಂದ ಸೇವಿಸಿದರು. ಎಲ್ಲವನ್ನೂ ಸಮತಾಭಾವನೆಯಿಂದ ಸ್ವೀಕರಿಸುವ, ಬಂಗಾರವು ಕಬ್ಬಿಣವು ಹಿರಿಕಿರಿದಾದರೂ ಸಮಾನವಾಗಿ ಕಾಣುವ ಅವರ ಶರಣಸ್ಥಿತಿ, ಸಿದ್ಧಸ್ಥಿತಿಗಳು ಹಾಲಯ್ಯನವರಲ್ಲಿ ನಿಬ್ಬೆರಗನ್ನುಂಟು ಮಾಡಿದವು. ಪೂರ್ವಜನ್ಮದ ಪುಣ್ಯದ ಫಲವಾಗಿಯೋ ಎಂಬಂತೆ ಅಂತಹ ವೈರಾಗ್ಯಶ್ರೀ ಸಂಪನ್ನರ ಸಂದರ್ಶನ ತಮಗಾಗಿ, ತಮ್ಮ ಮನಸ್ಸಿನ ಸಂಶಯ ನಿವಾರಣೆಯಾದುದಕ್ಕೆ ತಮ್ಮನ್ನು ತಾವು ಧನ್ಯರೆಂದು ಹಾಲಯ್ಯನವರು ಭಾವಿಸಿದರು. ಅವರ ಜನ್ಮದಲ್ಲಿ ಎಂದೆಂದೂ ಮರೆಯಲಾಗದ ಅನುಭವವದು. ವೀರಶೈವದ ವೈಶಿಷ್ಟ್ಯ ವಿಶೇಷವೆನಿಸಿದ ಇಷ್ಟಲಿಂಗಧಾರಣೆಯ ಬಗ್ಗೆ ಹಾಲಯ್ಯನವರಲ್ಲಿ ನಡೆದ ಹೊಯ್ದಾಟವನ್ನು ನಿಲ್ಲಿಸಿ, ಅದರಲ್ಲಿ ಅವರ ನಂಬಿಗೆ ದೃಢಗೊಳ್ಳುವಂತೆ ಮಾಡಿದ ಜಡೆಯಸಿದ್ಧರದು, ಹಾಲಯ್ಯನವರನ್ನು ನಮ್ಮ ಸಮಾಜದ ಉದ್ಧಾರಕರನ್ನಾಗಿ ರೂಪಿಸುವಲ್ಲಿ ಮಹತ್ವದ ಪಾತ್ರವೆಂಬುದನ್ನು ಮರೆಯಲಾಗದು. ಮತ್ತೆ ಹುಬ್ಬಳ್ಳಿಯ ಸಿದ್ಧಾರೂಢರ ಬಳಿ ಹೋಗುವುದು ಯುಕ್ತವಲ್ಲ, ಇನ್ನೆಲ್ಲಿಗೆ ಹೋಗಬೇಕೆಂಬ ಪ್ರಶ್ನೆ ಹಾಲಯ್ಯನವರಲ್ಲಿ ಏಳುತ್ತಿರುವಷ್ಟರಲ್ಲಿಯೇ ಜಡೆಯಸಿದ್ಧರು ಅವರ ಮನದಿಂಗಿತವನ್ನು ತಿಳಿದು, ಅವರು ಕೇಳದಿದ್ದರೂ ತಾವೇ 'ಎಲ್ಲಿದ್ದಿಯೋ ಅಲ್ಲಿಗೇ ಹೋಗು' ಎಂದು ಮೂರು ಸಲ ನುಡಿದರು. ಆಗ ಹಾಲಯ್ಯನವರು ಮತ್ತೊಂದನೆಣಿಸದೆ ಹುಬ್ಬಳ್ಳಿಯತ್ತ ತಿರುಗಿದರು. ಸಿದ್ಧಶಿವಯೋಗಿಯ ಮಾತಿನ ಮರ್ಮ ಹಾಲಯ್ಯಸ್ವಾಮಿಗಳಿಗೆ ಮನವರಿಕೆ ಯಾಗುವ ಪ್ರಸಂಗ ಹುಬ್ಬಳ್ಳಿಯಲ್ಲಿ ಕೆಲವೇ ದಿನಗಳಲ್ಲಿ ನಡೆಯಿತು. ಹಾಲಯ್ಯಸ್ವಾಮಿಗಳು ಆತ್ಮೋನ್ನತಿಯ ಮಾರ್ಗದಲ್ಲಿ ಕೈ ಹಿಡಿದು ನಡೆಸಿದ ಕರುಣಾಳು ಎಳಂದೂರು ಬಸವಲಿಂಗಸ್ವಾಮಿಗಳ ಸಂದರ್ಶನವೇ ಆ ಮಹತ್ವಪೂರ್ಣ ಪ್ರಸಂಗ.

## ಸಿದ್ಧಾರೂಢರ ಮಠದಲ್ಲಿ ಎಳಂದೂರು ಬಸವಲಿಂಗ ಸ್ವಾಮಿಗಳ ಭೇಟಿ

ಸಿದ್ಧಾರೂಢರಲ್ಲಿ ಮತ್ತೆ ಅಧ್ಯಯನ ನಡೆಸಿದರು ಹಾಲಯ್ಯಸ್ವಾಮಿಗಳು. ಒಂದು ದಿನ ಸಿದ್ಧಾರೂಢರನ್ನು ಕಾಣಲು ಎಳಂದೂರ ಬಸವಲಿಂಗಸ್ವಾಮಿಗಳು ಬಂದರು. ಯೋಗಸಾಧನೆ-ಶಿವಾನುಭವ-ಲಿಂಗಾನುಷ್ಠಾನಗಳು ಮುಪ್ಪುರಿಗೊಂಡು ಮೂರ್ತಿಯಾದಂತಿದ್ದ

ಬಸವಲಿಂಗ ಸ್ವಾಮಿಗಳು ಆರೂಢರನ್ನು ಕಾಣಲು ಬಂದ ಮುಖ್ಯ ಉದ್ದೇಶ ನಿಜಗುಣಾರ್ಯರ ಕೃತಿಯೊಳಗಿನ ಕೆಲವು ಸಂದಿಗ್ಧಗಳನ್ನು ಅವರೊಡನೆ ಚರ್ಚಿಸಿ ಪರಿಹರಿಸಿಕೊಳ್ಳುವುದಾಗಿತ್ತು. ಶಾಸ್ತ್ರಗೋಷ್ಠಿ ಆರಂಭಗೊಂಡಾಗ, ಚರ್ಚೆಯಲ್ಲಿ ಆರೂಢರು ತಮ್ಮ ಶಿಷ್ಯರನ್ನೇ ಮುಂದುಮಾಡಿದರು. ಆಗ ಅತ್ಯಂತ ಉತ್ಸಾಹದಿಂದ ಶಾಸ್ತ್ರಾರ್ಥದಲ್ಲಿ ಬಸಲಿಂಗ ಸ್ವಾಮಿಗಳ ಜೊತೆ ವಾಸ-ಸಂವಾದಗಳಲ್ಲಿ ತೊಡಗಿದರು. ಹಾಲಯ್ಯ ಸ್ವಾಮಿಗಳು. ಚರ್ಚೆಯಿಂದ ಬಸವಲಿಂಗ ಸ್ವಾಮಿಗಳಿಗೆ ತೃಪ್ತಿಯಾಗಲಿಲ್ಲ; ಚರ್ಚೆ ನಿಂತಿತು. ಆಮೇಲೆ ಸಂಚಾರಕ್ಕೆ ಹೋಗಲು ಬಸವಲಿಂಗ ಸ್ವಾಮಿಗಳು ತಂಬಿಗೆಯೊಂದನ್ನು ಕೇಳಿದಾಗ, ಹಾಲಯ್ಯಸ್ವಾಮಿಗಳ ಪ್ರವರವನ್ನೆಲ್ಲ ತಿಳಿದ ಬಸವಲಿಂಗ ಸ್ವಾಮಿಗಳು 'ಬಸವಾದಿ ಪ್ರಮಥ ನಿರೂಪಿತ ವೀರಶೈವಕ್ಕಿಂತ ಇಲ್ಲಿಯ ಆಚರಣೆ ಭಿನ್ನವಾಗಿದೆ. ಅದು ಅವರಿಗೆ ಸರಿಯಾದುದೇ. ಆದರೆ ಇಷ್ಟಲಿಂಗದ ಮೂಲಕ ಶಿವಯೋಗಸಿದ್ಧರಾಗಬಯಸುವವರಿಗೆ ಇಲ್ಲಿಯ ಆಚಾರ ಸರಿ ಹೊಂದುವುದಿಲ್ಲ' ಎಂದು ನುಡಿದಾಗ, ಹಾಲಯ್ಯನವರು 'ತಮ್ಮ ಸೇವೆಯಲ್ಲಿ ನನಗೆ ಇಂಬುಗೊಡಿ' ಎಂದು ಬೇಡಿಕೊಂಡರು. ಆರೂಢರ ಮಠದ ಆಚಾರವನ್ನು ಮೈಗೂಡಿಸಿಕೊಳ್ಳುತ್ತಿರುವ ನಿನಗೆ ವೀರಶೈವಾಚಾರ ಮಾರ್ಗವಿಚಾರದ ಕಟ್ಟುನಿಟ್ಟುಗಳನ್ನು ಇಟ್ಟುಕೊಂಡು ಸಾಧನೆ ಮಾಡುವುದು ಸಾಧ್ಯವಾಗದೆಂದು ನಾನಾವಿಧವಾಗಿ ಬಸವಲಿಂಗ ಸ್ವಾಮಿಗಳು ಹೇಳಿದರೂ ಹಾಲಯ್ಯ ಸ್ವಾಮಿಗಳು, ಧಾರ್ಮಿಕಾಚಾರದ ಕಟ್ಟುಗಳು ಎಷ್ಟೇ ಕಠಿಣವಾಗಿದ್ದರೂ ಅವುಗಳನ್ನು ಚಾಚುತಪ್ಪದೆ ಪಾಲಿಸಿಕೊಂಡು ಬರುವುದಾಗಿ ವಚನವಿತ್ತು, ತಮ್ಮನ್ನು ಶಿಷ್ಯರನ್ನಾಗಿ ಸ್ವೀಕರಿಸುವಂತೆ ದುಂಬಾಲುಬಿದ್ದರು. ಹಿಡಿದ ಪಟ್ಟು ಬಿಡದಾದರು. ಹಾಲಯ್ಯಸ್ವಾಮಿಗಳ ಸ್ವಭಾವವೇ ಅಂತಹದು. ಹಿಡಿದ ಒಳ್ಳೆಯ ಪಟ್ಟನ್ನು ಅವರು ಎಂದೂ ಬಿಡುತ್ತಿರಲಿಲ್ಲ. ಅವರದು ಉಡದ ಹಿಡಿತ.

**ಬಸವಲಿಂಗ ಸ್ವಾಮಿಗಳಿಂದ ಹಾಲಯ್ಯನ ಪರೀಕ್ಷೆ**

ಶಿವಯೋಗಾನುಷ್ಠಾನದಲ್ಲಿ ಹಾಲಯ್ಯಸ್ವಾಮಿಯವರಿಗಿದ್ದ ಗಟ್ಟಿನಂಬಿಕೆ, ಎಳಂದೂರ ಬಸವಲಿಂಗ ಸ್ವಾಮಿಗಳಿಗೆ ಮನವರಿಕೆ-ಯಾಯಿತು. ಅದನ್ನು ಸಾಧಿಸಬಲ್ಲ ಛಲ ಮತ್ತು ಮನೋಬಲಗಳೆರಡೂ ಅವರಲ್ಲಿದ್ದುದನ್ನು ತಿಳಿದ ಅವರು, ಒಬ್ಬ ಒಳ್ಳೆಯ ಶಿಷ್ಯ ಸಿಕ್ಕ ಬಗ್ಗೆ ಬಹಳ ಖುಷಿ ಪಟ್ಟರು. ಸರಿ, ಗುರು-ಶಿಷ್ಯರಿಬ್ಬರೂ ದೇಶಸಂಚಾರಕ್ಕೆ ಹೊರಟೇಬಿಟ್ಟರು. ಹುಡುಗ ಆರೂಢರಲ್ಲಿದ್ದುದರಿಂದ ಬಸವಲಿಂಗ ಸ್ವಾಮಿಗಳು ಕೂಡಲೇ ಹಾಲಯ್ಯಸ್ವಾಮಿಗಳನ್ನು ಒಳಬಳಕೆ ಹಾಗೂ ಪೂಜಾಚಾರದಲ್ಲಿ ತೆಗೆದುಕೊಳ್ಳಲಿಲ್ಲ. ಹೊರಬಳಕೆಯಲ್ಲೇ ಇರಿಸಿದರು. ಕಟ್ಟಿಗೆ ತರುವುದು, ಪಾತ್ರೆ ತಿಕ್ಕುವುದು, ಬಟ್ಟೆ-ಬರೆ ಶುದ್ಧಗೊಳಿಸುವುದು ಮುಂತಾದ ಹೊರಗೆಲಸಗಳನ್ನೇ ಹಾಲಯ್ಯನವರಿಗೆ ಮಾಡಲು ಹೇಳುತ್ತಿದ್ದರು. ಇದೊಂದು ಬಗೆಯ ಪರೀಕ್ಷೆಯೆಂಬ ಭಾವನೆಯಿಂದ ಹಾಲಯ್ಯಸ್ವಾಮಿಯವರು ಯಾವುದಕ್ಕೂ ಸ್ವಲ್ಪವೂ ಬೇಸರಪಟ್ಟುಕೊಳ್ಳದೆ ಅತ್ಯಂತ ಖುಷಿಯಿಂದ ಮನಃಪೂರ್ವಕ ಆ ಕೆಲಸಗಳನ್ನು ಮಾಡಿ ಮುಗಿಸುತ್ತಿದ್ದರು. ಅದೊಂದು ರೀತಿಯ ಗುರುಸೇವೆಯೆಂದು ಅವರು ಬಗೆದರೆ ವಿನಾ ಅನ್ಯಥಾ ಭಾವಿಸಲಿಲ್ಲ. ಬಸವಲಿಂಗ ಸ್ವಾಮಿಗಳಿಗೆ ಶಿಷ್ಯ ಹಾಲಯ್ಯಸ್ವಾಮಿಯ ಸೇವೆ ಒಪ್ಪಿತವಾಯಿತು. ಒಂದು ದಿನ ಹಾಲಯ್ಯಸ್ವಾಮಿಗೆ ಅವಶ್ಯಕ ಪ್ರಾಯಶ್ಚಿತ್ತ ವಿಧಿಯನ್ನು ಕೊಟ್ಟು ಒಳಬಳಕೆಗೆ ಸೇರಿಸಿಕೊಂಡರು. ಶಿವಾನುಭವದ ಬೋಧೆಗೆ ಶಿಷ್ಯನ ಮನ ಹದಗೊಳ್ಳುತ್ತಿರುವುದನ್ನರಿತ ಬಸವಲಿಂಗ ಸ್ವಾಮಿಗಳವರು ಅದಕ್ಕೆ ಶ್ರೀಕಾರ ಹಾಕಿದರು. ಶ್ರೀ ಬಸವಲಿಂಗ ಸ್ವಾಮಿಗಳವರದು ಕಟ್ಟಾ ಆಚಾರ. ಅಂತಹ ವ್ರತಾಚಾರಕ್ಕೆ ಸಾಧಕನಾದವನು ಆರಂಭದಲ್ಲಿ ತನ್ನನ್ನು ತಾನು ಒಡ್ಡಿಕೊಳ್ಳಬೇಕಾಗುತ್ತದೆಂದು ಅವರು ನಂಬಿದ್ದರು. ತದನಂತರವೇ ಶಿವಾನುಭವದ ಉಪದೇಶವಾಗಬೇಕೆಂದು ನಿಯಮ ಅವರದು. ತಾವು, ಬಸವಲಿಂಗ ಸ್ವಾಮಿಗಳವರಲ್ಲಿ ಪಡೆದ ತರಬೇತಿಯನ್ನೇ ಮುಂದೆ ಹಾಲಯ್ಯ ಸ್ವಾಮಿಗಳು ಕುಮಾರಸ್ವಾಮಿಗಳಾಗಿ ಶ್ರೀ ಶಿವಯೋಗಮಂದಿರ ಸ್ಥಾಪನಾನಂತರ ಅಲ್ಲಿಯ ವಟುಗಳಿಗೂ ನೀಡುತ್ತಿದ್ದುದನ್ನು ನೆನೆದರೆ, ಅಂದಿನ ಹಾಲಯ್ಯಸ್ವಾಮಿಗಳ ಮೇಲೆ ಶ್ರೀ ಬಸವಲಿಂಗ ಸ್ವಾಮಿಗಳ ಪ್ರಭಾವ ಎಷ್ಟಾಗಿರಬಹುದೆಂಬುದರ ಕಲ್ಪನೆ ಮೂಡುತ್ತದೆ. ಇಂದಿನ ಅನೇಕರಿಗೆ ಇಂತಹ ಕಟ್ಟಾಚಾರ ಅರ್ಥಹೀನವೆನಿಸಬಹುದು. ಅವುಗಳ ಅವಶ್ಯಕತೆಯಿಲ್ಲವೆಂದೂ ವಾದಿಸಬಹುದು. ಆದರೆ ದೊಡ್ಡದನ್ನು ಸಾಧಿಸಬೇಕಾದರೆ, ಶೂನ್ಯದಿಂದ ಸೃಷ್ಟಿ, ಸೃಷ್ಟಿಯಿಂದ ಶೂನ್ಯ ಸಾಧ್ಯವಾಗಬೇಕಾದರೆ ಇಂತಹ ಆಚಾರ ನಿಯಮಗಳ ಪಾಲನೆಯ ಮೂಲಕ ಕಾಯಕ್ಕೆ ಹುರಿಕಟ್ಟು ಹಾಗೂ ತರಬೇತಿ ಒದಗಿಸುವುದು ಅವಶ್ಯಕವೆನಿಸುತ್ತದೆ. ದೇಹದ ಗುಣವೇ ಸುಖಬಯಸುವುದು. ಅದಕ್ಕೆ ಸುಖವನ್ನು ಒದಗಿಸುತ್ತ ಹೋದಂತೆ ಆ ದೇಹವೇ ಪರಿಪುಷ್ಟಗೊಳ್ಳುತ್ತದೆ ಹೊರತು, ಅದನ್ನು ಆಶ್ರಯಿಸಿರುವ ಆತ್ಮ ಪರಿಪುಷ್ಟಗೊಳ್ಳದು; ವಿಕಾಸ ಸಾಧ್ಯವಾಗದು. ಆಚಾರ-ನಿಯಮಗಳ ಪಾಲನೆ ದೇಹ-ಮನ-ಬುದ್ಧಿಗಳನ್ನು ಶಿಸ್ತಿಗೊಳಪಡಿಸುತ್ತದೆ. ತನ್ಮೂಲಕ ಆತ್ಮವಿಕಾಸಕ್ಕೆ ಶ್ರೀಕಾರ ಬೀಳುತ್ತದೆ. ಎಂತಲೆ, ಮಂದಿರದಲ್ಲಿ ಕಟ್ಟಾಚಾರ, ಪಕ್ಕಾಮಡಿ, ಒಳಬಳಕೆ ಇತ್ಯಾದಿಗಳನ್ನು ಜಾರಿಯಲ್ಲಿ ತರಲಾಗಿತ್ತು. ಶಿವಯೋಗಮಂದಿರದ ಕಮ್ಮಟದಲ್ಲಿ ನಿರ್ಮಾಣಗೊಂಡು ಚಲಾವಣೆಗೆ ಬಂದ ಕೆಲವು ವಿಶಿಷ್ಟ ಅರ್ಥಪೂರ್ಣ ಶಬ್ದನಾಣ್ಯಗಳಿವು. ಅವುಗಳ ಕಲ್ಪನೆ ಮತ್ತು ಪಾಲನೆಯ ಮಹತ್ವ ಹಾಲಯ್ಯಸ್ವಾಮಿಗಳಿಗೆ ಮನವರಿಕೆಯಾದುದು ಎಳಂದೂರು ಬಸವಲಿಂಗ ಸ್ವಾಮಿಗಳ ಸೇವೆಯಲ್ಲಿ ಅವರ ಸನ್ನಿಧಿಯಲ್ಲಿ.

## ಶಂಭುಲಿಂಗನ ಬೆಟ್ಟದಲ್ಲಿ ಗುರು-ಶಿಷ್ಯರ ಅನುಷ್ಠಾನ, ಕ್ರಿಯಾದೀಕ್ಷೆ

ಗುರುಶಿಷ್ಯರಿಬ್ಬರೂ ಸಂಚರಿಸುತ್ತ ಶಂಭಲಿಂಗನ ಬೆಟ್ಟಕ್ಕೆ ಬಂದರು. ಅಲ್ಲಿಯ ಗವಿಯಲ್ಲಿ ಇಬ್ಬರೂ ಅನುಷ್ಠಾನಕ್ಕೆ ಕುಳಿತರು. ತಿಂಗಳುಗಳುರುಳಿದವು. ಶಿವಯೋಗಿಯಾದ ಮೇಲೆಯೂ ಅನುಷ್ಠಾನ ನಡೆಯಬೇಕೆಂಬ ಸತ್ಯವನ್ನು ಹಾಲಯ್ಯ ಸ್ವಾಮಿಗಳು ಆಗ ಕಂಡುಕೊಂಡು ಹರ್ಷಿತರಾದರೆ, ತಮ್ಮ ಶಿಷ್ಯನ ಆಚಾರನಿಷ್ಠ, ಧರ್ಮಾಚರಣೆ ಮತ್ತು ಲಿಂಗದಲ್ಲಿ ದೃಷ್ಟಿ-ಮನಗಳ ಕೇಂದ್ರೀಕರಣವನ್ನು ಕಂಡು ಬಸವಲಿಂಗಸ್ವಾಮಿಗಳವರು ಹಿರಿ ಹಿರಿ ಹಿಗ್ಗಿದರು. ಕ್ರಿಯೋಪದೇಶವನ್ನು ಸಹ ಆಗಲೇ ನೆರವೇರಿಸಿ ಬಿಟ್ಟರು. ಜ್ಯೋತಿಯಿಂದ ಜ್ಯೋತಿ ಬೆಳಗಿತು. ಬೆಳಕಿನ ಹೊಳೆಯಲ್ಲಿ ಇಬ್ಬರೂ ತೇಲಿ ಮುಳಗಿದರು. ಹಾಲಯ್ಯಸ್ವಾಮಿಗಳಿಗೆ ಅದೊಂದು ಅನಿರ್ವಚನೀಯ ಅನುಭವ.

## ಬಸವಲಿಂಗ ಸ್ವಾಮಿಗಳು ಅಣ್ಣಿಗೇರಿಯಲ್ಲಿ ಲಿಂಗೈಕ್ಯ

ಬೆಳಕಿನ ಪುಂಜಗಳಂತಿದ್ದ ಗುರುಶಿಷ್ಯರ ಪರ್ಯಟನ ಮತ್ತೆ ಮುಂದುವರಿಯಿತು. ಸಂಚರಿಸುತ್ತ ಸಂಚರಿಸುತ್ತ ಊರೂರಿನ ಸದ್ಭಕ್ತರನ್ನು ತಮ್ಮ ಉಪದೇಶಾಮೃತದಿಂದ ಉದ್ಧಾರ ಮಾಡುತ್ತ ಗದಗ ಜಿಲ್ಲೆಯ ಅಣ್ಣಿಗೇರಿ ಗ್ರಾಮಕ್ಕೆ ಬಂದರು. ವಿರಕ್ತ ಸ್ವಾಮಿಯ ಕರ್ತವ್ಯದ ಪರಿಚಯವನ್ನು ಶ್ರೀ ಬಸವಲಿಂಗಸ್ವಾಮಿಗಳು ಶಿಷ್ಯನಿಗೆ ನುಡಿದು ತೋರದೆ, ನಡೆದು ತೋರಿದರು. ಜಾಣಶಿಷ್ಯ, ಹಾಲಯ್ಯ ಸ್ವಾಮಿಯವರದು ಎಳೆ ಸಿಕ್ಕರೆ ಹಚ್ಚಡ ನುಂಗುವ ಸ್ವಭಾವ. ಎಂತಲೇ ಗುರು ತೋರಿದುದನ್ನು ಅವರು ಗಟ್ಟಿಯಾಗಿ ಹಿಡಿದರು; ಹಿಡಿದುದನ್ನು ಕೊನೆಯವರೆಗೂ ಬಿಡಲಿಲ್ಲ. ಲಿಂಗಾನುಷ್ಠಾನದಿಂದ ಸ್ವಾತ್ಮತೇಜಸ್ಸನ್ನು ಉಜ್ವಲಗೊಳಿಸುವುದರ ಜೊತೆಗೆ, ಭಕ್ತ ಸಮಾಜವನ್ನೂ ಉದ್ಧರಿಸಬೇಕಾದುದು ವಿರಕ್ತಸ್ವಾಮಿಯ ಕರ್ತವ್ಯವೆಂಬ ಪಾಠವನ್ನು ಆಗ ಹಾಲಯ್ಯಸ್ವಾಮಿಗಳು ಬಸವಲಿಂಗಸ್ವಾಮಿಗಳ ಜೀವನವಿಧಾನದಿಂದ ಕಂಡುಕೊಂಡರು. ಅಣ್ಣಿಗೇರಿ ಯಲ್ಲಿದ್ದಾಗಲೇ ಬಸವಲಿಂಗ ಸ್ವಾಮಿಗಳಿಗೆ ದೇಹಾಲಸ್ಯ ಉಂಟಾಗಿ, ಕೆಲದಿನಗಳಲಿಯೇ ಅವರು ಬೆಳಗಿನಲ್ಲಿ ಬೆಳಗಾಗಿ ಹೋದರು.

## ಹಾಲಯ್ಯಸ್ವಾಮಿಗಳಿಂದ ಮತ್ತೆ ಅನುಷ್ಠಾನ

ಹುಟ್ಟಿದೂರು, ಹೆತ್ತ ತಂದೆ-ತಾಯಿಗಳ ಬಂಧನವನ್ನು ನಿರಾಯಾಸವಾಗಿ ಕಿತ್ತೆಸೆದು ಬಂದ ಹಾಲಯ್ಯಸ್ವಾಮಿಗಳು ಗುರುವಿನ ಅಗಲಿಕೆಯಿಂದ ತತ್ತರಿಸಿ ಹೋದರು. ತಾಯಿಯನ್ನು ಕಳೆದುಕೊಂಡ ಕರುವಿನಂತೆ ಹಲುಬಿ ಹಂಬಲಿಸಿದರು. ಅವರ ಜೀವನ ಪಥದಲ್ಲಿ ಅಪ್ಪಳಿಸಿದ ಮೊತ್ತಮೊದಲ ಆಘಾತವದು. ಕಿಂಕರ್ತವ್ಯ ವಿಮೂಢತೆ, ಪರದೇಶಿತನದ ಅನುಭವ. ಎಲ್ಲವನ್ನೂ ಕಳೆದುಕೊಂಡ, ದಿಕ್ಕೇ ತಪ್ಪಿದ ಅನಿಸಿಕೆ. ಇಂತಹ ಸ್ಥಿತಿ ಕೆಲದಿನ ಮಾತ್ರ. ಮತ್ತೆ ಎಚ್ಚರ. ಗುರುವಿನ ಕಾರ್ಯವನ್ನು ಮುಂದುವರಿಸಿಕೊಂಡು ಹೋಗುವುದು ಶಿಷ್ಯನ ಪ್ರಪ್ರಥಮ ಕರ್ತವ್ಯವೆಂಬ ಪ್ರಜ್ಞೆ ಮೂಡಿತು. ಅದಕ್ಕೆ ಇನ್ನಷ್ಟು ತಪಶ್ಶಕ್ತಿ ಆವಶ್ಯಕವೆಂದು ಸರಿಯಾಗಿಯೇ ಪರಿಭಾವಿಸಿ ಹಾಲಯ್ಯ ಸ್ವಾಮಿಗಳವರು, ಅನುಷ್ಠಾನ ಮಾಡುವ ತಾಣವನ್ನು ಹುಡುಕುತ್ತ ನಡೆದರು. ಸೊರಬ ಪ್ರದೇಶದಲ್ಲಿ ಷಟ್ಸ್ಥಾಲ್ಯದ ಗುರುಬಸವರ ಸಮಾಧಿಯಿದ್ದ ಸ್ಥಳಕ್ಕೆ ಬಂದಾಗ ಮನಸ್ಸಿಗೆ ಏನೋ ಒಂದು ಬಗೆಯ ನೆಮ್ಮದಿ. ವಿಜಯನಗರದ ಸಾಮ್ರಾಜ್ಯವನ್ನಾಳಿದ ಮೊದಲ ಅರಸು ಮನೆತನ ಸಂಗಮರ ಕಾಲದಲ್ಲಿ ನಡೆದ ವೀರಶೈವದ ಪುನರುಜ್ಜೀವನಕ್ಕೆ ಕಾರಣೀಭೂತರಾದವರಲ್ಲಿ ಆರು ಆಧ್ಯಾತ್ಮಿಕ ಕೃತಿಗಳನ್ನು ಬರೆದ ಗುರುಬಸವರೂ ಒಬ್ಬರು. ಹಾಲಯ್ಯಸ್ವಾಮಿಗಳು ಅವರ ಸಮಾಧಿಯಿದ್ದ ಸ್ಥಳದಲ್ಲಿಯೇ ಅನುಷ್ಠಾನ ಮಾಡಲು ನಿರ್ಧರಿಸಿದರು. ಅವರ ನಿರ್ಧಾರದಿಂದ ಆ ಪ್ರದೇಶದ ಪ್ರಮುಖ ವ್ಯಕ್ತಿಗಳಾದ ಉಳವಿಮಠದ ಗುರುಬಸವಯ್ಯ, ಮಳಗದ್ದಿ ಕೆಂಡಪ್ಪಗೌಡ ಮೊದಲಾದವರಿಗೆ ಬಹಳ ಸಂತೋಷವಾಯಿತು. ಅವರಿಗೆ ಬೇಕಾದ ಅನುಕೂಲತೆಗಳನ್ನೂ ಅವರು ಒದಗಿಸಿದರು. ಹಾಲಯ್ಯಸ್ವಾಮಿಗಳು ಅನುಷ್ಠಾನದ ಸಿದ್ಧತೆಯಲ್ಲಿ ತೊಡಗಿದರು.

## ಹಾನಗಲ್ಲ ವಿರಕ್ತಮಠದ ಉತ್ತರಾಧಿಕಾರ-ಸ್ವಾಮಿ ಸೇವೆ

ಇಲ್ಲಿಂದ ಮುಂದೆ ಹಾಲಯ್ಯಸ್ವಾಮಿಗಳ ಜೀವನದ ದಿಕ್ಕನ್ನು ಬದಲಿಸುವ ಕೆಲವು ಘಟನೆಗಳು ನಡೆಯುತ್ತವೆ. ವಿರಕ್ತಿಯೇ ರಕ್ತಗತವಾದಂತಿದ್ದ ಹಾಲಯ್ಯಸ್ವಾಮಿಗಳು ಮನೆ ಬಿಡುವ ನಿರ್ಧಾರ ಕೈಕೊಂಡಾಗ ಯಾರ ಸಲಹೆಯನ್ನೂ ಪಡೆದಿರಲಿಲ್ಲ. ಯಾರೂ ಸಲಹೆಯನ್ನು ಕೊಟ್ಟಿರಲಿಲ್ಲ. ಆಗ ನಡೆದ ಒಂದು ಘಟನೆ ಅಂತಹ ನಿರ್ಧಾರಕ್ಕೆ ಕಾರಣ. ಮುಂದೆ ಅವರು ಮುಲ್ಕೀ ಪರೀಕ್ಷೆಯಲ್ಲಿ ಫೇಲಾದಾಗ ಶಿಕ್ಷಕವೃತ್ತಿ ಕೈಕೊಂಡದ್ದು, ವಿವಾಹವನ್ನು ನಿರಾಕರಿಸಿದ್ದೂ ಸ್ವಂತ ನಿರ್ಣಯದಿಂದ ಪ್ರೇರಿತರಾಗಿಯೇ. ಜೀವನಕ್ಕೊಂದು ಯೋಜನೆ ಹಾಕಿಕೊಂಡವರಂತೆ ಹಾಲಯ್ಯಸ್ವಾಮಿಗಳು ಇಲ್ಲಿ ವರ್ತಿಸಿದ್ದಾರೆ. ಆದರೆ ಆಧ್ಯಾತ್ಮಿಕ ಸಂಬಂಧಿಸಿದ ವಿಷಯಗಳಲ್ಲಿ ಸ್ವಯಂ ನಿರ್ಣಯಕ್ಕೆ ಬರುವುದು ಅವರಿಗೆ ಮೊದಮೊದಲು ಸಾಧ್ಯವಾಗಿಲ್ಲ. ಆಗ ಅವರ ಮನದ ಸಂಶಯಗಳನ್ನು ಪರಿಹರಿಸಿ ತಮ್ಮದೇ ಆದ ರೀತಿಯಲ್ಲಿ ಮಾರ್ಗದರ್ಶನ ನೀಡಿದವರು ಎಮ್ಮಿಗನೂರು ಜಡೆಯಸಿದ್ಧರು. ವೀರಶೈವೋಕ್ತ ಲಿಂಗಾನುಷ್ಠಾನ, ಆಚಾರ-ವಿಚಾರ, ಶಿವಯೋಗ ಇತ್ಯಾದಿ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಅವರನ್ನು ಕೈಹಿಡಿದು ನಡೆಸಿ ಒಮದು ಮೂರ್ತಿಯನ್ನಾಗಿ

ಮಾಡಿದವರು ಎಳಂದೂರು ಬಸವಲಿಂಗ ಸ್ವಾಮಿಗಳು. ಅವರೂ ಹಾಲಯ್ಯಸ್ವಾಮಿಗಳಿಂದ ಅಗಲಿದಾಗ, ಮುಂದಣ ನಿರ್ಧಾರ ಕೈಕೊಳ್ಳುವ ಭಾರ ಮತ್ತೆ ಹಾಲಯ್ಯಸ್ವಾಮಿಗಳ ಮೇಲೆಯೇ ಬಿತ್ತು. ಆದರೆ ಮುಂದೆಯೂ ಹಾಲಯ್ಯಸ್ವಾಮಿಗಳ ಜೀವನ ಪ್ರವಾಹದ ಗತಿ-ಗಮನಗಳನ್ನು ನಿರ್ದೇಶಿಸಿ, ಸಮಾಜ ಕಾರ್ಯಕ್ಕೆ ಅವರ ತಪೋಬಲ ಯೋಜಕಶಕ್ತಿ, ಕಾರ್ಯದಕ್ಷತೆ ಇತ್ಯಾದಿಗಳನ್ನು ಬಳಸಿಕೊಂಡ ವ್ಯಕ್ತಿಗಳು, ಶಕ್ತಿಗಳು ಇರುವುದನ್ನು ಮರೆಯಲಾಗದು. ಹಾನಗಲ್ಲ ಮಠಕ್ಕೆ ಹಾಲಯ್ಯ ಸ್ವಾಮಿಗಳು ಅಧಿಪತಿಯಾದುದು ಇಂತಹ ಕೆಲವು ವ್ಯಕ್ತಿ ಶಕ್ತಿಗಳಿಂದಾಗಿ ಎಂದು ತೋರುತ್ತದೆ.

ಅನುಷ್ಠಾನ ನಿರತರಾಗಬಯಸಿದ ಹಾಲಯ್ಯಸ್ವಾಮಿಗಳಲ್ಲಿ ಮೇಲೆ ಹೆಸರಿಸಿದ ಉಳವಿಮಠದ ಗುರುಬಸಯ್ಯ ಮತ್ತು ಕೆಂಡಪ್ಪ ಗೌಡರಿಗೆ ಅಪಾರ ಭಕ್ತಿ. ಇಷ್ಟಲಿಂಗಪೂಜಾ ಫಲವಾಗಿ ತರುಣ ಶಿವಯೋಗಿಯ ಮುಖದಲ್ಲಿ ಲಾಸ್ಯವಾಡುತ್ತಿದ್ದ ಶಿವತೇಜ, ಅಲ್ಲಿ ಗಟ್ಟಿಗೊಂಡಂತಿದ್ದ ಬ್ರಹ್ಮತೇಜ ಹಾಗೂ ಅವರ ಮಾತಿನಲ್ಲಿ ತುಂಬಿದ್ದ ಪ್ರಾಸಾದಿಕತೇಜ-ಇವುಗಳಿಗೆ ಮಾರು ಹೋಗಿದ್ದರು. ಇವರಷ್ಟೇ ಏಕೆ, ಸುತ್ತಲಿನ ಜನರೆಲ್ಲರದೂ ಅದೇ ಸ್ಥಿತಿ. ಗುರುಬಸಯ್ಯ ಹಾಗೂ ಕೆಂಡಪ್ಪಗೌಡರು ಆಗಾಗ ಆ ಭಾಗದ ಸುಪ್ರಸಿದ್ಧ ಪ್ರಾಚೀನ ಹಾನಗಲ್ಲ ವಿರಕ್ತಮಠಕ್ಕೆ ಬಂದು ಅಲ್ಲಿ ಆಗ ಶ್ರೀಗಳಾಗಿದ್ದ ಫಕೀರಸ್ವಾಮಿಗಳ ದರ್ಶನ ಪಡೆಯುತ್ತಿದ್ದುದು ರೂಢಿ. ಕರ್ನಾಟಕವನ್ನಾಳಿದ ಪ್ರಾಚೀನ ಪ್ರಮುಖ ಅರಸುಮನೆತನಗಳಲ್ಲಿ ಕದಂಬ ಅರಸು ಮನೆತನ ಮೊದಲನೆಯದು. ಕದಂಬ ವಂಶದ ಒಂದು ಶಾಖೆ ಹಾನಗಲ್ಲನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ತದನಂತರ ಆಳಿತು. ಅವರನ್ನು ಹಾನಗಲ್ಲ ಕದಂಬರದೇ ಇತಿಹಾಸಕಾರರು ಕರೆದಿದ್ದಾರೆ. ಹೀಗೆ ರಾಜಧಾನಿ ಪಟ್ಟಣವಾದ ಹಾನಗಲ್ಲ ಪ್ರಾಚೀನವಾಗಿರುವಂತೆ ಅಲ್ಲಿಯ ಪ್ರಖ್ಯಾತ ವಿರಕ್ತಮಠಕ್ಕೂ ಪ್ರಾಚೀನ ಇತಿಹಾಸವಿದೆ. ಅದು ಇಲ್ಲಿ ಪ್ರಸ್ತುತವಲ್ಲ. ಆ ವಿರಕ್ತಮಠದ ಆಗಿನ ಸ್ವಾಮಿಗಳಾಗಿದ್ದ ಫಕೀರಸ್ವಾಮಿಗಳು ತಪೋನಿಷ್ಠರು, ಅನ್ನದಾನಿಗಳು, ವೈರಾಗ್ಯಶಾಲಿಗಳು ಮತ್ತು ವಾಕ್‌ಸಿದ್ಧಿ ಪಡೆದವರು. ಆಗ ಅವರಿಗೆ ವಯಸ್ಸಾದುದರಿಂದ ತಮ್ಮ ಮಠಕ್ಕೆ ಒಬ್ಬ ಯೋಗ್ಯ ಉತ್ತರಾಧಿಕಾರಿಯ ಹುಡುಕಾಟದಲ್ಲಿದ್ದರು. ಆ ಬಗ್ಗೆ ಮೇಲೆ ಉಲ್ಲೇಖಿಸಿದ ಗುರುಬಸವಯ್ಯ ಮತ್ತು ಕೆಂಡಪ್ಪಗೌಡರ ಮುಂದೆಯೂ ಪ್ರಸ್ತಾಪವೆತ್ತಿದ್ದರು. ಕೇವಲ ಅನ್ನ ಮತ್ತು ಹಸುವಿನ ಹಾಲಿನ ಮೇಲೆ ಮೂರು ವರ್ಷ ಮೌನಾನುಷ್ಠಾನ ಮಾಡಬಯಸಿದ್ದ ಹಾಲಯ್ಯಸ್ವಾಮಿಗಳು ಹಾನಗ್ಲಲ ವಿರಕ್ತಮಠಕ್ಕೆ ಅತ್ಯಂತ ಯೋಗ್ಯರೆಂಬುದು ಅವರಿಬ್ಬರಿಗೂ ಮನವರಿಕೆಯಾಗಿತ್ತು. ಅವರನ್ನು ಶ್ರೀ ಫಕೀರಸ್ವಾಮಿಗಳ ಕಣ್ಣಿಗೆ ಹಾಕಬೇಕೆಂದು ಅವರ ಬಯಕೆ. ಮೂರುವರ್ಷ ಮೌನಾನುಷ್ಠಾನಕ್ಕೆ ತೊಡಗುವ ಪೂರ್ವದಲ್ಲಿ ಮಹಾತಪಸ್ವಿಗಳಾದ ಶ್ರೀ ಫಕೀರಸ್ವಾಮಿಗಳ ದರ್ಶನ ಪಡೆಯುವುದು ಸರಿಯಾದೀತೆಂಬ ತಮ್ಮ ಸೂಚನೆಯನ್ನು ಅವರು ಹಾಲಯ್ಯಸ್ವಾಮಿಗಳ ಮುಂದೆ ಇಟ್ಟಾಗ, ಅದಕ್ಕೆ ಅವರು ಒಪ್ಪಿ ಹಾನಗಲ್ಲ ವಿರಕ್ತಮಠದ ಶ್ರೀ ಫಕೀರಸ್ವಾಮಿಗಳ ದರ್ಶನ ಪಡೆಯಲು ಅವರೊಡನೆ ಮಠಕ್ಕೆ ಬಂದರು. ಹಾನಗಲ್ಲ ಭಕ್ತರೂ ಆಗ ಮಠದಲ್ಲಿದ್ದರು.

ಫಕೀರಸ್ವಾಮಿಗಳ ಮನದಿಂಗಿತ ಹಾಲಯ್ಯಸ್ವಾಮಿಗಳಿಗೆ ತಿಳಿದಾಗ, ಹಿಡಿದು ಅಲ್ಲಾಡಿಸಿದ ಅನುಭವ. ಮಠ-ಮಾನ್ಯಗಳ ಅಧಿಕಾರದ ಉರುಲಿಗೆ ತಮ್ಮನ್ನು ತಾವು ಸಿಕ್ಕಿಸಿಕೊಳ್ಳದೆ ಸಮಾಜಸೇವೆಯಲ್ಲಿ ತೊಡಗಿರುವ ನಿರ್ಧಾರಕ್ಕೆ ಬಂದಿದ್ದ ಹಾಲಯ್ಯನವರಿಗೆ ಆ ಕ್ಷಣ ಹಾಗಾಗಿದ್ದಲ್ಲಿ ಆಶ್ಚರ್ಯವಿಲ್ಲ. ಅದನ್ನು ಶ್ರೀಗಳಿಗೆ ಬಿನ್ನವಿಸಿಕೊಂಡುದೂ ಆಯಿತು. ಆಗ ಶ್ರೀ ಫಕೀರಸ್ವಾಮಿಗಳು 'ತಮ್ಮಾ ಸಮಾಜಸೇವೆ ಮಾಡಲು ನೀನು ಸ್ವತಂತ್ರನೇ ಇರುವಿ. ವಿರಕ್ತ ಸ್ವಾಮಿಗಳ ಮುಖ್ಯ ಕರ್ತವ್ಯಗಳಲ್ಲಿ ಸಮಾಜ ಸೇವೆಯೂ ಒಂದು. ಮಠದ ಅಧಿಕಾರ ಅದಕ್ಕೆ ಅಡ್ಡಿ ಮಾಡುತ್ತದೆಂಬ ಮಾತಿಗೆ ಅರ್ಥವಿಲ್ಲ. ಆದರೆ ನೆನಪಿಡು, ಒಂದು ಸ್ಥಾನದ ಅಧಿಕಾರಿಯಾಗದ ವಿನಾ ನಿನ್ನ ಮಾತಿನಲ್ಲಿ ಬೋಧನೆಯ ಅಧಿಕಾರ ಶಕ್ತಿ ಬರಲಾರದು. ನೀನು ಅಧಿಕಾರಸ ರೂಢನಾದರೆ ನೀನು ಲೆಕ್ಕ ಹಾಕಿರುವುದಕ್ಕಿಂತ ಹೆಚ್ಚಾಗಿ ಸಮಾಜ ಸೇವೆ ಮಾಡುವ ಅವಕಾಶ ದೊರೆತು, ಇನ್ನೂ ದೊಡ್ಡ ಪ್ರಮಾಣದಲ್ಲಿ ಸಮಾಜ ಸೇವೆ ಮಾಡುವ ಅವಕಾಶ ದೊರೆತು, ಇನ್ನೂ ದೊಡ್ಡ ಪ್ರಮಾಣದಲ್ಲಿ ಸಮಾಜ ಸೇವೆ ಮಾಡಲು ಸಾಧ್ಯವಾದೀತು' ಎಂದು ಹೇಳಿದರು. ಭಕ್ತಾದಿಗಳೂ ಪ್ರಾರ್ಥಿಸಿದರು. 'ಇದು ದೈವಲೀಲೆ, ಶಿವನ ಚಿತ್ತ, ಆಗಲಿ' ಎಂದು ಹಾಲಯ್ಯಸ್ವಾಮಿಗಳು ಒಪ್ಪಿದರಾದರೂ ಆ ಸಂದರ್ಭದಲ್ಲಿ ಅವರು ಹಾಕಿದ ಒಂದು ಷರತ್ತು, ಮಠಕ್ಕೆ ಸ್ವಾಮಿಗಳಾಗಬಯಸುವವರೆಲ್ಲರೂ ಸದಾ ಸ್ಮರಣೆಯಲ್ಲಿಡುವಂತಹದಾಗಿದೆ. 'ದರ್ಶನ ನಿಮಿತ್ತ ಮಾತ್ರ ಬಂದ ನಾನು ಒಮ್ಮೊಂದಿಮ್ಮೆ ಈ ಮಠದ ಅಧಿಕಾರಿಯಾಗುವುದು ಶಾಸ್ತ್ರ ವಾಕ್ಯಕ್ಕೂ ವಿರುದ್ಧ, ವೃದ್ಧಾಚಾರಕ್ಕೂ ದೂರ. ಆದುದರಿಂದ ನಾನು ಮೊದಲು ಕೆಲವು ದಿನ ಸದ್ಗುರು ಸೇವೆ ಮಾಡುತ್ತೇನೆ. ಆಮೇಲೆ ಗುರುಕರುಣೆಯಾದಾಗ ಅಧಿಕಾರ ಸ್ವೀಕರಿಸುತ್ತೇನೆ' ಎಂಬುದೇ ಆ ಮಾತು. ಅವರ ಈ ಮಾತಿನಲ್ಲಿ ಅತ್ಯಂತ ಮಹತ್ವಪೂರ್ಣ ಅಂಶವೊಂದಿದೆ. ಸ್ವಾಮಿಯಾಗಬಯಸುವವರು ಬರೀ ಧಾರ್ಮಿಕ ತತ್ವ-ಆಚಾರ-ವಿಚಾರಗಳನ್ನು ಓದಿ ತಿಳಿದರೆ ಸಾಲದು, ಅರ್ಚನ-ಅರ್ಪಣ-ಅನುಭಾವಗಳಲ್ಲಿ ತೊಡಗಿದರೂ ತೀರದು. ಇವೆಲ್ಲವುಗಳ ಜೊತೆಗೆ ವೃದ್ಧ ಸ್ವಾಮಿಗಳ ಸೇವಾನಿರತನಾಗಿ 'ವೃದ್ಧಾಚಾರ'ವನ್ನೂ ಪಾಲಿಸಬೇಕೆಂಬುದೆ, ಆ ಮಹತ್ವಪೂರ್ಣ ಅಂಶ. ಸಮಾಜದ ಶಕ್ತಿಯ ಕೇಂದ್ರಗಳಂತಿರುವ ಮಠಗಳಲ್ಲಿ ಅದು ಗುರುಸ್ಥಲ ಮಠವಿರಬಹುದು, ವಿರಕ್ತಮಠವಿರಬಹುದು-ಇಂತಹ ತರಬೇತಿ ಪಡೆದ ಸ್ವಾಮಿಗಳಿದ್ದರೆ ಸಮಾಜದಲ್ಲಿ ಶಕ್ತಿಚಲನೆಯುಂಟಾಗಿ, ಅದರ ಸ್ವಾಸ್ಥ್ಯ ಸಿದ್ಧಿಸಬಹುದೆಂಬುದರ ಪರಿಕಲ್ಪನೆ ಆಗಲೇ ಅವರಿಗಿದ್ದತೆಂಬುದು

ಇದರಿಂದ ವಿದಿತವಾಗುತ್ತದೆ. ಅವರ ದೂರದರ್ಶಿತ್ವ ಹಾಗೂ ಯೋಜಕಶಕ್ತಿಗಳು ನಿಜಕ್ಕೂ ಅಸಮಾನ್ಯ, ಅವರ ಪರತ್ತಿಗೆ ಸ್ವಾಮಿಗಳೂ ಭಕ್ತರೂ ಒಪ್ಪಿದರು.

ಶ್ರೀ ಫಕೀರಸ್ವಾಮಿಗಳವರ ಸೇವೆ ಹಾಲಯ್ಯಸ್ವಾಮಿಗಳವರಿಂದ ಮುಂದುವರಿಯಿತು. ಅವರದು ತನುಮುಟ್ಟಿ ಮನಮುಟ್ಟಿ ಮಾಡುವ ಸೇವೆಯಾಗಿತ್ತೇ ವಿನಾ ತೋರಿಕೆಯ ಸೇವೆಯಾಗಿರಲಿಲ್ಲ. ಗುರುಸೇವೆಯ ಜೊತೆಗೆ ಸಮಾಜಸೇವೆ ಮಾಡುವುದನ್ನವರು ಮರೆಯಲಿಲ್ಲ. ಮೊದಲಿನಿಂದಲೂ ಮಠದಲ್ಲಿ ನಡೆದುಬರುತ್ತಿದ್ದ ದಾಸೋಹ ಇನ್ನಷ್ಟು ಸುವ್ಯವಸ್ಥೆಗೊಂಡು, ಅದು ಹೊಸಶಕ್ತಿ, ಹೊಸರೂಪ ಪಡೆಯಿತು. ಮಲೆನಾಡಿನ ಆ ಭಾಗದ ಭಕ್ತರ ಬಯಕೆಯಂತೆ ಸಂಚಾರ ಕೈಕೊಂಡು ವಿಶ್ವಧರ್ಮವಾಗಲು ಯೋಗ್ಯವಾದ ವೀರಶೈವ ಸಂಸ್ಕೃತಿ, ತತ್ವ; ಅದರ ಅನುಯಾಯಿಗಳು ಅಳವಡಿಸಿಕೊಳ್ಳಬೇಕಾದ ರೀತಿ-ನೀತಿ, ಆಚಾರ-ವ್ಯವಹಾರಗಳ ಬಗ್ಗೆಯೂ ಬೋಧಿಸುತ್ತ ಧರ್ಮ ಜಾಗೃತಿ ಕಾರ್ಯದಲ್ಲಿ ನಿರತರಾದರು.

### ಬಿದರಿ ಕುಮಾರಸ್ವಾಮಿಗಳಿಂದ ಪೀಠಾಧಿಕಾರ ಪ್ರದಾನ

ಒಂದು ಸಲ ಹಾಲಯ್ಯಸ್ವಾಮಿಗಳು ಧರ್ಮಬೋಧನಾ ನಿಮಿತ್ತ ಬಹುದೂರ ಪ್ರಯಾಣ ಬೆಳೆಸಿದ್ದರು. ಇತ್ತ ಹಾನಗಲ್ಲ ವಿರಕ್ತಮಠಕ್ಕೆ ಮಹಾಮಹಿಮರಾದ ಬಿದರಿ ಶ್ರೀ ಕುಮಾರ ಸ್ವಾಮಿಗಳವರು ಯಾವುದೋ ಕಾರ್ಯನಿಮಿತ್ತ ದಯಮಾಡಿಸಿದ್ದರು. ಆಗ ತಾವು ಲಿಂಗದೊಳಗಾಗುವ ಸಮಯ ಸಮೀಪಿಸಿದುದನ್ನರಿತ ಶ್ರೀ ಫಕೀರಸ್ವಾಮಿಗಳವರು ಕೂಡಲೆ ಗ್ರಾಮದ ಸಕಲ ಭಕ್ತರನ್ನು, ನಾಡಪ್ರಮುಖರನ್ನು ಕರೆಯಿಸಿ 'ಈ ಮಠದ ಎಲ್ಲ ಭಾರವನ್ನು ನಾವು ಈಗ ಬಿದರಿ ಶ್ರೀ ಕುಮಾರಸ್ವಾಮಿಗಳಿಗೆ ಒಪ್ಪಿಸಿಕೊಡುತ್ತೇವೆ. ಅವರು ಯಾರಿಗೆ ಮಠದ ಅಧಿಕಾರವನ್ನು ಒಪ್ಪಿಸಿಕೊಡುತ್ತಾರೋ ಅವರನ್ನು ನೀವು ಒಪ್ಪಿ, ಅವರಿಗೂ ಮಠಕ್ಕೂ ಎಂದಿನಂತೆ ಭಕ್ತಿಯಿಂದ ನಡೆದುಕೊಂಡು ಪರಮಾತ್ಮನ ಕೃಪೆಗೆ ಪಾತ್ರರಾಗಬೇಕು' ಎಂದು ಅಪ್ಪಣೆ ಕೊಡಿಸಿ ಲಿಂಗೈಕ್ಯರಾದರು. ಬಿದರಿ ಶ್ರೀಗಳವರು ಕೆಲ ದಿನ ಅಲ್ಲಿಯೇ ಉಳಿದು, ಹಾಲಯ್ಯ ಸ್ವಾಮಿಗಳನ್ನು ಬರಮಾಡಿ ಕೊಂಡು ಎಲ್ಲ ಭಕ್ತರ ಸಮಕ್ಷಮದಲ್ಲಿ ಹಾನಗಲ್ಲ ವಿರಕ್ತಮಠದ ಉತ್ತರಾಧಿಕಾರವನ್ನು ಅವರಿಗೆ ಒಪ್ಪಿಸಿ ಶ್ರೀ ಸದಾಶಿವ ಸ್ವಾಮಿಗಳೆಂದು ಹೆಸರಿಟ್ಟರು. ಹೀಗೆ ಹಾಲಯ್ಯ, ಹಾಲಯ್ಯಸ್ವಾಮಿಯಾಗಿ ಹಾನಗಲ್ಲ ವಿರಕ್ತಮಠದ ಪೀಠಾಧಿಕಾರಿಗಳಾದ ಮೇಲೆ ಕುಮಾರಸ್ವಾಮಿ (ಸದಾಶಿವಸ್ವಾಮಿ) ಆದರು.

### ಧರ್ಮ ಪ್ರಚಾರ- ವಿದ್ಯಾವಂತರ ಸಂಪರ್ಕ

ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರು ಸದಾ ಚಿಂತಿಸುತ್ತಿದ್ದುದ ಸಮಾಜವನ್ನು ಕುರಿತು. ಎಡದ ಕೈ ಇಷ್ಟಲಿಂಗಕ್ಕೆ ಪೀಠವಾಗಬೇಕು, ಬಲದ ಕೈ ಸಮಾಜಕ್ಕೆ ಅಭಯ ಹಸ್ತವಾಗಬೇಕು. ಹೀಗೆ ವ್ಯಷ್ಟಿ-ಸಮಷ್ಟಿಗಳ ಉದ್ಧಾರವೇ ವೀರಶೈವ ವಿರಕ್ತಪೀಠ ಹಾಗೂ ಗುರುಪೀಠದ ಸ್ವಾಮಿಗಳ ಧ್ಯೇಯವಾಗಿರಬೇಕು. ಇದು ವೀರಶೈವ ಮಠಗಳು ಆದಿ ಬುನಾದಿಯಿಂದಲೂ ಇಟ್ಟುಕೊಂಡು ಬಂದ ಉದ್ದೇಶವೆಂಬುದನ್ನು ಸ್ವಾಮಿಗಳಾದವರಲ್ಲಿ ಪ್ರಥಮತಃ ಬಿಂಬಿಸಬೇಕಾಗಿತ್ತು. ಏಕೆಂದರೆ ಸ್ವಾಮಿಗಳಾದವರು ಆಗ ತಮ್ಮ ಕರ್ತವ್ಯದಿಂದ ಸಂಪೂರ್ಣ ವಿಮುಖರಾಗಿ ಸಮಾಜದ ಬಗೆಗಿನ ಕಾಳಜಿಯನ್ನೇ ಕಳೆದುಕೊಂಡಿದ್ದರು. ತಮ್ಮ ತಮ್ಮಲ್ಲಿಯೇ ಜಗಳ, ತಂಟೆ, ತತ್ಫಲವಾಗಿ ಭಕ್ತ ಸಮುದಾಯದಲ್ಲೂ ಪಂಗಡಗಳು. ಅಂದಿನ ಪರಿಸರ ಎಷ್ಟು ಕಲುಷಿತವಾಗಿತ್ತೆಂಬುದನ್ನು ಈ ಮೊದಲೇ ತಿಳಿಸಿದೆ. ಅದನ್ನು ತಿಳಿಗೊಳಿಸಲು ಹಾನಗಲ್ಲ ಕುಮಾರ ಶ್ರೀಗಳವರು ಕಂಕಣಬದ್ಧರಾದರು. ಮಠದ ಅಧಿಕಾರ ಸಮಾಜಕ್ಕೆ, ಸಮಾಜದವರಿಗೆ ಒಂದು ಬಗೆಯಿಂದ ಆಜ್ಞೆ ಮಾಡುವ ಅಧಿಕಾರವನ್ನೂ ಈಗ ಅವರಿಗೆ ತಂದುಕೊಟ್ಟಿತ್ತು. ಹಾನಗಲ್ಲ ಪ್ರಾಂತದಲ್ಲಿ ಸಂಚಾರ ಕೈಕೊಂಡು ಧರ್ಮಪ್ರಚಾರ ಕಾರ್ಯದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ವೀರಶೈವ ತತ್ವ, ಆಚಾರ, ಆಚಾರ-ವಿಚಾರಗಳ ಆಳವಾದ ಪರಿಚಯ, ಸಾಮಾಜಿಕ ಮೌಲ್ಯಗಳ, ಸಮಾಜ ರಚನೆಯ ಪರಿಪೂರ್ಣ ಪರಿಜ್ಞಾನ ಸ್ವಾಮಿಗಳಾಗುವವರಿಗೆ ಉಂಟಾಗಬೇಕಾದರೆ ಕನ್ನಡ ವೀರಶೈವ ಕೃತಿಗಳ ಅಧ್ಯಯನದ ಜೊತೆಗೆ ಸಂಸ್ಕೃತ ವೀರಶೈವ ಕರತಿಗಳ ಅಧ್ಯಯನ-ಅಧ್ಯಾಪನಗಳು ನಡೆಯಬೇಕಾದುದು ಅವಶ್ಯವೆಂಬುದನ್ನು ಮನಗಂಡ ಶ್ರೀಕುಮಾರ ಸ್ವಾಮಿಗಳವರು ತಮ್ಮ ಹಾನಗಲ್ಲ ಮಠದಲ್ಲಿಯೇ ಒಂದು ಸಂಸ್ಕೃತ ಪಾಠಶಾಲೆ ಆರಂಭಿಸಿ ೨೦-೨೫ ಜನ ವಿದ್ಯಾರ್ಥಿಗಳಿಗೆ ಪಾಠ, ಪ್ರವಚನ, ಪ್ರಸಾದ ಹಾಗೂ ವಸತಿಗಳ ಸೌಲಭ್ಯ ಒದಗಿಸಿದರು. ಶ್ರೀಗಳವರ ಈ ಬಗೆಯ ತತ್ವಪ್ರಚಾರ, ತತ್ವಬೋಧೆ, ಧರ್ಮಜಾಗೃತಿ ಮತ್ತು ವಿದ್ಯಾಪ್ರಸಾರ ಕಾರ್ಯಗಳು ಹಾನಗಲ್ಲ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದರೂ ಅವು ಕರ್ನಾಟಕದ ಇತರ ಭಾಗದ ಸ್ವಾಮಿಗಳವರ, ಧಾರ್ಮಿಕ ಮುಖಂಡರ ಹಾಗೂ ಸಮಾಜದ ಬಗ್ಗೆ ಕಾಳಜಿಯುಳ್ಳವರ ಆಸಕ್ತಿಯನ್ನು ಕೆರಳಿಸಿದವು. ಸಮಾಜದ ಹಿತಚಿಂತನೆಗೆ ಬದ್ಧವಾದ ಒಂದು ಚೇತನ ಪ್ರಾದುರ್ಭವಿಸಿದೆ. ಇದು ಒಂದು ಅತ್ಯಂತ ಶುಭಲಕ್ಷಣ. ಆ ಚೇತನಕ್ಕೆ ಸಹಾಯ-ಸಹಕಾರ ನೀಡುವುದು. ಅದರ ಕೈ ಬಲಪಡಿಸುವುದು ತಮ್ಮ ಕರ್ತವ್ಯವೆಂಬ ಪ್ರಜ್ಞೆ ಅನೇಕರಲ್ಲಿ ಮೂಡಿ, ಅವರ ಕಣ್ಣುಗಳು ಹಾನಗಲ್ಲ ಶ್ರೀಗಳವರತ್ತ ಹೊರಳಿದವು. ಸಮಾಜದ ಬಹುಸಂಖ್ಯಾತ ಶ್ರೀಸಾಮಾನ್ಯರಿಗಂತೂ ಶ್ರೀಗಳವರ ಕಾರ್ಯ ಹಿಂದೆಂದೂ ಕೇಳಿ ಕಂಡರಿಯದಂತಹುದು. ಅವರಿಗೆ ಎಲ್ಲಿಲ್ಲದ ಕುತೂಹಲ, ಆಶ್ಚರ್ಯ ಮತ್ತು ಅವರ ಬಗ್ಗೆ ಅಪಾರ ಭಕ್ತಿ-ಗೌರವ.

ಅಂದು ಸಮಾಜದಲ್ಲಿದ್ದ ಬೆರಳೆಣಿಕೆಯ ವಿದ್ಯಾವಂತರು ಕೂಡ ಸಮಾಜ ಸಂಮುಖಿ ಜನತಾಂತರ್ದೃಷ್ಟಿಯ ಈ ಸ್ವಾಮಿಯಲ್ಲಿ ಒಂದು ಆಶಾಕಿರಣ ಕಾಣಲಾರಂಭಿಸಿದರು. ಅಧಿಕಾರಿವರ್ಗ ಹಾಗೂ ಶ್ರೀಮಂತವರ್ಗಕ್ಕೂ ಶ್ರೀಗಳವರು ಜಿಜ್ಞಾಸೆಯ ವಸ್ತುವಾದರು. ಹೀಗೆ ಎಲ್ಲರ ಗಮನವನ್ನು ತಮ್ಮ ಪವಿತ್ರ ಚಾರಿತ್ರ್ಯ, ತಪೋಬಲ, ಯೋಜನಾಬದ್ಧ ಕಾರ್ಯಕ್ರಮ ಹಾಗೂ ಕ್ರಿಯಾಮೂಲ ಸಮಾಜ ಹಿತಚಿಂತನೆಯ ಮೂಲಕ ಶ್ರೀಗಳು ಸೆಳೆದ ಪರಿಣಾಮವಾಗಿ ಅನೇಕರು ಅವರ ದರ್ಶನಕ್ಕಾಗಿ ಬರಲಾರಂಭಿಸಿದರು. ಸಮಾಜದ ಎಲ್ಲ ಸ್ತರದ ಜನರಿಂದ ಈ ಬಗೆಯ ಉತ್ತೇಜಕ ಪ್ರತಿಕ್ರಿಯೆ ದೊರೆಯಬಹುದೆಂದು ಶ್ರೀಗಳು ಭಾವಿಸಿದ್ದರೋ ಇಲ್ಲವೋ!

## ಸಮಾಜದ ಉದ್ಧಾರ ಕುರಿತು ವಿದ್ಯಾವಂತರೊಡನೆ ಚರ್ಚೆ

ಸಮಾಜದಲ್ಲಿ ಈ ರೀತಿ ನಿರ್ಮಾಣಗೊಂಡ ಆಶಾದಾಯಕ ವಾತಾವರಣದ ಸದುಪಯೋಗ ಪಡೆಯಲು ಶ್ರೀಕುಮಾರ ಸ್ವಾಮಿಗಳವರು ನಿರ್ಧರಿಸಿದರು. ಈ ರೀತಿಯಲ್ಲಿ ಅವರು ಯೋಜಿಸಿದ ಮೊದಲ ಕಾರ್ಯಕ್ರಮವೆಂದರೆ ವಿದ್ಯಾವಂತರನ್ನು ಸಂಪರ್ಕಿಸುವುದು. ಸಂಚಾರಕ್ಕೆ ಹೋದಡೆಯಲ್ಲೆಲ್ಲಾ ಅವರು ವಿದ್ಯಾವಂತರನ್ನು ಬರಮಾಡಿಕೊಂಡು. ಅವರ ಜೊತೆ ಸಮಾಲೋಚನೆ ನಡೆಸಿ ಸಮಾಜದ ಬಗ್ಗೆ ಅವರಲ್ಲಿ ಕಳಕಳಿಯನ್ನೂ ಅಭಿಮಾನವನ್ನೂ ಮೂಡಿಸಿ, ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವಲ್ಲಿ ಯಶಸ್ವಿಯಾದರು. ಶ್ರೀಗಳವರ ಆಲೋಚನೆಗಳು, ಸಮಾಜೋದ್ಧಾರದ ಬಗ್ಗೆ ಅವರು ಹಾಕಿಕೊಂಡ ಯೋಜನೆಯ ರೂಪರೇಷೆಗಳು ಅವರಿಗೆ ಬಹಳ ಒಪ್ಪಿಗೆಯಾದವು. ಅಧಿಕಾರಿ ವರ್ಗದವರಿಗೂ ಅಷ್ಟೇ. ಕೆಲವು ಜನ ವಿದ್ಯಾವಂತರಿಂದ ಸಲಹೆಗಳೂ ಬಂದವು. ಅವುಗಳಲ್ಲಿ ಬಹುಮುಖ್ಯವಾದುದು ಇಡೀ ಸಮಾಜವನ್ನೇ ಪ್ರತಿನಿಧಿಸುವ ಒಂದು ಅತ್ಯಂತ ಜವಾಬ್ದಾರಿಯುತ ಸಂಸ್ಥೆಯೊಂದನ್ನು ಸ್ಥಾಪಿಸಿ, ಅದರ ಮೂಲಕ ಸಮಾಜ ಸುಧಾರಣೆಯ ಕಾರ್ಯಗಳನ್ನು ನೆರವೇರಿಸಿದರೆ ಹೆಚ್ಚು ವ್ಯಾಪ್ತಿ ಅದಕ್ಕೆ ಬರುತ್ತದೆಂಬುದು. ಶ್ರೀಕುಮಾರ ಸ್ವಾಮಿಗಳವರಿಗೂ ಇದು ಹೆಚ್ಚು ಸಮಂಜಸವೆನಿಸಿ ಆ ಬಗ್ಗೆ ಆಲೋಚನಾ ಸಭೆಯೊಂದನ್ನು ಏರ್ಪಡಿಸಲು ನಿರ್ಧರಿಸಿದರು. ಪವಿತ್ರ ನಿರ್ಧಾರ ಬೇಗ ಕೈಗೂಡುತ್ತದೆಂಬ ಅನುಭವವಾಣಿಯನ್ನು ಸತ್ಯಗೊಳಿಸುವಂತೆ ೧೯೦೩ರಲ್ಲಿ ಧಾರವಾಡದಲ್ಲಿ ಒಂದು ಪ್ರಾಂತೀಯ ಪರಿಷತ್ತು ಶ್ರೀಯುತ ಖರೆ ಅವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಅದಕ್ಕೆ ಹಲವಾರು ಜನ ವೀರಶೈವ ಮುಖಂಡರೂ ಪ್ರಮುಖ ವ್ಯಾಪಾರಸ್ಥರೂ ವಿದ್ಯಾವಂತರೂ ಬಂದಿದ್ದರು. ಅವರಲ್ಲಿ ಅನೇಕರಿಗೆ ಒಂದೇ ವಸತಿಗೃಹದಲ್ಲಿರುವಂತೆ ಏರ್ಪಾಡಾಗಿತ್ತು. ಕುಮಾರ ಶ್ರೀಗಳವರ ಸಂಪರ್ಕಕ್ಕೆ ಬಂದ ಕೆಲವರೂ ಅದರಲ್ಲಿದ್ದರು. ಅದರಿಂದಾಗಿ ಸಹಜವಾಗಿಯೇ ವೀರಶೈವದ ಹಿತಾಹಿತಗಳನ್ನು ಕುರಿತಂತೆ ಅವರಲ್ಲಿ ಚರ್ಚೆ ನಡೆಯುತ್ತಿತ್ತು. ಆ ಚರ್ಚೆಯಲ್ಲಿ ಮೂಡಿಬಂದ ಒಂದು ಒಟ್ಟಾಭಿಪ್ರಾಯವೆಂದರೆ, ರಾಜಕೀಯ ಪ್ರಾಂತೀಯ ಪರಿಷತ್ತು ಹೇಗೆ ಸೇರಿ ಪ್ರಾಂತಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತದೆಯೋ ಅದೇ ರೀತಿ ವೀರಶೈವರ ಸಮಸ್ಯೆಗಳ ಪರಿಹಾರಕ್ಕೂ ಒಂದು ಪರಿಷತ್ತು ಸ್ಥಾಪನೆಯಾಗಬೇಕೆಂಬುದು.

## ವೀರಶೈವ ಮಹಾಸಭೆಯ ಸ್ಥಾಪನೆ

ಹಾನಗಲ್ಲ ಶ್ರೀಗಳವರಿಗೆ ಈ ಸುದ್ದಿ ತಿಳಿದ ಕೂಡಲೆ ಕಾರ್ಯತತ್ಪರರಾದರು. ಕರ್ನಾಟಕದ ಬಹುತೇಕ ಭಾಗಗಳಿಂದ ಬಂದು ಧಾರವಾಡದಲ್ಲಿ ಸೇರಿದ ಆ ಮಹತ್ವಪೂರ್ಣ ವೀರಶೈವ ವ್ಯಕ್ತಿಗಳ ಸಮಾವೇಶವನ್ನು, ಕುಮಾರಸ್ವಾಮಿಗಳವರು ತಮ್ಮ ಉದ್ದೇಶ ಸಾಧನೆಗಾಗಿ ಉಪಯೋಗಿಸಿಕೊಳ್ಳದೆ ಬಿಡಲಿಲ್ಲ. ವೀರಶೈವರ ಹಿತಚಿಂತನೆಯ ಬಗ್ಗೆ ಅವರಲ್ಲಿ ಎರಿದ ಕಾವನ್ನು ಅವರು ಆರಗೊಡಲಿಲ್ಲ. ಕಬ್ಬಿಣ ಬಿಸಿಯಾಗಿರುವಾಗಲೇ ಪೆಟ್ಟುಕೊಟ್ಟು ತಮಗೆ ಬೇಕಾದ ರೂಪಕ್ಕೆ ಅದನ್ನು ತಿರಿಗಿಸಿಕೊಳ್ಳಬೇಕೆಂಬ ನೀತಿ ಅವರದು. ಆದುದರಿಂದ ಒಂದೇ ವಾರದ ಅವಧಿಯಲ್ಲಿ ಧಾರವಾಡದಲ್ಲಿಯೇ ಸುಮಾರು ೨೦-೩೦ ಜನ ವೀರಶೈವ ಪ್ರಮುಖರ ಸಭೆ ಸೇರುವಂತೆ ಶ್ರೀಗಳವರು ಇತರರ ಸಹಾಯದಿಂದ ಪ್ರಯತ್ನಿಸಿ, ಅದರಲ್ಲಿ ಯಶಸ್ವಿಯಾದರು. ಆ ಸಭೆಯಲ್ಲಿ ವೀರಶೈವ ಮಹಾಸಭೆಯೊಂದನ್ನು ೧೯೦೪ರಲ್ಲಿ ಮೇ ತಿಂಗಳಲ್ಲಿ ಶ್ರೀಮಂತ ಶಿರಸಂಗಿ ಲಿಂಗರಾಜರ ಅಧ್ಯಕ್ಷತೆಯಲ್ಲಿ ನೆರವೇರಬೇಕೆಂದು ನಿರ್ಧರಿಸಲಾಯಿತು. ಹಾನಗಲ್ಲ ಕುಮಾರಸ್ವಾಮಿಗಳವರ ಸಾಮಾಜಿಕ ಹಾಗೂ ಧಾರ್ಮಿಕ ಚಟುವಟಿಕೆಗಳನ್ನು ಪ್ರತ್ಯಕ್ಷ ಕಂಡ ಶ್ರೀ ಹರ್ಡೇಕರ ಮಂಜಪ್ಪನವರು ವೀರಶೈವ ಮಹಾಸಭೆಯ ಸ್ಥಾಪನೆಯ ಕಾರ್ಯದಲ್ಲಿ ಶ್ರೀಗಳವರು ವಹಿಸಿದ ಪ್ರಮುಖ ಪಾತ್ರವನ್ನು ಕುರಿತು 'ಕ್ರಿ.ಶ. ೧೯೦೪ರಲ್ಲಿ ಮಹಾಸಭೆಯನ್ನು ಧಾರವಾಡದಲ್ಲಿ ಸ್ಥಾಪಿಸುವ ಮುಂಚೆಯೆ ೧೯೦೩ರಲ್ಲಿ ಒಂದು ಆಲೋಚನಾಸಭೆಯನ್ನು ಕೂಡಿಸಿ ಸಮಾಜದ ಪ್ರಮುಖರ ಸಲಹೆ ಸೂಚನೆಗಳನ್ನು ತಿಳಿದುಕೊಂಡುದು ಸ್ವಾಮಿಗಳಲ್ಲಿದ್ದ ಅಸಾಧಾರಣವಾದ ಕಾರ್ಯ ಚಾತುರ್ಯವನ್ನು ವ್ಯಕ್ತಗೊಳಿಸುತ್ತದೆ. ಆ ಮಹಾಸ್ವಾಮಿಗಳವರ ನೇತೃತ್ವದಲ್ಲಿಯೆ ಮೊದಲ ಆರೇಳು ಸಭೆಗಳು ಜರುಗಿದವು. ಆ ಕಾಲದಲ್ಲಿಯೆ ವೀರಶೈವರಲ್ಲಿ ಮಹಾಸಭೆಯಿಂದ ಅತ್ಯಂತ ಪರಿಣಾಮಕಾರಿಯಾದ ಜಾಗೃತಿಯುಂಟಾಯಿತು' ಎಂದು ಹೇಳಿರುವುದನ್ನು ಗಮನಿಸಬೇಕು. ವೀರಶೈವ ಮಹಾಸಭೆಯ ಅಧಿವೇಶನದಲ್ಲಿಯೇ ಕೈಕೊಂಡ ವಿದ್ಯಾಭಿವೃದ್ಧಿ ನಿಧಿಯ ಯೋಜನೆಯ ಅಂಗವಾಗಿ 'ಲಿಂಗಾಯತ ವಿದ್ಯಾವರ್ಧಕ ಫಂಡ್' ಸ್ಥಾಪನೆಗೊಂಡು, ವೀರಶೈವರಲ್ಲಿ ಆಂಗ್ಲವಿದ್ಯಾಭ್ಯಾಸ ಮಾಡಬಯಸುವವರಿಗೆ ಹೆಚ್ಚು ಸಹಾಯಕಾರಿಯಾಯಿತು.

## ವೀರಶೈವ ಧರ್ಮೋತ್ತೇಜಕ ಸಭೆಯ ಸ್ಥಾಪನೆ-ಧಾರ್ಮಿಕ ಜಾಗೃತಿ

ವೀರಶೈವ ಮಹಾಸಭೆ ಸ್ಥಾಪನೆಗೊಂಡ ಮೂರು ನಾಲ್ಕು ವರ್ಷಗಳಲ್ಲಿಯೆ ಸಮಾಜಕ್ಕೆ ಬಹಳ ಉಪಯುಕ್ತ ಕಾರ್ಯ ನಿರ್ವಹಿಸುವುದನ್ನು ಕಂಡು ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರಿಗೆ ಹಿಗ್ಗೋ ಹಿಗ್ಗು. ಅದು ಸಮಾಜಕ್ಕೆ ಅತ್ಯಂತ ಹಿತಕಾರಿಯಾದಂತಹ ಸಂಸ್ಥೆಯೆಂದು ಅವರು ದೃಢವಾಗಿ ನಂಬಿದ್ದರು. ಮುಂದೆ ಮಹಾಸಭೆಯಲ್ಲಿ ಆಧುನಿಕ ಆಂಗ್ಲವಿದ್ಯಾ ಪದವೀಧರರು ಹೆಚ್ಚು ಹೆಚ್ಚು ಭಾಗವಹಿಸುತ್ತ ನಡೆದಂತೆ ಅಲ್ಲಿ ಧಾರ್ಮಿಕ ವಿವೇಚನೆಗೆ ಆಸ್ಪದ ಕಡಿಮೆಯಾಗುತ್ತ ಬಂದಿತು. ಮಹಾಸಭೆಯ ಕಾರ್ಯ ಕಲಾಪಗಳ ಕೆಲವು ರೀತಿ ನೀತಿಗಳೂ ಶ್ರೀಗಳವರಿಗೆ ತೃಪ್ತಿಕರವಾಗಿ ತೋರಲಿಲ್ಲವೆನಿಸುತ್ತದೆ. ಆ ಬಗ್ಗೆ ಅವರು ಮಹಾಸಭೆಯಲ್ಲಿ ವಾದ ವಿವಾದಕ್ಕಿಳಿಯಬಯಸಲಿಲ್ಲ. ಏಕೆಂದರೆ ಲೌಕಿಕ ಸುಧಾರಣೆಗೆ ಮಹಾಸಭೆಯು ಅಗತ್ಯವೆಂದು ಅವರು ತಿಳಿದಿದ್ದರು. ಆದುದರಿಂದ ಶ್ರೀಗಳು 'ವೀರಶೈವ ಧರ್ಮೋತ್ತೇಜಕ ಸಭೆ' ಎಂಬ ಹೊಸ ಸಂಘವನ್ನೆ ಸ್ಥಾಪಿಸಿ ಅದರ ಮೂಲಕ ಧಾರ್ಮಿಕ ಜಾಗೃತಿಯ ಕಾರ್ಯಗಳನ್ನು ಕೈಕೊಂಡರು. ಹಿರಿದಾದ ಹೃದಯದ ಅವರು ತಮ್ಮ ಉದ್ದೇಶದ ಒಂದು ಭಾಗವಾಗಿದ್ದ ಆ ಮಹಾಸಭೆಯ ಮೂಲಕವೂ ನೆರವೇರುವ ನಂಬಿಗೆಯುಳ್ಳವರಾಗಿದ್ದರಿಂದ, ಅದನ್ನು ಅದರ ಪಾಡಿಗೆ ಬಿಟ್ಟು, ತಾವು ಬೇರೊಂದು ಸಂಸ್ಥೆಯನ್ನೇ ಕಟ್ಟಿಕೊಂಡರು. ಕುಮಾರಶ್ರೀಗಳವರಿಗೆ ಮಹಾಸಭೆಯನ್ನು ನಡೆಸಿಕೊಂಡು ಹೋಗುವ ಸಮರ್ಥರು ಅದರಲ್ಲಿರುವೆಂಬ ವಿಶ್ವಾಸ ಮೂಡಿತ್ತು. ಹೊಸಯುಗಕ್ಕನುಗುಣವಾದ ವಿದ್ಯಾಭ್ಯಾಸ ನಡೆಯಬೇಕು. ನಮ್ಮ ಸಮಾಜದವರಿಗೂ ಅದು ದೊರೆಯುವಂತಾಗಬೇಕು. ಆ ದಿಶೆಯಲ್ಲಿ ವೀರಶೈವ ಮಹಾಸಭೆ ಕಾರ್ಯನಿರತವಾದುದಕ್ಕೆ ಅವರಿಗೆ ಸಂತೋಷವಾಯಿತಷ್ಟೇ ಅಲ್ಲ, ಅದರ ಕಾರ್ಯಕಲಾಪಗಳಲ್ಲಿ ವಿಘ್ನಗಳೊದಗಿದರೆ ಅವರು ಪರಿತಪಿಸುವಷ್ಟು ಬೇರಾರೂ ಪರಿತಪಿಸಿರಲಿಲ್ಲ. ಬಳ್ಳಾರಿಯಲ್ಲಿ ನಡೆದ ಮಹಾಸಭೆಗೆ ಅಂತಹ ವಿಘ್ನಗಳು ಒದಗಿದಾಗ ಶ್ರೀಕುಮಾರ ಸ್ವಾಮಿಗಳವರು ಪೂಜಾದಿ ನಿತ್ಯಕ್ರಿಯೆಗಳನ್ನು ಬಿಟ್ಟು, ಅವರಲ್ಲಿ ಇವರಲ್ಲಿ ಓಡಾಡಿ, ಅದನ್ನು ಸಾಂಗಗೊಳಿಸಿದುದನ್ನು ಇಲ್ಲಿ ನೆನೆಯಬಹುದು.

ವೀರಶೈವ ಮಹಾಸಭೆಯ ಸ್ಥಾಪನಾನಂತರ, ಸಾಮಾಜಿಕ ಕಾರ್ಯ ಚಟುವಟಿಕೆಗಳಿಗೆ ಒಂದು ಹೊಸ ಆಯಾಮ ತೆರೆದುಕೊಂಡಿತು. ಅವು ಆ ಮಹಾಸಭೆಯ ಮೂಲಕ ನೆರವೇರಲಾರಂಭಿಸಿದವು. ಅದರಿಂದ ಶ್ರೀಗಳವರಿಗೆ ತೃಪ್ತಿಯಾದರೂ ಅದು ಸಂಪೂರ್ಣ ತೃಪ್ತಿಯಿಲ್ಲ. ವೀರಶೈವ ಸಮಾಜ ಪುರುಷನ ಜೀವಜೀವಾಳವಾದ ಶಿವಯೋಗ, ಶಿವಾನುಭವಗಳ ಬಗ್ಗೆ ಅವರ ಗುರುಗಳಾದ ಎಳಂದೂರು ಬಸವಲಿಂಗ ಸ್ವಾಮಿಗಳವರು ಅಪ್ಪಣೆ ಕೊಡಿಸಿದ್ದು ಇನ್ನೂ ಪೂರ್ಣವಾಗಬೇಕಿತ್ತು. ವೀರಶೈವದ ಅಂಗಗಳಾದ ಅಷ್ಟಾವರಣ, ಪ್ರಾಣವಾದ ಪಂಚಾಚಾರ, ಆತ್ಮವೆನಿಸಿದ ಷಟ್‌ಸ್ಥಲ, ಶಿವಯೋಗ" ಇತ್ಯಾದಿ ತಾತ್ವಿಕ ಹಾಗೂ ಧಾರ್ಮಿಕ ವಿಷಯಗಳ ಬಗ್ಗೆ ಸಾಮಾನ್ಯ ಜನರಲ್ಲಿ ವಿದ್ಯಾವಂತರೆನಿಸಿಕೊಂಡವರಲ್ಲಿ ಕೂಡ ಇದ್ದ ಅಜ್ಞಾನ, ಅನಾಸಕ್ತಿ, ತಾತ್ಸಾರ ಮನೋಭಾವನೆಗಳನ್ನು ದೂರ ಮಾಡುವ ಮಹತ್‌ಕಾರ್ಯ ಇನ್ನೂ ಉಳಿದುಕೊಂಡಿತ್ತು. ಆದಾಗದ ಹೊರತು ತಮ್ಮ ಗುರುಗಳ ಇಚ್ಛೆ ಪೂರ್ತಿಯಾಗಲಾರದೆಂಬುದು ಅವರ ಅನಿಸಿಕೆಯಾಗಿತ್ತು. ಅದು ನಡೆಯಬೇಕಾದರೆ ಕರ್ನಾಟಕದ ಉದ್ದಗಲ್ಲಕ್ಕೂ ಹರಡಿದ ವೀರಶೈವ ಮಠಗಳು ಮಾಧ್ಯಮಗಳಾಗಬೇಕು. ಧರ್ಮಜಾಗೃತಿಗಾಗಿಯೇ ನಮ್ಮ ಹಿರಿಯರು ರೂಪಿಸಿದ ಕೇಂದ್ರಗಳವು. ಶಿವಯೋಗ-ಶಿವಾನುಭವಗಳ ಮೂಲಕ ಧರ್ಮತತ್ವ ಹಾಗೂ ಧಾರ್ಮಿಕ ವಿದ್ಯೆಗಳ ಪ್ರಸಾರ, ಪ್ರಚಾರಗಳಿಗಾಗಿಯೇ ಅವು ನಿರ್ಮಾಣಗೊಂಡದ್ದು. ಆ ಘನೋದ್ದೇಶದ ಪ್ರಜ್ಞೆಯಿಲ್ಲದ ಮಠಗಳು ಅರ್ಥಾತ್ ಮಠದ ಸ್ವಾಮಿಗಳು ತಮ್ಮ ತಮ್ಮ ಕರ್ತವ್ಯದತ್ತ ಬೆನ್ನು ತೋರಿಸಿದ್ದಾರೆ. ಅವರನ್ನು ಸಮಾಜ ಸಂಮುಖರನ್ನಾಗಿಸಬೇಕು. ಅದಕ್ಕಾಗಿ ಅವರಲ್ಲಿ ಜಾಗೃತಿಯನ್ನು ತರಬೇಕು. ಅಷ್ಟೇ ಅಲ್ಲ, ಅಂಥ ಮಠಗಳಿಗೆ ಸ್ವಾಮಿಗಳನ್ನು ಸಿದ್ಧಪಡಿಸುವ, ಅವರಿಗೆ ತರಬೇತಿ ನೀಡುವ ಒಂದು ಕಾಯಂ ಸಂಸ್ಥೆ ಅಸ್ತಿತ್ವಕ್ಕೆ ಬರಬೇಕು. ಹಾಗಾದಾಗ ಮಾತ್ರ ಸಮಾಜ ಸ್ವಾಸ್ಥ್ಯ ಸಾಧ್ಯ. ಮಹಾಸಭೆಯ ಸಹಾಯದ ಮೂಲಕ ನಮ್ಮ ಸಮಾಜದ ತರುಣರು ಆಧುನಿಕ ಆಂಗ್ಲವಿದ್ಯೆಯನ್ನು ಪಡೆದು ಹೊಟ್ಟೆ ತುಂಬಿಸುವುದು ಹೇಗೆ ಸಾಧ್ಯ? ಬಸವಾದಿ ಪ್ರಮಥ ಪ್ರತಿಪಾದಿತ ಧಾರ್ಮಿಕ ಮೌಲ್ಯಗಳನ್ನು ಅವರಿಗೆ ತಿಳಿಸಿಕೊಟ್ಟು, ಅವರ ಮನ-ಬುದ್ಧಿ-ಹೃದಯಗಳಿಗೆ ವೀರಶೈವ ಸಂಸ್ಕಾರ ಒದಗಿಸುವುದು ಹೇಗೆ? ಜೊತೆಗೆ ಆಧುನಿಕ ಆಂಗ್ಲವಿದ್ಯಾಭ್ಯಾಸವಿಲ್ಲದೆ ಹಳ್ಳಿ ಪಟ್ಟಣಗಳಲ್ಲಿ ವಿವಿಧ ಕಾಯಕ ನಿರತ ಅಸಂಖ್ಯಾತ ನಮ್ಮವರಿಗೆ ಧರ್ಮತತ್ವಗಳ ತಿಳಿವಳಿಕೆ ಮತ್ತು ಧಾರ್ಮಿಕ ಸಂಸ್ಕಾರಗಳು ದೊರೆಯಬೇಕಲ್ಲ? ಇದೆಲ್ಲ ಸಾಧ್ಯವಾಗುವ ಒಂದೇ ಒಂದು ಮಾರ್ಗವೆಂದರೆ ಮಠಗಳ ಸುಧಾರಣೆ. ಮಠಾಧಿಪತಿಗಳನ್ನು ತರಬೇತಿಗೊಳಿಸುವ ಸಂಸ್ಥೆಯೊಂದರ ಸ್ಥಾಪನೆ. ಇದೇ ಚಿಂತೆ ಶ್ರೀಗಳನ್ನು ಹಗಲಿರುಳು ಕಾಡಲಾರಂಭಿಸಿತು. ಅದಕ್ಕಾಗಿ ಏನೇನೋ ಯೋಜನೆಗಳನ್ನು ಕುರಿತು ಅವರು ಆಲೋಚಿಸುತ್ತಲೇ ಇದ್ದರು. ಲೆಕ್ಕ ಹಾಕುತ್ತಲೇ ಇದ್ದರು.

## ವೈರಾಗ್ಯದ ಮಲ್ಲಣಾರ್ಯರು ಹಾನಗಲ್ಲ ಮಠಕ್ಕೆ ಬಂದದ್ದು

ಈ ಸಂದರ್ಭದಲ್ಲಿ ಮತ್ತೆ ಅವರಿಗೆ ಸಹಾಯಕವಾಗಿ ಬಂದದ್ದು ಒಂದು ದೃಷ್ಟಿಯಿಂದ ದೈವವೇ ಎನ್ನಬೇಕು. ಅದು ಬಾಗಲಕೋಟೆಯ ವೈರಾಗ್ಯದ ಮಲ್ಲಣಾರ್ಯರ ಮೂಲಕ ಆ ಕಾರ್ಯವನ್ನು ಮಾಡಿಸಿದೆ. ಮಲ್ಲಣಾರ್ಯರು ಒಬ್ಬ ಶಾಲಾ ಶಿಕ್ಷಕರು.

ಯಾವುದೋ ಕಾರಣದಿಂದ ಸಂಸಾರದ ಬಗ್ಗೆ ಅವರಿಗೆ ವಿರಕ್ತಿಯುಂಟಾಯಿತು. ಚಿಕ್ಕ ಸಂಸಾರವನ್ನು ಸಡಿಲಿಸಿ, ಹಿರಿಯ ಸಂಸಾರವನ್ನು ಹೊಕ್ಕರು. ಧಾರ್ಮಿಕ ಬೋಧೆಯೇ ಅವರ ಗುರಿ, ಕೌಪೀನಧಾರಿಯಾದ ಅವರು ಕಾವಿಯ ಶಾಟಿ ಹೊದೆದು, ಕಂಬಳಿಯಕೊಪ್ಪಿ ಹಾಕಿ, ಕೈಯಲ್ಲೊಂದು ತಂಬಿಗೆ, ತೋಳಾಧಾರ ಹಿಡಿದು ನಡೆದವರೆಂದರೆ ಯಾವ ವಿರಕ್ತಸ್ವಾಮಿಗೂ ಕಡಿಮೆಯಾಗಿ ಕಾಣುತ್ತಿರಲಿಲ್ಲ. ಆದುದರಿಂದಲೇ ಅವರಿಗೆ ವೈರಾಗ್ಯದ ಮಲ್ಲಣಾರ್ಯರೆಂದು ಜನ ಕರೆಯುತ್ತಿದ್ದರು. ಅವರು ಪೀಠಾಧಿಕಾರವಿಲ್ಲದ ವಿರಕ್ತರು. ಪ್ರವಚನ ಕೀರ್ತನಗಳಲ್ಲಂತೂ ಎತ್ತಿದ ಕೈ, ಕೇಳುಗರನ್ನು ಮುಗ್ಧಗೊಳಿಸಬಲ್ಲ ವಾಣಿ. ಹಳ್ಳಿ ಹಳ್ಳಿಗಳನ್ನು ತಿರುಗುತ್ತ, ಧಾರ್ಮಿಕ ಜಾಗೃತಿ ಮಾಡುವುದೇ ಅವರ ಕರ್ತವ್ಯ. ಅದನ್ನವರು ಕಾಯಕದ ಮಟ್ಟಕ್ಕೇರಿಸಿದ್ದರು. ವೀರಶೈವ ಮಹಾಸಭೆಯಂತಹ ಒಂದು ಮಹಾಸಂಸ್ಥೆ ಶಿವಯೋಗ–ಶಿವಾನುಭವಗಳ ಪ್ರಸಾರಕ್ಕೂ ಬೇಕು. ಅದಕ್ಕೆ ತಕ್ಕ ಶಿವಯೋಗಿಯೊಬ್ಬನ ಹುಡುಕಾಟದಲ್ಲಿ ಅವರಿದ್ದರು. ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರ ಸಾಮಾಜಿಕ, ಕಾಳಜಿ, ಅದನ್ನು ಪುನರುಜ್ಜೀವನಗೊಳಿಸುವ ಹಿರಿಯ ಹಂಬಲ, ಕರ್ತೃತ್ವಶಕ್ತಿ, ಯೋಜಕಬುದ್ಧಿ, ಇವೆಲ್ಲಕ್ಕೂ ಕಲಶವಿಟ್ಟಂತೆ ಬ್ರಹ್ಮಚರ್ಯದ ದಿವ್ಯತೇಜಸ್ಸು ಇತ್ಯಾದಿಗಳನ್ನು ಅವರು ಕೇಳಿ ತಿಳಿದಿದ್ದರು: ನೋಡಿ ಅರಿತಿದ್ದರು. ಅವರಿಂದಲೇ ಅಂತಹ ಮಹಾಮಣಿಹ ಸಾಧ್ಯವೆಂಬ ನಂಬಿಕೆಯೇ ಅವರನ್ನು ಹಾನಗಲ್ಲಿಗೆ ಎಳೆತಂದಿತು.

ಇತ್ತ ಶಿವಯೋಗ–ಶಿವಾನುಭವಗಳ ಪ್ರಸಾರಕ್ಕೆ ಒಂದು ಸಂಸ್ಥೆ ಕಟ್ಟುವ ಆಲೋಚನೆಯಲ್ಲಿ ತನ್ಮಯರಾಗಿ ಮಠದ ತೂಗುವ ಮಂಚದ ಮೇಲೆ ಕುಳಿತಿದ್ದರು ಕುಮಾರಶ್ರೀಗಳು. ತೂಗುವ ಮಂಚ ತೂಗಿದಂತೆ ಅವರ ವಿಚಾರಗಳೂ ತೂಗುಯ್ಯಾಲೆಯಾಡುತ್ತಿದ್ದವು. ಬಾಹ್ಯ ಪ್ರಪಂಚದ ಅರಿವೇ ಆಗ ಅವರಿಗಿರಲಿಲ್ಲ. ಅದರಿಂದಾಗಿ ಮಲ್ಲಣಾರ್ಯರು ಬಂದುದನ್ನು ಅವರು ಕಾಣಲಿಲ್ಲ. ಅದನ್ನೇ ಕಾರಣವಾಗಿಸಿ ಮಲ್ಲಣಾರ್ಯರು ಶ್ರೀ ಕುಮಾರಸ್ವಾಮಿಗಳನ್ನು ಬೇಕಂತಲೇ ಛೇಡಿಸಿದರು. ಅದರಿಂದ ಶ್ರೀಗಳವರಿಗೆ ಎಳ್ಳಷ್ಟೂ ಸಿಟ್ಟು ಬರಲಿಲ್ಲ. ಪ್ರತಿಯಾಗಿ 'ಸಮಾಜೋದ್ಧಾರದ ಹಂಬಲವುಳ್ಳ ಇಂತಹ ಅಪೂರ್ವ ವ್ಯಕ್ತಿಗಳು ಇನ್ನೂ ನಮ್ಮ ಸಮಾಜದಲ್ಲಿ ಇದ್ದಾರಲ್ಲವೆ?' ಎಂದು ಸಂತೋಷಭರಿತರಾದರು. ಪರಸ್ಪರರಲ್ಲಿ ಮಾತುಕತೆ ನಡೆದು ವಿಚಾರಗಳ ಹಂಚಿಕೆ, ಆಲೋಚನೆಗಳ ವಿನಿಯಮವಾದಾಗ ಇಬ್ಬರ ಅಭಿಪ್ರಾಯದಲ್ಲೂ ಸಾಮ್ಯತೆ ಕಂಡುಬಂದಿತು. ಅದರಿಂದಾಗಿ ಇಬ್ಬರೂ ಹಿಗ್ಗಿ ಹೀರೆಕಾಯಿಯಾದರು. ಆ ಮೇಲೆ ಕುಮಾರ ಸ್ವಾಮಿಗಳು 'ಅಭಿಪ್ರಾಯವೇನೊ ಒಳ್ಳೆಯದೆ. ಶಿವಾನುಭವ ಸಂಸ್ಥೆಯೊಂದು ಸ್ಥಾಪನೆಗೊಳ್ಳಬೇಕು. ಅದು ಪ್ರಾಯೋಗಿಕವಾಗಿ ಶಿವಯೋಗ ಸಾಧನೆ ಹೇಳಿಕೊಡುವ ಕೇಂದ್ರವಾಗುವ ಜೊತೆಗೆ ಶಿವಾನುಭವ, ಶಿವಗೋಷ್ಠಿಗಳ ಮೂಲಕ ಸಮಾಜದಲ್ಲಿ ಧಾರ್ಮಿಕ ಜಾಗೃತಿಯನ್ನುಂಟು ಮಾಡಬಲ್ಲ. ಆ ಜಾಗೃತಿಯನ್ನು ಜೀವಂತವಾಗಿರಿಸಬಲ್ಲ ಸ್ವಾಮಿಗಳನ್ನು, ಪ್ರವಚನಕಾರರನ್ನು, ಕೀರ್ತನಕಾರರನ್ನು, ಸಂಗೀತಗಾರರನ್ನು, ವೀರಶೈವದ ಉಪಾಸನೆಯ ಸಾಧನಗಳಲ್ಲೊಂದಾದ ವಿಭೂತಿಕಾಯಕ ನಿರತರನ್ನು ಸಿದ್ಧಗೊಳಿಸಬಲ್ಲ ಟಂಕಸಾಲೆಯಾಗಬೇಕು. ಕರ್ತಾರನ ಕಮ್ಮಟವಾಗಬೇಕು. ನಿಜ, ಆದರೆ ಅದಕ್ಕೆಲ್ಲ ದ್ರವ್ಯಾನುಕೂಲತೆಬೇಕು. ಅದಿಲ್ಲದೆ ಏನೂ ನಡೆಯದು. ಹೊಟ್ಟೆ ತುಂಬುವ ವಿದ್ಯೆ ಕಲಿಯಲು ಸಹಾಯ ಮಾಡುವ ಸಂಸ್ಥೆಗಳಿಗೆ ಹಣ ಕೊಡಿರಿ ಎಂದರೆ ಬಹಳ ಜನ ಬಿಚ್ಚುಗೈಯವರಾಗುತ್ತಾರೆ. ಅದೇ ನೆತ್ತಿ ತುಂಬುವ ವಿದ್ಯಾಸಂಸ್ಥೆಗೆ ಸಹಾಯ ಮಾಡಿದರೆಂದರೆ ಎಷ್ಟು ಜನ ಮುಂದೆ ಬರುತ್ತಾರೋ? ಅದೇ ಸಂಶಯ, ಚಿಂತೆ ನನ್ನನ್ನು ಕಾಡುತ್ತದೆ. ನನ್ನ ಗುರುವಿನ ಆಶೆಯನ್ನು ನೆರವೇರಿಸಲೇಬೇಕೆಂಬ ತೀವ್ರ ಬಯಕೆ ನನಗೂ ಇದೆ. ಕಾಲಕೂಡಿ ಬರಬೇಕು' ಎಂದುಸುರಿ ಸುಮ್ಮನಾದರು. ಮಲ್ಲಣಾರ್ಯರಿಗೆ ಶ್ರೀಗಳವರ ಮಾತು ಕೇಳಿ ಒಂದೇ ವೇಳೆಗೆ ಸಂತೋಷ ಆಶ್ಚರ್ಯಗಳೆರಡೂ ಉಂಟಾದವು. ಶಿವಯೋಗ ಸಂಸ್ಥೆಯನ್ನು ಕಟ್ಟುವ ವಿಚಾರ ಶ್ರೀಗಳಲ್ಲಿದ್ದುದಕ್ಕೆ ಸಂತೋಷ. ವೀರಶೈವ ಮಹಾಸಭೆಯಂತಹ ಒಂದು ಮಹಾಸಂಸ್ಥೆಯ ಸ್ಥಾಪನೆಗೆ ಕಾರಣರಾಗಿ, ಹಣದ ಮಳೆ ಸುರಿಯುವಂತಹ ಪರಿಸರ ನಿರ್ಮಿತಿಗೆ ಸಹಾಯಕರಾದ ಶ್ರೀಗಳವರಿಗೆ ಒಂದು ಬಗೆಯ ವಿಚಿತ್ರ ಮನೋಸ್ಥಿತಿ ಉಂಟಾದ ಬಗ್ಗೆ ಆಶ್ಚರ್ಯ. 'ಅದಕ್ಕೆ ಪ್ರಾಯಶಃ ಅಂದಿನ ಪರಿಸ್ಥಿತಿ ಕಾರಣವಾಗಿರಬೇಕು. ಅವರ ಬುದ್ಧಿಗೆ ಹಿಡಿಯಲಾರಂಭಿಸಿರುವ ಮಂಕನ್ನು ತೆಗೆದು ಹಾಕಿದರೆ ಮತ್ತೆ ಅವರ ಆತ್ಮತೇಜ ತಾನೇ ಯಾನಾಗಿ ಬೆಳಗಲಾರಂಭಿಸುತ್ತದೆ. ಏಕೆಂದರೆ ಸಮಾಜಸೇವೆ ಮಾಡಬೇಕೆಂಬ ಹಂಬಲದ ತೈಲ ಅವರಲ್ಲಿ ಇನ್ನೂ ತೀರಿಲ್ಲ. ಅದೂ ಸಾಕಷ್ಟಿದೆ" ಎಂದು ಮನಸ್ಸಿನಲ್ಲಿಯೇ ಆಲೋಚಿಸಿ, ಶ್ರೀಗಳವರನ್ನು ಕುರಿತು 'ಸ್ವಾಮಿ, ನಮ್ಮ ಸಮಾಜದಲ್ಲಿ ಧರ್ಮಕಾರ್ಯಗಳಿಗಾಗಿ ಕೈಬಿಚ್ಚಿ, ಮನಬಿಚ್ಚಿ ಉದಾರವಾಗಿ ದಾನ ಮಾಡುವ ಕೊಡುಗೈ ದೊರೆಗಳ ಕೊರತೆ ಹಿಂದೆಯೂ ಇರಲಿಲ್ಲ; ಇಂದೂ ಇಲ್ಲ; ಮುಂದೂ ಇರಲಾರದು. ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿ ಅವರಲ್ಲಿ ವಿಶ್ವಾಸ ಮೂಡಿಸುವ ಕಾರ್ಯಕರ್ತರು ಬೇಕು. ಆಗ ಹಣದ ಮಳೆಯೇ ಸುರಿಯುತ್ತದೆ" ಎಂದು ಹೇಳಿ, ಹೀಗೆಯೇ ಮುಂದುವರಿದು ಮಾತಿನ ಮೂಲಕ ಅವರನ್ನು ತಿವಿಯುವ ಅಪೇಕ್ಷೆಯಿಂದ 'ಸ್ವಾಮಿ ನಿಮ್ಮ ಕೈಯಲ್ಲಿರುವ ಜೋಳಿಗೆ–ಬೆತ್ತಗಳು ಅಲಂಕಾರಗಳಲ್ಲ, ಧಾರ್ಮಿಕ ಶಸ್ತ್ರಾಸ್ತ್ರಗಳವು. ಅವನ್ನು ಧರಿಸಿ ಆಚಾರನಿಷ್ಠೆಯೆಂಬ ಕುದುರೆಯೇರಿ ಹೊರಡಿ. ಹಣವೀಯಲು ನಾನು ಮುಂದೆ ತಾನು ಮುಂದೆ ಎಂದು ನೂಕುನುಗ್ಗಲುಂಟಾಗುತ್ತದೆ. ಲಕ್ಷಾಂತರ ಹಣದ ರಾಶಿ ನಿಮ್ಮ ಮುಂದೆ ಬಂದು ಬೀಳುತ್ತದೆ. ಹಾಗೆ ಮಾಡಲು ನಿಮಗೆ ಮನೋಧೈರ್ಯವಿಲ್ಲದಿದ್ದರೆ ನಿಮ್ಮ ಕೈಯಲ್ಲಿಯ ಆ ಜೋಳಿಗೆ ಬೆತ್ತಗಳನ್ನು ನನಗೆ ಕೊಡಿ. ನಾನು ಮುಂದೆ ಹೊರಡುತ್ತೇನೆ. ನೀವು ಹಿಂದೆ ದಯಮಾಡಿಸಿ, ನಿಮ್ಮ ಗುರುಗಳಾದ ಮಹಾತ್ಮಸ್ಥಿ ನಿಸ್ಸೀಮ

ಶಿವಯೋಗ' ಎಳಂದೂರು ಬಸವಲಿಂಗ ಸ್ವಾಮಿಗಳ, ಅದಕ್ಕೆ ಒತ್ತಾಗಿ ನಮ್ಮಿಬ್ಬರ ಪವಿತ್ರ ಸಂಕಲ್ಪವೆನಿಸಿದ ಯೋಗ ಸಂಸ್ಥೆ ಹೇಗೆ ಉದಯವಾಗುವುದಿಲ್ಲವೋ ನೋಡುತ್ತೇನೆ' ಎಂದು ಅವರಿಗೆ ಸಹಜವಾದ ಆಜ್ಞಾಯುಕ್ತವಾಣಿಯಲ್ಲಿ ಗುಡುಗಿದಾಗ ಶ್ರೀಕುಮಾರ ಸ್ವಾಮಿಗಳು ಬೆಕ್ಕಸಬೆರಗಾಗಿ ಹೋದರು. ಅವರ ಮನಕ್ಕೆ ಅಂಟಿದ ಕಿಮಚಿತ್ ಜಾಡ್ಯ ವೈರಾಗ್ಯದ ಮಲ್ಲಣ್ಣನವರ ಚಾಟಿಯ ಏಟಿನಂತಹ ಮಾತುಗಳಿಂದ ಝಾಡಿಸಿಕೊಂಡು ಹೋಯಿತು. ಹುರುಪು ಇಮ್ಮಡಿಸಿತು. ಉತ್ಸಾಹಕ್ಕೆ ಉಕ್ಕು ಬಂತು. ಶಿವಯೋಗ ಸಂಸ್ಥೆಯನ್ನು ಕಟ್ಟಲು ಹಿಡಿಯಬೇಕಾದ ಕುಸ್ತಿಗೆ ಇಬ್ಬರೂ ಸಡ್ಡು ಹೊಡೆದು ನಿಂತರು. ಹೀಗೆ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರನ್ನು ಒಂದು ಮೂರ್ತಿಯನ್ನಾಗಿ ಮಾಡುವಲ್ಲಿ ವೈರಾಗ್ಯದ ಮಲ್ಲಣಾರ್ಯರು ವಹಿಸಿದ ಪಾತ್ರ ಬಹಳ ಗಮನಾರ್ಹವಾದುದು. ಈ ಮೂಲಕ ಶಿವಯೋಗ ಮಂದಿರದಂತಹ ಒಂದು ಮಹಾ ಅಧ್ಯಾತ್ಮಿಕ ಸಂಸ್ಥೆಯ ಸ್ಥಾಪನೆಗೆ ಅವರೂ ಕಾರಣರೆಂದು ಹೇಳಿದರೆ ತಪ್ಪೇನಿಕಲ್ಲ ಎನಿಸುತ್ತದೆ.

## ಕುಮಾರ ಶ್ರೀಗಳ ಬೆನ್ನೆಲುಬಾಗಿದ್ದ ಮಲ್ಲಣಾರ್ಯರ ಲಿಂಗೈಕ್ಯ

ಹಾನಗಲ್ಲ ಶ್ರೀಗಳವರ ಸಾಹಸಮಯ ಜೀವನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ದೈವ ಅವರಿಗೆ ಕೊಟ್ಟು, ಕೂಡಲೆ ಕಸಿದುಕೊಂಡ ಪ್ರಸಂಗಗಳು ಕೆಲವು ಕಂಡುಬರುತ್ತವೆ. ಹಿಂದೆ, ಶಿವಯೋಗಸಾಗರದ ಅನರ್ಘ್ಯರತ್ನ ಎಳಂದೂರು ಬಸವಲಿಂಗ ಸ್ವಾಮಿಗಳನ್ನು ಅವರಿಗಿತ್ತು ಅವರಿಂದ ಕ್ರಿಯಾದೀಕ್ಷೆ ಕೊಡಿಸಿ, ಶಿವಯೋಗ-ಶಿವಾನುಭವಗಳ ಪ್ರಸಾರಕ್ಕಾಗಿ ಅವರನ್ನು ಅಣಿಗೊಳಿಸಿ, ಅದನ್ನು ಮುಂದುವರಿಸಿಕೊಮಡು ಹೋಗುವಂತೆ ಅವರಿಗೆ ಆದೇಶಿಸಿ, ಅವರ ಸಹಾಯದಿಂದ ಆ ಪವಿತ್ರಕಾರ್ಯಕ್ಕೆ ಕುಮಾರಸ್ವಾಮಿಗಳು ಇನ್ನೇನು ಶ್ರೀಕಾರ ಹಾಕಬೇಕೆನ್ನುವ ಹೊತ್ತಿಗೆ ದೈವ ಅವರನ್ನು ಕಸಿದುಕೊಂಡು ಬಿಟ್ಟಿತು. ಈಗ ಇಲ್ಲಿ ಶಿವಯೋಗ ಮಂದಿರ ಸಂಸ್ಥೆಯ ಪ್ರಸ್ತಾವನೆಗೆ ಮಲ್ಲಣಾರ್ಯರು, ಕುಮಾರ ಸ್ವಾಮಿಗಳು ಇಬ್ಬರೂ ಕಟಿಬದ್ಧರಾದ ಸ್ವಲ್ಪ ದಿನಗಳಲ್ಲಿ ವೈರಾಗ್ಯದ ಮೇರುವಿನಂತಿದ್ದ ಮಲ್ಲಣಾರ್ಯರನ್ನು ದೈವ ಕಸಿದುಕೊಂಡು ಬಿಟ್ಟಿತು. ಕುಮಾರಸ್ವಾಮಿಗಳ ಮೂಲಕವೇ ಆ ಮಹಾಕಾರ್ಯಗಳು ನಡೆಯಬೇಕೆಂದು ದೈವೀ ಸಂಕಲ್ಪವಿತ್ತೇನೋ! ಬಸವಲಿಂಗಸ್ವಾಮಿಗಳು, ಮಲ್ಲಣಾರ್ಯರು ಇಬ್ಬರೂ ಕುಮಾರಸ್ವಾಮಿಗಳಿಗೆ ತರಬೇತಿಕೊಟ್ಟು, ಧೈರ್ಯ ಹೇಳಿ ಅವರನ್ನು ಮುಂದೆ ನೂಕಿ ತಾವು ಬೆಳಗಿನಲ್ಲಿ ಬೆಳಗಾಗಿ ಹೋದರು. ಶ್ರೀಕುಮಾರಸ್ವಾಮಿಗಳವರದು ಯಾವುದಕ್ಕೂ ಜಗ್ಗುವ ಬಗ್ಗುವ ಜಾಯಮಾನವಲ್ಲ. ಕೆಲಕ್ಷಣ, ಕೆಲದಿನ ಮಾತ್ರ ಏನೋ ಮಂಪರು ಕವಿದಿರಬಹುದು, ನಿರಾಶೆ ತೋರಿರಬಹುದು, ಆದರೆ ಸೋತುದಂತೂ ಇಲ್ಲವೇ ಇಲ್ಲ. 'ಕೊಲ್ಲುವೆನೆಂಬ ಭಾಷೆ ದೇವನದಾದರೆ ಗೆಲುವೆನೆಂಬ ಭಾಷೆ ಭಕ್ತನದು' ಎಂಬ ಬಸವವಾಣಿಯನ್ನು ಕ್ರಿಯೆಯಲ್ಲಿಳಿಸಿದ ಧೈರ್ಯ-ಸಾಹಸಿಗಳವರು. ಅಂಥ ಪ್ರಸಂಗಗಳನ್ನು ಕುಮಾರಸ್ವಾಮಿಗಳವರು ಒಂದು ಆಹ್ವಾನವಾಗಿ ಸ್ವೀಕರಿಸಿ, ಎದೆಗೆಡದೆ ಮುಂದುವರಿದರು.

## ಶಿವಯೋಗಮಂದಿರ ಸ್ಥಾಪನೆ

ಕ್ರಿ.ಶ. ೧೯೦೮ರಲ್ಲಿ ಬಾಗಲಕೋಟೆಯಲ್ಲಿ ನಾಲ್ಕನೆಯ ವೀರಶೈವ ಮಹಾಸಭೆ ಅಧಿವೇಶನ ವಂಟಮುರಿ ಸರದೇಸಾಯಿ ರಾಜಾ ಲಖಮನಗೌಡ ಅವರ ಅಧ್ಯಕ್ಷತೆಯಲ್ಲಿ ಸೇರುವಂತೆ ನಿಶ್ಚಿತವಾಗಿತ್ತು. ಅದಕ್ಕೆ ಪೂರ್ವಭಾವಿಯಾಗಿ ಹೊರಡಿಸಿದ ಪ್ರಕಟಣೆಯಲ್ಲಿ 'ಶಿವಯೋಗಮಂದಿರ' ಸ್ಥಾಪನೆಯ ವಿಚಾರವನ್ನು ಸೂಚಿಸಲಾಗಿತ್ತು. ಎಂತಹ ಸ್ಥಳದಲ್ಲಿ ಅದನ್ನು ಸ್ಥಾಪಿಸಲಾಗುವುದೆಂಬ ಬಗ್ಗೆಯೂ ಅದರಲ್ಲಿ ತಿಳಿಸಲಾಗಿತ್ತು. ಇದೆಲ್ಲದರ ಹಿಂದೆ ಕುಮಾರ ಶ್ರೀಗಳವರಿದ್ದರೆಂದು ಬೇರೆ ಹೇಳಬೇಕಿಲ್ಲ. ಮಹಾಸಭೆ ಯಥಾಪ್ರಕಾರ ಅದ್ದೂರಿ ಯಿಂದ ನಡೆಯಿತು; ಸಮಾಜಕ್ಕೆ ಹಿತಕಾರಿಯಾಗಬಲ್ಲ ಹಲವಾರು ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು. ಆರ್ಥಿಕ ದೃಷ್ಟಿಯಿಂದ ಸಮಾಜಕ್ಕೆ ಅತ್ಯಂತ ಪ್ರಯೋಜನಕಾರಿಯಾಗಬಲ್ಲ ವೀರಶೈವರ ಒಂದು ಬಟ್ಟೆಗಿರಣಿ ಸ್ಥಾಪಿಸಬೇಕೆಂಬ ನಿರ್ಣಯವೂ ಅವುಗಳಲ್ಲಿ ಒಂದು. ಆದರೆ ಅದು ಕಾರ್ಯರೂಪಕ್ಕೆ ಬರದಿದ್ದುದು ನಮ್ಮ ಸಮಾಜದ ದುರ್ದೈವ. ಅದೇ ಮಹಾಸಭೆಯಲ್ಲಿಯೇ ಶಿವಯೋಗಮಂದಿರದ ಬಗೆಗಿನ ಯೋಜನೆಯೂ ಸಿದ್ಧವಾಯಿತು. ಅದರ ಪ್ರಕಾರ ಮರುದಿನವೇ ಸೊಲ್ಲಾಪುರದ ಶ್ರೀಮಂತ ವಾರದ ಮಲ್ಲಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ, ಎಲ್ಲರ ಅಭಿಪ್ರಾಯಗಳನ್ನು ತಿಳಿದು ಮಹಾತಪಸ್ವಿಗಳಾದ ಇಳಕಲ್ಲ ಶ್ರೀ ಮಹಾಂತಸ್ವಾಮಿಗಳವರು ತೋರಿದ ಸ್ಥಳದಲ್ಲಿ ಶಿವಯೋಗಮಂದಿರದ ಸ್ಥಾಪನೆಯಾಗಬೇಕೆಂದು ನಿಶ್ಚಯಿಸಲಾಯಿತು. ಮಂದಿರದ ಸ್ಥಾಪನೆಗೆ ಸಕಲ ವೀರಶೈವರನ್ನು ಪ್ರತಿನಿಧಿಸುವ ಅಂದಿನ ವೀರಶೈವ ಮಹಾಸಭೆಯ ಒಪ್ಪಿಗೆಯನ್ನು ಶ್ರೀಗಳವರು ಪಡೆದುದು ಅವರ ಮತ್ತೊಂದು ಮುತ್ಸದ್ದಿತನದ ಕುರುಹು. ಯಾವುದೇ ಕಾರ್ಯಕ್ಕೂ ಸಮಾಜ ಸಮಷ್ಟಿಯ ಒಪ್ಪಿಗೆಯ ಮುದ್ರೆ ಬೇಕೆಂಬುದನ್ನು ಅವರು ಚೆನ್ನಾಗಿ ಅರಿತಿದ್ದರು.

ನಿರ್ಧಾರ ಕೈಕೊಂಡ ಮೇಲೆ ಇಂದು, ನಾಳೆ ಎಂದು ದಿನ ನೂಕುವುದು ಶ್ರೀ ಕುಮಾರ ಸ್ವಾಮಿಗಳವರಿಗೆ ಎಂದೂ ಹಿಡಿಸುತ್ತಿರಲಿಲ್ಲ. ಕೂಡಲೇ ಇಳಕಲ್ಲಿಗೆ ಹೋಗಿ, ವಿಷಯವೆಲ್ಲವನ್ನು ತಿಳಿಸಿ, ಬಹುಬೇಗ ಮಂದಿರ ಸ್ಥಾಪನೆಗೆ ಸ್ಥಳ ನಿರ್ದೇಶನ ಮಾಡಬೇಕೆಂದು ಪ್ರಾರ್ಥಿಸಿ ಹೊರಡಿಸಿಯೇ ಬಿಟ್ಟರು. ಮುಂದೆ 'ಮಹಾಂತಮ್ಮ' ಆಕಳು, ಹಿಂದೆ ಕುಮಾರ ಶ್ರೀಗಳು ಮತ್ತು ೨೦-೩೦ ಜನ ಪ್ರಮುಖ ಭಕ್ತರು.

ಭಕ್ತರಲ್ಲಿ ಕೆಲವರು ಬೇರೆ ಬೇರೆ ಸ್ಥಳಗಳನ್ನು ತೋರಿಸಿದರು. ಅವು ಇಳಕಲ್ಲ ಮಹಾಂತಸ್ವಾಮಿಗಳ ಮನಸ್ಸಿಗೆ ಬರಲಿಲ್ಲ. ಮುಂದೆ ಕಂಟಕಮಯ ಡಬ್ಬುಗಳ್ಳಿಯ ಕಾಡಿನ ಮಧ್ಯೆ ಒಂದು ಬಿಲ್ವ ವೃಕ್ಷಗಳ ಬನದಲ್ಲಿ ಹಾಳುಸ್ಥಿತಿಯಲ್ಲಿದ್ದ ಕೊಟ್ಟೂರು ಬಸವನಗುಡಿ. ಅಲ್ಲಿಯೇ ಮಹಾಂತಸ್ವಾಮಿಗಳವರ ಹಸು ಬಿಲ್ವವೃಕ್ಷದ ನೆರಳಿನಲ್ಲಿ ಮೆಲುಕಾಡಿಸುತ್ತ ಮಲಗಿತು. ಕೊಟ್ಟೂರು ಶಿವಯೋಗಿಗಳು ತಪಸ್ಸು ಮಾಡಿರಬಹುದಾದ ಅದೊಂದು ಪವಿತ್ರ ಸ್ಥಳವೆಂದು ಶ್ರೀಮಹಾಂತ ಸ್ವಾಮಿಗಳಿಗೆ ಮನವರಿಕೆಯಾಯಿತು. ಇಲ್ಲದಿದ್ದರೆ ಅಲ್ಲಿ ಪತ್ರಿಯ ಬನ ಮತ್ತು ಕೊಟ್ಟೂರೇಶ್ವರ ಗುಡಿ ಇರುವುದು ಹೇಗೆ ಸಾಧ್ಯ! ಇಲ್ಲಿಯೇ ಶಿವಯೋಗಮಂದಿರದ ಸ್ಥಾಪನೆಯಾಗುವುದು ಯೋಗ್ಯ ಎಂದು ನಿಶ್ಚಯಿಸಿ, ಅದನ್ನು ಪ್ರಮುಖರಿಗೆಲ್ಲ ತಿಳಿಸಿದರು. ಆದರೆ ಅದು ಅವರ ಮನಸ್ಸಿಗೆ ಬರಲಿಲ್ಲ. ಆಗ ಮಹಾಂತ ಸ್ವಾಮಿಗಳು 'ಶಿವಯೋಗಮಂದಿರ ಸ್ಥಾಪನೆಗೆ ಈ ಸ್ಥಳ ಯೋಗ್ಯವೆಂದು ನನಗನ್ನಿಸಿದೆ. ಇದಕ್ಕೆ ನೀವು ಒಪ್ಪಿದರೆ ಸರಿ, ಇಲ್ಲದಿದ್ದರೆ ಬಿಡಿ. ನನ್ನ ಕೆಲಸ ಮುಗಿಯಿತು. ನಾವು ನಮ್ಮೂರಿಗೆ ಹೋಗುತ್ತೇವೆ' ಎಂದು ನುಡಿದಾಗ ಕುಮಾರಸ್ವಾಮಿಗಳವರು ಪ್ರಮುಖರನ್ನುದ್ದೇಶಿಸಿ 'ಪರಿಷತ್ತಿನಲ್ಲಿ ನಿರ್ಧಾರವಾದಂತೆ ಶ್ರೀ ಮಹಾಂತ ಸ್ವಾಮಿಗಳು ತೋರಿದ ಸ್ಥಾನದಲ್ಲಿಯೇ ಯೋಗಮಂದಿರದ ಸ್ಥಾಪನೆಯು ಆಗಬೇಕು. ಅವರು ಈ ಸ್ಥಳವನ್ನು ತೋರಿದ್ದಾರೆ. ಇಲ್ಲಿಯೆ ಒಂದು ಗುಡಿಸಲು ಹಾಕಿಕೊಂಡು ನಾನೊಬ್ಬನೇ ಅನುಷ್ಠಾನ ಮಾಡಿ ನನ್ನ ತಪೋಬಲದಿಂದ, ಆಸಕ್ತ ಭಕ್ತರ ಸಹಾಯದಿಂದ ಮಂದಿರ ಸ್ಥಾಪಿಸಲು ಪ್ರಯತ್ನಿಸುತ್ತೇನೆ. ಶಿವಯೋಗಮಂದಿರಕ್ಕೆಂದು ಕೂಡಿಸಿದ ವರ್ಗಣಿ ಹಣವನ್ನು ಇಗೊ ತೆಗೆದುಕೊಳ್ಳಿ. ನಿಮಗೆ ಬೇಕೆನಿಸಿದ ರಮ್ಯಸ್ಥಳವೊಂದರಲ್ಲಿ ಶಿವಯೋಗಮಂದಿರ ಸ್ಥಾಪಿಸಿಕೊಳ್ಳಿ' ಎಂದು ನಿಷ್ಠುರವಾಗಿ, ಅಷ್ಟೇ ದೃಢವಾಗಿ ಹೇಳಿದಾಗ ಎಲ್ಲರೂ ಬೇರೆ ಮಾತಿಲ್ಲದೆ ಒಪ್ಪಿ ಶ್ರೀಗಳಿಬ್ಬರಿಗೂ ಸಾಷ್ಟಾಂಗ ನಮಸ್ಕಾರ ಹಾಕಿದರು. ಕೊಟ್ಟೂರೇಶನಿಗೆ ಆರತಿ ಬೆಳಗಿ ಮಹಾಂತ ಶ್ರೀಗಳು, ಏಳೆಂಟು ದಿನಗಳಲ್ಲಿ ಬರಲಿರುವ ರಥಸಪ್ತಮಿಯಂದು ಲಿಂಗಮುದ್ರೆಯ ಕಲ್ಲು ಸ್ಥಾಪಿಸುವುದಾಗಿ ಹೇಳಿ, ಇಳಕಲ್ಲಿಗೆ ದಯಮಾಡಿಸಿದರು.

ಆಮೇಲೆ ಆ ಭೂಮಿಯ ಖರೀದಿ ಎಲ್ಲವೂ ಚಕಚಕ ನಡೆದು ಹೋದವು. ರಥಸಪ್ತಮಿಯಂದೇ ಪರಮಪೂಜ್ಯ ಮಹಾತಪಸ್ವಿ ಇಳಕಲ್ಲ ಮಹಾಂತ ಸ್ವಾಮಿಗಳವರ ಅಮೃತ ಹಸ್ತದಿಂದ ಶಿವಯೋಗಮಂದಿರದ ಸ್ಥಾಪನೆ ವಿದ್ಯುಕ್ತವಾಗಿ ನಡೆದು ಹೋಯಿತು. ಮಹಾತಪಸ್ವಿಗಳ ಬಗೆಗೆ ಶ್ರೀ ಕುಮಾರಸ್ವಾಮಿಗಳಿಗಿದ್ದ ಅಪಾರ ಭಕ್ತಿ ಈ ಪ್ರಸಂಗದಲ್ಲಿ ಪ್ರಕಟವಾಗುವ ಜೊತೆಗೆ ಅವರ ನಿಷ್ಠುರ ಸ್ವಭಾವ,. ಹಿಡಿದ ಕೆಲಸವನ್ನು ಬಿಡದ ಜಿಗುಟುಗಾರಿಕೆಯನ್ನು ಇಲ್ಲಿ ಕಾಣಬಹುದು.

ಮುಂದೆ ಪೂಜ್ಯಶ್ರೀ ಕುಮಾರ ಸ್ವಾಮಿಗಳವರ ಕರ್ತೃತ್ವಶಕ್ತಿ, ಹಲವಾರು ಜನ ಶ್ರೀಗಳವರ ಸಹಕಾರ ಹಸ್ತಮ, ಸಹಸ್ರಾರು ಸಂಖ್ಯೆ ಭಕ್ತರ ನೆರವು, ಎಲ್ಲಕ್ಕಿಂತ ಹೆಚ್ಚಾಗಿ ಶ್ರೀಕುಮಾರ ಸ್ವಾಮಿಗಳವರ ನೈತಿಕ ಬ್ರಹ್ಮಚರ್ಯದ ತಪೋಬಲ-ಎಲ್ಲವೂ ಸೇರಿ, ವರ್ಷದಿಂದ ವರ್ಷಕ್ಕೆ ಶಿವಯೋಗಮಂದಿರ ಸಂಸ್ಥೆ ಪ್ರವರ್ಧಮಾನಗೊಳ್ಳತೊಡಗಿತು. ಕ್ರಮೇಣ ಕಟ್ಟಡಗಳು ಎದ್ದವು. ವಟುಗಳು ಬಂದರು. ಯೋಗಾಭ್ಯಾಸದ ಪಠ್ಯಕ್ರಮ, ವಟುಗಳ ನಿತ್ಯಕಾರ್ಯಕ್ರಮಗಳ ವೇಳಾಪತ್ರಿಕೆ ಸಿದ್ಧಗೊಂಡವು. ಶಿವಯೋಗಿಗಳು, ಶಾಸ್ತ್ರಿಗಳು ಬೋಧನಾ ಕಾರ್ಯದಲ್ಲಿ ನಿರತರಾದರು. ಹಸ್ತಪ್ರತಿಗಳ ಸಂಗ್ರಹ, ಸಂಶೋಧನೆ, ಸಂಪಾದನ ಕಾರ್ಯಗಳೂ ಆರಂಭಗೊಂಡವು.

ಕಾಲಕಳೆದಂತೆ ಬೋಧನ, ಪ್ರವಚನ, ಅಧ್ಯಯನ-ಅಧ್ಯಾಪನಗಳ ಜೊತೆಗೆ ಬೇರೆ ಉಪಯುಕ್ತ ಕಾರ್ಯಕ್ರಮಗಳೂ ಸೇರ್ಪಡೆ ಯಾಗುತ್ತ ಹೋಗಿ, ಶಿವಯೋಗ ಮಂದಿರದ ಕಾರ್ಯಕ್ಷೇತ್ರ ವಿಸ್ತೃತಗೊಳ್ಳುತ್ತ ಹೋಯಿತು. ಒಟ್ಟಿನಲ್ಲಿ ಇಷ್ಟಲಿಂಗ ಅನುಸಂಧಾನದ ಮೂಲಕ ಪ್ರವಚನ, ಸಂಗೀತಸಭೆ, ಶಿವಾನುಭವಗೋಷ್ಠಿಯಂತಹ ಸಮೂಹ ಸಂವಹನ ಮಾಧ್ಯಮಗಳ ಮೂಲಕ ಸಾಮಾಜಿಕ, ಧಾರ್ಮಿಕ ಜಾಗೃತಿ, ಧರ್ಮೋತ್ತೇಜಕ ಸಭೆಗಳಂತಹ ವಿಶಿಷ್ಟ ಸಭೆಗಳ ಮೂಲಕ ಧರ್ಮತತ್ವಗಳ ಕುಲಂಕಷ ವಿವೇಚನೆ, ಪರಿಣತ ವಿದ್ವಾಂಸರ ಪಂಡಿತರ ಮೂಲಕ ವಚನ ಶಾಸ್ತ್ರ ಕನ್ನಡ ಹಾಗೂ ಸಂಸ್ಕೃತಗಳಲ್ಲಿ ರಚನೆಗೊಂಡ ಮೌಲಿಕ ವೀರಶೈವ ಗ್ರಂಥಗಳ ಅಧ್ಯಯನ ಮತ್ತು ಅಧ್ಯಾಪನ, ಪ್ರಯೋಗಗಳ ಮೂಲಕ ಆಯುರ್ವೇದ ಔಷದಿಗಳ ಸಂಶೋಧನೆ ಮತ್ತು ಅಧ್ಯಯನ, ಶಾಸ್ತ್ರಶುದ್ಧ ವಿಧಾನಗಳಿಂದ ಭಸ್ಮ ಮತ್ತು ಪಂಚಸೂತ್ರಲಿಂಗಗಳ ನಿರ್ಮಾಣ-ಹೀಗೆ ಹತ್ತು ಹಲವು ಉದ್ದೇಶಗಳನ್ನಿಟ್ಟುಕೊಂಡು ಶಿವಯೋಗಮಂದಿರ ಸಂಸ್ಥೆ ತನ್ನ ಕಾರ್ಯವನ್ನು ಹಾನಗಲ್ಲ ಕುಮಾರ ಸ್ವಾಮಿಗಳ ನೇತೃತ್ವದಲ್ಲಿ ಮುಂದುವರಿಸಿತು. ತಮ್ಮ ಜೀವಮಾನದುದ್ದಕ್ಕೂ ಕೊನೆಗೆ ಲಿಂಗೈಕ್ಯರಾಗುವವರೆಗೆ ಶ್ರೀಕುಮಾರ ಸ್ವಾಮಿಗಳವರು ಶಿವಯೋಗಮಂದಿರ ಸಂಸ್ಥೆಗೆ ಅರ್ಪಿತ ಮನೋಭಾವದಿಂದ ದುಡಿದರು. ತಮ್ಮ ಸ್ವಂಥ ಹಾನಗಲ್ಲ ಮಠದ ಬಗ್ಗೆ ಅವರು ಹೆಚ್ಚು ಗಮನ ಕೊಡಲು ಕೂಡ ಶಿವಯೋಗಮಂದಿರದ ಕಾರ್ಯಕ್ರಮಗಳ ಒತ್ತಡದ ಫಲವಾಗಿ ಆಗುತ್ತಿರಲಿಲ್ಲ. ಶಿವಯೋಗಮಂದಿರ, ಲಿಂಗಪೂಜೆ, ಸಮಾಜ ಸೇವೆ-ಈ ತ್ರಿವಿಧಗಳಿಗಾಗಿ ಅವರು ಮಾಡಿದ ಸಾಧನೆ, ಪಡೆದ ಸಿದ್ಧಿಗಳನ್ನು ತಿಳಿಯಲು ನಾವು ದಲೂರ ಹೋಗಬೇಕಾಗಿಲ್ಲ. ಇಂದು ಕರ್ನಾಟಕದ ಉದ್ದಗಲಕ್ಕೂ ಜೊತೆಗೆ ಕರ್ನಾಟಕದ ಹೊರಗೂ ಬೇರೆ ಬೇರೆ ಹಿರಿಕಿರಿ ಮಠಗಳಲ್ಲಿ ಜಗದ್ಗುರುಗಳಾಗಿ, ಸ್ವಾಮಿಗಳಾಗಿ, ಪಟ್ಟದದೇವರುಗಳಾಗಿ ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿ ಕಾರ್ಯನಿರತರಾಗಿರುವ ಚೇತನಗಳೇ ಸಾಕ್ಷಿ.

ಶ್ರೀ ಕುಮಾರ ಸ್ವಾಮಿಗಳವರ ಶಿವಯೋಗಮಂದಿರದ ಕಮ್ಮಟದಲ್ಲಿ ಸಿದ್ಧಗೊಂಡ ಈ ಸ್ವಾಮಿಗಳೆಂಬ ಶುದ್ಧನಾಣ್ಯಗಳು, ವಿರಕ್ತ ಪೀಠಗಳಲ್ಲೂ ಚಲಾವಣೆಗೆ ಬಂದಿವೆ. ಗುರುಪೀಠಗಳಲ್ಲೂ ಬಂದಿವೆ. ಇದೊಂದೇ ಉದಾಹರಣೆ ಸಾಕು ಶ್ರೀಕುಮಾರ ಸ್ವಾಮಿಗಳವರು ಗುರು–ವಿರಕ್ತರಲ್ಲಿ ಭೇದಭಾವ ಮಾಡುತ್ತಿರಲಿಲ್ಲವೆಂಬುದಕ್ಕೆ. ಇಬ್ಬರೂ ಸಮಾಜದ ಎರಡು ಕಣ್ಣುಗಳೆಂದು ಅವರು ನಂಬಿದ್ದರು. ಪರಸ್ಪರರಲ್ಲಿ ಕಹಿ ಭಾವನೆ ಮೂಡದಂತೆ, ಇದ್ದುದು ತೊಳೆದು ಹೋಗುವಂತೆ ಮಾಡಲು ಅವರು ಅನುಸರಿಸಿದ ವಿಧಾನ ಸದಾ ಅನುಕರಣೀಯವೆಂದು ನನ್ನ ಭಾವನೆ. ಈ ಮೂಲಕ ಅವರು ಪಡೆದ ಸಾಧನೆ–ಸಿದ್ಧಿಗಳು ಮಹತ್ವಪೂರ್ಣವೆಂದೇ ಹೇಳಬೇಕು. ವಿರಕ್ತಪೀಠಗಳಲ್ಲಿ ತಲೆದೋರಿದ ಸಮಯಭೇದಗಳು ನಿರಾಧಾರವಾದವು ಎಂಬುದನ್ನು, ಅವು ಎಂದಿನಿಂದ ಏಕೆ ಆರಂಭಗೊಂಡ ವೆಂಬುದನ್ನು ಶ್ರೀಕುಮಾರ ಸ್ವಾಮಿಗಳವರು ಮಲ್ಲನಕೆರೆಯ ಮಹಾತಪಸ್ವಿ ಷಟ್‌ಸ್ಥಲಜ್ಞಾನಿ ಶ್ರೀ ಚನ್ನಬಸವ ಸ್ವಾಮಿಗಳವರಿಂದ ತಿಳಿದು, ಅವರ ನಿರ್ದೇಶನದ ಮೇರೆಗೆ ಹಾವೇರಿಯ ಶ್ರೀ ಶಿವಬಸವ ಸ್ವಾಮಿಗಳ ಜೊತೆ ಎಡೆಯೂರು ಕ್ಷೇತ್ರಕ್ಕೂ ಹೋಗಿ ಶ್ರೀ ಸಿದ್ಧಲಿಂಗೇಶ್ವರನ ಗದ್ದುಗೆಯ ಮುಂದೆ ಮಲಗಿದಾಗ, ಸ್ವಪ್ನದಲ್ಲಿ ಉಭಯ ಸ್ವಾಮಿಗಳ ಅನುಗ್ರಹ ಗುರುಗಳಾದ ಶ್ರೀ ಬಿದರಿ ಕುಮಾರ ಸ್ವಾಮಿಗಳು ಬಂದು ಅವರನ್ನು ಎಚ್ಚರಿಸಿ, ಶಿವಯೋಗ ಸಮಾಧಿಯಲ್ಲಿದ್ದ ಶ್ರೀ ಸಿದ್ಧಲಿಂಗೇಶ್ವರರನ್ನು ತೋರಿಸಿದಂತೆ ಅನುಭವ ಪಡೆದು ಮನದ ಸಂಶಯವನ್ನು ದೂರ ಮಾಡಿಕೊಂಡಿದ್ದರು. ಕ್ರಿಯಾಸಮಾಧಿಗೆ ನಮಸ್ಕಾರ ಮಾಡದೆ ಜೀವನ್ಮುಕ್ತ ಸಮಾಧಿಗೆ ಮಾತ್ರ ನಮಸ್ಕಾರ ಮಾಡಬಹುದೆಂಬುದನ್ನು ಆಗ ಅವರು ಮನವರಿಕೆ ಮಾಡಿಕೊಳ್ಳುವ ಜೊತೆಗೆ ಸಮಯಭೇದದ ನಿರರ್ಥಕತೆಯನ್ನು ಮನದಟ್ಟು ಮಾಡಿಕೊಂಡಿದ್ದರು. ಮತ್ತು ಅದರಂತೆ ಎಲ್ಲ ಕಡೆ ಹೇಳುತ್ತಿದ್ದರು.

**ಲಿಂಗೈಕ್ಯ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳನ್ನು ಕುರಿತು ಕೆಲವು ಪ್ರಮುಖರು ಹೇಳಿರುವ ಮಾತುಗಳು ಹೀಗಿವೆ :**

'ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಹಾನಗಲ್ಲ ಶ್ರೀಗಳವರು ಸಮಾಜೋನ್ನತಿಗಾಗಿ ಅಮೋಘ ಸೇವೆ ಸಲ್ಲಿಸಿದ್ದಾರೆ. ವಿರಕ್ತಾಶ್ರಮಿಗಳಾದುದರಿಂದ ಶ್ರೀ ಸ್ವಾಮಿಗಳು ಕೇವಲ ಲಿಂಗಾನಂದದಲ್ಲಿಯೇ ಕಾಲಕಳೆದು, ಆತ್ಮ ಸಾರ್ಥಕ್ಯ ಮಾಡಿಕೊಳ್ಳಬಹುದಿತ್ತು... ಶಿವಾನುಭವವನ್ನು ಅಳವಡಿಸಿಕೊಂಡಿದ್ದರೂ ಶಿವಯೋಗದಲ್ಲಿ ನಿಷ್ಣಾತರಾಗಿದ್ದರೂ ದೇಶಸೇವೆಯೇ ಈಶಸೇವೆಯೆಂದರಿತು ವೀರಶೈವ ಜನತೆಯಲ್ಲಿ ಸರಿಯಾದ ಮತಪರಿಚಯವನ್ನೂ ನಿಜವಾದ ಧರ್ಮಾಭಿಮಾನವನ್ನೂ ಹರಡುವುದು ತಮ್ಮ ಆದ್ಯ ಕರ್ತವ್ಯವೆಂದು ಭಾವಿಸಿದ್ದರು'

– ಶಿ.ಶಿ.ಬಸವನಾಳ

'ವೀರಶೈವ ಸಮಾಜದಲ್ಲಿ ಗ್ರಂಥ ಪ್ರಚಾರ ಮಾಡಿದ ಮಹನೀಯರು ಕೆಲವರು, ವಿದ್ಯಾ ಪ್ರಚಾರ ಮಾಡಿದ ಪುಣ್ಯಾತ್ಮರು ಕೆಲವರು, ತತ್ವೋಪದೇಶ ಮಾಡಿದವರು ಕೆಲವರು, ಪಾಠಶಾಲೆಗಳನ್ನು ಸ್ಥಾಪಿಸಿದವರು ಕೆಲವರು, ಯೋಗವಿದ್ಯೆಯನ್ನು ಕಲಿಸಿದವರು ಕೆಲವರು, ಪರವಾದಿಗಳ ಕೂಡ ವಾದಿಸಿದವರು ಕೆಲವರು,. ಸದಾಚಾರಕ್ಕೆ ಮಾರ್ಗದರ್ಶಕರಾದವರು ಕೆಲವರು, ಸಮಾಜ ಸಂಘಟನೆಗಾಗಿ ಪ್ರಯತ್ನಿಸಿದವರು ಕೆಲವರು, ಇವೆಲ್ಲವನ್ನೂ ಸಾಧಿಸಿದ ಒಬ್ಬರೇ ಒಬ್ಬ ಮಹಾತ್ಮರೆಂದರೆ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು.'

– ಪಂಡಿತರತ್ನಂ ಬಿ. ಶಿವಮೂರ್ತಿಶಾಸ್ತ್ರಿ

ಒಟ್ಟಿನಲ್ಲಿ ಲಿಂಗೈಕ್ಯ ಶ್ರೀ ಕುಮಾರಸ್ವಾಮಿಗಳವರ ಸಾಧನೆ ಅಪಾರ. ಅವರು ಪಡೆದ ಸಿದ್ಧಿ ಎಲ್ಲೆಡೆ ಪ್ರಸಿದ್ಧ. ವೀರಶೈವ ಮಹಾಸಭೆಯನ್ನು ವೀರಶೈವ ಸಮಾಜ ಪುರುಷನ ಪ್ರಾಣವೆಂದೂ ಶಿವಯೋಗಮಂದಿರ ಸಂಸ್ಥೆಯನ್ನು ಅವನ ಆತ್ಮವೆಂದೂ ಅವರು ತಿಳಿದು ಅದಕ್ಕಾಗಿ ದುಡಿದರು. ಈಗ ಪ್ರಾಣ ನಿತ್ರಾಣವಾಗಿದೆ. ಆತ್ಮ ಬಲಹೀನವಾಗಿದೆ. ಇವೆರಡರ ಪುನಶ್ಚೇತನಕ್ಕೆ ಬರುವ ಸ್ವಾಮಿಗಳವರು ಹಿರಿಯ ಸ್ವಾಮಿಗಳವರ ಅನುಭವದ ಹಿನ್ನೆಲೆಯಲ್ಲಿ ಪರಿಶ್ರಮಿಸುವುದು ಅವಶ್ಯವಾಗಿದೆ.

■■

# ಹಾನಗಲ್ಲ ಕುಮಾರ ಶಿವಯೋಗಿಗಳು

## • ಪಂಡಿತ ನಾಗಭೂಷಣ ಶಾಸ್ತ್ರಿಗಳು

ಭಾರತ ದೇಶದ ಅದರಲ್ಲಿಯೂ ಕನ್ನಡ ನಾಡಿನ ಪುಣ್ಯಭೂಮಿಯಲ್ಲಿ ಅನಾದಿ ಕಾಲದಿಂದಲೂ ಅಸಂಖ್ಯ ಮಹಾಪುರುಷರು ಮೇಲಿಂದ ಮೇಲೆ ಜನ್ಮವೆತ್ತುತ್ತಲೇ ಬಂದಿರುವರೆಂಬ ಬಗೆಗೆ ಪ್ರಾಜ್ಞ ಭಾರತೀಯರಿಗೆಲ್ಲ ವಿದಿತವಾದ ಸಂಗತಿಯೇ ಆಗಿದೆ. ಶಾಂತಸ್ವಭಾವದ ಆ ಮಹಾಪುರುಷರೆಲ್ಲರೂ ವಸಂತಮಾಸದಂತೆ ಲೋಕ ಹಿತವನ್ನು ಸಾಧಿಸುವಲ್ಲಿಯೇ ತಮ್ಮ ಕೃತಕೃತ್ಯತೆಯನ್ನು ಕಂಡುಕೊಳ್ಳುವಂತಹ ನಿರ್ಮಲ ಹೃದಯದವರು. ಆತ್ಮವಿಸ್ಮೃತಿ ರೂಪ ಮರಣವನ್ನು ಹೊಂದಿದ ಜನಾಂಗದಲ್ಲಿ ಆತ್ಮ ಸಂಸ್ಮೃತಿರೂಪ ಜೀವಕಳೆಯನ್ನು ತುಂಬುವ ಮಹಾ ಕಾರ್ಯವು ಮಹಾಪುರುಷೇತರರಿಂದ ಎಂದೆಂದೂ ಸಾಧ್ಯವಾದದ್ದು. ಅವಿಚಾರದ ತಮಸ್ಸು ಮುಸುಕಿದ ಜನಾಂಗದ ಹೃದಯ ಪದ್ಮದಲ್ಲಿ ಸುವಿಚಾರದ ನಂದಾದೀಪವನ್ನು ಹಚ್ಚಿ ಬೆಳಗುವ ಪ್ರಯತ್ನ ಮಾಡುವ ಮಹಾಪುರುಷರ ಜೀವನ ಚರಿತ್ರಗಳು ಭಾರತೀಯ ಧಾರ್ಮಿಕೇತಿಹಾಸಗಳಲ್ಲಿ ತುಂಬ ಕಂಡು ಬರುವವು. ನಿಜವಾಗಿಯೂ ಇಂತಹ ಮಹಾಪುರುಷರ ಇತಿಹಾಸಗಳೇ ಭಾರತೀಯ ಆಧ್ಯಾತ್ಮಿಕ ಸಂಸ್ಕೃತಿಯ ಹೆಚ್ಚಳವನ್ನು ನಿಚ್ಚಳವಾಗಿ ತೋರಿಸಿಕೊಡುವವು. ನಡೆಶುಚಿ, ನುಡಿಶುಚಿ, ಮನಶುಚಿ, ತನುಶುಚಿ, ಭಾವಶುಚಿ ಈ ಪಂಚಶುಚಿಗಳನ್ನೊಳಗೊಂಡ ಮಹಾತ್ಮರಲ್ಲಿ ಕಂಡು ಬರುವ ಸಂಪತ್ತೆಂದರೆ ಪಾವಿತ್ರ್ಯ, ಪ್ರೇಮ, ತ್ಯಾಗ ಇಂಥವರ ಬಗೆಗೆ ಧಾರ್ಮಿಕ ಜನತೆ ಇಟ್ಟುಕೊಂಡ ಪ್ರೇಮಾಭಿಮಾನ ಗೌರವಗಳು ಅಸದೃಶವಾದವು. ಕೇವಲ ಜಡಸಂಪತ್ತಿನ ವ್ಯಾಮೋಹದಲ್ಲಿ ಮಗ್ನರಾಗಿದ್ದ ಮಹಾ ಮಹಾ ಚಕ್ರವರ್ತಿಗಳ ಪಲ್ಲಕ್ಕಿಗಳನ್ನು ಹೊರುವ ಪ್ರಸಂಗ ಬಂದಾಗ ಪೂರ್ಣ ಹಿಂಜರಿಯುತ್ತಿದ್ದ ವ್ಯಕ್ತಿಗಳು ಸತ್ಪುರುಷರನ್ನು ಪಲ್ಲಕಿಯಲ್ಲಿ ಕೂಡ್ರಿಸಿ ಹೊತ್ತು ನಡೆಯುವ ಪ್ರಸಂಗವೊದಗಿ ಬಂದಾಗ ಅಹೋಭಾಗ್ಯವೆಂದು ಭಾವಿಸುತ್ತ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ನಾ ಮುಂದೆ ತಾ ಮುಂದೆ ಎಂದು ಧಾವಿಸಿ ಬರುವ ದೃಶ್ಯವು ಅಚ್ಚರಿಯದೇನಲ್ಲ. ನಿಜವಾದ ಧಾರ್ಮಿಕ ಪ್ರಜ್ಞೆಯನ್ನು ಕಳಕೊಂಡು ಅಪಮಾರ್ಗದಲ್ಲಿ ಸಾಗಿ ತೀರ ಅವನತಿಯನ್ನು ಹೊಂದುತ್ತಿದ್ದ ವ್ಯಕ್ತಿಗಳನ್ನು ಕಣ್ಣಾರೆ ಕಂಡ ಮಹಾಪುರುಷರು ಸುಮ್ಮನೆ ಕಣ್ಣು ಬಡಿಯುತ್ತ ಕುಳಿತುಕೊಳ್ಳಲು ಎಂದೂ ಮನಸ್ಸು ಮಾಡರು. ಅವರ ನಿಜವಾದ ಪೂಜೆಯೆಂಬುದು ಪರಹಿತಕಾರ್ಯವೇ ಆಗುವದು.

> ಸಂತೋಷಂ ಜನಯೇತ್ ಪ್ರಾಜ್ಞಸ್ತದೇವೇಶ್ವರ ಪೂಜನಂ ।
> 'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ'

ಇವೇ ಮೊದಲಾದ ಸೂಕ್ತಿಗಳು ಸತ್ಪುರುಷರ ನೈಜ ಜೀವನದ ಪರಿಚಾಯಕವಾಗಿರುವವು.

ಇಂತಹ ಮಹಾಪುರುಷರ ಪಂಕ್ತಿಯಲ್ಲಿ ಹಾನಗಲ್ಲ ಕುಮಾರ ಮಹಾಶಿವಯೋಗಿಗಳು ತಮ್ಮದೇ ಆದ ವೈಶಿಷ್ಟ್ಯವನ್ನು ಸರ್ವಾತ್ಮನಾ ಪಡೆದುಕೊಂಡವರು. ಇವರು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಅನಾದಿ ಸಂಸಿದ್ಧವಾದ ವೀರಶೈವ ಧರ್ಮದ ಪುನರುತ್ಥಾನ ಮಹಾಕಾರ್ಯವು ನಡೆಯಬೇಕಾದಾಗ ಸಮರ್ಥ ಕಾರಣಿಕ ಮಹಾಪುರುಷ ರೂಪದಲ್ಲಿ ಕಾಣಿಸಿಕೊಂಡರು.

ಇವರು ತಮ್ಮ ಕಾರ್ಯಕ್ಷೇತ್ರದಲ್ಲಿ ನಡಬಿಗಿದು ನಿಂತುಕೊಂಡದ್ದಷ್ಟೇ ತಡ ಸಮಾಜದ ನಾಡಿನ ಜನರೆಲ್ಲರೂ ಶಿವಯೋಗಿಗಳಿಗೆ ತಮ್ಮ ಹಾರ್ದಿಕ ಭಕ್ತಿ ಭಾವಗಳನ್ನು ಸಮರ್ಪಿಸಲು ಮುಂದಾಗಿಯೇ ಬಿಟ್ಟರು. ಇಂಥ ಪ್ರಸಂಗದಲ್ಲಿಯೂ ಪೂಜ್ಯ ಶಿವಯೋಗಿಗಳು ಆತ್ಮ ನಿರೀಕ್ಷಣೆಯನ್ನು ಮಾಡಿಕೊಳ್ಳುತ್ತ ಸ್ವಕರ್ತವ್ಯಗಳಲ್ಲಿಯೇ ತನ್ಮಯರಾಗಿ ಬಿಡುತ್ತಿದ್ದರಲ್ಲದೆ ಜನರಿಂದ ಬರುವ ಮಾನಮರ್ಯಾದೆಗಳ ಬಗ್ಗೆ ತಮ್ಮ ಚಿತ್ತವನ್ನು ಎಷ್ಟೂ ಹರಿಸುತ್ತಿರಲಿಲ್ಲ. ಇದು ಶಿವಯೋಗಿಗಳ ಮಹಾವ್ಯಕ್ತಿತ್ವವನ್ನು ಎತ್ತಿ ತೋರಿಸುವದಾಗಿತ್ತು. ಜನರು ನೀಡುವ ಮಾನಮರ್ಯಾದೆಗಳತ್ತ ತಮ್ಮ ದೃಷ್ಟಿಯನ್ನು ಸದಾ ಹರಿಸುವ ವ್ಯಕ್ತಿಗಳು ಜನತೆಯ ಹಿತವನ್ನು ಸಾಧಿಸುವ ಸಾಮರ್ಥ್ಯವನ್ನು ಕಳೆದುಕೊಂಡವರೇ ಆಗುವರು. ಜನಸೇವೆಯನ್ನು ಜಗದೀಶನ ಸೇವೆಯೆಂದು ನಂಬಿದ್ದ ಬಸವಾದಿ ಪ್ರಮಥರು ಅನ್ಯರ ಹೊಗಳಿಕೆಯನ್ನು

ಆತ್ಮಪ್ರಗತಿಯಲ್ಲಿ ದೊಡ್ಡ ವಿಘ್ನಕಾರಿಯೆಂದು ತಿಳಿಯುತ್ತಿದ್ದರೆಂಬುದನ್ನು ಅವರ ವಾಣಿಯಿಂದಲೇ ತಿಳಿದು ಬರುವದು. "ಎನ್ನವರೆನ್ನ ಹೊಗಳಿ ಹೊಗಳಿ ಹೊನ್ನ ಶೂಲಕ್ಕಿಕ್ಕಿದರು" ಎಂದು ಹೇಳುವ ಭಾವ ಎಷ್ಟು ಜನ ಪರಹಿತ ಸಾಧಕರೆಂಬವರಲ್ಲಿರುವದೋ ನೋಡಬೇಕು.

ಅನಾದಿ ಸಂಸಿದ್ಧವಾದ ವೀರಶೈವ ಧರ್ಮವನ್ನು ಎತ್ತಿ ಹಿಡಿಯುವ ಮಹಾಕಾರ್ಯಗಳಲ್ಲಿ ತೊಡಗಿದ ಕುಮಾರ ಶಿವಯೋಗಿಗಳಿಗೆ ಸರ್ವಾತ್ಮ ಭಾವದಿಂದ ವರ್ತಿಸುವದಕ್ಕಿಂತ ಮತ್ತಾವುದೂ ಅವರಿಗೆ ಗೋಚರಿಸುತ್ತಿರಲಿಲ್ಲ. ಧರ್ಮ ಹಾಗೂ ಸಮಾಜದ ಪುನರುತ್ಥಾನ ಕಾರ್ಯದಲ್ಲಿ ಸಮಯ ಕಳೆಯುವಲ್ಲಿ ದೊರೆಯುವ ಆನಂದ ಅಪರಿಮಿತವಾದುದು.

ಪೂಜ್ಯ ಶಿವಯೋಗಿಗಳು ತಾವು ಕೈಕೊಂಡ ಕಾರ್ಯಗಳಲ್ಲಿ ಅತ್ಯಂತ ಮಹತ್ವ ಪಡೆದವೆರಡು. ಅವೇ ಅ-ಭಾ. ವೀರಶೈವ ಮಹಾಸಭೆ, ಮತ್ತು ಶಿವಯೋಗ ಮಂದಿರ, ಮೊದಲನೆಯದು ವೀರಶೈವ ಸಮಾಜ ಪುರುಷನ ಸರ್ವತೋಮುಖವಾದ ಬಾಹ್ಯ ಸುಧಾರಣೆಯ ಸಾಧನಗಳ ಬಗೆಗೆ ಕೂಲಂಕಷವಾಗಿ ವಿಚಾರಿಸಿ ನಿರ್ಣಯಿಸಲು ಉಪಾಯಪೂರಿತವಾಗಿತ್ತು. ಎರಡನೆಯದು ಸಮಾಜ ಪುರುಷನ ಅಂತರಂಗದ ಪಾವನತೆ ಹಾಗೂ ಸ್ಥಿರತೆಯನ್ನುಂಟು ಮಾಡಿ ಆತ್ಮಾನುಭೂತಿಯ ಮಹಾ ಬೆಳಕನ್ನು ಬೆಳಗಲು ಸಾಧನಭೂತವಾಗಿತ್ತು. ಇವೆರಡು ಮಹಾಕಾರ್ಯಗಳನ್ನು ವೀಕ್ಷಿಸುವವರಿಗೆ ಕುಮಾರ ಶಿವಯೋಗಿಗಳು ಎಂಥ ಕರ್ಮಕೌಶಲ್ಯ ಪಡೆದವರಾಗಿದ್ದರೆಂಬ ಕಲ್ಪನೆಯು ಸಹಜವಾಗಿಯೇ ಮೂಡಿ ಬರದಿರಲಾರದು. ಇನ್ನೊಂದು ದೊಡ್ಡ ವ್ಯಕ್ತಿಗಳ ಬಗೆಗೆ ತಿಳಿದುಕೊಳ್ಳುವದು ಅತ್ಯವಶ್ಯವಾಗಿದೆ. ಅವರು ಹೊರಗೆ ನಿರ್ಧನಿಕರಾಗಿ ಕಂಡು ಬಂದರು ಅಂತಸ್ಸತ್ವದ ಬಲದಿಂದ ಎಂಥ ಕಠಿಣ ಕಾರ್ಯಗಳನ್ನೂ ಸುಲಭವಾಗಿಯೇ ಸಾಧಿಸಬಲ್ಲರೆಂಬುವದು.

"ಕ್ರಿಯಾಸಿದ್ಧಿಃಸತ್ವೇ ವಸತಿ ಮಹಾತಾಂನೋಪಕರಣೇ"

ಎಂಬ ಸೂಕ್ತಿಯು ಮಹಾಪುರುಷರ ದಿವ್ಯವ್ಯಕ್ತಿತ್ವದ ಸುಂದರ ಶಬ್ದ ಚಿತ್ರವೇ ಆಗಿರುವದು. ಬೇಕಾದಷ್ಟು ಉಪಕರಣಗಳ ಅನುಕೂಲವಿದ್ದಾಗಲು ಯಾವ ಮಹಾಕಾರ್ಯವನ್ನು ಸಾಧಿಸದ, ಯಾವ ಉಪಕರಣಗಳ ಅನುಕೂಲವಿಲ್ಲದಿದ್ದಾಗಲೂ ಮಹಾ ಮಹಾ ಕಾರ್ಯಗಳನ್ನು ಸಾಧಿಸುವವರನ್ನು ನಾವು ಕಂಡದ್ದುಂಟು. ಇದಕ್ಕೆಲ್ಲ ಅಂತಸ್ಸತ್ವವಿಹೀನತೆ, ಅಂತಸ್ಸತ್ವದ ಇರುವಿಕೆ ಕಾರಣ.

ಕುಮಾರ ಶಿವಯೋಗಿಗಳು ತಮ್ಮ ಅಂತಸ್ಸತ್ವದ ಪ್ರಭಾವದಿಂದಲೇ ಎಲ್ಲ ಮಹಾ ಕಾರ್ಯಗಳನ್ನು ಸುಲಭವಾಗಿಯೇ ನಿರ್ವಹಿಸುವವ ರಾಗಿದ್ದರು. ಇವತ್ತಿಗೂ ಅವರು ನಿರ್ಮಿಸಿದ ಉಭಯ ಸಂಸ್ಥೆಗಳು ಅವರ ಅಂತಸ್ಸತ್ವದ ಪ್ರತೀಕವಾಗಿ ಉಳಿದುಕೊಂಡಿರುವವು.

ಕುಮಾರ ಶಿವಯೋಗಿಗಳು ತಮಗಿಂತ ಪೂರ್ವದಲ್ಲಿ ಆಗಿ ಹೋದ ಬಸವಾದಿ ಪ್ರಮಥರು, ರೇಣುಕಾದ್ಯಾಚಾರ್ಯರು, ಪ್ರಭು ಮೊದಲಾದ ನಿರಂಜನ ಮೂರ್ತಿಗಳು ಯಾವ ಧರ್ಮದ ನಿರಂಜನ ಮೂರ್ತಿಗಳು ಯಾವ ಧರ್ಮದ ಏಳ್ಗೆಗಾಗಿ ಅನವರತ ಪ್ರಯತ್ನಿಸಿದರೊ ಅಂತಹ ವೀರಶೈವ ಧರ್ಮದ ರಕ್ಷಣೆಯೇ ಕುಮಾರ ಶಿವಯೋಗಿಗಳ ಜೀವನದ ಚರಮ-ಪರಮ ಗುರಿಯಾಗಿತ್ತು. ಸಮಾಜದಲ್ಲಿ ಮಠಗಳು, ಮಠಾಧಿಪತಿಗಳು ಇರುವದು ಜನಾಂಗದ ಕಲ್ಯಾಣೈಕ ದೃಷ್ಟಿಯಿಂದಲ್ಲವೇ ! ಅದು ಸಾಧ್ಯವಾಗಬೇಕಾದರೆ ಮಠಾಧಿಕಾರಿಗಳು ಸಚ್ಚರಿತ್ರರೂ, ತತ್ತ್ವವೇತ್ತರೂ ಕಾರ್ಯತತ್ಪರರೂ ಆಗಿರಲೇಬೇಕೆಂಬುದು ನಿರ್ವಿವಾದವಾಗಿರುವದು. ಇಂಥ ಮಹಾ ವ್ಯಕ್ತಿಗಳನ್ನು ಸಿದ್ಧಪಡಿಸುವದಕ್ಕಾಗಿ ಪ್ರಯತ್ನಿಸಿದ್ದು ಕುಮಾರ ಶಿವಯೋಗಿಗಳ ದೂರದರ್ಶಿತ್ವ ಹಾಗೂ ಕಾರಣಿಕ ಮಹಾಪುರುಷತ್ವದ ದ್ಯೋತಕವಲ್ಲದೆ ಮತ್ತೇನು !

ಶಿವಯೋಗ ಮಂದಿರ ಸಂಸ್ಥೆಯು ಭಾರತದ ಆಧ್ಯಾತ್ಮಿಕ ಸಂಸ್ಥೆಗಳಲ್ಲಿಯೇ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿರುವದು. ಇಂತಹ ಸಂಸ್ಥೆಯನ್ನು ಕಟ್ಟಿದವರ ಬಗ್ಗೆ ಅವರ ಸಮಕಾಲೀನರಾದ ಅನೇಕ ಪೂಜ್ಯ ಮಹಾಸ್ವಾಮಿಗಳು ಕುಮಾರ ಶಿವಯೋಗಿಗಳ ಬಗೆಗೆ ಗೌರವ ಬುದ್ಧಿಯನ್ನಿಟ್ಟುಕೊಂಡದ್ದೇನೂ ಅಚ್ಚರಿ ಸಂಗತಿಯಲ್ಲ. ಅಥಣಿ ಶ್ರೀ ಮುರುಘೇಂದ್ರ ಶಿವಯೋಗಿಗಳು, ಇಲಕಲ್ಲ ವಿಜಯಮಹಾಂತ ಶಿವಯೋಗಿಗಳು, ಹಾಲಕೆರೆಯ ಶ್ರೀ ಅನ್ನದಾನ ಶಿವಯೋಗಿಗಳು ಮತ್ತು ಸೊಲ್ಲಾಪುರದ ಶ್ರೀ ವೀರೇಶ ಶಿವಶರಣರು ಮೊದಲಾದವರು ಕುಮಾರ ಶಿವಯೋಗಿಗಳ ಬಗೆಗೆ ಹಾರ್ದಿಕ ಪ್ರೇಮಾದರಗಳನ್ನು ತೋರಿಸುತ್ತಲಿದ್ದರೆಂಬುದನ್ನು ಪ್ರತ್ಯಕ್ಷ ನೋಡಿದವರು ಕೆಲವರಿನ್ನೂ ಬದುಕಿಕೊಂಡಿರುವರು.

ನಾವು ೧೯೩೫ನೆಯ ಸಾಲಿನಲ್ಲಿ ಕಾಶೀಕ್ಷೇತ್ರಕ್ಕೆ ಉಚ್ಚ ಶಿಕ್ಷಣಕ್ಕಾಗಿ ಹೊರಡುವ ಪ್ರಸಂಗದಲ್ಲಿ ಹಾಲಕೆರೆಯ ಶ್ರೀಮದನ್ನದಾನಿ ಮಹಾಸ್ವಾಮಿಗಳು ನಮಗೆ ಅಪ್ಪಣೆಕೊಡಿಸಿದ್ದು ಹೀಗೆ -

'ಪೂಜ್ಯ ಹಾನಗಲ್ಲ ಕುಮಾರ ಮಹಾಸ್ವಾಮಿಗಳು ದರ್ಶನಾಶೀರ್ವಾದಗಳನ್ನು ಪಡೆದೇ ನೀವು ಕಾಶೀ ಕ್ಷೇತ್ರಕ್ಕೆ ಹೊರಡಬೇಕು' ಹಾಗೆ ಪೂಜ್ಯರ ಅಪ್ಪಣೆಯಾಗಬೇಕಾದರೆ ಹಾನಗಲ್ಲ ಪೂಜ್ಯ ಮಹಾಸ್ವಾಮಿಗಳಲ್ಲಿ ಅವರಿಗೆ ನಂಬಿಗೆಯಿದ್ದಿತೆಂಬುದು ವ್ಯಕ್ತವಾಗುವದು ಆದರೆ ನಮಗಾಗ ಅನುಕುಲವಾಗದ್ದಕ್ಕೆ ಹಾಗೇ ಹೊರಡುವ ಪ್ರಸಂಗ ಬಂತು. ಪುನಃ ಮಾರನೆಯ ವರ್ಷ ಕಾಶಿಯಿಂದ ಬಂದಾಗ ಪೂಜ್ಯ ಹಾನಗಲ್ಲ ಕುಮಾರ ಸ್ವಾಮಿಗಳ ದರ್ಶನ ಪಡೆದುಕೊಂಡದ್ದು ಇಲಕಲ್ಲ ಮಠಕ್ಕೆ ದೋತ್ಯಾಳ ದೇವರನ್ನು ಅಧಿಕಾರಿಗಳನ್ನಾಗಿ ಮಾಡುವ ಶುಭಸನ್ನಿವೇಶದಲ್ಲಿ ಶಿವಯೋಗ ಮಂದಿರದಿಂದ ಒಂದೇ ವಾಹನದಲ್ಲಿ ಕುಮಾರ ಶಿವಯೋಗಿಗಳ ಅನ್ನದಾನಿ ಮಹಾಸ್ವಾಮಿಗಳ ಕೂಡ ಇಲಕಲ್ಲಿಗೆ ಹೋದದ್ದು ನನ್ನ ಅಹೋ ಭಾಗ್ಯವೆಂದು ಭಾವಿಸಿದೆ.

ಶ್ರೀ ಕುಮಾರ ಶಿವಯೋಗಿಗಳಂಥ ಮಹಾವ್ಯಕ್ತಿಗಳಿಗೆ ಜನ್ಮಕೊಡುವಂತಹ ಭಾಗ್ಯ ಪಡೆದ ಕನ್ನಡಮ್ಮನಿಗೆ ಎಷ್ಟು ಧನ್ಯವದಗಳನ್ನರ್ಪಿಸಿದರೂ ಕಡಿಮೆಯೇ! ಮತ್ತೊಮ್ಮೆ ಕುಮಾರಶಿವಯೋಗಿಗಳು ಮೈದೋರಿ ವೀರಶೈವ ಸಮಾಜವನ್ನು ಎತ್ತಿ ಹಿಡಿಯುವ ಮಹಾಕಾರ್ಯವನ್ನೆಸಗುವಂತೆ ಕರುಣಿಸಲೆಂದು ಅನನ್ಯಭಾವದಿಂದ ಜಗಚ್ಚಾಲಕನಾದ ಮಹಾದೇವನನ್ನು ಪ್ರಾರ್ಥಿಸಲಾಗುವದು.

■■

# ಹಾನಗಲ್ಲ ಶ್ರೀಗಳು ಮತ್ತು ಒಕ್ಕಲುತನ

• ಶ್ರೀ ಬಿ. ಎಂ. ಹೊರಕೇರಿ, ಬಾದಾಮಿ

ಯಾವದೇ ಧರ್ಮಗ್ಲಾನಿಯ ಕಾಲಕ್ಕೆ ಈಶ್ವರೀ ಸಂಕೇತದಂತೆ, ಮಹಾನುಭಾವರು ಅವತರಿಸಿ, ಆ ಧರ್ಮ ಜಾಗ್ರತಿಯನ್ನು ಮಾಡುತ್ತ ಬಂದಿರುತ್ತಾರೆ. ಆ ಪ್ರಕಾರ ವೀರಶೈವ ಧರ್ಮದ ಜಾಗ್ರತಿಮಾಡಿ ಧರ್ಮದ ಹೆಚ್ಚಳ ಹಾಗೂ ಪ್ರಗತಿಯನ್ನುಂಟುಮಾಡಿದ ಮೊದಲಿಗರೆಂದರೆ–ಮಹಾನುಭಾವರಾದ ಶ್ರೀರೇಣುಕಾದ್ಯಾಚಾರ್ಯರು, ಭಕ್ತಿಭಾಂಡಾರಿ ಬಸವಣ್ಣನವರು ಹಾಗೂ ಆಗಿನ ಶರಣವೃಂದವು. ಆನಂತರ ವೀರಶೈವ ಧರ್ಮದಲ್ಲಿ ಇನ್ನೂ ಉಳಿದ ಹಲಕೆಲವು ಮೂಢ ರೂಢಿಗಳನ್ನೂ, ಪರಂಪರಾಗತವಾಗಿ ಬಂದ ಹಳೆಯ ಸಂಪ್ರದಾಯಗಳನ್ನೂ ಕಿತ್ತೊಗೆದು, ವೀರಶೈವ ಧರ್ಮದ ನಿಜ ತತ್ವಗಳ ತಿರುಳಿನ ಬೆಳಕನ್ನು ಮತ್ತೊಮ್ಮೆ ಜಗತ್ತಿಗೆ ಬೀರಿ, ಧರ್ಮ ಜಾಗ್ರತಿಯನ್ನುಂಟುಮಾಡಿದ ದ್ವಿತೀಯ ಅವತಾರಿಗಳೆಂದರೆ, ಪರಮ ಪೂಜ್ಯ ತಪಸ್ವಿಗಳಾದ ಲಿಂಗೈಕ್ಯ ಶ್ರೀಹಾನಗಲ್ಲ ಕುಮಾರ ಸ್ವಾಮಿಗಳವರು. ಶ್ರೀಗಳವರು, ತಮ್ಮ ಇಡೀ ಜೀವನವನ್ನೇ ವೀರಶೈವ ಧರ್ಮದ ಉನ್ನತಿಗಾಗಿ ಮೀಸಲಾಗಿಸಿಕೊಂಡು, ತಮ್ಮ ಅವಿಶ್ರಾಂತ ಸಮಾಜ ಸೇವೆಯಿಂದ ವೀರಶೈವ ಧರ್ಮದ ಸ್ಥಾನ ಮಾನಗಳನ್ನು ನಮ್ಮ ನಾಡಿನ ಇನ್ನುಳಿದ ಧರ್ಮಗಳಂತೆ, ಮೇಲ್ಪಂಕ್ತಿ ಹಾಗೂ ಮೇಲಂತಸ್ತಿಗೆ ತಂದವರೆಂದು ಕೈ ಎತ್ತಿ ಹೇಳಬಹುದು.

ವೀರಶೈವ ಧರ್ಮದಲ್ಲಿ, ಈ ತರದ ಪ್ರಗತಿ, ಹಾಗೂ ಸುಧಾರಣೆಗಳನ್ನುಂಟು ಮಾಡುವುದಕ್ಕೆಂದು ನಾಡಿನ ಬೇರೆ ಬೇರೆ ಕಡೆಗೆ ಧರ್ಮ ಪ್ರಚಾರ ಹಾಗೂ ಬೋಧನೆಗಳ ಸಲುವಾಗಿ ಯೋಗ್ಯ ಅನುಭವಿಕ ಧರ್ಮಾಧಿಕಾರಿಗಳನ್ನು ತಯಾರಿಸುವದಕ್ಕೆಂದು, ಶಿವಯೋಗ ಮಂದಿರದಂತಹ ತಪೋಭೂಮಿಯೊಂದನ್ನು (ಧರ್ಮತರಬೇತು ಕೇಂದ್ರವನ್ನು) ಸ್ಥಾಪನೆ ಮಾಡಿದರು.

ದಕ್ಷಿಣ ಕಾಶಿಯೆಂದು, ಹೆಸರುವೆತ್ತ ಶ್ರೀಮಹಾಕೂಟ ಕ್ಷೇತ್ರದ ಮೂಡಣ ದೆಸೆಗೆ ಹರದಾರಿ ಅಂತರದಲ್ಲಿ, ನಿಶಾಂತ ನಿಸರ್ಗ ರಮಣೀಯ ವನಸೌಂದರ್ಯದ ಪ್ರದೇಶದಲ್ಲಿ, ಮಲಾಪಹಾರಿ ನದಿಯ ಎಡತಟಾಕದ ಮೇಲೆ ಬಿಲ್ವ, ಶಮಿ, ಇನ್ನಿತರ ಕಾಡು ಹೂ ಗಿಡಗಳ ವನಸೌಂದರ್ಯದ ಮಧ್ಯದಲ್ಲಿ ಶ್ರೀಹಾನಗಲ್ಲ ಕುಮಾರ ಸ್ವಾಮಿಗಳವರು, ತಮ್ಮ ತಪೋಭೂಮಿಯನ್ನು ಆರಿಸಿ ಶಿವಯೋಗಮಂದಿರವನ್ನು ನಿರ್ಮಿಸಿದರು. ಶಿವಯೋಗಮಂದಿರವೆಂದರೆ ಅದೊಂದು ಶಾಂತಿಮಂದಿರ. ಯೋಗಮಂದಿರ ಮುಕ್ತಿಮಂದಿರ. ಕಟ್ಟಾರಣ್ಯದಂತಿದ್ದು ಕಳ್ಳಕಾಕರಿಗೆ ಆಶ್ರಯವಾಗಿದ್ದ, ಕಾಡು ಮೃಗಗಳಿಗೆ ಬೀಡಾಗಿದ್ದ ಈ ಸ್ಥಳದಲ್ಲಿ ಶ್ರೀಗಳವರು, ತಮ್ಮ ತಪೋಭೂಮಿಯನ್ನಾಗಿ ಮಾಡಿ ಪಾವನಗೊಳಿಸಿದರು. ಈ ಪ್ರದೇಶವು ಮನುಷ್ಯ ವಸತಿಯಿಂದ ಕಾಡಿನಲ್ಲಿ ಬಹುದೂರ ಇದ್ದು, ಅಲ್ಲಿ ಲೌಕಿಕ ವ್ಯವಹಾರದ ಆಡಂಬರಕ್ಕೆ ಆಸ್ಪದವಿಲ್ಲವಾಗಿದೆ. ಇಂತಹ ಶಾಂತಿ ಮಂದಿರದಲ್ಲಿ ನಾಡಿನಲ್ಲಿರುವ ವೀರಶೈವ ಧರ್ಮದ ಗುರುವರ್ಗದ ವಟುಗಳಿಗೆ, ಧರ್ಮಶಾಸ್ತ್ರ, ಸಂಸ್ಕೃತಿ, ತತ್ವಗಳನ್ನಲ್ಲದೆ, ಬ್ರಹ್ಮಚರ್ಯಪಾಲನೆ, ಯೋಗಾಭ್ಯಾಸ ಸಾಧನೆಗಳ ಉಚ್ಚತರಗತಿಯ ಅಭ್ಯಾಸವನ್ನು ಕಲಿಸಿ, ತಯಾರಾದ ಧರ್ಮಗುರುಗಳ ಮುಖಾಂತರ ಧರ್ಮಪ್ರಚಾರಕ ಬೋಧೆಗಳನ್ನು ಮಾಡುತ್ತ ಬಂದದ್ದಾಗಿದೆ. ಸದ್ಯಕ್ಕೆ ನಮ್ಮ ನಾಡಿನ ಮುಖ್ಯ ವೀರಶೈವಧರ್ಮಪೀಠಗಳಲ್ಲಿ ಬೆಳಗುತ್ತಿರುವ ಬಹುಜನ ಧರ್ಮಾಧಿಕಾರಿಗಳೆಲ್ಲರೂ, ಶಿವಯೋಗಮಂದಿರದ ವಿದ್ಯಾಲಯದಿಂದ ತರಬೇತು ಹೊಂದಿದವರೇ ಎಂದೆನ್ನಬಹುದು.

ಈ ಧರ್ಮೋನ್ನತಿಯ ಕೆಲಸದ ಜೊತೆಗೆ, ಧರ್ಮಕಾರ್ಯಕ್ಕೆ ಅಡಿಗಲ್ಲಿನಂತಿರುವ ನಮ್ಮ ನಾಡ ಮುಖ್ಯ ಉದ್ಯಮವಾದ ಒಕ್ಕಲುತನವು ಸುಧಾರಿಸಿದರೆ ಧರ್ಮವು ತಾನಾಗಿಯೇ ಸುಧಾರಿಸುವದೆಂಬ ಉದ್ದೇಶವನ್ನಿಟ್ಟುಕೊಂಡು, ಒಕ್ಕಲುತನ, ಕೈಗಾರಿಕೆ, ಸಂಗೀತ ಮುಂತಾದ ಉಪಕಸಬುಗಳನ್ನು ಧರ್ಮಕಾರ್ಯದ ಜೊತೆಗೆ ಸೇರಿಸಿದರು. ಹೀಗೆ ಶ್ರೀಗಳವರು, ಪರಮಪೂಜ್ಯ ಶಿವಯೋಗಿಗಳಿದ್ದರಲ್ಲದೆ, ಒಳ್ಳೇ ನೇಗಿಲ ಯೋಗಿಗಳೂ ಆಗಿದ್ದರು. ನೇಗಿಲಕುಳದೊಳಗಡಗಿದೆ ಕರ್ಮ. ನೇಗಿಲ ಪವಿತ್ರಕಾಯಕ, ವಂಚನೆಯಿಲ್ಲದೆ, ಹುಟ್ಟುವಳಿ (ಉತ್ಪನ್ನ) ತರುವಂತಹ ಕೆಲಸ ಮನ್ನಣೆ ಪಡೆದು ಯಾರನ್ನೂ ವಂಚಿಸದೆ, ಸೇವೆಯ ಫಲವನ್ನು ಪಡೆಯುವದು ಕೇವಲ

ಒಕ್ಕಲುತನದಿಂದಲೇ, ಎಂಬ ಪವಿತ್ರ ಗುರಿಯನ್ನಿಟ್ಟುಕೊಂಡಿದ್ದರು. ಗಳಿಸಿದ ಅನ್ನದ ಗುಣವು ಮಾನವನ ದೇಹ ಮನಸ್ಸಿನ ಮೇಲೆ ಪರಿಣಾಮವಾಗುವದು ನಿಸರ್ಗದ ನಿಯಮವಂತೆ. ಅಂತೆಯೇ ಶ್ರೀಗಳವರು ಸ್ವಕಷ್ಟಾರ್ಜಿತ ಅನ್ನದಿಂದ ಶಿವಯೋಗಮಂದಿರದ ವಟುವೃಂದವೆಲ್ಲ ಪವಿತ್ರಕಾಯ ಹಾಗೂ ಮನಸ್ಸುಳ್ಳವರಾಗಬೇಕೆಂಬ ವಿಚಾರದಿಂದಲೇ, ಒಕ್ಕಲುತನದಂತಹ ನಿರ್ವಂಚನೆಯ ಪವಿತ್ರ ಕಾಯಕವನ್ನು ಕೈಕೊಂಡರು. ಸೃಷ್ಟಿಕರ್ತನು ಭೂಗರ್ಭದಲ್ಲಿ ಅಪಾರ ಸಂಪತ್ತನ್ನು ಅನೇಕ ತೆರನಾಗಿ ಹೂಳಿ, ಯಾರಿಗೂ ಕದಿಯಲಿಕ್ಕೆ ಅಥವಾ ವಂಚಿಸಲು ಬಾರದಂತೆ ನಿರ್ಮಿಸಿದ್ದಾನೆ. ದುಡಿತಕ್ಕೆ ಸರಿಯಾದ ಫಲವನ್ನು (ಸಂಪತ್ತನ್ನು) ತಕ್ಕೊಳ್ಳುವ ಯೋಜನೆ ಮಾಡಿದ್ದಾನೆ. ಅಂತೆಯೇ ಶ್ರೀಗಳವರು ಶಿವಯೋಗಮಂದಿರ ಎರಡೂ ಮಗ್ಗಲುಗಳಲ್ಲಿ ಮುಳ್ಳುಗಳಿಂದ ಪೀಡಿತವಾದ ಕಾಡ ಮೃಗಗಳಿಗೆ ಆಶ್ರಯವಾಗಿದ್ದ ಪಡಭೂಮಿಯ ಸ್ವಾಮಿತ್ವವನ್ನು ಪಡೆದು, ಭೂಸುಧಾರಣೆಯಲ್ಲೊಂದಾದ ಪಡಭೂಮಿ ಸಾಗುವಳಿಯ ಕಾಯಕವನ್ನು ಕೈಕೊಂಡರು. ಶಿವಯೋಗಮಂದಿರ ಸಂಸ್ಥೆಯು, ಪರಾವಲಂಬಿಯಾಗದೆ, ಸ್ವಾವಲಂಬಿಯಾಗಿ ಸ್ವಸಂಪೂರ್ಣತೆಯುಳ್ಳದ್ದಾಗಬೇಕೆಂಬ ಗಹನ ವಿಚಾರವನ್ನಿಟ್ಟೇ, ಮಂದಿರಕ್ಕೆ ಅವಶ್ಯವುಳ್ಳ ಧಾನ್ಯದವಸಗಳನ್ನು ಸಾಕಷ್ಟು ಬೆಳೆಯುವಂತೆ, ಕ್ರಮೇಣ ಹೆಚ್ಚು ಹೆಚ್ಚಾಗಿ ಭೂಸಂಪಾದನೆಯನ್ನು ಮಾಡಿ, ಸಂಸ್ಥೆಗೆ ಅಪಾರವಾದ ಭೂಸಂಪತ್ತಿನ ಸ್ವಾಮಿತ್ವವನ್ನು ದೊರಕಿಸಿಕೊಟ್ಟರು.

ಕರ್ನಾಟಕದಲ್ಲಿ ಮೇಲಿಂದ ಮೇಲೆ ಬರಲಿರುವ ಅರಗಾಲ ಬರಗಾಲಗಳ ಭಯ ಬಾಧೆಗಳಿಂದ ಶಿವಯೋಗಮಂದಿರಕ್ಕೆ ಕೊರತೆ ಯಾಗಬಾರದೆಂಬ ಮುಂದಾಲೋಚನೆಯನ್ನು ಮಾಡಿ, ಮಹಾಕೂಟ, ಕೆಂದೂರು ಗ್ರಾಮಗಳಲ್ಲಿ ಬಿಡಿಗಾವಲಿಯಿಂದ ನೀರುಣ್ಣುವ ಭೂಮಿಯನ್ನು ಸಂಪಾದಿಸಿ, ಅಲ್ಲಿ ಭತ್ತ, ಕಬ್ಬು, ಕಾಯಿಪಲ್ಲೆ, ಹಣ್ಣು ಹಂಪಲಗಳನ್ನು ಬೆಳೆಯಿಸುವ ಯೋಜನೆಯನ್ನಿಟ್ಟುಕೊಂಡರು. ಒಕ್ಕಲುತನದ ಅಭಿವೃದ್ಧಿಗಾಗಿ, ಹೆಣಗಾಡಿದ ಅನೇಕ ಯಾಂತ್ರಿಕ ಸಾಗುವಳಿಯ ಕುರುಹುಗಳ ಅವಶೇಷಗಳು ಟ್ರ್ಯಾಕ್ಟರ ನೇಗಿಲ, ನೀರನ್ನೆತ್ತುವ ರಾಟೆಗಳು ನಮಗೆ ಶ್ರೀಗಳವರ ಯೋಜನೆಯ ನೆನಪನ್ನು ಕೊಟ್ಟು ಎಚ್ಚರಿಸುತ್ತಲಿವೆ.

ಭೂಸೇವೆಯ ಜೊತೆಗೆ ಗೋಸೇವೆಯಂತಹ ಪವಿತ್ರ ಪಶುಪಾಲನೆಯ ಪವಿತ್ರ ಕಾಯಕವನ್ನು ಶಿವಮಂದಿರದ ಒಕ್ಕಲುತನಕ್ಕೆ ಅನುಕೂಲ ಹಾಗೂ ಆಧಾರವಾಗುವಂತೆ ಜೋಡಿಸಿ, ಶಿವಮಂದಿರದಲ್ಲಿ ಅಭ್ಯಸಿಸುವ ಸಾಧಕರಿಗೆ ಸಾತ್ವಿಕ ಆಹಾರದ ಕೊರತೆಯಾಗದಂತೆ, ಆಕಳ ಹಾಲು ಹೈನದ ಪೂರೈಕೆ ಮಾಡುವ ಯೋಜನೆಯನ್ನಿಟ್ಟುಕೊಂಡರು.

ಶಾಸ್ತ್ರೋಕ್ತ ಶುದ್ಧರೀತಿಯಿಂದ ಗೋಮಯದಿಂದ ಭಸ್ಮಗಳನ್ನು ತಯಾರಿಸುವ ಕೈಗಾರಿಕೆಯನ್ನೂ ಜೋಡಿಸಿದರು. ಸಂಸ್ಥೆಯ ಸ್ವಾಮಿತ್ವದಲ್ಲಿರುವ ಭೂಮಿಗಳು ಬಡವಾಗಬಾರದೆಂಬ ಉದ್ದೇಶದಿಂದ ಸಾಕಷ್ಟು ಗೊಬ್ಬರದ ಸಂಗ್ರಹವಾಗಲೆಂದೇ ಆಕಳ ಹಿಂಡಿನ ಪಾಲನೆಯು ಅಡಕವಾದ ವಿಚಾರವಿತ್ತು. ಉತ್ತಮ ಜಾತಿಯ ಹೈನದ ಆಕಳು ಹಾಗು ಬೀಜದ ಹೋರಿ(ಗೂಳಿ)ಗಳನ್ನಿಟ್ಟು ದನಕರುಗಳ ಪೀಳಿಗೆಯನ್ನು ಸುಧಾರಿಸಿ, ದನಕರುಗಳ ಸಂಪತ್ತನ್ನುಂಟು ಮಾಡಿದರು. ಹೀಗೆ ಒಂದಲ್ಲ ಎರಡಲ್ಲ ಅನೇಕ ತೆರನಾಗಿ, ಉಪಯೋಗವಾಗುವ ಬಹುಮುಖವಾದ ಒಕ್ಕಲುತನ ಹಾಗೂ ಗೋಸೇವೆಯ ವ್ಯವಸಾಯವನ್ನು ಉತ್ತಮರೀತಿಯಿಂದ ಹಾಗೂ ಪ್ರಗತಿಪರವಾಗಿ ಸಾಗಿಸುತ್ತ ಕರ್ನಾಟಕಕ್ಕೆ ಆದರ್ಶವಾಗುವಂತಹ ಒಕ್ಕಲುತನ, ವ್ಯವಸಾಯ ಮತ್ತು ಧಾರ್ಮಿಕ ಪ್ರಾತ್ಯಕ್ಷಿಕೆಯ ಕೇಂದ್ರವೊಂದನ್ನು ನಡೆಯಿಸಿದರು.

ಹೀಗೆ ಮಹಾತಪಸ್ವಿಗಳವರು, ರಾಜಕೀಯ ವಿಷಯವೊಂದನ್ನು ಹೊರತು ಪಡಿಸಿ, ಇನ್ನಿತರ ಧಾರ್ಮಿಕ, ಶೈಕ್ಷಣಿಕ, ಒಕ್ಕಲುತನ, ಕೈಗಾರಿಕೆ ಮೊದಲಾದ ಸಾಮಾಜಿಕ ಸಂಬಂಧವಾಗಿ, ವೀರಶೈವ ಧರ್ಮೋತ್ತೇಜಕ ಹಾಗೂ ಪ್ರಗತಿಯ ಪ್ರಯತ್ನಗಳನ್ನು ಶಿವಯೋಗಮಂದಿರ ಸಂಸ್ಥೆಯ ಮುಖಾಂತರ ಕೈಕೊಂಡರು.

ಧರ್ಮೋನ್ನತಿಯ ಹಾಗೂ ಒಕ್ಕಲುತನ ಅಭಿವೃದ್ಧಿಯ ಬಗ್ಗೆ ಶ್ರೀಗಳವರಲ್ಲಿದ್ದ ಅಭಿಮಾನ ಆಕಾಂಕ್ಷೆ, ಪರಿಶ್ರಮಗಳು ಅಸಾಧಾರಣವಾದವುಗಳೆಂಬುದು ನಿರ್ವಿವಾದವಾದ ಮಾತು. ಅಂತೆಯೇ ಅವರು ಪಟ್ಟ ಶ್ರಮ ಪ್ರಯತ್ನಗಳ ಫಲಿತಾಂಶವಾಗಿ, ಶಿವಯೋಗಮಂದಿರ ಸಂಸ್ಥೆಯು ಅಜರಾಮರವಾಗಿ ಉಳಿಯುವಂತೆ ಆಗಿದೆ.

ಈ ಸಂಸ್ಥೆಯ ಅಭಿಮಾನಿಗಳೂ, ಸಮಾಜದ ಪ್ರಮುಖರು, ಶ್ರೀಗಳವರು ಸಂಸ್ಥೆಯ ಪ್ರಗತಿಯ ಸಲುವಾಗಿಯೂ, ಅದರ ಮುಖಾಂತರ ವೀರಶೈವ ಧರ್ಮ ಹಾಗೂ ಒಕ್ಕಲುತನದ ಉನ್ನತಿ ಸಲುವಾಗಿಯೂ, ಅಪಾರವಾದ ಸೇವೆ ಸಲ್ಲಿಸಿದ್ದನ್ನು, ಈಗಲಾದರೂ ಲಕ್ಷಿಸಿ, ಕಾರ್ಯೋನ್ಮುಖರಾದರೇನೇ ಲಿಂ. ಪರಮ ಪೂಜ್ಯ ಶ್ರೀಗಳವರಲ್ಲಿರತಕ್ಕ ನಮ್ಮ ಭಕ್ತಿ ಶ್ರದ್ಧೆ ವಿಶ್ವಾಸಗಳನ್ನು ಸಲ್ಲಿಸುವ ಶ್ರೇಷ್ಠ ಮಾರ್ಗವು. ಶ್ರೀಮಹಾಸ್ವಾಮಿಗಳವರು, ಯಾವ-ಗೊತ್ತು-ಗುರಿ, ವಿಚಾರ, ಆಕಾಂಕ್ಷೆ, ಉತ್ಕಟೇಚ್ಛೆಗಳನ್ನಿಟ್ಟುಕೊಂಡು, ಶಿವಮಂದಿರ

ಸಂಸ್ಥೆಯನ್ನು ಸ್ಥಾಪಿಸಿ ಕಾರ್ಯಪ್ರವೃತ್ತರಾದರೋ ಅಂಥ ಕಾರ್ಯೋನ್ನತಿಯ ಕೆಲಸಗಳನ್ನು ಆಸ್ಥೆಯಿಂದ ವಹಿಸಿ ನಿರ್ವಂಚನೆಯಿಂದ ಸೇವೆಮಾಡಿ ಕೊನೆಗೊಳಿಸುವದೇ ಮಹಾಸ್ವಾಮಿಗಳವರ ಸಜೀವ ಸ್ಮಾರಕವು. ಅದರಿಂದಲೇ ಆ ತಪಸ್ವಿಗಳ ಆತ್ಮಶಾಂತಿಯು.

ಇಷ್ಟೆಲ್ಲ ಪರಿಶ್ರಮ ವಹಿಸಿ, ಕೆಲಸ ಕೊನೆಗಾಣಿಸಿದರೂ, ಶ್ರೀಗಳವರು ಶಿವಾಧೀನರಾಗುವ ಕಾಲಕ್ಕೆ ತಾವು ಕೈಕೊಂಡ ಹಲಕೆಲವು ಕಾರ್ಯಗಳು ಪೂರ್ತಿಯಾಗಲಾರದೆ ಉಳಿದವಂತೆ. ಅದಕ್ಕವರು "ನನ್ನ ಸಮಾಜೋನ್ನತಿಯ ಕಾರ್ಯ ಸಾಕಷ್ಟು ಆಗಲಿಲ್ಲ. ನನ್ನ ಸೇವೆಯು ಇನ್ನೂ ಉಳಿಯಿತು. ಮತ್ತೆ ಜನಿಸಿ ಬರುವೆನು" ಹೀಗೆಂದು ಹಿರಿಯಾಸೆಯ ಸೂಚನೆಯನ್ನು ಅರ್ಪಣೆಮಾಡಿದಂತೆ, ಆ ಪರಂಧಾಮವನ್ನೈದಿದ ಪರಮಪೂಜ್ಯ ತಪಸ್ವಿಗಳವರ ಅರ್ಪಣೆಯ ಗರ್ಭಿತಾರ್ಥವಷ್ಟೇ. ಯಾರ ಯಾರ ಮನಸ್ಸಿನಲ್ಲಿ ಶ್ರೀಗಳವರು ಕೈಕೊಂಡ ಕಾರ್ಯಗಳತ್ತ ಲಕ್ಷ್ಯಹಾಕುವ ಸದ್ಭಾವನೆಯುಂಟಾಗುವದೋ ಆ ಸದ್ಭಾವನೆಯ ಪ್ರಭಾವವೇ ಶ್ರೀಗಳವರು ಜನಿಸಿ ಬಂದಂತೆ. ಅದುವೇ ಆ ಮಹಾಮಹಿಮನ ಸಜೀವ ಸ್ಮಾರಕವು. ಸದ್ಯಕ್ಕೆ ಶ್ರೀಗಳವರ ಅನುಯಾಯಿಗಳ ಹಾಗೂ ಸಂಸ್ಥೆಯ ಹಲಕೆಲವು ಅಭಿಮಾನಿಗಳ ಹೆಸರು ಎತ್ತುವದುಬೇಡ, ಹೃದಯಮಂದಿರದಲ್ಲಿ ಮೇಲ್ಕಾಣಿಸಿದ ಪವಿತ್ರ ಸದ್ಭಾವನೆಯು ಮೂಡಿ ಬೆಳಗುವದು ತೋರುತ್ತಲಿದೆ. ಅದುವೇ ಪರಮ ಪೂಜ್ಯ ತಪಸ್ವಿಗಳ ಆಶೀರ್ವಾದ ಬಲದಿಂದ ಪ್ರಜ್ವಲಿಸಿ, ಸದ್ಯದ ಸಂಸ್ಥೆಯ ತಮವನ್ನು ದೂರೀಕರಿಸುವದು.

ಈ ವರುಷದ ಮುಂಬರುವ ಶ್ರೀಗಳವರ ಪುಣ್ಯಕಾಲದಲ್ಲಿ ನಾವೆಲ್ಲರೂ ಆತನ ಸ್ಮರಣೆಯನ್ನು ಮಾಡಿ ನಮ್ಮೆಲ್ಲರಿಗೆ ಆ ಸದ್ಭಾವನೆಯನ್ನೀಲೆಂದು ಅನನ್ಯಭಾವದಿಂದ ಬೇಡಿಕೊಳ್ಳೋಣ.

■■

## ಕನ್ನಡ ಕುಲಾಚಾರ್ಯ
## ಶ್ರೀ ಹಾನಗಲ್ ಕುಮಾರಸ್ವಾಮಿಗಳು

● ಶ್ರೀ ಮ.ಘ.ಚ. ಶಿವಲಿಂಗ ಶಿವಾಚಾರ್ಯರು, ಪಡಸಲಗಿ

ಸೂರ್ಯದೇವನು ತನ್ನ ನಿತ್ಯಕರ್ಮಕನ್ನುಸರಿಸಿ ಪಶ್ಚಿಮದಿಶೆಯನ್ನು ಸೇರುವ ಹೊತ್ತು. ಮಾಗಿಯ ಕಾಲ. .ಸಂಧ್ಯಾಸುಂದರಿಯ ಸೊಬಗು ಸುತ್ತಲೂ ಪಸರಿಸಿದ್ದಿತು. ಆ ಸುಂದರ ಸಮಯದಲ್ಲಿ ಜೋಯಿಸರ ಹರಳಳ್ಳಿ ಬಸವಯ್ಯನವರ ಸುಪುತ್ರ, ಮಾತೆ ನೀಲಮ್ಮನ ಕಂದ ಬಾಲ ಹಾಲಯ್ಯನು ತನ್ನೂರ ಕುಮುದ್ವತಿಯನ್ನು ದಾಟಿದನು. ಉತ್ತಾನಪಾದ ರಾಜನ ಮಗ ಧ್ರುವನು ತಂದೆಯ ತೊಡೆಯನ್ನು ಬಿಟ್ಟು ಹೋಗುವಾಗ ಧರಿಸಿದ ವಿಷಾದ ಮುದ್ರೆಯು ಅಣ್ಣ ಶಿವಬಸವಯ್ಯನ ಆ ವಿಚಾರದಿಂದ ನಮ್ಮ ಹಾಲಯ್ಯನ ಹಾಲುಗಲ್ಲದ ಮೇಲೆ ವ್ಯಾಪಿಸಿತ್ತು.

ಹೊಳೆ ದಾಟಿ ಹಾಲಯ್ಯನು ಕಣ್ಣಿಗೆ ಕಂಡ ಕಾಲುಹಾದಿಯನ್ನೊಂದು ಹಿಡಿದು ಹೊರಟನು. ಕತ್ತಲಾಗುತ್ತ ನಡೆದಿತ್ತು. ಹೆಸರಿಲ್ಲದ ಊರಿಗೆ ಹೊರಟಿರುವ ಹಾಲಯ್ಯನಿಗೆ ಮಾರ್ಗದಲ್ಲಿ ಹಾದಿ ತೋರುವವರು ಯಾರು? ಎಂಟು ವರುಷದ ಹಾಲಯ್ಯ ತನ್ನ ತುಂಟತನಕ್ಕೆ ಅತ್ತ. ಅತ್ತೇ ಅತ್ತ. ಅಳು ಕೇಳಿ ಕೈವಿಡಿದು ಮುದ್ದಿಟ್ಟು ಎತ್ತಿ ಎದೆಗವಚಿಕೊಳ್ಳುವ ಮಮತೆಯ ಮಾತೆ ಅಲ್ಲಿರಲಿಲ್ಲ. ಅರಿಯದ ದಾರಿಯ ಮಧ್ಯದಲ್ಲಿ ಯಾರನ್ನು ಕೇಳಬೇಕು? ಚಿಂತೆಗೊಳಗಾದ. ನೆನಪಿಗೆ ಬಂದಿತು. ಮುದುಕ ಅನಾಥ ಜಂಗಮ ಅಂದು ಹಸಿವೆಯ ಕಳವಳದಿಂದ ಹಾಲಯ್ಯನ ಮನೆಯಮುಂದೆ ಬಂದು 'ಕೋರಾನ್ನದಲಿ ಭಿಕ್ಷೆ' ಎಂದ ನುಡಿ. "ಆ ದನಿ ಕೇಳಿ ತಾಯಿ ತನಗಿಟ್ಟ ಅನ್ನವನು ನಾನೂ ನೀಡಲಿಲ್ಲವೆ ಅವನಿಗೆ? ನಾನೂ ಅಂತೆಯೇ ಮಾಡುವೆ ಸೋತವರಿಗೆ ಶಿವನಿಹನಂತೆ ! ತಂದೆ ನೀನು. ತಾಯಿ ನೀನು. ದೇವಾ !' ಮನಬಿಚ್ಚಿ ಅಂದನು. ನಂಬಿ ಕರೆದಡೆ ಓ ಎನ್ನನೆ ಶಿವನು? ಶಿವ ಮಾರ್ಗದರ್ಶಿಯಾದ. ದೂರದಲ್ಲಿ ಬೆಳಕು ಕಂಡಿತು. ರಾಣಿಬೆನ್ನೂರು ಊರು ಸೇರಿದಾಗ ರಾತ್ರಿ ಬಹಳವಾಗಿತ್ತು. ಜನವೆಲ್ಲ ನಿದ್ದೆ ಹೋಗಿತ್ತು. ಮಧ್ಯ ರಾತ್ರಿ ಎಲ್ಲಿ ಯಾರಲ್ಲಿಗೆ ಹೋಗುವದು? ಯಾರಿದ್ದಾರೆ ತನ್ನವರೆನ್ನುವರು? ಅಂದ ಬಳಿಕ ಧರ್ಮಶಾಲೆಯೇ ಗತಿ. ಹುಡುಕುತ್ತ ಹೋದ ದೂರದಲ್ಲಿ ಧರ್ಮಶಾಲೆ ಸಿಕ್ಕಿತು. ಉಪಾಯವಿಲ್ಲದೆ ಉಪವಾಸ ಮಲಗಿದ. ನಡೆದು ದಣಿದಿದ್ದ. ಸುಖವಾಗಿ ನಿದ್ದೆ ಹತ್ತಿತು. ರಾತ್ರಿ ಕಳೆಯಿತು. ಚಿಲಿಪಿಲಿಯೆಂದು ಹಕ್ಕಿಗಳು ಸೂರ್ಯದೇವನ ಸ್ವಾಗತ ಮಾಡಿದವು. ಹಾಲಯ್ಯನಿಗೂ ಎಚ್ಚರವಾಯಿತು. ನಿತ್ಯಕರ್ಮಗಳನ್ನು ತೀರಿಸಿಕೊಂಡು ಹಸಿವಿನ ಹಂಗಿಗಾಗಿ ಭಿಕ್ಷೆಗೆಂದು ಊರೊಳಕ್ಕೆ ಹೊರಟ. ಎಲ್ಲಿಂದಲೋ ಗಾಳಿಯ ಸಂಗಡ ದನಿಯೊಂದು ಕೇಳಬಂದಿತು– "ಧರೆಗೆ ಯಾಚನೆಯಿಂದ ಲಘುತರಮುಂಟೆ?" ಅದು ಕುಮಾರ ಹಾಲಯ್ಯನ ಹೃದ್ವೀಣೆಯನ್ನು ಮಿಡಿಯಿತು. 'ಬೇಡು'ವದು ಬೇಡವಾಯಿತು. ಊರಮುಂದಿನ ಹೆಮ್ಮರವೊಂದರ ಕೆಳಗೆ ಕಟ್ಟೆಯ ಮೇಲೆ ಸುಮ್ಮನೆ ದೇವನನ್ನು ನೆನೆಯುತ್ತ ಕುಳಿತು ಬಿಟ್ಟ. ಪಾಪ ! ಕಂದನ ಕರೆ ದೇವನಿಗೆ ತಲುಪಿರಬೇಕು. ಊರ ಗೌಡರು ಹಾಲಯ್ಯನ ವಿಚಾರವನ್ನು ಕೇಳಿ ಮರುಗುವರು. ತಮ್ಮ ಮನೆಯಲ್ಲಿಯೇ ಅವನಿಗೆ ಎಲ್ಲವನ್ನು ಅನುಕೂಲ ಪಡಿಸಿಕೊಡುವರು. ಹಾಲಯ್ಯನಿಗೆ ಓದಬೇಕೆಂಬ ಬಯಕೆಯೂ ಕೈಗೂಡಿತು. ಊರ ಗಾವಠಿ ಸಾಲೆಯಲ್ಲಿ ಅವನ ಶಿಕ್ಷಣ ಸಾಗಿತು.

ಹಾಲಯ್ಯನ ಧೀಶಕ್ತಿಗೆ ಆವೂರ ಮಹಾದೇವಮಾಸ್ತರರು ಮೆಚ್ಚಿದ್ದರು. ಐದುವರ್ಷ ಪ್ರಯತ್ನಪಟ್ಟು ಹಾಲಯ್ಯನನ್ನು ಏಳನೇ ವರ್ಗದವರೆಗೂ ಮುಟ್ಟಿಸಿದರು. ಮುಲಕೀ ಪರೀಕ್ಷೆ ಬಂದಿತು. ಪರೀಕ್ಷೆಗಾಗಿ ಧಾರವಾಡಕ್ಕೆ ಪ್ರಯಾಣ ಮಾಡಬೇಕಲ್ಲ ! ಈಗಿನಂತೆ ರೈಲಾಗಲಿ ಮೋಟಾರಾಗಲಿ ಆಗಿನ ಕಾಲದಲ್ಲಿರಲಿಲ್ಲ. ಭಾಗ್ಯವಂತರ ಮಕ್ಕಳು ಕುದುರೆಗಾಡಿಯಲ್ಲಿಯೋ ಎತ್ತಿನ ಗಾಡಿಯಲ್ಲಿಯೋ ಕೂತುಕೊಂಡು ಧಾರವಾಡ ಸೇರಿದರು. ಆದರೆ ನಮ್ಮ ಹಾಲಯ್ಯ ತನ್ನ ಸ್ಥಿತಿಗನುಸಾರವಾಗಿ ಕಾಲುನಡಿಗೆಯಲ್ಲಿಯೇ ಧಾರವಾಡ ಮುಟ್ಟಿ ಪರೀಕ್ಷೆ ಪೂರೈಸಿದ. ಸಕಾಲಕ್ಕೆ ಪರೀಕ್ಷೆಯ ಪರಿಣಾಮವೂ ಹೊರಬಿದ್ದಿತು. ಅವರಲ್ಲಿ ಮಹಾದೇವ ಮಾಸ್ತರರ ನೆಚ್ಚಿನ ಶಿಷ್ಯ

ಹಾಲಯ್ಯನ ನಂಬರು ಬರಲಿಲ್ಲ. ಹಾಲಯ್ಯನಿಗಿಂತ ಮಹಾದೇವಮಾಸ್ತರರಿಗಾದ ಚಿಂತೆ ಬಲು ದೊಡ್ಡದು. ಆ ಚಿಂತೆಯಲ್ಲಿಯೇ ಮಾಸ್ತರರು ಕಣ್ಣು ಮುಚ್ಚಿದರಂತೆ! ಆವೂರ ಜನರು ಹೇಳುತ್ತಾರೆ.

ಬುದ್ಧದೇವನ ಸನ್ಯಾಸಕ್ಕೆ ಹೆಣವನ್ನು ಕಂಡುದೇ ಕಾರಣವಾದಂತೆ, ಭಗವತ್ಪಾದ ಶಂಕರಾಚಾರ್ಯರ ವಿರಕ್ತಿಗೆ ಮೊಸಳೆ ಹಿಡಿದುದೇ ನೆಪವಾದಂತೆ ಹಾಲಯ್ಯನ ಅಭಿಮಾನಿ ಮನಕ್ಕೆ ಪರೀಕ್ಷೆಯ ಪರಿಣಾಮ ಪೆಟ್ಟು ಕೊಟ್ಟಿತು. ಸಂಸಾರಿಯಾಗಿ ಜೀವನವೃತ್ತಿ ಸಾಗಿಸಲು ಒಲ್ಲೆನಿಸಿತು. ತಾಯಿಯ ಋಣಕ್ಕಾಗಿ ಗಾವಠೀ ಸಾಲೆಯ ಶಿಕ್ಷಕವೃತ್ತಿಯನ್ನು ಕೈಕೊಳ್ಳಬೇಕಾಯಿತು. ಹಾಲಯ್ಯನು ಕೆಲವು ವರ್ಷಗಳಲ್ಲಿ ಮುನ್ನೂರು ರೂಪಾಯಿಗಳನ್ನು ಕೂಡಿಸಿದನು. ಮಾತೆಯ ಆಶೀರ್ವಾದ ಪಡೆಯಲು ತಾಯಿಯ ಸನ್ನಿಧಿಗೆ ಬಂದು ತನ್ನಂತರಂಗದ ಆಸೆಯನ್ನು ವಿಜ್ಞಾಪಿಸಿಕೊಂಡನು. ಕಂದನ ಆಸೆ ತಿಳಿದು ಮಾತೆಯ ಅಂತಃಕರುಣೆ ತುಂಬಿ ಹೊರಚೆಲ್ಲಿತು. ಕಣ್ಣೀರಕೋಡಿ ಹರಿಯಿತು. ಒದ್ದೆಯಾದ ಸೆರಗು ಮಗನ ಮಸ್ತಕ ಮಡಿ ಮಾಡಿತು. ಮಾತೆಯ ಪ್ರೇಮಾಶ್ರುಗಳ ಮಂಗಲಮಯಸ್ನಾನದಿಂದ ಪವಿತ್ರನಾಗಿ ಹಾಲಯ್ಯ ಮಂತ್ರೋಪದೇಶ ಪಡೆಯಲು ಗುರುವನರಸುತ್ತ ಹೊರಟ. ಹುಬ್ಬಳ್ಳಿಗೆ ಬಂದ. ಸಿದ್ಧಾರೂಢರು ಅಂದು ಪ್ರಸಿದ್ಧ ವೇದಾಂತಿಗಳಾಗಿದ್ದರು. ನಿಜಗುಣರ ಶಾಸ್ತ್ರಗಳನ್ನು ಬೋಧಿಸುತ್ತಿದ್ದರು. ಉತ್ತರದವರೆಗೂ ಅವರ ಪಾಂಡಿತ್ಯ ಕೀರ್ತಿ ಹರಡಿತ್ತು. ಹಾಲಯ್ಯನಿಗೆ ವೇದಾಂತವೆಂದರೆ ಪ್ರಾಣ. ಶಿಕ್ಷಕನಾಗಿರುವಾಗಲೇ ನಿಜಗುಣರ ಷಟ್‌ಶಾಸ್ತ್ರಗಳತ್ತ ಮನವೊಲಿದಿತ್ತು. ವೇದಾಂತ ಕಲಿಯಲು ಹಾಲಯ್ಯನವರು ಸಿದ್ಧಾರೂಢರಲ್ಲಿ ಶಿಷ್ಯತ್ವ ವಹಿಸಿ ನಿಂತರು. ಆದರೆ ಅವರ ಸತ್ಯಾನ್ವೇಷಣ ಬುದ್ಧಿಗೆ ಆರೂಢರ ಬಾಯಿಬ್ರಹ್ಮದ ಬುದ್ಧಿವಾದ ಸರಿದೋರಲಿಲ್ಲ. ತಮ್ಮ ಮನದ ಶಂಕೆಗೆ ತಮ್ಮ ಹೃದಯದಿಂದಲೇ ಸಮಾಧಾನ ಪಡೆಯುವ ಪ್ರಸಂಗ ಬಂದಿತು. ಉಪಾಯಗಾಣದೆ ಹೊತ್ತು ಕಳೆಯಹತ್ತಿದರು. ವೀರಶೈವ ಸಿದ್ಧಾಂತಕ್ಕೂ ಸಿದ್ಧಾರೂಢರ ವಾಗದ್ವೈತಕ್ಕೂ ಮೇಳವಾಗಲಿಲ್ಲ. ಹಾಲಯ್ಯನವರ ಲಿಂಗನಿಷ್ಠೆ ದೃಢವಾಗದೆ ಹೊಯ್ದಾಡಹತ್ತಿತು. ಅಷ್ಟರಲ್ಲಿ ಯೋಗಿಯೊಬ್ಬನ ದರ್ಶನವಾಯಿತು. ಅವನ ಆಚಾರ ವಿಚಾರಗಳಿಗೆ ಜಿಜ್ಞಾಸು ಹಾಲಯ್ಯನವರು ಮೆಚ್ಚಿದರು. ಯೋಗಿಯ ಹಿಂದೆಯೇ ಹೊರಟರು. ಹಾಲಯ್ಯನವರ ಮನದ ಸಂಶಯಗಳೆಲ್ಲ ಕಳೆದು ಹೋದವು. ಅರಿವು ತನ್ನ ಬೆಳಗು ತೋರಿತು. ಗುರುವರನ ಸೇವೆಯಲ್ಲಿ ನಿಂತರು. ಶಿಷ್ಯನ ಸೇವೆಗೆ ಮೆಚ್ಚಿ ಯೋಗಿವರ್ಯ ಎಳಂದೂರ ಬಸವಲಿಂಗ ಪೂಜ್ಯನು ಹಾಲಯ್ಯನವರಿಗೆ ತನ್ನದೆಲ್ಲವನ್ನು ಅನುಗ್ರಹಿಸಿದ. ಅಂದಿನಿಂದ ಹಾಲಯ್ಯನವರು ದೇಶಿಕರಾದರು.

ಹಾಲಯ್ಯನವರು ದೇಶಿಕರಾಗಿ ಗುರುಗಳ ಅಪ್ಪಣೆಯಂತೆ ಶಂಭುಲಿಂಗನ ಬೆಟ್ಟದಲ್ಲಿ ತಪಸ್ಸು ಮಾಡುತ್ತಾರೆ. ತಪಸ್ಸು ಬಲಿಯುತ್ತ ಶಿವಸಂದೇಶವೊಂದು ಬೆಳಗಿತು. ಜ್ಞಾನೋದಯವಾಯಿತು. ಆತ್ಮಬಲವನ್ನು ಉಪದೇಶ ಮಾಡುತ್ತ ಹೊರಟರು. ವೀರವೈರಾಗ್ಯವೇ ಮೂರ್ತಿಮತ್ತಾಗಿ ಧರೆಗಿಳಿದಂತಿತ್ತು. ಜನ ಮೆಚ್ಚಿ ಕೊಂಡಾಡಿತು.

ಹಾನಗಲ್ಲಮಠ ಕರ್ನಾಟಕದಲ್ಲಿ ಪ್ರಸಿದ್ಧಿಯನ್ನು ಪಡೆದ ಪೀಠ. ಅದಕ್ಕೆ ಉತ್ತರಾಧಿಕಾರಿಗಳನ್ನಾಗಿ ಜನ ನಮ್ಮ ದೇಶಿಕರನ್ನೇ ಆರಿಸಿದರು. ಬಿದರಿ ಕುಮಾರ ಗುರುವರ್ಯರೂ ಒತ್ತಾಯ ಪಡಿಸಿದರು. ಯಾವ ಉಪಾಧಿಯನ್ನು ಹೊಂದದೆ ಸಮಾಜಸೇವೆಯನ್ನು ಮಾಡಬೇಕೆಂದು ಅವರ ಮನೀಷೆ. ಆದರೆ ಭಕ್ತರ ಆಗ್ರಹ ಗುರುಗಳ ಅಪ್ಪಣೆ ಮೀರಲು ಬರುತ್ತದೆಯೆ ? ಅಂದು ವಿರಕ್ತಾಶ್ರಮ ಪಡೆದು ಶ್ರೀ ಹಾನಗಲ್ಲ ಕುಮಾರಸ್ವಾಮಿಗಳಾದರು.

ಚಂದ್ರನನ್ನು ಗಗನಕ್ಕೆ ತೂರಿ, ಗಂಗೆಯನ್ನು ಹಿಮಾಲಯಕ್ಕೆ ಕಳುಹಿ, ಅಹಿಗಳನ್ನು ಪಾತಾಳಕ್ಕೆ ಅಟ್ಟಿ, ಆಪಾದ ಕಂಠದವರೆಗೆ ಕಾವಿಯ ಕಫನಿಯನ್ನು ಹಾಕಿಕೊಂಡು, ತುಂಡುವಸ್ತ್ರವನ್ನು ಮಸ್ತಕಕ್ಕೆ ಸುತ್ತಿ, ಕಾವಿ ಶಾಟಿಯೊಂದನ್ನು ಮೈತುಂಬ ಹೊದೆದು, ಉಂಗುಟದ ಹಾವಿಗೆಗಳನ್ನು ಮೆಟ್ಟಿ ಧರೆಗಿಳಿದು ಚರಿಸುವ ಶಿವನಂತೆ ನೋಡುವ ಜನಕ್ಕೆ ಪೂಜ್ಯ ಹಾನಗಲ್ಲ ಸ್ವಾಮಿಗಳು ಕಾಣುತ್ತಿದ್ದರು.

ಪೂಜ್ಯರ ಆ ನಡೆ ಆ ದಿವ್ಯ ದೇಹವನ್ನು, ಪುನೀತ ವೇಷ ಭೂಷಣವನ್ನು ಕಂಡು ಕೇಳಿದ ಜನರ ತನು ಪವಿತ್ರ. ಮನ ಪವಿತ್ರ. ಅವರೇ ಧನ್ಯರು. ಅವರ ಪುಣ್ಯವೇ ಪುಣ್ಯ.

ಮಾನವರಂತೆ ಹುಟ್ಟಿ, ಮಾನವರಂತೆ ಬೆಳೆದು ಅವರ ಕಷ್ಟಪರಂಪರೆಯನ್ನು ದೂರಮಾಡಿದ ಸ್ವಾಮಿಗಳು ಭಕ್ತಜನಕ್ಕೆ ದೇವರಾಗಿ ಕಂಡರು. 'ಯದಾ ಯದಾಹಿ' ಎಂಬ ಭಗವದುಕ್ತಿ ಸತ್ಯವಾಯಿತು. ದೀನರ ದೈನ್ಯವನ್ನು ಕಳೆದು ಅವರಿಗೆ ಸುಖದ ಹಾದಿಯನ್ನು ತೋರುವದೇ ಮಹಾತ್ಮರ ಕರ್ತವ್ಯ. ಆಗ ಧರ್ಮ ಅಳಿಯುತ್ತ ನಡೆದಿತ್ತು. ಸಮಾಜದಲ್ಲಿ ಅನ್ಯಕೃತೆ ತಾಂಡವವಾಡುತ್ತಿತ್ತು. ಅದನ್ನು ನೋಡಿ ಶ್ರೀಗಳ ಮನ ಮರುಗಿತು, ಹೃದಯ ಕರಗಿತು. ಹಾನಗಲ್ಲಿನಿಂದ ಧಾರವಾಡಕ್ಕೆ ಶುಭಾಗಮನವಾಯಿತು. ಹಾನಗಲ್ಲ ಪರಮಪೂಜ್ಯರ ಆಗಮನ. ಕೇಳುವದೇನು? ಜನ ನಾಲ್ಕು ನಿಟ್ಟನಿಂದ ದರ್ಶನ ಪಡೆಯಲು ತಂಡೋಪತಂಡವಾಗಿ ಬಂದಿತು.

ಬಾಗಲಕೋಟೆಯ ವೈರಾಗ್ಯದ ಮಲ್ಲಣಾರ್ಯರೂ ಶ್ರೀಗಳವರಿಗೆ ಉತ್ತೇಜನವಿತ್ತರು. ಸಮಾಜೋನ್ನತಿಯ ಕಹಳೆಯನ್ನು ಊದಿದರು. ಸೊಲ್ಲಾಪುರದ ವಾರದ ಮಲ್ಲಪ್ಪ, ಸಿರಸಂಗಿ ಲಿಂಗರಾಜರು, ಅರ್ಟಾಳ ರುದ್ರಗೌಡರು ಮೊದಲಾದ ಸಮಾಜಪ್ರೇಮಿ ಸಿರಿವಂತರು, ವಿದ್ಯಾವಂತರು ಶ್ರೀಗಳವರ ಮಾರ್ಗದರ್ಶನದಲ್ಲಿ ಕಾರ್ಯ ಮಾಡಲು ಮುಂದೆ ಬಂದರು. ಶ್ರೀಗಳವರ ದಿವ್ಯ ಪ್ರೇರಣೆಯಂತೆ ೧೯೦೪ ರಲ್ಲಿ ಧಾರವಾಡದಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯು ನೆರೆಯಿತು. ಆಗ ಜನರೆಲ್ಲರಿಗೂ ಅಮಿತಾನಂದ ಅತ್ಯಾನಂದ. ಎಲ್ಲರ ಬಯಕೆ ಈಡೇರಿದಂತಾಯಿತು. ಸಮಾಜದಲ್ಲಿ ಹೊಸ ಬೆಳಕು ಮೂಡಿ ಬಂದಿತ್ತು, ಕಾರ್ಯ ಮಾಡುವ ಉತ್ಸಾಹ ಉಕ್ಕಿ ಬಂದಿತ್ತು. ಅದು ಶ್ರೀಗಳವರ ತಪೋಬಲ ಅವರ ದಿವ್ಯ ಪ್ರೇರಣೆಯ ಪರಿಣಾಮ, ಶ್ರೀಗಳವರು ವಿರಕ್ತರಾಗಿದ್ದರೂ ಇಂಥ ಸಾಂಘಿಕ ಶಕ್ತಿಗೆ ಕಳೆಗೊಟ್ಟುದನ್ನು ನೋಡಿದರೆ ಇಂದಿನ ಯಾವ ರಾಜಕಾರಣಿಯು ಅವರ ವಿಧಾಯಕ ಕರ್ತೃತ್ವ ಶಕ್ತಿಗೆ ತಲೆಬಾಗದಿರನು?

ಧರ್ಮವು, ಸದ್ಧರ್ಮವು ಜನತೆಯ ಜೀವಾಳವಾಗಬೇಕೆಂದು ಶ್ರೀಗಳವರ ಆಶೆ. ಅಂತೆಯೇ ಅವರ ಚಟುವಟಿಕೆಗಳೆಲ್ಲ ಈ ಧರ್ಮದೃಷ್ಟಿಯಲ್ಲಿಯೇ ನಡೆದವು. ಅಂದು ಧರ್ಮದ ಏಳ್ಗೆಯಾಗಲೆಂದು ಅವರು ದುಡಿದರು. ಧರ್ಮದ ಸುಧಾರಣೆಗೆ ಮುಂಚೆ ಧರ್ಮಗುರುಗಳು ಸುಧಾರಿಸಬೇಕಲ್ಲವೆ? ಅವರಲ್ಲಿ ಸಾತ್ವಿಕತೆ ಬರಬೇಕು, ಅವರ ಅಂತಃಸತ್ವ ಬಲಿಯಬೇಕು. ಅವರು ತಪಸ್ವಿಗಳಾಗಬೇಕು. ಎಂದು ಶ್ರೀಗಳವರ ಹಿರಿಯಾಶೆ. ಆ ಆಶೆಯನ್ನು ಕೈಗೂಡಿಸಲು ಶಿವಯೋಗಮಂದಿರ ಸಂಸ್ಥಾಪನೆ (೧೯೦೯) ಯಾಯಿತು. ಇಲಕಲ್ಲ ಮಹಾತಪಸ್ವಿ ಮಹಾಂತ ಶಿವಯೋಗಿಯ ಅಮೃತ ಅಸ್ತದಿಂದ ಆ ಕಾರ್ಯ ನೆರವೇರಿತು ಅಂದು ಶಿವಯೋಗ ಮಂದಿರ ಪುಣ್ಯಕ್ಷೇತ್ರವಾಯಿತು, ಕಟ್ಟಾರಣ್ಯ ಪುಣ್ಯಾಶ್ರಮವಾಯಿತು. ಶಿವಯೋಗಿ ಮೆಟ್ಟಿದ ಧರೆ ಪರಮ ಪವಿತ್ರವಾಯಿತು.

ತ್ರಿಮಲನಾಶಿನಿ ಮಲಾಪಹಾರಿಣಿಯ ಸಾನ್ನಿಧ್ಯ. ಪೂರ್ವಕ್ಕೆ ಸಿದ್ಧೇಶ್ವರನ ತಪೋಭೂಮಿ, ದಕ್ಷಿಣಕ್ಕೆ ಮಹಾಮಾತೆ ಬನಶಂಕರಿ, ಪಶ್ಚಿಮಕ್ಕೆ ಯೋಗಿಯಾದ ನಾಗನಾಥನ ಕೊಳ್ಳ, ಉತ್ತರದಲ್ಲಿ ಪರಮ ಪಾವನ ಮಹಾಕೂಟೇಶ, ಇವರೆಲ್ಲ ದಿಕ್ಪಾಲಕರಂತೆ ತ್ರಿಕಾಲದಲ್ಲಿಯೂ ಜಾಗ್ರತರಾಗಿದ್ದಾರೆ ಮಹಾಮಹಿಮ ಕೊಟ್ಟೂರ ಬಸವೇಶ್ವರನ ತಪೋಭೂಮಿ ಇಂತಹ ಸುಂದರ ಸನ್ನಿವೇಶದಲ್ಲಿ ಶಿವಯೋಗ ಮಂದಿರವು ಸಂಸ್ಥಾಪಿತವಾಗಿದೆ. ಅದು ತನ್ನ ಅನಂತ ಕಿರಣಗಳನ್ನು ಬೀರಿ ನಾಡನ್ನು ಬೆಳಗಿದೆ, ಬೆಳಗುತ್ತಲಿದೆ.

ಶಿವಯೋಗಮಂದಿರದ ಶ್ರೇಯಸ್ಸಿಗಾಗಿ ಹಾನಗಲ್ಲ ಮಹಾಸ್ವಾಮಿಗಳು ತಮ್ಮ ತಪವನ್ನೇ ಸೂರೆ ಮಾಡಿದ್ದಾರೆ. ಅದರ ಸರ್ವಾಂಗಸುಂದರವಾದ ಅಭ್ಯುದಯಕ್ಕಾಗಿ, ಅದರ ಭದ್ರತೆಗಾಗಿ ಅನಂತ ಜನ್ಮದ ಪುಣ್ಯರಾಶಿಯನ್ನೇ ಧಾರೆಯೆರೆದಿದ್ದಾರೆ. ಶಿವಯೋಗಮಂದಿರದಿಂದ ಕರ್ನಾಟಕಕ್ಕೆ ಸಂದಿರುವ ಸೇವೆ ಅಷ್ಟಿಷ್ಟಲ್ಲ. ಕನ್ನಡ ನಾಡಿನ ಮೂಲೆಮೂಲೆಯಲ್ಲಿಯೂ ಅಲ್ಲಿ ಶಿಕ್ಷಣ ಪಡೆದ ಕಾರ್ಯಕರ್ತರು ಸಮಾಜಸೇವೆ ಮಾಡುತ್ತಿದ್ದಾರೆ. ವಿಶಾಲದೃಷ್ಟಿಯಿಂದ ನೋಡಿದರೆ ಅದರ ಕಾರ್ಯ ಅದರ ಕಾರ್ಯೋನ್ಮುಖ ಯೋಜನೆ ನಿಚ್ಚಳವಾಗಿ ಕಾಣುತ್ತದೆ. ಇಂದಿನ ಭೀಕರ ವಿಷಮಪರಿಸ್ಥಿತಿಯಲ್ಲಿ ಶಿವಯೋಗಮಂದಿರದಂಥ ಸಂಸ್ಥೆಗಳ ಅಗತ್ಯ ಜಗತ್ತಿಗೆ ಬಹಳವಾಗಿದೆ. ನಾನಾಮುಖವಾಗಿ ಕಾರ್ಯಮಾಡಿ ಶ್ರೀಗಳು ಮರಣೋನ್ಮುಖ ನಾಡಿಗೆ ಸಂಜೀವನಿಯನ್ನಿತ್ತು ಉದ್ಧರಿಸಿದ್ದಾರೆ. ಪ್ರಾತಃಸ್ಮರಣೀಯರಾಗಿದ್ದಾರೆ.

ಸಮಾಜಕ್ಕೆಂದು ನಿರಂತರವಾಗಿ ದುಡಿದು ಶ್ರೀಗಳವರು ಶರೀರ ಸವೆದಿತ್ತು; ದಣಿದಿತ್ತು. ೬೩ ವರ್ಷ ತುಂಬಿ ಬಂದಿದ್ದವು. ೧೮೫೧ ಮಾ. ಬ. ಸಪ್ತಮಿಯ ದಿನ ಶಿವನಿಂದ ಕರೆಬಂದಿತು. ಶ್ರೀಗಳವರು ಶಿವನಾಜ್ಞೆಯಂತೆ ಇಹದ ವ್ಯಾಪಾರವನ್ನು ಮುಗಿಸಿ ಲಿಂಗದಲ್ಲಿ ಬೆರೆದು ಒಂದಾಗುವರು. ಅಂದು ಸಮಾಜ ಅನಾಥವಾಯಿತು, ಭಕ್ತರೆಲ್ಲರ ಕಣ್ಣೆಯ ಮೇಲೆ ಸುರಿದ ಕಣ್ಣೀರು ಇನ್ನೂ ಬತ್ತಿಲ್ಲ; ಬತ್ತುವಂತೆಯೂ ಇಲ್ಲ. ಕನ್ನಡ ಕುಲಾಚಾರ್ಯ ಶ್ರೀ ಹಾನಗಲ್ ಕುಮಾರ ಯತಿವರರು ಮತ್ತೆ ಮೂಡಿ ಬರರೆ?

ಉರಿಯೊಳ್ಗೈದ ಕಪ್ಪುರದವೊಲ್ ನಿಜಲಿಂಗದ ಸುಪ್ರಭಾಂತದೊಳ್
ಬೆರೆದು ತದೇಕರೂಪವನೆ ತಾಳ್ದ ಮಹಾತ್ಮನ ಹಾನಗಲ್ಲ ಸ-।
ಚ್ಚರವರನಾ ಕುಮಾರ ಶಿವಯೋಗಿವರೇಣ್ಯನ ಪಾದ ಪಂಕಜಂ
ನೆರೆ ನೆಲಸುತ್ತೆ ರಾಜಿಸುಗೆ ಸಂತತಮೆನ್ನಯ ಹೃತ್ಸರಸ್ಸಿನೊಳ್ ॥

■■

# ಯುಗಪುರುಷ ಹಾನಗಲ್ಲ ಕುಮಾರ ಶಿವಯೋಗಿಗಳು

• ಡಾ. ಜಿ. ಕೆ. ಹಿರೇಮಠ

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರನ್ನು "ಯುಗದ ಉತ್ಸಾಹ" ವೆಂದು ಪ್ರಭುದೇವರು ಬಣ್ಣಿಸಿದಂತೆ ಹತ್ತೊಂಬತ್ತು-ಇಪ್ಪತ್ತನೆಯ ಶತಮಾನಗಳ ಮಧ್ಯಕಾಲೀನ ವೀರಶೈವ-ಲಿಂಗಾಯತ ಸಮಾಜದಲ್ಲಿ ಅಂಥ ಉತ್ಸಾಹವನ್ನು ತಮ್ಮ ವ್ಯಾಪ್ತಿಯಲ್ಲಿ ಮೆರೆದ "ಯುಗಪುರುಷ"ರೆಂದರೆ ಹಾನಗಲ್ಲ ಶ್ರೀ.ಮ.ನಿ.ಪ್ರ. ಕುಮಾರಶಿವಯೋಗಿಗಳು.

೧೮೬೭. ಹಾವೇರಿ ಜಿಲ್ಲೆಯ ರಾಣೆಬೆನ್ನೂರ ತಾಲೂಕಿನ ಜೋಯಿಸರ ಹರಳಳ್ಳಿ ಗ್ರಾಮದಲ್ಲಿ ಉದಂತ ಉದಯ. ಬಸವಪ್ಪಯ್ಯ-ನೀಲಮ್ಮರ ಉದರದಲ್ಲಿ ಜನಿಸಿದ ಮಗುವಿಗೆ 'ಹಾಲಯ್ಯ'ನೆಂದು ನಾಮಕರಣ. ಸಾಲಿಮಠ ಮನೆತನದ ಅಜ್ಜ ಕೊಟ್ಟೂರಪ್ಪಯ್ಯನಿಂದಲೇ ಮೊಮ್ಮಗ ಹಾಲಯ್ಯನಿಗೆ ಅಕ್ಷರಾಭ್ಯಾಸ ಆರಂಭ. ತೀರ ಬಡತನದ ಮನೆತನ. ಸಾಲಿ ಕಲಿಸುವ ಕಾಯಕ. ಗೋ ಕಾಯಕ, ಕಂತಿಭೀಕ್ಷಗಳೇ ಸಾಲಿಮಠ ಮನೆತನದ ಮುಖ್ಯ ಜೀವಾಳ. ಹೀಗಿದ್ದೂ ಮುಲ್ಕೀ ತರಗತಿಯವರೆಗೆ ಓದಿ ಪರೀಕ್ಷೆ ಬರೆಯಲು ಧಾರವಾಡದವರೆಗೂ ಕಾಲ್ನಡಿಗೆಯಿಂದಲೇ ನಡೆದು ಬಂದು ಪರೀಕ್ಷೆ ಬರೆದ ಹಾಲಯ್ಯ! ಫಲಿತಾಂಶ ಫೇಲು! ಆದರೇನಾಯ್ತು? ಜೀವನ ಪರೀಕ್ಷೆಯಲ್ಲಿ ಪಾಸು! ತಾಯಿಯ ತವರು ಲಿಂಗದಳ್ಳಿಯಲ್ಲಿ ಪ್ರಾಥಮಿಕ ಶಾಲೆಯೊಂದನ್ನು ತೆರೆದು ಮಕ್ಕಳಿಗೆ ಜ್ಞಾನ ನೀಡುವುದರೊಂದಿಗೆ ಸಾಲಿಮಠ ಪರಂಪರೆಗೆ ಪೋಷಕರಾದರು. ವರ್ಷಕ್ಕೆ ಸರಕಾರದಿಂದ ೧೦೦ ರೂ ಸಂಬಳ ಮಾತ್ರ. ಮೂರುವರ್ಷಗಳ ಅಧ್ಯಾಪನದ ೩೦೦ ರೂ. ತಾಯಿಯ ಉಡಿಗೆ ಸಮರ್ಪಿತ! ಅಧ್ಯಾತ್ಮದ ಅರಿವಿನತ್ತ ಒಳಹರಿವು! ಬಾಲವೈರಾಗ್ಯ! ಸಹಜ ವೈರಾಗ್ಯ! ಸ್ವಭಾವ ವೈರಾಗ್ಯ!

## ಅಂತರಂಗ-ಆವರ್ತನ :

ಆವರ್ತನೆಯ ಪ್ರಪಂಚ ಜಾಲ! ಜಾಲದಿಂದ ಹೊರಗೆ ಬಂದಾತನೇ ಮುಕ್ತ! ಇದನ್ನರಿತ ಹಾಲಯ್ಯ ಮಾಸ್ತರರು ನಿಜಗುಣರ ಷಟ್‌ಶಾಸ್ತ್ರಗಳ ಅಭ್ಯಾಸ ಮಾಡಿ ಶಂಭುಲಿಂಗನ ಬೆಟ್ಟದಲ್ಲಿ ನೈಜಾನುಷ್ಠಾನ ಮಾಡಿ ನಿಜದ ನೆಲೆಯ ಕಂಡುಕೊಳ್ಳುವ ಹಂಬಲದಲ್ಲಿದ್ದಾಗ ವಚನಗಳ ದರ್ಶನ. ಅವುಗಳಿಂದಾಗಿ ವಿಪರೀತ ಶೋಧ. ಗೋಡೆ-ಗದ್ದುಗೆಗಳಲ್ಲಿ ಹುದುಗಿದ್ದ ತಾಳವೋಲೆಗಳಿಗಾಗಿ ಹುಡುಕಾಟ. ಫ.ಗು.ಹಳಕಟ್ಟಿಯವರ ಜತೆಗೂಡಿ ಅವುಗಳ ಪ್ರಕಟ. ವಚನಗಳ ಆಳವಾದ ಅಧ್ಯಯನ. ಆ ಮೂಲಕ ತತ್ವಪ್ರಸಾರ- ಪ್ರವಚನ ಮೂಲಕ ಆತ್ಮಕಲ್ಯಾಣ-ಲೋಕಕಲ್ಯಾಣ. ಅಂತರಂಗ ಕೃಷಿಯಂತೆ ಬಹಿರಂಗದ ಕೃಷಿಯನ್ನು ಮಾಡತೊಡಗಿದರು. ಒಡೆದು ನುಚ್ಚಾಗಿದ್ದ ಸಮಾಜದ ಪರಿಸ್ಥಿತಿಯನ್ನು ಒಳಗಣ್ಣಿನಿಂದ ನೋಡಿದರು. ಪುನಃ ತಿರುಗಿ ಹೊಂದಿಸುವ ರಚನೆಯ ಕಾರ್ಯಕ್ಕೆ ಕೈ ಹಾಕಿದರು. ಸಮಾಜದ ಸ್ವಭಾವವನ್ನು ಅರ್ಥಮಾಡಿಕೊಂಡರು. ಈ ನಿಟ್ಟಿನಲ್ಲಿ ಆಧುನಿಕ ಶಿಕ್ಷಣದ ಕಡೆಗೆ ಗಮನಹರಿಸಿದರು. ಸಂಸ್ಕೃತ ಪಾಠಶಾಲೆಗಳು ತಲೆ ಎತ್ತಿದವು. ಸಮಾಜ ಒಗ್ಗೂಡಿಸುವ ಕಾರ್ಯ ತೀವ್ರಗೊಂಡಿತ್ತು. ಇದರ ಫಲವಾಗಿ 'ಅಖಿಲ ಭಾರತ ವೀರಶೈವ ಮಹಾಸಭೆ' ಎಂಬ ಸಾಮಾಜಿಕ ಪ್ರಾತಿನಿಧಿಕ ಸಂಸ್ಥೆಯೊಂದು ಅನುಷ್ಠಾನಕ್ಕೆ ಬಂದಿತು.

## ಅಖಿಲ ಭಾರತ ವೀರಶೈವ ಮಹಾಸಭೆ ಸ್ಥಾಪನೆ :

ಗುರುಕುಲ ಪದ್ಧತಿಯ ಶಿಕ್ಷಣವೇ ಬಳುವಳಿಯಾಗಿ ಬಂದಿದ್ದ ಈ ದೇಶಕ್ಕೆ-ನಾಡಿಗೆ ಆಧುನಿಕತೆಯ ಶಿಕ್ಷಣದ ಗಾಳಿ ಗಂಧ ತಾಕಿದ್ದು ಲಾರ್ಡ ಮೆಕಾಲೆಯವರಿಂದ (೧೮೩೫). ಮುಂದೆ ಕರ್ನಾಟಕದಲ್ಲಿ ಈ ಕೀರ್ತಿ ಡೆಪ್ಯೂಟಿ ಚನ್ನಬಸಪ್ಪನವರಿಗೂ, ಪಂ. ವೀರಭದ್ರ ಮಡಿವಾಳೇಶ್ವರರಿಗೂ ಸಲ್ಲುತ್ತದೆ. ೧೮೬೮ ರಲ್ಲಿ ಬೆಳಗಾವಿಯಲ್ಲಿ ೫೦ ವಿದ್ಯಾರ್ಥಿಗಳ 'ಲಿಂಗಾಯತ ಫ್ರೀ ಬೋರ್ಡಿಂಗ' ಸ್ಥಾಪನೆಯಾಯಿತು. ಚಿತ್ರದುರ್ಗದ ಶ್ರೀ ಮಹಾಲಿಂಗ ಸ್ವಾಮಿಗಳು ಆಶೀರ್ವದಿಸಿದ ಪ್ರತಿ ತಿಂಗಳ ೩೦೦ ರೂ.ಗಳ ಸಹಾಯದಿಂದ ನಡೆಯಹತ್ತಿತು. ಮುಂದೆ ಅರಟಾಳ ರುದ್ರಗೌಡರು, ಗಿಲಗಂಚಿ ಗುರುಸಿದ್ಧಪ್ಪನವರು ಕನ್ನಡ ಸಂಸ್ಕೃತ ಶಿಕ್ಷಣಕ್ಕೆ ಟೊಂಕ ಕಟ್ಟಿ ನಿಂತರು. ಇತ್ತ ಹಾನಗಲ್ಲ ಕುಮಾರ ಸ್ವಾಮಿಗಳು ಸಮಾಜ ಒಗ್ಗೂಡಿಸುವಲ್ಲಿ ನಿರತರಾಗಿದ್ದರು. ಆ ವೇಳೆಗಾಗಲೆ ನಾಡಿನಲ್ಲಿ ೩೫ ಲಕ್ಷ ಜನ ವೀರಶೈವ-ಲಿಂಗಾಯತರಿದ್ದರೂ ಮುಂಬೈ, ಮೈಸೂರು, ಮದ್ರಾಸ್, ಹೈದ್ರಾಬಾದ್ ಪ್ರಾಂತ್ಯಗಳಿಗೆ ಹರಿದು ಹಂಚಿಹೋಗಿದ್ದರು. ಜಡಗೊಂಡಿದ್ದ ಶಿಕ್ಷಣವನ್ನು-ಸಮಾಜವನ್ನು ಮುಕ್ತಗೊಳಿಸುವ ನಿಟ್ಟಿನಲ್ಲಿ ಕುಮಾರ ಸ್ವಾಮಿಗಳು ಮುಂದಾದರು. ಸವದತ್ತಿಯಲ್ಲಿ ಜರುಗಿದ 'ಬಸವ ಪುರಾಣ' ಮಹಾಮಂಗಲ

ಸಮಾರಂಭದಲ್ಲಿ ದೀರ್ಘ ಚರ್ಚೆಯೂ ಆಯಿತು. ೧೯೦೩ ರಿಂದ ಒಂದು ವರ್ಷಗಳ ಕಾಲ ದೀರ್ಘ ಕೃಷಿಯೂ ನಡೆಯಿತು. ಇದರ ಫಲವಾಗಿ ಕ್ರಿ.ಶ.೧೯೦೪ ಮೇ ತಿಂಗಳು ೧೩ ರಂದು ಲಿಂಗಪ್ಪ ಜಾಯಪ್ಪ ಸರದೇಸಾಯಿ ಇವರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಶ್ರೀ ಮದ್ವೀರಶೈವ ಮಹಾಸಭೆಯು ಸ್ಥಾಪನೆಯಾಯಿತು. ಬಸವೇಶ್ವರನು ಸ್ಥಾಪಿಸಿದ ಅನುಭವ ಮಂಟಪ ಧರ್ಮದ ತರುವಾಯದಲ್ಲಿ ಸ್ಥಾಪಿತವಾದುದು ಈ ಮಹಾಸಭೆ. ಆ ಕಾಲವನ್ನು 'ಬಸವೇಶ್ವರ ವಿದ್ಯೆ'ಯ ಕಾಲವೆಂದು ಗುರುತಿಸಿಕೊಂಡಂತೆ ಈ ಕಾಲವನ್ನು 'ಕುಮಾರ ವಿದ್ಯೆ'ಯ ಕಾಲವೆಂದು ಗುರುತಿಸಬಹುದಾಗಿದೆ.

ಸ್ವಾತಂತ್ರ್ಯಪೂರ್ವವೇ ಸ್ಥಾಪನೆಯಾದ ಈ ಮಹಾಸಭೆಯು ಇಲ್ಲಿಯವರೆಗೆ ೨೧ ಅಧಿವೇಶನಗಳನ್ನು ಕಂಡಿದೆ. ಬೆಳಗಾವಿ, ಬೆಂಗಳೂರು, ಸೊಲ್ಲಾಪುರ, ಮುಂಬೈ, ಕುಂಭಕೋಣಂ ಮುಂತಾದ ರಾಷ್ಟ್ರದ ಪ್ರಮುಖ ನಗರ-ಪಟ್ಟಣಗಳಲ್ಲಿ ಜರುಗಿರುವುದು ಸರ್ವವಿದಿತ. ಈಗ ಈ ಮಹಾಸಭೆಗೆ ಶತಮಾನೋತ್ಸವ ಸಂಭ್ರಮ. ಹಲವು ದಶಕಗಳ ಹಿಂದೆಯೇ ಅಖಿಲ ಭಾರತ ಮಹಿಳಾ ಪರಿಷತ್ತು, ತರುಣ ಪರಿಷತ್ತು, ಶೈಕ್ಷಣಿಕ ಸಮ್ಮೇಳನ, ವೈದ್ಯ ಸಮ್ಮೇಳನಗಳು ಜರುಗಿದ್ದರೂ ಸಮಾಜದಲ್ಲಿ ಕುಮಾರಸ್ವಾಮಿಗಳು ಕಂಡ ಕನಸು ಇನ್ನೂ ಕೆಲವು ನನಸಾಗದೇ ಉಳಿದಿರುವುದು ಒಂದು ವಿಪರ್ಯಾಸ. ಗುರು-ವಿರಕ್ತರನ್ನು ಒಂದುಗೂಡಿಸಿ ಸ್ವಮಯಭೇದ ತೊಡೆದು ಹಾಕುವಲ್ಲಿ ಕುಮಾರ ಸ್ವಾಮಿಗಳು ಮಾಡಿದ ಪ್ರಯತ್ನ ಇಂದು ಅಷ್ಟಿಷ್ಟು ಸಾಕಾರಗೊಳ್ಳುತ್ತಿದೆ. ಪೂರ್ಣಪ್ರಮಾಣದಲ್ಲಿಯೂ ಸಾಕಾರಗೊಳ್ಳಬೇಕು. ಈ ದಿಶೆಯಲ್ಲಿ ೨೦೦೩ ರ ಜೂನದಲ್ಲಿ ಜರುಗಿದ ಕೂಡಲಸಂಗಮದ ಸಮಾವೇಶ ಡಿಸೆಂಬರನಲ್ಲಿ ಜರುಗಿದ ಧಾರವಾಡದ ಸಮಾವೇಶಗಳೇ ನಿದರ್ಶನ. ವೀರಶೈವ ಮತ ಲೋಕಮತವಾಗಬೇಕು. ವೀರಶೈವ ಪಥ ವಿಶ್ವಪಥವಾಗಬೇಕು ಎಂಬುದೇ ಕುಮಾರ ಸ್ವಾಮಿಗಳ ಮನೀಷೆ. ಈ ದಿಸೆಯಲ್ಲಿ ಸಂವಿಧಾನಬದ್ಧ ರೀತಿಯಲ್ಲಿ ಸಮಾಜ ಸಂಘಟನೆಗೊಳ್ಳುವುದು ಇಂದು ತೀರಾ ಅಗತ್ಯವಾಗಿದೆ.

**ಶ್ರೀಮದ್ವೀರಶೈವ ಶಿವಯೋಗಮಂದಿರ ಸ್ಥಾಪನೆ:**

೧೯೦೯ ಫೆಬ್ರುವರಿ ೭ ಶಿವಯೋಗಮಂದಿರ ಇತಿಹಾಸದಲ್ಲಿ ಮಹತ್ವದ ದಿನ. ಈ ಸಂಸ್ಥೆಯ ಸ್ಥಾಪನೆಯ ಕುರಿತಾಗಿ ಹನ್ನೆರಡನೆಯ ಶತಮಾನದಲ್ಲಿ ಶ್ರೀ ಘಟಿವಾಳಯ್ಯ ಶಿವಶರಣರ ಕಾಲಜ್ಞಾನ ತಾಳವೋಲೆ ಗ್ರಂಥದಲ್ಲಿ ಉಲ್ಲೇಖಗೊಂಡಿರುವ ವಚನ ೨೦ನೇ ಶತಮಾನದಲ್ಲಿ ದಾಖಲೆಯಾಗಿ ರೂಪುಗೊಂಡಿರುವುದು ಗಮನಾರ್ಹ ಸಂಗತಿ.

ವ್ಯಕ್ತಿಯ ಉನ್ನತಿಯು ಸಮಾಜಕ್ಕೂ, ಸಮಾಜದ ಅಭ್ಯುದಯ ರಾಷ್ಟ್ರಕ್ಕೂ ಒಂದಕ್ಕೊಂದು ಪೂರಕ. ಈ ತತ್ವವನ್ನರಿತ ಕುಮಾರ ಶಿವಯೋಗಿಗಳು ಅಖಿಲ ಭಾರತ ವೀರಶೈವ ಮಹಾಸಭೆ ಸ್ಥಾಪಿಸಿ ಸಮಾಜ ಸಂಘಟನೆಗೆ ಬುನಾದಿ ಹಾಕಿದಂತೆ ಆದರ್ಶ ಮಠಾಧೀಶರ ನಿರ್ಮಾಣಕ್ಕೆ; ಧರ್ಮ, ಸಾಹಿತ್ಯ, ಸಂಸ್ಕೃತಿಗಳ ರಕ್ಷಣೆಗಾಗಿ ಶಿವಯೋಗ ಮಂದಿರ ನಿರ್ಮಿಸಿದರು. ಮನೋನಿಗ್ರಹದ ಮೂಲಕ ಚಿತ್ತಶುದ್ಧಿ ಯಾಗುವುದಕ್ಕೆ ಸಾಧನವಾದ ಈ ಸಂಸ್ಥೆ ನಾಡಿನೇತಿಹಾಸದಲ್ಲಿ ಒಂದು ಅಪೂರ್ವ! ಸಿರಿಗನ್ನಡ ಧಾರ್ಮಿಕ ಧ್ಯೇಯವುಳ್ಳ ಸಂಸ್ಥೆ. ಶಿವಯೋಗ ಸಾಧಕರಿಗೊಂದು ಅಗ್ರಸ್ಥಾನ! ಶಿವಯೋಗ-ನೇಗಿಲಯೋಗ ಇವುಗಳ ಜೊತೆಗೆ ವಚನ ಸಾಹಿತ್ಯ, ಶರಣ ಧರ್ಮ, ಸಂಸ್ಕೃತ, ಹಿಂದಿ, ಇಂಗ್ಲಿಷ ಭಾಷೆಗಳ ಅಧ್ಯಯನವು ವಟು ಸಾಧಕರಿಗೆ ಮುಕ್ತವಾಗಿದೆ. ಕುಮಾರ ಸ್ವಾಮಿಗಳು ಬಿತ್ತಿ ಬೆಳೆದ ಹಲವುಗಳಲ್ಲಿ ನೂರಾರು ಸಾಧನಾ ಬೀಜಗಳು ಇಂದಿಗೂ ಅಲ್ಲಿ ಫಲಿಯುಳಿಕೆಯಾಗಿವೆ. ವಾಚನಾಲಯ, ಹಸ್ತಪ್ರತಿ, ಉದ್ಧರಣೆ ಸಾಹಿತ್ಯ, ಗೋರಕ್ಷಣೆ, ಭಸ್ಮದ ಕಾರಖಾನೆ ಇವುಗಳ ಜೊತೆಗೆ ನಾಡಿನ ಅಂಧರ ಬಾಳಿಗೆ ಬೆಳಕಾಗಿರುವ ಗದುಗಿನ ಶ್ರೀ ವೀರೇಶ್ವರ ಪುಣ್ಯಾಶ್ರಮ. ದುಡಿಯುವ ಕೈಗಳಿಗೆ ಅನ್ನ ಕೊಡುವ ಬಾಗಲಕೋಟೆಯ ಜನ್ನಿಂಗ್ ಫ್ಯಾಕ್ಟರಿಗಳಂತಹವು ಶ್ರೀ ಕುಮಾರ ಸ್ವಾಮಿಗಳು ಇಟ್ಟ ಹೆಜ್ಜೆಗಳು; ಇತಿಹಾಸದ ಮುದ್ರಿಕೆಗಳು.

**ನಿಷ್ಕಾಮ ಕರ್ಮದ ಶಿವಯೋಗಿ:**

ಹಾನಗಲ್ಲ ವಿರಕ್ತಮಠದ ಪೀಠಾಧಿಪತಿಗಳಾಗಿದ್ದರೂ ಮಠಕ್ಕೆ ಅಂಟಿಕೊಂಡು ಕುಳಿತುಕೊಳ್ಳಲಿಲ್ಲ. "ಘಟದಿಂದ ಮಠವಾಗಬೇಕಲ್ಲದೇ; ಮಠದಿಂದ ಘಟವಾಗಬಾರದು" ಎಂಬ ತತ್ವ ಬೀರುತ್ತಲೇ ನಡೆದರು. ಅಖಿಲ ಭಾರತ ವೀರಶೈವ ಮಹಾಸಭೆ ಸ್ಥಾಪಕರು ಅವರಾಗಿದ್ದರೂ ಒಂದೂ ಅಧಿವೇಶನದ ಶೂನ್ಯ ಪೀಠ ಏರಲಿಲ್ಲ. ಅನೇಕ ಹಾಡುಗಬ್ಬಗಳನ್ನು ರಚಿಸಿದ್ದರೂ ಎಲ್ಲಿಯೂ ತಮ್ಮ ಹೆಸರನ್ನು ಹಾಕಿಕೊಂಡಿಲ್ಲ. ೧೯೨೬ ರಲ್ಲಿ ಪ್ರಕಟವಾದ ಶಿವಾನುಭವ ತ್ರೈಮಾಸಿಕ ಪತ್ರಿಕೆಗೆ ಅನೇಕ ಲೇಖನಗಳನ್ನು ಬರೆದರೂ ಲೇಖಕರೆಂದು ಎಲ್ಲಿಯೂ ನಮೂದಿಸಿಕೊಂಡಿಲ್ಲ. ಶತಕತ್ರಯ ಶ್ಲೋಕತ್ರಯಗಳನ್ನು ಸ್ವತಃ ವ್ಯಾಖ್ಯಾನಿಸುತ್ತಿದ್ದರೂ ಪ್ರವಚನದ ಪಟುಗಳು ಎಂದುಕೊಂಡವರಲ್ಲ. ಕಪನಳ್ಳಿ, ರಾಮಗಡ್ಡಿ, ನಿಡಗುಂದಿಕೊಪ್ಪ, ಹಿರೇಹಾಳ, ಬದಾಮಿ ಮುಂತಾದ ಕಡೆ ಶಾಖಾಶಿವಯೋಗಮಂದಿರಗಳನ್ನು ಸ್ಥಾಪಿಸಿದರೂ ಅವುಗಳಿಗೆ ಅಧಿಕಾರಿಗಳಾಗಿರಲಿಲ್ಲ. ಒಂದು ವ್ಯಕ್ತಿಯಾಗಿ ಜನಿಸಿ, ಶಕ್ತಿಯಾಗಿ ಬೆಳೆದು, ಸಂಸ್ಥೆಯಾಗಿ ಕಾರ್ಯನಿರ್ವಹಿಸಿದ ನಿಷ್ಕಾಮ ಕರ್ಮದ ಕುಮಾರ ಶಿವಯೋಗಿಗಳು ಸಮಾಜದ ಯುಗಪುರುಷರು. ಪೂಜ್ಯರ ಆದರ್ಶಗಳನ್ನು ನಂಬಿ ನಡೆಯುವುದೇ ಕಲ್ಯಾಣದ ಹಾದಿ! ಅವರು ಕಟ್ಟಿದ ಸಮಾಜವನ್ನು ಇಂದು ಸಾಕಾರಗೊಳಿಸುವುದೇ ನಿಜವಾದ ಸ್ಮರಣೋತ್ಸವ!!

ಹಾನಗಲ್ಲ ವಿರಕ್ತಮಠದ ಹಾಗೂ ಹುಬ್ಬಳ್ಳಿ ಜಗದ್ಗುರು ಮೂರುಸಾವಿರಮಠದ ಪೀಠಾಧಿಪತಿಗಳಾಗಿರುವ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳವರು ಮತ್ತು ಬೆಳಗಾವಿ-ನಾಗನೂರು ಶ್ರೀ ರುದ್ರಾಕ್ಷಿಮಠದ ಪೀಠಾಧಿಪತಿಗಳಾಗಿರುವ ಶ್ರೀ ಮ.ನಿ.ಪ್ರ. ಸಿದ್ಧರಾಮ ಮಹಾಸ್ವಾಮಿಗಳವರು ಶ್ರೀ ಕುಮಾರ ಶಿವಯೋಗಿಯ ಸಂಕಲ್ಪದ ಮಹಾಮಣಿಹ ಹೊತ್ತಿದ್ದಾರೆ. ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆಯನ್ನು ಪ್ರಗತಿಪಥದಲ್ಲಿ ಸಾಗಿಸುತ್ತಿದ್ದಾರೆ. ಶ್ರೀ ಶಿವಯೋಗಮಂದಿರ ಕುರಿತು-

"ಆರ್ಯ ಸಂಸ್ಕೃತಿಗೂ ಕರ್ನಾಟಕ ಲಿಂಗಾಯತ ಧರ್ಮಕ್ಕೂ
ಈ ಸಂಸ್ಥೆ ಅಮೂಲ್ಯ ಸಹಾಯವನ್ನು ಮಾಡೀತು
ಕರ್ನಾಟಕಕ್ಕೆ ಈಗ ಇದರ ಬೆಲೆ ತಿಳಿದು ಬರದಿದ್ದರೂ
ಕೆಲಕಾಲದ ಮೇಲೆಯೂ ಭವಿಷತ್ಕಾಲದಲ್ಲಿ
ಇದರ ಅಪೂರ್ವ ಸೇವೆಯನ್ನು
ನೆನಸಿ ನೆನಸಿ ಹಾಡಿ ಹರಸೀತು"

ಎಂದು ಎಂಟು ದಶಕಗಳ ಹಿಂದೆಯೇ ಉದ್ಗರಿಸಿದ ವರಕವಿ ದ.ರಾ.ಬೇಂದ್ರೆಯವರ ಮಾತು ಇಂದು ಪೂರ್ಣವಾಗುವ ಕಾಲ ಸನ್ನಿಹಿತ!

■■

# ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರೂ ಸಂಸ್ಕೃತಭಾಷಾಭಿವೃದ್ಧಿಯೂ

**• ವ್ಯಾಕರಣತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಹೊಳಲು**

ಯಾವ ಮಹನೀಯನು ೫೦ ವರ್ಷಗಳಿಂದ ವೀರಶೈವ ಸಮಾಜದಲ್ಲಿ ಅದ್ಭುತ ಕ್ರಾಂತಿಯನ್ನು ಹುಟ್ಟಿಸಿದನೋ, ಯಾವ ಮಹನೀಯನು ಹಗಲಿರುಳೆನ್ನದೆ ಸಮಾಜ ಸೇವೆಯಲ್ಲಿ ಶರೀರವನ್ನು ಸವಿಸಿದನೋ, ಯಾವ ಮಹನೀಯನು ಸಮಾಜಸೇವೆಯೇ ಈಶ್ವರನ ಸೇವೆಯು, ಸಮಾಜದ ಕಾರ್ಯಗಳೇ ಈಶ್ವರನ ಕಾರ್ಯಗಳು, ಸಮಾಜವೇ ನಾನು, ನಾನೇ ಸಮಾಜವೆಂಬುವ ಅಭೇದ ಬುದ್ಧಿಯಿಂದ ಎಡೆಬಿಡದೆ ದುಡಿದು ಅಜರಾಮರವಾದ ಕೀರ್ತಿಯನ್ನು ಪಡೆದು ಬಯಲಾದನೋ, ಅಂತಹ ಶಿವಯೋಗಿಯನ್ನು ಕಳೆದುಕೊಂಡದ್ದು ನೆನಪಾದರೆ ಲಿಂಗಾಂಗಿಯಾದ ಪ್ರತಿಯೊಬ್ಬ ಮಾನವನಿಗೆ ಸಂತಾಪವಾಗದೆ ಇರದು.

ಈ ಜಗತ್ತಿನಲ್ಲಿ ವಿದ್ಯಾವಂತರು ಜನಿಸಬಹುದು, ಶ್ರೀಮಂತರಾಗಬಹುದು, ದೊಡ್ಡ ಅಧಿಕಾರವನ್ನು ಹೊಂದಬಹುದು, ಆದರೆ ವೈರಾಗ್ಯ ಶೀಲರಾಗಿ ಸ್ವಾರ್ಥಕ್ಕೆ ತಿಲಾಂಜಲಿಯನ್ನು ಬಿಟ್ಟು ಯಾವಾಗಲೂ ಸಮಾಜ ಸೇವೆಯನ್ನು ಮಾಡುವ ಮಹಾತ್ಮರು ಹುಟ್ಟುವದು ಮಾತ್ರ ವಿರಳವು. ಅಮೇರಿಕೆಯನ್ನು ಮೊದಲು ಕೋಲಂಬಸನು ಹುಡುಕಿದನಷ್ಟೆ? ಅವನ ತರುವಾಯ ಎಷ್ಟೋ ಜನರು ಆ ದೇಶವನ್ನುದ್ಧಾರ ಮಾಡಿದರೂ ಅವನ ಹೆಸರು ಹೇಗೆ ಸ್ಥಿರವಾಗಿರುವದೋ ಹಾಗೆಯೇ ವೀರಶೈವ ಸಮಾಜದಲ್ಲಿ ಮೊದಲು ಸುಧಾರಣೆಯೆಂಬುವ ಕ್ರಾಂತಿಯನ್ನು ಮಾಡಿದವರು ಹಾನಗಲ್ಲ ಶ್ರೀಗಳವರು. ಇತ್ತೀಚೆಗೆ ಎಷ್ಟೋ ಜನರು ಸಮಾಜ ಸುಧಾರಕರಾದರೂ ಪ್ರಾರಂಭ ಮಾಡಿದ ಕೀರ್ತಿಯು ಮಾತ್ರ ಕುಮಾರ ಸ್ವಾಮಿಗಳವರಿಗೇನೇ ಇರುತ್ತದೆ.

ಧರ್ಮವೆಂದರೆ ಇವರಿಗೆ ಪ್ರಾಣಸ್ವರೂಪವು. ಆದ್ದರಿಂದಲೇ ೨೦ ವರ್ಷಗಳ ಕೆಳಗೆ ಧರ್ಮೋತ್ತೇಜಕವೆಂಬುವ ಸಭೆಯನ್ನು ಪ್ರಾರಂಭಮಾಡಿ ಜನರ ಆಚಾರ ವಿಚಾರಗಳನ್ನು ಸುಧಾರಿಸಲಿಕ್ಕೆ ಪ್ರಯತ್ನ ಮಾಡಿದರು. ಈ ಪುಣ್ಯ ಪುರುಷರು ಸಮಾಜದ ಸಲುವಾಗಿ ಮಾಡಿರುವ ನೂರಾರು ಕಾರ್ಯಗಳಿರುತ್ತವೆ. ಅವುಗಳಲ್ಲಿ ಧರ್ಮಜ್ಞಾನಕ್ಕೆ ಮೂಲಕಾರಣವಾಗಿರುವ ಸಂಸ್ಕೃತ ಭಾಷೆಯ ಅಭಿವೃದ್ಧಿಗಾಗಿ ಇವರು ಮಾಡಿರುವದನ್ನು ವಿವೇಚಿಸುವದೇ ಈ ಲೇಖದ ಮುಖ್ಯಾಭಿಪ್ರಾಯವಾಗಿರುತ್ತದೆ. ಹಿಂದು ಜನರಿಗೆ ಸಂಸ್ಕೃತ ಭಾಷೆಯಂದರೆ ಧರ್ಮ ಸ್ವರೂಪವಾಗಿರುವದಷ್ಟೆ? ವೇದಾಗಮಾದಿಗಳೆಲ್ಲ ಆ ಭಾಷೆಯಲ್ಲಿರುವದರಿಂದ ಹಿಂದುಗಳಾದ ಪ್ರತಿಯೊಂದು ಸಮಾಜದವರಿಗೆ ಆ ಭಾಷೆಯು ಅತ್ಯಾವಶ್ಯಕವಾಗಿರುತ್ತದೆ. ವೀರಶೈವ ಸಮಾಜದಲ್ಲಿ ಮೊದಲಿದ್ದ ಸಂಸ್ಕೃತ ಭಾಷೆಯ ಪಾಂಡಿತ್ಯವು ಕಡಿಮೆಯಾಗುತ್ತ ನಡೆದ ಕಾಲದಲ್ಲಿ ಅದರ ಉದ್ಧಾರಕ್ಕಾಗಿ ಅನೇಕ ಜನರು ಪ್ರಯತ್ನವನ್ನು ನಡೆಸಿದರು. ಅದರಲ್ಲಿ ಶ್ರೀ ಕುಮಾರ ಸ್ವಾಮಿಗಳವರ ಅಂಗವೂ ಕೂಡ ವಿಶೇಷದ್ದಿರುವುದು. ಸಾಧಾರಣವಾಗಿ ಶಿವಯೋಗಮಂದಿರವು ಸ್ಥಾಪನ ವಾದಂದಿನಿಂದಲೂ ಸಂಸ್ಕೃತ ಭಾಷೆಯ ಪಾಂಡಿತ್ಯವು ನಮ್ಮ ಸಮಾಜದಲ್ಲಿ ನೆಲೆಗೊಳ್ಳಬೇಕೆಂಬ ಉದ್ದೇಶದಿಂದಲೇ ಅಲ್ಲಿ ಯಾವಾಗಲೂ ಇಬ್ಬರು ಪಂಡಿತರನ್ನಿಟ್ಟಿರುತ್ತಾರೆ.

ಘನ ವೈರಾಗ್ಯಶೀಲರಾದ ಬಾಗಲಕೋಟೆಯ ಮಲ್ಲಣಾರ್ಯರು ಶ್ರೀಗಳವರಿಗೆ ಅತಿಶಯ ಪ್ರೇಮಾಸ್ಪದರಾಗಿದ್ದರು. ಈ ಇಬ್ಬರ ಪ್ರಯತ್ನದಿಂದಲೇ ಬಾಗಲಕೋಟೆ ಮತ್ತು ಅಬ್ಬಿಗೇರಿ ಪಾಠಶಾಲೆಗಳು ಪ್ರಾರಂಭಿಸಲ್ಪಟ್ಟು ೩೦ ವರ್ಷಗಳಿಂದ ನಡೆದು ಬಂದಿರುತ್ತವೆ. ಹಾವೇರಿಯ ಪಾಠಶಾಲೆಯ ಸ್ಥಾಪನೆಗೂ ಶ್ರೀಗಳವರೇ ಮೂಲ ಕಾರಣರು ಮತ್ತು ಅಕ್ಕಿಯ ಆಲೂರಲ್ಲಿ ಹಾನಗಲ್ಲ ಶ್ರೀಗಳಿಂದ ಸ್ಥಾಪಿತವಾಗಿರುವ ಸಂಸ್ಕೃತ ಮತ್ತು ಜ್ಯೋತಿಷ್ಯ ಪಾಠಶಾಲೆಯು ಇಂದಿಗೂ ನಡೆದಿರುತ್ತದೆ. ಶ್ರೀ ಅನ್ನದಾನ ಮಹಾಸ್ವಾಮಿಗಳವರ ಮಠದಲ್ಲಿ ನಡೆಯುವ ಪಾಠಶಾಲೆಯ ಸ್ಥಾಪನೆಯಲ್ಲಿಯೂ ಶ್ರೀಗಳವರ ಪ್ರಯತ್ನವಿಲ್ಲದೆ ಇರುವುದಿಲ್ಲ ಮತ್ತು ಇಲಕಲ್ಲಿನಲ್ಲಿ ನಡೆಯುವ ಪಾಠಶಾಲೆಯನ್ನು ಕುಮಾರಸ್ವಾಮಿಗಳವರೇ ಸ್ಥಾಪಿಸಿರುತ್ತಾರೆ. ಹೀಗೆಯೇ ಒಂದಲ್ಲ ಎರಡಲ್ಲ ನಮ್ಮ ಸಮಾಜದಲ್ಲಿರತಕ್ಕ ಅರ್ಧ ಪಾಠಶಾಲೆಗಳಲ್ಲಿ ಸ್ವಾಮಿಗಳವರ ಅಂಗವಿರುತ್ತದೆ. ಮಹಾಸ್ವಾಮಿಗಳವರ ಅಪ್ಪಣೆಯಿಂದಲೇ ಸ್ಥಾಪಿಸಲ್ಪಟ್ಟ ನೀರಡಗುಂಭದ ಪಾಠಶಾಲೆಯು ಸದ್ಯಕ್ಕೆ ನಡೆದಿರುತ್ತದೆ. ಹೀಗೆಯೇ ಅನಂತಪುರ ಕೆಳದಿ ಚಿತಾಪೂರ ಮೊದಲಾದ ಗ್ರಾಮಗಳಲ್ಲಿ ಶ್ರೀಗಳವರಿಂದ ಪ್ರಾರಂಭಿಸಲ್ಪಟ್ಟ ಪಾಠಶಾಲೆಗಳು ಕೆಲವು ದಿವಸಗಳವರೆಗೆ ನಡೆದು ನಿಂತಿರುತ್ತವೆ.

ಮಹಾಸ್ವಾಮಿಗಳವರು ಹೋದಹೋದಲ್ಲಿ ಭಕ್ತರಿಗೆ ಪಾಠಶಾಲೆಗಳನ್ನು ಸ್ಥಾಪಿಸಲಿಕ್ಕೆ ಬೋಧಿಸುತ್ತಿದ್ದರು. ಶ್ರೀಗಳವರು ಯಾವಾಗಲೂ ನಮ್ಮ ಸಮಾಜದಲ್ಲಿ ಆಚಾರನಿಷ್ಠರಾದ ದೊಡ್ಡ ದೊಡ್ಡ ಪಂಡಿತರಾಗಬೇಕೆಂಬುವ ಕುತೂಹಲ ವುಳ್ಳವರಾಗಿದ್ದರು. ಆಚಾರವು ಅವರ ಪ್ರಾಣಸ್ವರೂಪವಾದದ್ದರಿಂದ ಆಚಾರವಿಹೀನರಿಗೆ ಅವರು ಸೇರುತ್ತಿದ್ದಿಲ್ಲವಷ್ಟೆ ಅಲ್ಲ; ಅಂಥವರಿಗೆ ಯಾವ ತರಹದ ಸಹಾಯವನ್ನೂ ಮಾಡುತ್ತಿರಲಿಲ್ಲ. ಸಂಸ್ಕೃತ ಭಾಷಾಭಿವೃದ್ಧಿಯಾಗಬೇಕೆಂಬುವ ಉದ್ದೇಶದಿಂದಲೇ ಕಾಶಿಯಲ್ಲಿ ಅಧ್ಯಯನ ಮಾಡತಕ್ಕ ಕೆಲವರಿಗೆ ಮಂದಿರದಿಂದ ಸಹಾಯವನ್ನು ಮಾಡಿಸಿರುತ್ತಾರೆ.

ಅಂತೂ ಸಂಸ್ಕೃತ ಭಾಷೆಯು ನಮ್ಮ ಸಮಾಜದಲ್ಲಿ ವೃದ್ಧಿಯಾಗಲಿಕ್ಕೆ ಶ್ರೀಗಳವರು ಬಹು ಪ್ರಯಾಸಪಟ್ಟಿರುತ್ತಾರೆ. ಆಚಾರನಿಷ್ಠರಾದ ಸಂಸ್ಕೃತ ಪಂಡಿತರೆಂದರೆ ಇವರಿಗೆ ಪ್ರಾಣಸ್ವರೂಪವು. ಆದ್ದರಿಂದಲೇ ಪರಳೀ ಪ್ರಕರಣದಲ್ಲಿ ೧೨ ಜನ ಪಂಡಿತರು ಮೂರು ತಿಂಗಳುಗಳವರೆಗೆ ಶ್ರೀಗಳ ಅಧೀನದಲ್ಲಿದ್ದು ಕೆಲಸವನ್ನು ಮಾಡಿ ಜಯಶಾಲಿಗಳಾದರು. ಆ ಕಾಲಕ್ಕೆ ಶ್ರೀಗಳವರು ಪಂಡಿತರಿಗೆ ಮಾಡುತ್ತಿದ್ದ ಮನ್ನಣೆಯನ್ನು ನೋಡಿದರೆ ಶ್ರೀಗಳು ನಿಜವಾಗಿ ಗುಣಗ್ರಾಹಿಗಳೆಂದು ತೋರುತ್ತಿತ್ತು. ಎಷ್ಟೋ ಸಾರೆ ಅವರ ಮುಖದಿಂದ ಸಂಸ್ಕೃತ ಕಲಿತ ಪಂಡಿತರೇ ನಿಜವಾದ ನಮ್ಮ ಬಂಧುಗಳೆಂದು ಹೇಳುತ್ತಿದ್ದರು. ಮಹಾಸ್ವಾಮಿಗಳವರು ನಿಜವಾದ ಪಾಂಡಿತ್ಯಕ್ಕೆ ಬೆಲೆಯನ್ನು ಕೊಡುತ್ತಿದ್ದರಲ್ಲದೇ ಸುಮ್ಮನೇ ಮುಖಸ್ತುತಿಯನ್ನು ಮಾಡುತ್ತಿರಲಿಲ್ಲ. ಥಟ್ಟನೇ ಅವರಲ್ಲಿದ್ದ ಕೆಟ್ಟ ಗುಣಗಳ ಬಗ್ಗೆ ಆಡಿಬಿಡುತ್ತಿದ್ದರು. ಇದರಿಂದ ಕೆಲವರಿಗೆ ಸರಿಬರುತ್ತಿರಲಿಲ್ಲ. ನಿಜವಾಗಿಯೂ ಪಂಡಿತರ ಹಿತಚಿಂತನೆಯನ್ನು ಬಯಸುತ್ತಿದ್ದ ಶ್ರೀಗಳವರಿಗೆ ಇದು ಯೋಗ್ಯವೇ ಇರುತ್ತದೆ.

ಅಂತೂ ಸಂಸ್ಕೃತಾಭಿಮಾನಿಗಳೂ ಪಂಡಿತರ ಹಿತಚಿಂತಕರೂ ಆದ ಒಬ್ಬ ಜ್ಞಾನಕರ್ಮಯೋಗಿಯನ್ನು ಕಳೆದುಕೊಂಡಿದ್ದು ವೀರಶೈವ ಸಮಾಜದ ದುರ್ದೈವವೇ ಸರಿ. ಇಂತಹ ಶ್ರೀಗಳು ಪುನಃ ನಮ್ಮ ಸಮಾಜದಲ್ಲಿ ಅವತಾರವನ್ನು ತಾಳಲೆಂದು ಸರ್ವರೂ ಶಂಕರನನ್ನು ಪ್ರಾರ್ಥಿಸಬೇಕಾಗಿರುತ್ತದೆ. ಇಂತಹ ಸಮಾಜಾಭಿಮಾನಿಗಳಾದ ಕರ್ಮಠರು ವೀರಶೈವ ಸಮಾಜದಲ್ಲಿ ಹುಟ್ಟುವದೇ ಅಪರೂಪವು. ಎಲ್ಲಿಯವರೆಗೆ ವೀರಶೈವ ಸಮಾಜವು ಅಸ್ತಿತ್ವದಲ್ಲಿರುವದೋ, ಎಲ್ಲಿಯವರೆಗೆ ವೀರಶೈವರ ರಕ್ತವು ನಾಡಿಯಲ್ಲಿ ಚಲಿಸುತ್ತಿರುವದೋ ಎಲ್ಲಿಯವರೆಗೆ ವೀರಶೈವ ಜಗತ್ತಿನಲ್ಲಿ ಸೂರ್ಯ ಚಂದ್ರಾದಿಗಳು ಮೂಡಿ ಮುಳುಗುವರೋ ಅಲ್ಲಿಯವರೆಗೆ ಶ್ರೀಗಳನ್ನು ಸಮಾಜವು ಮರೆಯುವಂತಿಲ್ಲ.

■■

# ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರೂ ಪ್ರಾಣಿದಯೆಯೂ

• ಆನೆಕೊಂಡದ ಮುಪ್ಪಣ್ಣನವರು, ದಾವಣಗೆರೆ

ಜಗತ್ತಿನಲ್ಲಿ ಅನೇಕ ವಿಧವಾದ ಸತ್ಕಾರ್ಯಗಳನ್ನು ಮಾಡುತ್ತಿರುವರಾದಾಗ್ಯೂ ಭೂತದಯಾಪರರೂ, ಅಹಿಂಸಾಭಿಮಾನಿಗಳೂ ಆಗಿರುವುದು ಬಹು ಅಪರೂಪವಾಗಿದೆ. ಹೀಗೆಂದ ಮಾತ್ರಕ್ಕೆ ಪ್ರಾಣಿಗಳನ್ನು ಕೊಲ್ಲಲು ಅಥವಾ ಕೊಲ್ಲಿಸಲು ಸಹಾಯಕರಾಗಿರುವರೆಂದು ನನ್ನ ಅಭಿಪ್ರಾಯವಲ್ಲ. ಆದರೆ ಪ್ರಾಣಿಗಳಿಗೊದಗಿರುವ ಸಂಕಟವನ್ನು ಪರಿಹರಿಸಲು ಯತ್ನಿಸುವದಿಲ್ಲ. ಈ ಕಾರಣದಿಂದಲೇ ವ್ಯವಸಾಯವೇ ಪ್ರಾಧಾನ್ಯವಾಗಿರುವ ಈ ನಮ್ಮ ಭರತಖಂಡದಲ್ಲಿ ವ್ಯವಸಾಯಕ್ಕೆ ಮುಖ್ಯಾಧಾರದ ಹೋರಿ, ಗೋವು ಮೊದಲಾದವುಗಳು ಬಹಳ ಕಡಿಮೆಯಾಗಿ ನಮ್ಮ ವ್ಯವಸಾಯವು ಕೇವಲ ನಿಕೃಷ್ಟ ಸ್ಥಿತಿಗೆ ಬಂದಿದೆ. ಇನ್ನೂ ಕೆಲವು ಕಾಲದವರೆಗೂ ದೇಶದಲ್ಲಿ ಗೋವಧೆಯು ನಿರ್ವಿಘ್ನವಾಗಿ ನಡೆದಲ್ಲಿ ಈಗಿರುವ ಅಲ್ಪಸ್ವಲ್ಪ ಪ್ರಾಣಿಗಳೂ ಸಹ ಕಟುಗರ ಪಾಲಾಗಿ ನಮ್ಮ ವ್ಯವಸಾಯಕ್ಕೆ ಬಹು ತೊಂದರೆ ಬರುವ ಪ್ರಸಂಗವಿದೆ.

ಯಾವ ನಮ್ಮ ಪೂರ್ವಿಕರು ಹಾಲು, ಮೊಸರು ಮತ್ತು ತುಪ್ಪ ಮೊದಲಾದ ಪೌಷ್ಟಿಕ ಪದಾರ್ಥಗಳ ಸೇವನೆಯಿಂದ ದೃಢಾಂಗರಾಗಿ ಹೆಚ್ಚು ಕಾಲ ಬದುಕುತ್ತಿದ್ದರೋ ಅದೇ ವಂಶದವರಾದ ನಾವು ಹಾಲು ತುಪ್ಪ ಮೊದಲಾದ ಪೌಷ್ಟಿಕ ಪದಾರ್ಥಗಳಿಲ್ಲದೆ ಸಜೀವ ಹೆಣಗಳಂತಾಗಿ ಅಕಾಲ ಮರಣವನ್ನು ಹೊಂದುತ್ತಿರುವೆವು. ಶಿಶುಗಳ ಮರಣ ಸಂಖ್ಯೆಯಂತೂ ಮಿತಿಮೀರಿತು. ಈಗ ದೊರೆಯುವ ಹಾಲೆಂದರೆ ಕಾಲುವಾಸಿ ಹಾಲಿಗೆ ಮುಕ್ಕಾಲುವಾಸಿ ನೀರನ್ನು ಬೆರೆಯಿಸಿದ ಹಾಲೇ! ದನಗಳು ಯಥೇಚ್ಛವಾಗಿದ್ದಾಗ ಹಾಲು ತುಪ್ಪಗಳಿಂದ ಕೈ ತೊಳೆಯುತ್ತಿದ್ದವರು ಈಗ ಎಳೆ ಮಕ್ಕಳಿಗೆ ಅಥವಾ ರೋಗಿಗಳಿಗೆ ಸ್ವಲ್ಪ ಹಾಲು ಬೇಕೆಂದರೂ ದೊರೆಯುವುದೇ ದುರ್ಲಭವಾಗಿದೆ. ಈಗ ನಮಗೆ ಹಾಲು ತುಪ್ಪಗಳೆಂದರೆ ಪರದೇಶಗಳಿಂದ ಪೆಟ್ಟಿಗೆಗಳಲ್ಲಿ ಪ್ಯಾಕಾಗಿ ಬರುವ ಅಔಟಿಜಜಟಿಜಜ ಟುಟಇ(ಕಂಡೆನ್ಸ್‌ಡ ಹಾಲು) Vegetable ghee (ಸಸ್ಯಗಳಿಂದ ತಯಾರಿಸಿದ ತುಪ್ಪ) ಇವುಗಳೇ ಗತಿಯಾಗಿವೆ. ಇಂತಹ ದುಸ್ಥಿತಿಯು ನಮಗೆ ಬರಲು ಕಾರಣವೆಂದರೆ ನಾವು ದನಗಳ ವಿಷಯದಲ್ಲಿ ನಿರ್ದಯರಾಗಿ ಅವುಗಳನ್ನು ಕಟುಗರಿಗೆ ಕೊಡುವುದೆ ಕಾರಣವಾಗಿದೆ.

ನಮ್ಮ ದೇಶಕ್ಕೊದಗಿರುವ ದನಗಳ ಸಂಹಾರವೆಂಬ ಮಹಾಮಾರಿಯನ್ನು ತಪ್ಪಿಸದ ಹೊರ್ತು ನಮ್ಮಗಳ ಏಳ್ಗೆಗಾಗಲೀ ದೇಶಾಭ್ಯುದಯಕ್ಕಾಗಲೀ ಮಾರ್ಗವೇ ಇಲ್ಲದಂತಾಗಿದೆ ದೇಶದಲ್ಲಿ ನಡೆದಿರುವ ಇಂತಹ ಅನ್ಯಾಯವನ್ನು ನೋಡಿಯೂ ನೋಡದವರಂತೆ ಸುಮ್ಮನಿರುವುದೆಂದರೆ ನಮ್ಮ ಕಾಲಮೇಲೆ ನಾವೇ ಕಲ್ಲು ಹಾಕಿಕೊಂಡಂತೆಯೇ ಸರಿ. ದೇಶಾಭ್ಯುದಯಕ್ಕೆ ಮಹಾ ಅನರ್ಥಕಾರಿಯಾದ ಮೇಲ್ಕಂಡ ದುರಭ್ಯಾಸವನ್ನು ನಿಲ್ಲಿಸುವುದು ಪರಮ ಕರ್ತವ್ಯವಾಗಿದ್ದರೂ ಅನೇಕರು ಆ ಕಡೆಗೆ ಲಕ್ಷ್ಯಕೊಡದಿರುವುದು ವಿಷಾದಕರವಾದ ಸಂಗತಿಯಾಗಿದೆ. ಕಾಯಿದೆ ಕೌನ್ಸಿಲ್‌ದ ಮೆಂಬರಗಳೂ ಸದ್ಗೃಹಸ್ಥರೂ ಕೊಂಚ ಪ್ರಯತ್ನಪಟ್ಟು ಈ ಅನರ್ಥವನ್ನು ತಪ್ಪಿಸುವುದು ಅತ್ಯಾವಶ್ಯಕ. ಗುರುಗಳೆಂಬುವರೂ ಸಹ ಈ ವಿಷಯದಲ್ಲಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಮಾಡಿದಂತೆ ಭಕ್ತರಲ್ಲಿ ಜಾಗೃತಿಯನ್ನು ಉತ್ಪನ್ನ ಮಾಡಬೇಕು.

ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳು ಭೂತದಯಾಪರರಾಗಿದ್ದರಲ್ಲದೆ ತಮ್ಮ ನಿತ್ಯ ಕರ್ಮಗಳ ಜೊತೆಗೆ ಪ್ರಾಣಿಗಳ ಸಂಕಟ ನಿವಾರಣೆ ಮಾಡುವ ವೃತ್ತಿಯನ್ನು ಕೈಕೊಂಡಿದ್ದರು. ಆಗಾಗ್ಗೆ ಶಿಷ್ಯರಿಗೆ ಪ್ರಾಣಿದಯೆಯ ವಿಷಯವಾಗಿ ಉಪದೇಶಿಸಿ ಯಾವ ಪ್ರಾಣಿಯೇ ಆಗಲಿ ಸಂಕಟದಿಂದ ಪರಿತಪಿಸುತ್ತಿದ್ದರೆ ಅದರ ಕಷ್ಟವನ್ನು ತಪ್ಪಿಸದೆ ಮುಂದಿನ ಕಾರ್ಯದಲ್ಲಿ ಉದ್ಯುಕ್ತರಾಗುತ್ತಿರಲಿಲ್ಲ. ಮೂಕ ಪ್ರಾಣಿಗಳ ವಿಷಯದಲ್ಲಿ ಬಹು ಕನಿಕರವುಳ್ಳವರಾಗಿದ್ದರು. ಅವುಗಳ ರಕ್ಷಣೆಗಾಗಿ ತಮ್ಮ ಕೈಯಿಂದ ಸಹಾಯವನ್ನೆಲ್ಲಾ ಮಾಡುತ್ತಿದ್ದರು. ಇವರು ಆಗಾಗ್ಗೆ ಅಹಿಂಸಾ ಬೋಧಕರನ್ನು ಕರೆಯಿಸಿ ಅವರಿಂದ ಜನಗಳಿಗೆ ಉಪದೇಶಿಸುತ್ತಿದ್ದರು. ಎಲ್ಲಿಯಾದರೂ ಅಹಿಂಸಾ ಬೋಧಕರು ಬಂದರೆ ಅವರನ್ನು ಕರೆಯಿಸಿ ಅವರಿಗೆ ಪ್ರೋತ್ಸಾಹಿಸುತ್ತಿದ್ದರು.

ನಮ್ಮ ಸಂಘದ ಪ್ರಚಾರಕರು ಯಮನೂರು ದೇವಿ ಜಾತ್ರೆಗೆ ಪ್ರಚಾರಕ್ಕೆ ಹೋದಾಗ ಅವರನ್ನು ಬರಮಾಡಿಕೊಂಡು ಅಹಿಂಸೆಯ ವಿಷಯವಾಗಿ ವ್ಯಾಖ್ಯಾನ ಮಾಡಿಸಿ ಪ್ರೋತ್ಸಾಹಾರ್ಥವಾಗಿ ಧನಸಹಾಯ ಮಾಡಿದವರೂ ಈ ಮಹಾಸ್ವಾಮಿಗಳೇ. ಅನೇಕ ಕಡೆಯಲ್ಲಿ ನಡೆಯುತ್ತಿದ್ದ ಹಿಂಸಾಯುಕ್ತವಾದ ದೇವಿ ಜಾತ್ರೆಗಳಲ್ಲಿ ಹಿಂಸೆಯನ್ನು ತಪ್ಪಿಸಲು ಸಹಾಯಕಾರಿಗಳಾಗಿದ್ದರು. ಇವರು ತಮ್ಮ ಆಧಿಪತ್ಯದಲ್ಲಿ ಜರುಗುತ್ತಿದ್ದ ಮುದೇನೂರ ಜಾತ್ರೆಗೆ ನಮ್ಮ ಸಂಘದ ಪ್ರಚಾರಕರನ್ನು ಕರೆಯಿಸಿಕೊಂಡು ಜನಗಳಲ್ಲೆಲ್ಲಾ ಅಹಿಂಸಾ ತತ್ವವನ್ನು ಹರಡಲು ಏರ್ಪಾಟು ಮಾಡಿದ್ದರು. ಅಲ್ಲದೆ ಮುದೇನೂರಲ್ಲಿ ಸೇರುತ್ತಿದ್ದ ಜಾತ್ರೆಯಲ್ಲಿ ಉತ್ತಮವಾದ ಹೋರಿಗಳ ವಿನಹ ಕಟುಗರಿಗೆ ದೊರೆಯಬಹುದಾದ ಬಡಕು ಪ್ರಾಣಿಗಳು ಬಹಳ ಮಟ್ಟಿಗೂ ಬರದಂತೆ ಏರ್ಪಾಟೂ ಮಾಡಿದ್ದರು. ತಾವು ಶಿವೈಕ್ಯರಾಗುವ ೮–೧೦ ದಿವಸ ಮುಂಚಿತವಾಗಿ ದಾವಣಗೆರೆಗೆ ದಯಮಾಡಿಸಿ, ಮುದೇನೂರಲ್ಲಿ ಸೇರುವ ದನದ ಜಾತ್ರೆಯಲ್ಲಿ ಪ್ರಚಾರದ ಕೆಲಸವನ್ನು ನಡೆಯಿಸಲು ನಮ್ಮ ಪ್ರಚಾರಕರನ್ನು ಕರೆದುಕೊಂಡು ಹೋಗಿ ಸಂಗೀತ, ವ್ಯಾಖ್ಯಾನ, ಮ್ಯಾಜಿಕ್ ಲ್ಯಾಂಟರ್ನ ಮೊದಲಾದವುಗಳ ಮೂಲಕ ಅಹಿಂಸಾ ತತ್ವವನ್ನು ಪ್ರಸಾರಪಡಿಸಲು ವ್ಯವಸ್ಥೆ ಮಾಡಿದವರೂ ಈ ಮಹಾಸ್ವಾಮಿಗಳೇ.

ಈ ಪ್ರಕಾರ ಈ ಮಹಾಸ್ವಾಮಿಗಳು ಅನೇಕ ರೀತಿಗಳಿಂದ ಪ್ರಾಣಿದಯೆ ವಿಷಯದಲ್ಲಿ ಸಹಾಯಕರಾಗಿದ್ದರಲ್ಲದೆ ಕೇವಲ ಭೂತದಯಾಪರರಾಗಿ "ಅಹಿಂಸಾ ಪರಮೋಧರ್ಮಃ" ಎಂಬ ತತ್ವವನ್ನು ಜನಸಾಮಾನ್ಯರಲ್ಲೆಲ್ಲಾ ಪ್ರಸಾರಗೊಳಿಸಿದರು. ಇವರ ಅಗಲುವಿಕೆಯಿಂದ ಮೂಕ ಪ್ರಾಣಿಗಳು ತಾಯಿಯನ್ನು ಕಳೆದುಕೊಂಡ ಕರುವಿನಂತೆ ವ್ಯಸನ ಪಡುತ್ತಿರುವವು. ದಯಾಮಯನಾದ ಭಗವಂತನು ಸರ್ವರಿಗೂ ಸರ್ವ ಪ್ರಾಣಿಗಳನ್ನು ರಕ್ಷಿಸುವ ಸದ್ಬುದ್ಧಿಯನ್ನು ಕೊಟ್ಟು ಮಹಾಸ್ವಾಮಿಗಳವರು ಕೈಕೊಂಡಿದ್ದ ಕಾರ್ಯವು ಜಯಪ್ರದವಾಗುವಂತೆ ಕರುಣಿಸಲಿ!

■■

# ಸಮಾಜೋನ್ನತಿಯ ವಿಷಯದಲ್ಲಿ ಶ್ರೀಗಳವರ ಸಾಹಸ

• ಶ್ರೀ ಶಿವಮೂರ್ತಿಸ್ವಾಮಿ ಹಿರೇಮಠ, ಹಾವೇರಿ

ಯಾವದೊಂದು ಪದಾರ್ಥವು ಆಗಾಗ್ಗೆ ಸಂಸ್ಕರಣವನ್ನು ಹೊಂದದಿದ್ದರೆ ಅದು ನೈಸರ್ಗಿಕ ಪರಿಣಾಮಕ್ಕೊಳಪಟ್ಟು ಕೊಳೆಯುವುದು; ಇಲ್ಲವೆ ಹುಳಿಯುವುದು; ಇಲ್ಲವೆ ಅದರ ನೈಸರ್ಗಿಕ ಗುಣಗಳು ಹೊರಬೀಳದೆ ಉಳಿಯುವವು; ಅದಕ್ಕೂ ಹೆಚ್ಚಾದರೆ ಅಳಿಯುವವು. ಮಾನವ ವರ್ಗದ ಅಥವಾ ಜನಾಂಗದ ವಿಷಯವಾದರೂ ಹಾಗೇ ಇರುವದು. ಯಾವುದೊಂದು ಜನಾಂಗದಲ್ಲಿ ಆಗಾಗ್ಗೆ ಸಂಸ್ಕರಣವು ಆಗದೇ ಹೋದರೆ ಆ ಜನಾಂಗದಲ್ಲಿ ಎಷ್ಟೋ ಆಚಾರವಿಚಾರಗಳು ಕೆಟ್ಟು ಜನಾಂಗವೇ ಅವನತಿಯನ್ನು ಹೊಂದುವುದು. ಈ ಅವನತಿಯು ದೂರಾಗುವದಕ್ಕೆ ಒಂದೊಂದು ಸಮಾಜದಲ್ಲಿ ಒಂದೊಂದು ಕಾಲದಲ್ಲಿ ಅಗಾಧ ಕಾರ್ಯಪಟು ವ್ಯಕ್ತಿಯ ಅವತಾರವಾಗಿ ಒಂದಿಲ್ಲೊಂದು ರೀತಿಯಿಂದ ಸಮಾಜ ಜಾಗೃತಿಯೋ ಅಥವಾ ಸಮಾಜಾ ಭ್ಯುದಯವೋ, ಇಲ್ಲವೇ ಸಮಾಜ ಸಂಸ್ಕರಣವೋ ಆದ ಉದಾಹರಣೆಗಳನ್ನು ನಾವು ಇತಿಹಾಸದಲ್ಲಿ ನೋಡುತ್ತೇವೆ. ಅದರಂತೆ ವೀರಶೈವ ಸಮಾಜದಲ್ಲಿ ನೂತನ ಚೈತನ್ಯವನ್ನು ಹುಟ್ಟಿಸಿ ಜಾಗೃತ ಮಾಡಿದವರಲ್ಲಿ ಶ್ರೀಕುಮಾರಸ್ವಾಮಿಗಳು ಒಬ್ಬ ಐತಿಹಾಸಿಕ ಪುರುಷರೆಂದೇ ಹೇಳಬಹುದು.

ಸಮಾಜದಲ್ಲಿ ಇಂದಿನವರೆಗೆ ಬೇಕಾದಂಥ ತಪಸ್ವಿಗಳಾಗಿ ಹೋಗಿರಬಹುದು. ಬೇಕಾದಂಥ ಉಚ್ಚಸ್ಥಾನದ ಪೂಜ್ಯಪಾದರಾಗಿ ಹೋಗಿರಬಹುದು. ಬೇಕಾದಂಥ ಅಸಮಾನ ಪಂಡಿತರಾಗಿ ಹೋಗಿರಬಹುದು. ಬೇಕಾದಂಥ ಬುದ್ಧಿಶಾಲಿಗಳಾಗಿ ಹೋಗಿರಬಹುದು. ಆದರೆ ಸಮಾಜದ ಮೇಲಿನ ಪ್ರೇಮ, ಸಮಾಜೋನ್ನತಿಯ ಚಿಂತೆ, ಸಮಾಜೋದ್ಧಾರದ ಮಾರ್ಗ ಶೋಧ ಸಮಾಜೋತ್ಕರ್ಷತೆಗೆ ಬೇಕಾಗುವ ಕಷ್ಟ ಸಹಿಷ್ಣುತೆ ಇವೇ ಮೊದಲಾದ ಗುಣಗಳಿಂದ ಸಮಾಜದಲ್ಲಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳಷ್ಟು ಪ್ರಕಾಶಮಾನರಾದವರು ಎಂದಿಗಾದರೂ ಈ ಸಮಾಜಕ್ಕೆ ಲಭಿಸಿದ್ದರೋ ಹೇಗೆಂಬುದಕ್ಕುತ್ತರವನ್ನು ಹೇಳುವುದು ಕಠಿಣ. ಮಹಾಸ್ವಾಮಿಗಳು ಸಮಾಜಸೇವೆಗೆ ನಡುಕಟ್ಟಿ ನಿಂತಕಾಲದಲ್ಲಿ ಸಮಾಜದಲ್ಲಿ ಬೇಕಾದಂಥ ಆಧುನಿಕ ವಿದ್ಯಾವಂತರು ಬೇಕಾದಷ್ಟು ಜನರಿದ್ದಿರಬಹುದು. ಚಾಣಾಕ್ಷ ಜನರು ಬೇಕಾದಷ್ಟು ಜನರಿದ್ದಿರಬಹುದು. ಆದರೆ ಈ ಸಮಾಜ ಸೇವಾಯೋಗನಿರತರು ಜಾಗೃತಿಯನ್ನು ಹುಟ್ಟಿಸದಿದ್ದರೆ ಈಗ ನಾವು ಯಾವ ಸ್ಥಿತಿಯಲ್ಲಿರುತ್ತಿದ್ದೆವೋ ಹೇಳಲಿಕ್ಕಾಗುವಂತಿಲ್ಲ. ಎದ್ದರೂ ಸಮಾಜ, ಬಿದ್ದರೂ ಸಮಾಜ; ಕೂತಲ್ಲಿ ಸಮಾಜ; ನಿಂತಲ್ಲಿ ಸಮಾಜ; ಸಮಾಜ ಸಮಾಜವೆಂದು ಸ್ವಪ್ನಾವಸ್ಥೆಯಲ್ಲಿಯೂ ಕೂಡ ಕನವರಿಸುವ ದಿವ್ಯ ವ್ಯಕ್ತಿಯನ್ನು ಕಾಣುವ ಸೌಭಾಗ್ಯವು ಸಮಾಜಕ್ಕೆ ಎಂದಾದರೂ ಲಭಿಸಿತೇ ಹೇಗೆಂಬುದುತ್ತರವನ್ನು ಹೇಳುವುದು ದುಸ್ತರ. ನಿದ್ರೆ ನೀರಡಿಕೆಗಳ ಪರಿವೆಯಿಲ್ಲದೆ, ಆಹಾರ ವಿಹಾರದ ವಿಚಾರವಿಲ್ಲದೆ, ದೇಹಾರೋಗ್ಯದ ಚಿಂತೆಯಿಲ್ಲದೆ, ಸಮಾಜದ ಯೋಗಕ್ಷೇಮ ಸಮಾಚಾರದಲ್ಲಿ, ಸಮಾಜದಲ್ಲಿರತಕ್ಕ ಕುಂದು ಕೊರತೆಗಳನ್ನು ದೂರು ಮಾಡುವ ವಿಚಾರಭರದಲ್ಲಿ ಸಮಾಜೋತ್ಕರ್ಷದ ಸಮಾಲೋಚನೆಯಲ್ಲಿ ನಿಮಗ್ನರಾದ ಮಹಾಸಾಧುವನ್ನು ಕಂಡ ಪುಣ್ಯವು ಸಮಾಜಕ್ಕೆ ಎಂದಾದರೂ ಪ್ರಾಪ್ತವಾಗಿತ್ತೇ ಹೇಗೆಂಬುದಕ್ಕುತ್ತರವನ್ನು ಹೇಳುವುದು ದುರಾಪಾಸ್ತವು.

ತಂಬಾಕದ ಹಾವಳಿಯನ್ನು ತಡೆಯೋಣ, ಚಹಾ, ಕಾಫಿ, ಸೋಡಾವಾಟರ ಮೊದಲಾದ ನೂತನ ಪಾನದ ದೌಡುಗಳನ್ನು ಎದುರಿಸೋಣ, ಆತ್ಮ ಸಂಸ್ಕೃತಿಯೂ ಜ್ಞಾನೋದಯವೂ ಇಲ್ಲದೇ ಅಂಧತ್ವದಿಂದ ತಲೆಯಮೇಲೆ ತೀಡುವ ಕೂದಲಿನ ಶೋಭೆ (ಕ್ರಾಫು)ಯನ್ನು ಪ್ರತಿಭಟಿಸೋಣ, ಇವೇ ಮೊದಲಾದ ಸಣ್ಣ ಪುಟ್ಟ ಚಟಗಳಿಂದ ಹಿಡಿದು ಪಂಥ ಹೇವಗಳ ಭರಕ್ಕೆ ಬಿದ್ದು ಊರೂರುಗಳಲ್ಲಿ ಬೆಳೆಯುವ ಪಕ್ಷಭೇದ, ಅವುಗಳಿಂದುದ್ಭವಿಸುವ ನಾನಾತರಹದ ವ್ಯಾಜ್ಯಗಳೇ ಮೊದಲಾದವುಗಳವರೆಗಿನ ದುಷ್ಟ ಪದ್ಧತಿಗಳನ್ನು ಅಳಿಯುವದರಲ್ಲಿ ಮಹಾಸ್ವಾಮಿಗಳು ದೇಹವನ್ನು ಸವೆಸುತ್ತಿದ್ದುದು ಸಾಮಾನ್ಯ ಸಮಾಜೋನ್ನತಿಯ ಪ್ರೇಮವೇ?

ನಮ್ಮವರು ಪ್ರತಿಯೊಬ್ಬರು ಅಕ್ಷರಜ್ಞರಾಗಲೆಂಬ ಲವಲವಿಕೆಯಿಂದ ಹೋದ ಹೋದಲ್ಲಿ ಬಡ ತಂದೆತಾಯಿಗಳಿಗೆ ಉಪದೇಶಿಸಿ ಪ್ರಸಂಗ ಬಂದಂತೆ ಧನ ಸಹಾಯ ಮಾಡಿದರೂ ಶಾಲೆಗೆ ಕಳಿಸುವಂತಹ ಸಣ್ಣ ಪುಟ್ಟ ಪ್ರಯತ್ನಗಳಿಂದ ಹಿಡಿದು ಊರೂರಿಗೆ

ಶಾಲೆಗಳಾಗಲಿ ಆಧುನಿಕ ವಿದ್ಯಾರ್ಜನೆಯ ವ್ಯವಸ್ಥೆಯಾಗಲಿ, ವೈದ್ಯ ಗಾಯನ ಮೊದಲಾದ ಅನೇಕ ವಿದ್ಯೆಗಳಲ್ಲಿ ನಮ್ಮವರು ಪಾರಂಗತರಾಗಲಿ ಎಂಬ ಹಂಬಲದಿಂದ ದೊಡ್ಡ ದೊಡ್ಡ ಸಂಸ್ಥಾಪನೆಗಳವರೆಗಿನ ಮಹತ್ಕಾರ್ಯಗಳಿಗೆ ಸಾಹಸಪಡುತ್ತಾ ಬಂದದ್ದು ಸಾಮಾನ್ಯ ಶಿಕ್ಷಣೋನ್ನತಿಯ ಪ್ರೇಮವೆ?

ದುಷ್ಟಚಟ, ದುಂದುಗಾರಿಕೆ ವ್ಯಾಜ್ಯ ಮೊದಲಾದವುಗಳಿಂದ ನಮ್ಮ ಸಮಾಜದ ದುಡ್ಡು ವ್ಯರ್ಥ ಹರಿದುಹೋಗುವುದನ್ನು ನಿಲ್ಲಿಸುವ ಅಭಿಲಾಷೆಯಿಂದ ಹಗಲೂ ರಾತ್ರಿ ಕಷ್ಟಪಡುತ್ತಿದ್ದುದು ಸಾಮಾನ್ಯ ಸಾಂಪತ್ತಿಕೋನ್ನತಿಯ ಪ್ರೇಮವೆ? ಗೊಂಬೆ, ಗಣಪತಿಗಳನ್ನು ಮಾಡುವುದು, ನೂಲುವುದು, ನೇಯುವದು, ಲಿಂಗ ಭಸ್ಮಗಳನ್ನು ಮಾಡುವದು, ಇವೇ ಮೊದಲಾದ ಸಣ್ಣ ಪುಟ್ಟ ಕೈಗಾರಿಕೆಗಳಿಂದ ಹಿಡಿದು ನೂತನ ಯಂತ್ರೋಪಕರಣಗಳಿಂದ ಒಕ್ಕಲುತನದ ಅಭಿವೃದ್ಧಿಯನ್ನೂ ಜಿನ್ನು ಪ್ರೆಸ್ಸು ಗಿರಣಿಗಳಿಂದ ವ್ಯಾಪಾರಾಭಿವೃದ್ಧಿಯನ್ನೂ ಮಾಡುವತನಕ ಸಾಹಸಕ್ಕೆ ಬಿದ್ದು ಅವುಗಳಲ್ಲಿ ಎಷ್ಟೋಮಟ್ಟಿಗೆ ಪ್ರತ್ಯಕ್ಷ ಕೆಲಸ ಮಾಡಿದುದು ಸಾಮಾನ್ಯ ಔದ್ಯೋಗಿಕ ಪ್ರೇಮವೇ?

ಸ್ವದೇಶಿ ವಸ್ತ್ರ-ಸ್ವದೇಶಿ ವಸ್ತುಗಳ ಅಭಿಮಾನದಿಂದ ಸ್ವತಃ ತಾವು ಅವುಗಳನ್ನುಪಯೋಗಿಸುತ್ತಿದ್ದರಲ್ಲದೆ ರಾಜಕೀಯ ವಾತಾವರಣದಲ್ಲಿ ಸೇರದಿದ್ದರೂ ಮಾತೃಭೂಮಿಯ ಮೇಲಿನ ಪ್ರೇಮದ ಮಾತುಗಳನ್ನು ವ್ಯಕ್ತಮಾಡಿ ಬೋಧಿಸುತ್ತಿದ್ದುದು ಸಾಮಾನ್ಯ ರಾಷ್ಟ್ರೋನ್ನತಿಯ ಪ್ರೇಮವೇ?

ಸ್ಥೂಲ ವಿಚಾರದಿಂದ ತಾವು ವಿರತಿಸ್ಥಾನದವರಾದರೂ ಈ ಪ್ರಕಾರವಾಗಿ ಸಮಾಜವನ್ನು ಸರ್ವಾಂಗಸುಂದರವನ್ನಾಗಿ ಮಾಡುವಂತಹ ವ್ಯಾಪಕ ಸ್ವರೂಪದ ಉದಾತ್ತ ವಿಚಾರಗಳಿಂದ ಅವಿಶ್ರಾಂತ ಶ್ರಮಬಟ್ಟು ಸಮಾಜೋನ್ನತಿಗಾಗಿ ದೇಹವನ್ನು ಸವಿಸಿದವರು. ಗುರು ಜಂಗಮರ ವರ್ಗದಲ್ಲಿಯೇ ಆಗಲಿ, ಶಿಕ್ಷಿತ ಇಲ್ಲವೆ ಶ್ರೀಮಂತ ವರ್ಗದಲ್ಲಿಯೇ ಆಗಲಿ, ರಾಜಕೀಯ ಇಲ್ಲವೆ ಧಾರ್ಮಿಕ ಸೇವಾಕಾರ್ಯಾನುರಕ್ತ ವರ್ಗದಲ್ಲಿಯೇ ಆಗಲಿ, ಯಾರೂ ಹಿಂದೆ ಆಗಿರಲಿಲ್ಲ. ಮಹಾಸ್ವಾಮಿಗಳ ಕಾಲದಲ್ಲಿಯೂ ಆಗಿರಲಿಲ್ಲ. ತದನಂತರವೂ ಆಗುವ ಸಂಭವವಿಲ್ಲೆಂದು ಹೇಳಿದರೆ ಅತಿಶಯೋಕ್ತಿ ಯಾಗಲಿಕ್ಕಿಲ್ಲ.

ಸಮಾಜೋನ್ನತಿಯ ವಿಷಯವಾಗಿ ಮಹಾಸ್ವಾಮಿಗಳಲ್ಲಿದ್ದ ವ್ಯಾಪಕ ಸ್ವರೂಪದ ಭಾವನೆಯಿಂದಲೇ ಶ್ರೀ ಮದ್ವೀರಶೈವ ಮಹಾಸಭೆಯು ಜನ್ಮವೆತ್ತಿತು. ಅದು ಸ್ಥಾಪಿತವಾದಂದಿನಿಂದ ಸಮಾಜದ ತುಂಬಾ "ಸಮಾಜ ಸಮಾಜ"ವೆಂಬ ಅಭಿಮಾನಪೂರ್ವಕ ಕಲ್ಪನೆಯು ಅಂಕುರಿಸಿ ವಿದ್ಯುತ್ಪ್ರವಾಹದ ಪರಿಣಾಮವಾಗುವಂತೆ ಜಾಗೃತಿಯು ಹುಟ್ಟಿದುದು ಮಹಾಸಭೆಯ ಪ್ರತ್ಯಕ್ಷ ಲಾಭವು ಮತ್ತು ಈ ಲಾಭವು ಸ್ವಾಮಿಗಳ ಅವಿಶ್ರಾಂತ ಶ್ರಮ ಹಾಗು ಅವರ ಉಚ್ಚಧ್ಯೇಯದ ಫಲವು. ರಾಷ್ಟ್ರೋನ್ನತಿಗೆ ಕಾಂಗ್ರೆಸ್ಸಿನಂಥ ಪರಿಷತ್ತುಗಳ ಅವಶ್ಯಕತೆಯಿರುವದೆಂದು ರಾಜಕಾರಣಪಟುಗಳು ಅಂತಹ ಸಭಾ ಸಮ್ಮೇಲನ ಪರಿಷತ್ತುಗಳ ಯೋಜನೆಯನ್ನು ಮಾಡುವರು. ರಾಜಕಾರಣ ಗಂಧವೂ ಇಲ್ಲದ ಕೇವಲ ವಿರತಿಯಲ್ಲಿದ್ದ ಶ್ರೀಗಳವರು ಮಹಾಸಭೆಯ ಯೋಜನೆಯನ್ನು ಮಾಡಿದುದು ಅವರ ಚಾಣಾಕ್ಷ ಬುದ್ಧಿಯನ್ನು ವ್ಯಕ್ತಮಾಡುವುದಿಲ್ಲವೆ?

ನಮ್ಮ ಧರ್ಮತತ್ವಗಳು ಕೇವಲ ಆಧ್ಯಾತ್ಮಿಕ ಜ್ಞಾನ ಯೋಗಜ್ಞಾನಗಳನ್ನ ವಲಂಬಿಸಿರುವುದರಿಂದ ಅವುಗಳ ಜ್ಞಾನಾರ್ಜನೆಗಾಗಿ ಶಿವಯೋಗಮಂದಿರವನ್ನು ಸ್ಥಾಪಿಸಿ ಅದು ಶಾಶ್ವತವಾಗಿ ನಡೆಯುವಂತಹ ಏರ್ಪಾಡು ಮಾಡಿರುವ ಸಾಹಸವು ಸ್ವಾಮಿಗಳ ವಿಚಕ್ಷಣ ಬುದ್ಧಿಯನ್ನು ವ್ಯಕ್ತ ಮಾಡುವುದಿಲ್ಲವೇ?

ಈಗಿನ ಕಾಲದಲ್ಲಿ ಅಚ್ಚುಕೂಟಗಳು ಜಾಗೃತಿಯನ್ನು ಹುಟ್ಟಿಸುವದರಲ್ಲಿ ಎಷ್ಟು ಮಹತ್ತರವಾದ ಕಾರ್ಯಾಂಗಗಳಾಗಿವೆಯೆಂಬುದನ್ನು ಹೇಳುವದೇ ಬೇಡ. ಆದರೂ ನಮ್ಮ ಸಮಾಜದವರು ಸಾರ್ವಜನಿಕ ರೂಪದ ಒಂದೂ ಅಚ್ಚುಕೂಟದ ಏರ್ಪಾಡು ಮಾಡುವ ಸಾಹಸಕ್ಕೆ ಬೀಳಲಿಲ್ಲ. ಆದರೆ ಶ್ರೀ ಕುಮಾರ ಸ್ವಾಮಿಗಳು ಜಗತ್ತಿನ ಆಧುನಿಕ ಸುಧಾರಣೆಯ ಅನುಭವವಿಲ್ಲದಿದ್ದರೂ ತಮ್ಮ ದಿವ್ಯದೃಷ್ಟಿಯ ಬಲದಿಂದ ಭಾಗಪದ್ಧತಿಯ ಮೇಲೆ (ಶೇಅರ್ಸ) ಒಂದು ಧನನಿಧಿಯನ್ನು ಕೂಡಿಸಿ ಒಂದು ಅಚ್ಚುಕೂಟವನ್ನು ಸಹ ಸ್ಥಾಪಿಸಿದರು.

ಧಾರ್ಮಿಕ ವಿಚಾರಸ್ಥರು ಬಹುಶಃ ಸ್ತ್ರೀ ಸ್ವಾತಂತ್ರ್ಯ ಮತ್ತು ಸ್ತ್ರೀ ಶಿಕ್ಷಣಕ್ಕೆ ಸಾಕಷ್ಟು ಅವಕಾಶವನ್ನು ಕೊಡುವುದು ಕ್ವಚಿತ್. ರಾಜಕೀಯ ವಿಚಾರದಂತೆಯೇ ಧಾರ್ಮಿಕ ಮಾರ್ಗದಲ್ಲಿಯಾದರೂ ಸ್ತ್ರೀಯರೇ ಉನ್ನತಿಯ ತಳಹದಿಯೆಂಬುದು ಸರ್ವಶ್ರುತವು. ಇದನ್ನು ಮಹಾಸ್ವಾಮಿಗಳು ತಿಳಿದು ಸ್ತ್ರೀ ಸಭೆಯನ್ನು ಸಹ ಮಹಾಸಭೆಗೆ ಜೋಡಿಸಿದರಲ್ಲದೆ ಶಿವರಾತ್ರಿಯ ಕಾಲಕ್ಕೆ ಶಿವಯೋಗಮಂದಿರದಲ್ಲಿಯೂ ಒಂದು ಸಭೆಯು ಕೂಡುವ ಯೋಜನೆಯನ್ನು ಮಾಡಿದರು.

ಹೀಗೆ ಒಂದಲ್ಲ ಎರಡಲ್ಲ; ಎಷ್ಟೋ ಸಮಾಜೋಪಯುಕ್ತ ಸಂಸ್ಥೆಗಳನ್ನು ಸ್ಥಾಪಿಸಿ ಇಂದಿನ ಸಮಾಜದ ಜಾಗೃತಿಗೆ ಶ್ರೀಗಳವರು ಕಾರಣರಾದರು. ಇದರಿಂದ "ಆಡು ಮುಟ್ಟದ ಗಿಡವಿಲ್ಲ. ಸ್ವಾಮಿಗಳು ಚಿಂತಿಸಿದ ಸಾಮಾಜಿಕ ಕಾರ್ಯವಿಲ್ಲ"ವೆಂದು ಕೆಲವರು ಆಡುವುದು ಕೇವಲ ಯಥಾರ್ಥವಾಗಿದೆ. ಆಡು ಮುಟ್ಟದ ಗಿಡವು ಜಗತ್ತಿನಲ್ಲಿ ಒಂದು ಇರುವದೆಂದು ಬಲ್ಲವರು ಹೇಗೆ ಹೇಳುವರೋ ಹಾಗೆ ಶ್ರೀಗಳವರು ಮನಸ್ಸು ಹಾಕದ ವಿಷಯವೆಂದರೆ ಪಾಶ್ಚಾತ್ಯ ಸಂಸ್ಕಾರ ಹಾಗು ತದಂಗಭೂತವಾದ ಸುಧಾರಣೆ! ಈ ದೃಷ್ಟಿಯಿಂದ ಸ್ವಾಮಿಗಳಲ್ಲಿ ಇದೊಂದು ಕುಂದಕವೆಂಬ ಆರೋಪವನ್ನು ಹೊರಿಸಿ ಕೆಲ ಕೆಲವರು ಅವರ ತತ್ವಗಳನ್ನು ಹಳಿಯುವುದು ತೋರುವದಷ್ಟೆ. ಆ ವಿಷಯದ ಊಹಾಪೋಹ ವಿಚಾರವನ್ನು ಮಾಡದೆಯೇ ಸಮಾಜದ ಮುಂದಾಳುಗಳು ಶ್ರೀಗಳವರೊಡನೆ ಸಹಕಾರ ಮಾಡಿ ಆ ಕರ್ಮನಿಷ್ಠರ ಉತ್ಸಾಹ, ಕರ್ತವ್ಯದಕ್ಷತೆ, ವಿಚಕ್ಷಣ ಬುದ್ಧಿ, ಅತುಲ ಸಾಹಸ, ಅತೀವ ಕಷ್ಟಸಹಿಷ್ಣುತೆಯ ಲಾಭವನ್ನು ತಕ್ಕೊಳ್ಳುವ ಮನಸ್ಸು ಮಾಡಿದ್ದರೆ ಸಮಾಜದ ಇನ್ನೂ ಅಭೂತಪೂರ್ವ ಕಾರ್ಯಗಳಾಗುತ್ತಿದ್ದವು. ಅಷ್ಟಾಗದೆ ಹೋದುದು ಸಮಾಜದ ದುರ್ದೈವವಲ್ಲವೇ? ಸಮಾಜದ ಊರ್ಜಿತೆಗೆ ಟೊಂಕ ಕಟ್ಟಿ ನಿಂತಿಹ ಸ್ವಾಮಿಗಳವರಿಂದ ಇನ್ನೂ ಹೆಚ್ಚಿನ ಲಾಭವನ್ನು ಸಮಾಜವು ಮಾಡಿಕೊಳ್ಳುವ ಬುದ್ಧಿಯು ಬಾರದಿದ್ದುದು ನಿಜವಾಗಿಯೂ ಶೋಚನೀಯವು.

■■

# ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು

• ಶ್ರೀ ಕುಮಾರ ದೇವರು, ರಾಜೂರು

ಪೂಜ್ಯ ಹಾನಗಲ್ಲ ಕುಮಾರ ಶಿವಯೋಗಿಗಳು ನಮ್ಮ ನಾಡಿನ ಶ್ರೇಷ್ಠ ಅನುಭಾವಿಗಳು, ಸಮಾಜ ಚಿಂತಕರು, ಪ್ರತಿಭಾವಂತ ಸಾಹಿತಿಗಳು, ಉತ್ಕೃಷ್ಟ ಸಾಹಿತ್ಯ ಪ್ರೇಮಿಗಳು, ಸಾಹಿತಿ-ಸಂಶೋಧಕರನ್ನು ಪ್ರೀತಿಸುವ ವಿಶಾಲ ಹೃದಯ ಸಿರಿವಂತರು. ಸಾಹಿತ್ಯ ಸಂಗ್ರಹಿಸುವ ಗುಣಗ್ರಾಹಿಗಳು. ಎಲ್ಲಕ್ಕೂ ಮಿಗಿಲಾಗಿ ನಮ್ಮ ಧರ್ಮ-ಸಂಸ್ಕೃತಿಗಳನ್ನು ಪುನರ್‌ಜೀವನಗೊಳಿಸಿದ ಮಹಾತ್ಮರು. ಅವರ ಸಾಮಾಜಿಕ ಕಳಕಳಿ, ಧಾರ್ಮಿಕ ಕಾಳಜಿ ಅನನ್ಯವಾದುದು. ಅವರು ನಮ್ಮ ಸಮಾಜಕ್ಕೆ ಸಲ್ಲಿಸಿದ ಸೇವೆ ಸ್ಮರಣೀಯವಾದುದು. ವ್ಯಕ್ತಿಯಲ್ಲಿ ಘನತೆ, ಸಮಾಜದಲ್ಲಿ ಸಮತೆ, ರಾಷ್ಟ್ರದಲ್ಲಿ ಭಾವೈಕ್ಯತೆಯನ್ನು ಸಾಧಿಸಿದ ಸಿದ್ಧಿ ಪುರುಷರು ಪೂಜ್ಯ ಶ್ರೀಗಳು.

ನಮ್ಮ ಲಿಂಗಾಯತ(ವೀರಶೈವ) ಸಮಾಜವು ೧೯ನೇ ಶತಮಾನದ ಆದಿ ಭಾಗದಲ್ಲಿ ಮಹಾಂಧಕಾರದಲ್ಲಿ ಮುಳುಗಿತ್ತು. ಮಹಾರೋಗಕ್ಕೆ ತುತ್ತಾಗಿತ್ತು. ಎಲ್ಲೆಡೆ ಅನ್ಯಾಯ ಅನಾಚಾರಗಳು ತಾಂಡವಾಡುತ್ತಿದ್ದವು. ಮೈದೆಗೆದು ಬೆಳೆದು ನಿಂತಿದ್ದವು. ಗುರುಗಳು ತಮ್ಮ ಗೊತ್ತು ಗುರಿ ಮರೆತು ಸ್ವಾರ್ಥದ ಕೋಟೆ ಕಟ್ಟಿಕೊಂಡಿದ್ದರು. ಲಿಂಗಾಯತರು ಎಂದು ಹೇಳಿಕೊಳ್ಳುವವರ ಅಂಗದ ಮೇಲಿನ ಲಿಂಗ ಮಾಯವಾಗಿತ್ತು, ಭವಿಗಳಾಗಿ ತಿರುಗುವ ಸ್ಥಿತಿಯಿತ್ತು. ಪಂಚಸೂತ್ರದ ಮಾತು ಸೂತಕವಾಯಿತು. ಭಸ್ಮವಂತೂ ಭಸ್ಮವೇ ಆಗಿತ್ತು. ಪಾದೋದಕ-ಪ್ರಸಾದ ಇನ್ನೆಲ್ಲಿಯದು. ಮಂತ್ರದ ಮಹಿಮೆ ಮಾಯವಾಗಿತ್ತು. ಪಂಚಾಚಾರಗಳ ಪ್ರಾಣ-ತ್ರಾಣಗಳ ಸುಳಿವಿರಲಿಲ್ಲ. ಎತ್ತ ನೋಡಿದಡತ್ತ ಸ್ವಾರ್ಥದ ಕಲಾಪ, ಅರ್ಥಿಗಳ-ಅನರ್ಥಿಗಳ ಮೇಳಾಪ. ಷಟ್‌ಸ್ಥಲ ತತ್ವ ತಿಳಿದವರು ಅಪರೂಪ. ಇಂಥ ಸಂದಿಗ್ಧ ಸ್ಥಿತಿಯಲ್ಲಿ ವೈದ್ಯಭಾನುವಿನ ಉದಯವಾಯಿತು. ಆಚಾರದ ಬೆಳೆ ಸುಳಿದೆಗೆದು ಬೆಳೆದು ಕುಸುಮವಾಗಿ ಸರ್ವತ್ರ ಸುವಾಸಿಸಿತು. ಜಗುಲಿಯ ಮೇಲಿನ ಲಿಂಗಗಳೆಲ್ಲ ಅಂಗದ ಮೇಲೆ ನಿಂದು ಕಂಗೊಳಿಸಿದವು. ವಿಭೂತಿ-ರುದ್ರಾಕ್ಷಿಗಳು ವಿರಾಜಿಸಿದವು. ಜಂಗಮರು ತತ್ವಭರಿತರಾದರು, ನಾಡ ಸಂಚರಿಸಿದರು ಹೀಗೆ ಹಲವು ಬಗೆಯಲ್ಲಿ ನಮ್ಮ ಸಮಾಜ ಸರ್ವಾಂಗ ಸುಂದರವಾಗಲು ಶ್ರಮಿಸಿದ ಸಮತಾಭಾವಿಗಳೆ ಪರಮಪೂಜ್ಯ ಹಾನಗಲ್ಲ ಕುಮಾರ ಶಿವಯೋಗಿಗಳು.

ಅವರು ಮಾಡದ ಸಮಾಜ ಸೇವೆ ಮತ್ತೊಂದಿಲ್ಲ. ನಮ್ಮ ಧರ್ಮದ ಸರ್ವಶ್ರೇಷ್ಠ ಸಾಹಿತ್ಯ ವಚನ ಸಾಹಿತ್ಯವನ್ನು ೧೫ನೇ ಶತಮಾನದಲ್ಲಿ ನಿರಂಜನ ಜಂಗಮ ತೋಂಟದ ಸಿದ್ಧಲಿಂಗ ಶಿವಯೋಗಿಗಳು ಮತ್ತು ಅವರ ಶಿಷ್ಯ-ಪ್ರಶಿಷ್ಯರು ಸಂಗ್ರಹ-ಸಂಸ್ಕರಣ-ಸಂಪಾದನೆ ಮಾಡಿ, ಅದು ಸಾರ್ವಕಾಲಿಕ ಸತ್ಯಸಾರುವ ಮಹಾಮೌಲ್ಯದ ಪ್ರತೀಕವಾಗುವಂತೆ ರೂಪಿಸಿದರು. ಆದರೆ ನೆಲದ ಗುಣವೋ, ಕಾಲದ ಗುಣವೋ ಏನೋ ಮತ್ತೆ ೪೦೦ ವರ್ಷಗಳ ಕಾಲ ವಚನ ಸಾಹಿತ್ಯ ಗುಪ್ತನಿಧಿಯಾಗಿತ್ತು. ಈ ಪವಿತ್ರ ವಚನಗಂಗೋತ್ರಿ ಮತ್ತೆ ನಾಡಿನೆಲ್ಲೆಡೆ ಹರಿಯುವಂತೆ ಮಾಡಿದ ಸಾಹಿತ್ಯ ಭಗೀರಥರು ಹಾನಗಲ್ಲ ಗುರುಕುಮಾರ ಶಿವಯೋಗಿಗಳು.

ನಾಡ ಸಂಚರಿಸಿ, ಶ್ರೀಮಂತರ ಕಣ್ಣು ತೆರೆಸಿ ಸಂಸ್ಕೃತಿ ಬೆಳೆಸಲು ಪ್ರೇರಣೆಯಿತ್ತ ಪ್ರೇರಕರು. ಸಿರಸಂಗಿ ಲಿಂಗರಾಜರು ಪೂಜ್ಯರ ಪ್ರೇರಣೆ ಮೇರೆಗೆ ತಮ್ಮ ಸಮಸ್ತ ಸಂಸ್ಥಾನವನ್ನು ಲಿಂಗಾಯತ ಸಮಾಜಕ್ಕೆ ಧಾರೆ ಎರೆದು ಚಿರಕಾಲ ಧನ್ಯತೆ ಪಡೆದರು. ಒಡೆದು ಹೋಳಾಗಿದ್ದ ಸಮಾಜವನ್ನು ಒಗ್ಗೂಡಿಸಲೆಂದೇ ಪೂಜ್ಯರು 'ಅಖಿಲ ಭಾರತ ವೀರಶೈವ ಮಹಾಸಭೆ"ಯನ್ನು ಸ್ಥಾಪಿಸಿ, ಅದನ್ನು ಸಂಘಶಕ್ತಿಯಾಗಿ ಬೆಳೆಸಿ-ಹರಸಿ-ಹಾರೈಸಿದ ಸಮಾಜ ಪ್ರೇಮಿಗಳು. ಸ್ವಾರ್ಥದ ಕೋಟೆ ಕಟ್ಟಿಕೊಂಡು ಗಾಢನಿದ್ರೆಯಲ್ಲಿದ್ದ ಸಮಾಜ ಬಾಂಧವರನ್ನು ಬಡಿದೆಬ್ಬಿಸಿದ ಮಹಾಮಹಿಮರು.

ಮಹಿಳೆಯರ ಸುಧಾರಣೆಯ ಬಗೆಗೂ ಶ್ರೀಗಳಿಗೆ ಬಹಳ ಕಳಕಳಿಯಿತ್ತು. ತಮ್ಮ ಅಂತಃಚಕ್ಷುಗಳಿಂದ ವೀಕ್ಷಿಸಿ ಮಹಿಳೆಯರ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದರು. ಪ್ರತಿವರ್ಷ ಶಿವಯೋಗಮಂದಿರ ಜಾತ್ರಾ ಸಮಯದಲ್ಲಿ 'ಮಹಿಳಾ ಗೋಷ್ಠಿ' ಏರ್ಪಡಿಸುತ್ತಿದ್ದರು. ಸಭೆಯ

ನಿರ್ವಹಣೆ ಹಿಡಿದು ಎಲ್ಲ ವ್ಯವಸ್ಥೆಯನ್ನು ಮಹಿಳೆಯರೆ ಮಾಡುವಂತೆ ಉತ್ತೇಜನ ನೀಡುತ್ತಿದ್ದರು. ಸುಧಾರಣೆಯ ಬಗೆಗೆ ಉತ್ತಮ ಪ್ರಶ್ನೆಗಳನ್ನು ತಾವೇ ಕಳುಹಿಸಿ ಚರ್ಚಿಸಲು ಪ್ರೋತ್ಸಾಹ ನೀಡುತ್ತಿದ್ದರು. 'ಮಹಿಳೆ ಮನುಕುಲದ ಜೀವಕಳೆ' ಎಂಬ ಅಭಯವಾಕ್ಯ ನುಡಿದ ಪೂಜ್ಯರು ಮಹಿಳಾ ಸಂಕುಲಕ್ಕೆ ಮೂರ್ತಸ್ವರೂಪ ಕೊಟ್ಟವರು.

ಗುರು-ವಿರಕ್ತರಲ್ಲಿ ಸಮರತಿ, ಸಮಕ್ರಿಯೆ, ಸಮಭಾವ ಮೂಡಿಸುವುದರಲ್ಲಿ ಪೂಜ್ಯರು ವಹಿಸಿದ ಪಾತ್ರ ಅನ್ಯಾದಶ್ಯವಾದುದು. ವಾಣಿಜ್ಯ-ವ್ಯವಸಾಯ, ಸ್ವಯಂ ಸೇವಾ ಶಿಕ್ಷಣ ಎಲ್ಲವನ್ನು ಸಮಾಜಕ್ಕೆ ನೀಡಿದ ಸಮತಾಭಾವಿಗಳು. ಸಮಾಜ ಸಂಸ್ಕರಣ ಮಾಡಿ ಸಂಸ್ಕೃತಿ ರಕ್ಷಿಸಿದರು. ಅಂಧಮಕ್ಕಳ ಬಾಳಿಗೂ ಬೆಳಕು ನೀಡಿದ ಪೂಜ್ಯರು ಪಂಚಾಕ್ಷರ ಗವಾಯಿಗಳಿಗೆ ಸಂಗೀತ ಶಿಕ್ಷಣ ನೀಡಿ ಸಮಸ್ತ ಅಂಧಮಕ್ಕಳಿಗೆ ಈ ವಿದ್ಯಾದಾನ ನಿರಂತರ ಸಾಗಲೆಂದು ಹರಸಿದರು.

ಶಿವಯೋಗಿಗಳ ಮನದಾಳದಲ್ಲಿ ಸಮಾಜ ಮುನ್ನಡೆಸುವ ಹತ್ತಾರು ಯೋಜನೆ-ಯೋಚನೆಗಳಿದ್ದವು. ಆದರೆ ತಮ್ಮ ಬದುಕಿನ ೬೩ ನೇ ವಯಸ್ಸಿನಲ್ಲಿ ಲಿಂಗದಲ್ಲಿ ಬೆರೆತರು. 'ಮುಕ್ತಿಗಿಂತ ಸಮಾಜ ಸೇವೆ ಅಧಿಕ'ವೆಂದು ಭಾವಿಸಿದ್ದ ಪೂಜ್ಯರ ಅನುಪಮ ವ್ಯಕ್ತಿತ್ವವನ್ನು ನಿರೂಪಿಸಲು ಶಬ್ದಗಳಿಲ್ಲ.

■■

# ಅರಟಾಳ ರುದ್ರಗೌಡರಿಗೆ ಹಾನಗಲ್ಲ ಕುಮಾರ ಶಿವಯೋಗಿಗಳು ಬರೆದ ಪತ್ರ

• ಸತ್ಯಮೇವವಿಜಯತೇತರಾಂ

ಸದ್ಭಕ್ತಿಶೀಲರಾದ ರುದ್ರಗವಡರು ಚನ್ನವೀರಗವಡರು ಪಾಟೀಲ ಅರಟಾಳಸಾಹೇಬ ಬಹಾದ್ದೂರವರಿಗೆ ಆಶೀರ್ವಾದಪೂರ್ವಕ ಸೂಚಿಸುವುದೇನಂದರೆ–

ಈ ದಿವಸ ನಿಮ್ಮಗಳ ಸಾನಂದಭರಿತ ಪತ್ರಿಕೆಯು ಬಂದು ಸುವಾರ್ತೆಯನ್ನು ಬೀರಲು ಮನಸ್ಸಿಗೆ ಪರಮಾನಂದವೆನಿಸಿತು.

ಶ್ರೀಮನ್ನಿಗಮಾಗಮಾಬ್ಧಿ ಸುಧಾಕರಾಯಮಾನ ಶ್ರೀಮದ್ವೀರಶೈವ ಮತ ಕುಟುಂಬಿ ವೀರವ್ರತ ಪರಿಪಾಲನಶೀಲ ಸ್ವಾರ್ಥತ್ಯಾಗಿ ಉದಾತ್ತವಿಚಾರಿ ಪ್ರಮಥಗುಣಗಣಶೋಭಿತ ಯಶಃಕಾಯ ಸುವಿರಾಜಿತ ವೀರಶೈವಮತ ಪ್ರಭು ಶ್ರೀಮಂತ ಲಿಂಗಪ್ಪಾ ಜಾಯಪ್ಪಾ ಸಿರಿಸಂಗೀಕರ ಇವರ ಘನವಾದ ಸತ್ಯಸಂಕಲ್ಪವು ಮುಖ್ಯವಾಗಿ ತಮ್ಮಗಳ ಪ್ರಯತ್ನ ವಿಶೇಷದಿಂದ ನೆರವೇರಿರುವುದನ್ನು ತಿಳಿದು ಇಲ್ಲಿಯ ಸಮಸ್ತರಿಗೂ ನಮಗೂ ಅತ್ಯಾನಂದವೆನಿಸಿರುವುದು. ಇದರಿಂದ ವೀರಶೈವರ ಅವಿದ್ಯಾ, ಅಜ್ಞಾನ, ಅಧರ್ಮ, ದಾರಿದ್ರ್ಯ ಮುಂತಾದ ಹೀನಾವಸ್ಥೆಯು ದೂರಾಗಿ ವಿದ್ಯಾ, ಧಾರ್ಮಿಕ, ನೈತಿಕ ಜ್ಞಾನಸಂಪತ್ತು ಮುಂತಾದವುಗಳನ್ನು ಸಂಪಾದಿಸಿಕೊಳ್ಳಲಿಕ್ಕೆ ಆ ಮಹಾಪ್ರಭುಗಳ ಸದಿಚ್ಛೆಯಂತೆ ಅನೂಕೂಲವಾದದ್ದನ್ನು ತಿಳಿದು ಎಲ್ಲ ಭಾಗದ ವೀರಶೈವರಿಗೆ ಆನಂದವೆನಿಸದಿರಲಾರದು. ಇದಲ್ಲದೆ ನಿಷ್ಪಕ್ಷಪಾತಿಗಳಾಗಿ ಗುಣಜ್ಞರೆನಿಸಿದ ವೀರಶೈವಮತೇತರರಿಗೂ ಕೂಡ ಆನಂದವನ್ನುಂಟುಮಾಡಲು ಅಭ್ಯಂತರವು ತೋರದು.

ಇಂಥ ಜಗನ್ಮಾನ್ಯವಾದ ಸದಿಚ್ಛೆಯು ನಮ್ಮ ದಾನಶೂರ ಸಿರಸಂಗಿ ಪ್ರಭುಗಳ ಮನಸ್ಸಿನಲ್ಲಿ ಬೀಜಭೂತವಾಗಿ ಬೀಳುವುದಕ್ಕೂ, ಅಂಕುರವಾಗಿ ಬೆಳೆಯಲಿಕ್ಕೂ ಜಗಚ್ಚಾಲಕನಾದ ಪರಮಾತ್ಮನು ಅಂತಃಪ್ರೇರಣೆಯಿಂದ ಮೂಲಕರ್ತೃವೆಂತಲೂ ಆ ಪರಮಪುರುಷನ ಪ್ರೇರಣೆಯಿಂದಲೇ ಬಾಹ್ಯದಲ್ಲಿ ಮೂರ್ತಿಮತ್ತಾದ ನೀವು ಸಹಾಯ ಕರ್ತೃಗಳೆಂತಲೂ ಸಮಸ್ತರ ತಿಳುವಳಿಕೆಯಲ್ಲಿ ಬರತಕ್ಕದ್ದಾಗಿದೆ.

"ಎಡರಡಸಿದ ವೇಳೆಯೊಳು ಧೈರ್ಯವನು, ಪಿಡಿದ ನೇಮವ ನೆಡೆವಿಡಿದತಿ ಛಲವನು ಬೇಡುವನೆಂ"ಬುವ ಪುರಾತನೋಕ್ತಿಯಂತೆ ನಮ್ಮ ಉದಾರಚರಿತ ಪ್ರಭುಗಳು ಮಾಡಿದ ಮಹಾದಾನಕ್ಕೆ ಕಾರಣಾಂತರದಿಂದ ಭಿನ್ನಾಭಿಪ್ರಾಯವುಳ್ಳ ಕೆಲವರು ಎಡರುಗಳ ಪರಂಪರೆಯನ್ನುಂಟು ಮಾಡಿದಕ್ಕೆ ನೀವುಗಳು ಎದೆಗುಂದದೆ ಇದರಿಂದುಂಟಾದ ಅನೇಕ ಕಷ್ಟ ನಿಷ್ಟುರಗಳನ್ನು ಸಹಿಸಿ ಛಲಿಯಾಗಿ ಹಿಡಿದ ಪ್ರಯತ್ನವನ್ನು ಬಿಡದೆ ನಡಿಸಿ ಕಡೆಗಂಡದ್ದರಿಂದ ಈ ವೀರಶೈವ ಸಮಾಜಕ್ಕೆ ಮಹಾ ಸುಖವೂ ತಮ್ಮಗಳಿಗೆ ಮಹಾ ಕೀರ್ತಿಯೂ ಉಂಟಾಗಿರುವುದು.

ನಮ್ಮ ವೀರಶೈವ ಸಮಾಜಕ್ಕೆ ಪಿತೃಪ್ರಾಯರಾದ ಈ ಪ್ರಭುಗಳಿಗೆ ಈಶಾಜ್ಞೆಯಿಂದ ಧರ್ಮಪತ್ನಿ ಅರ್ಧಾಂಗಿನಿಯರಾಗಿದ್ದು ವೀರಶೈವ ಸಮಾಜಕ್ಕೆ ಮಾತೃವೆನಿಸಿಕೊಂಡು ಜಗನ್ಮಾನ್ಯವಾದ ಕೀರ್ತಿಯನ್ನು ಹೊಂದುವ ಸುಸಂಧಿಯು ಶ್ರೀಮಂತ ಸುಂದರಾಬಾಯಿಸಾಹೇಬ ಸಿರಸಂಗಿ ಇವರಿಗೆ ಲಭಿಸದೆ ಹೋದುದಕ್ಕೆ ವಿಷಾದ ಪಡಬೇಕಾಗಿರುವುದು.

ಶಿವಧರ್ಮಕ್ಕೋಸ್ಕರ "ತನುಮನಧನವಂ ಸೂರಿಗೊಡುವಾತನೆ ವೀರಶೈವನಪ್ಪಂ" ಎಂಬ ಪುರಾತನೋಕ್ತಿಯನ್ನರಿತು ವೀರಶೈವ ಧರ್ಮೋನ್ನತಿಗಾಗಿ ೬೦–೬೫ ಸಹಸ್ರ ರೂಪಾಯಿ ವಾರ್ಷಿಕ ಉತ್ಪನ್ನವುಳ್ಳ ತಮ್ಮ ಇಡೀ ಸಂಸ್ಥಾನವನ್ನೇ ಧಾರೆಯರೆದಿರುವ ಈ ಮಹಾತ್ಮರ ನಾಮವು ಪ್ರತಿಯೊಬ್ಬರ ಹೃತ್ಪುಟಲದಲ್ಲಿ ಸುವರ್ಣಾಕ್ಷರದಿಂದ ಬರೆದಿಟ್ಟಂತಾಗಿರುವುದು ಆದ್ದರಿಂದ ಇವರ ಚರಿತ್ರವು ಪ್ರಮಥಗಣಕೋಟಿಯಲ್ಲಿ ಗಣಿಸಲು ಸರ್ವಾತ್ಮನಾ ಯೋಗ್ಯವೆನಿಸಿರುವುದು.

ಹಿಂದಕ್ಕೆ ವೀರಶೈವಮತದವರಿಗೆ ಕೊಡಗು, ನಗರ, ಸೋದಿ, ಕೆಳದಿ, ಬೀಳಗಿ, ಕಿತ್ತೂರ ಮೊದಲಾದವುಗಳು ರಾಜಧಾನಿಗಳಾಗಿದ್ದು

ಆ ಪೀಠಗಳಲ್ಲಿ ಎಷ್ಟೋ ರಾಜರು ಆಳಿ ಹೋದರೂ ಇಂಥಾ ಮಹತ್ವದ ಕೆಲಸವನ್ನು ಯಾರೂ ಮಾಡಿದಂತೆ ಕಂಡುಬರುವುದಿಲ್ಲ. ಅವರಲ್ಲಿ ಕೆಳದಿ ರಾಜರು ಮಾತ್ರ ಧರ್ಮಗ್ರಂಥಗಳನ್ನು ಬರೆಯಿಸಿ ಚಿರಸ್ಮರಣೀಯರಾಗಿರುವರು. ಆದರೂ ಅವರು ಮಾಡಿದ ದಾನವು ಈ ದಾನಕ್ಕೆ ಸರಿಹೋಲದು. ಯಾಕಂದರೆ ಒಂದರ ಉಪಾಧಿಯನ್ನನುಸರಿಸಿ ಪ್ರತಿಫಲವನ್ನು ಬಯಸಿ ತನ್ನ ಮತ್ತು ತನ್ನವರ ಉದ್ದೇಶಿಸಿ ಕೆಲವು ಆಸ್ತಿಯನ್ನು ಉಳಿಸಿ ಮಾಡಿದುದು ಮಹಾ ದಾನವಲ್ಲ. ಈ ಪ್ರಕಾರ ಕೇವಲ ಶಿವಾರ್ಪಿತ ಬುದ್ಧಿಯಿಂದ ಶಿವಮತವೇ ಉದ್ಧಾರವಾಗಲೆಂಬ ಸದುದ್ದೇಶದಿಂದ ಅಹಂಕಾರ ಮಮಕಾರಗಳನ್ನು ತ್ಯಜಿಸಿ ಮಾಡಿದ ಸಹಜದಾನವಾಗಿರುವುದು. ಸ್ವಧರ್ಮ ನಿಷ್ಠರಾದ ಕೆಳದಿ ರಾಜರು ಮತಗ್ರಂಥಗಳನ್ನು ಬರೆಯಿಸಿದರೂ ಇವರಂತೆ ಸರ್ವಸ್ವವನ್ನು ನಿವೇದಿಸಿ ಗ್ರಂಥಗಳನ್ನು ಬರೆಯಿಸಿಟ್ಟಿಲ್ಲ. ಆದ್ದರಿಂದ ಈ ತರದ ದಾನವು ಈ ಮೊದಲೇ ಯಾವ ಸಂಸ್ಥಾನದವರಿಂದಲೂ ಕೊಡಲ್ಪಟ್ಟಿಲ್ಲ. ಮುಂದೆ ಇವರಂತೆ ಕೊಡುವವರು ಸಿಗುವದು ಕೂಡ ದುರ್ಲಭವೆಂದು ಕಂಡುಬರುವುದು. ಒಂದುವೇಳೆ ಕೊಡುವವರು ಉಂಟಾದರೂ ಇವರು ಹಾಕಿರುವ ಹೆಜ್ಜೆಯನ್ನೇ ಅವರು ತೀಡಿದಂತಾಗುವುದು.ಆದ್ದರಿಂದ ಇವರಿಗೆ ಮಹಾದಾನಿಗಳೆಂಬ ನಾಮವು ಸಾರ್ಥಕವೆನಿಸುವುದು. "ಕೊಡುವುದು ಕಡಿಯುವುದು ವೀರನ ಕೆಲಸವು ಹೇಡಿಯ ಕೆಲಸವಲ್ಲ" ಇಂಥ ವೀರಮಹಾದಾನಿಗಳ ಆತ್ಮಕ್ಕೆ ಸುಖಶಾಂತಿಗಳನ್ನುಂಟು ಮಾಡಲೆಂದೂ ಅವರು ಮಾಡಿರುವ ಈ ಘನವಾದ ಸಂಕಲ್ಪದಂತೆ ನಮ್ಮ ವೀರಶೈವ ಮಂಡಲದಲ್ಲಿ ಸ್ವಧರ್ಮೋನ್ನತಿ ಕಾರ್ಯವು ಶೀಘ್ರವಾಗಿ ಪಲ್ಲವಿಸಿ ಫಲವನ್ನೀಯುವಂತೆ ಮಾಡಲೆಂದು ಜಗತ್ಪಾಲಕನಾದ ಪರಶಿವನನ್ನು ಅನನ್ಯಭಾವದಿಂದ ಸ್ಮರಿಸುತ್ತೇವೆ.

ನಿಮ್ಮ ಶರೀರದಲ್ಲಿ ಕೆಲವು ದಿವಸ ಅಸ್ವಸ್ಥತೆಯಿದ್ದು ಈಗ ಗುಣವಾಗಿದೆಯೆಂದು ಬರೆದದ್ದನ್ನು ತಿಳಿದು ಸಂತೋಷವೆನಿಸಿತು. ಆದರೂ ಇನ್ನು ಮುಂದೆ ಆಹಾರ ವ್ಯವಹಾರಗಳಿಂದ ಪ್ರಕೃತಿಯ ಆರೋಗ್ಯತೆಗೆ ಭಂಗಬಾರದಂತೆ ಎಚ್ಚರಗೊಂಡಿರಬೇಕು. ಇನ್ನೂ ಕೆಲವು ದಿವಸ ನಿಮ್ಮಂಥ ಸ್ವಮತಾಭಿಮಾನಿಗಳು ಶರೀರದ ಆರೋಗ್ಯತೆಯಿಂದ ಬಾಳುವುದು ಸಮಾಜದ ಮಹಾಕಾರ್ಯಗಳಿಗೆ ಅತ್ಯಂತಾವಶ್ಯವಿರುವುದು. ಸುಜ್ಞಸದ್ಭಕ್ತಿಶೀಲರಾದ ನಿಮ್ಮಗಳಿಗೆ ವಿಶೇಷ ಲಿಖಿಸೋಣವೇನಿದೆ.

ತಾ॥ ೬ನೇ ನವಂಬರ ೧೯೧೮,<br>
ಶಿವಯೋಗಮಂದಿರ.<br>
ತಾಲೂಕ – ಬದಾಮಿ.<br>
ಜಿಲ್ಲಾ– ವಿಜಾಪೂರ

■■

ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜವರಾದ

## ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್

ಮಹಾಸ್ವಾಮಿಗಳವರು, ಹೈದರಾಬಾದ್ ರಾಜ್ಯದಲ್ಲಿರುವ ಬಸವ ಕಲ್ಯಾಣದಲ್ಲಿ ದಿನಾಂಕ ೨೯-೧-೧೯೫೫ರಂದು ಸಮಾವೇಶಗೊಂಡ ಅಖಿಲ ಭಾರತ ವೀರಶೈವ ಮಹಾ ಸಭಾ ೧೬ ನೇ ಅಧಿವೇಶನವನ್ನು ಪ್ರಾರಂಭಗೊಳಿಸುತ್ತ ಅಪ್ಪಣೆಕೊಡಿಸಿದ

### - ಭಾಷಣ -

ಪೂಜ್ಯ ಸ್ವಾಮಿಗಳೆ, ಸ್ವಾಗತಾಧ್ಯಕ್ಷರೆ, ಕಲ್ಯಾಣಿಯ ನಗರ ಪಾಲಕರೆ, ಮಹಿಳೆಯರೆ ಮತ್ತು ಮಹನೀಯರೆ,

ದಕ್ಷಿಣ ಭಾರತದ ಪ್ರಖ್ಯಾತ ಪ್ರಾಚೀನ ರಾಜಧಾನಿಗಳಲ್ಲಿ ಅಗ್ರಗಣ್ಯವೆನಿಸಿರುವ ಹಾಗೂ ಶ್ರೀ ಬಸವೇಶ್ವರಾದಿ ಶಿವಶರಣರ ಸಪೋಭೂಮಿಯೆನಿಸಿರುವ, ಪುಣ್ಯ ಭೂಮಿಯಾದ ಶ್ರೀ ಬಸವ ಕಲ್ಯಾಣದದಲ್ಲಿ ಇಂದು ನಡೆಯುವ ಅಖಿಲ ಭಾರತ ವೀರಶೈವ ಮಹಾ ಸಭೆಯ ೧೬ ನೇ ಅಧಿವೇಶನವನ್ನು ಪ್ರಾರಂಭಿಸಲು ಈ ಮಹಾ ಸಭೆಯ ಸ್ವಾಗತ ಸಮಿತಿಯವರು ಮೈಸೂರಿಗೆ ಬಂದು ನಮ್ಮನ್ನು ಅಹ್ವಾನಿಸಿದಾಗ ನಾವು ಈ ಕಾರ್ಯವನ್ನು ಸಂತೋಷವಾಗಿ ಅಂಗೀಕರಿಸಿದೆವು. ಇದೇ ಸಮಯದಲ್ಲಿ ಇಲ್ಲಿ ನೀವು ನಿರ್ಮಿಸಲಿರುವ ಶಿವಾನುಭವಾಶ್ರಮದ ಶಂಕುಸ್ಥಾಪನೆಯನ್ನು ಕೂಡ ನಾವು ಮಾಡಲು ಸಂತೋಷದಿಂದ ಒಪ್ಪಿಕೊಂಡಿರುತ್ತೇವೆ. ಇಂತಹ ಪುಣ್ಯಮಯವಾದ, ಆನಂದದಾಯಕವಾದ, ಮಹತ್ಕಾರ್ಯದಲ್ಲಿ ನಮ್ಮನ್ನು ನಿಯುಓಜಿಸಲು ಮನಸ್ಸುಮಾಡಿದ ಸ್ವಾಗತ ಸಮಿತಿಯವರನ್ನು ನಾವು ನಮ್ಮ ಉಪಕಾರಿಗಳೆಂದೇ ಭಾವಿಸಿರುತ್ತೇವೆ.

ಇದೇ ಸನ್ನಿವೇಶದಲ್ಲಿ ನೀವು ನಗಿತ್ತಿರುವ ಬಿನ್ನವತ್ತಳೆಯಲ್ಲಿ ನಮ್ಮ ಹಗೂ ನಮ್ಮ ರಾಜಮನೆತನ ಹಿರಿಯರ ವಿಷಯವಾಗಿ ವ್ಯಕ್ತಪಡಿಸಿರುವ ಪ್ರೀತಿ ಗೌರವಗಲಿಗಾಗಿ ತಮ್ಮನ್ನು ವಂದಿಸುತ್ತೇವೆ.

ಅಖಿಲ ಭಾರತ ವೀರಶೈವ ಮಹಾಸಭೆಯು ಕ್ರಿ.ಶ. ೧೯೦ರಲ್ಲಿ ಧಾರವಾಡದಲ್ಲಿ ಪ್ರಾರಂಭವಾಗಿ ಇಂದಿಗೆ ಅರ್ಧಶತಮಾನವು ಕಳೆದು ಹೋಗಿದೆ. ಈ ಬಸವ ಕಲ್ಯಾಣದ ಮಹಾಸೌಏಯು ೧೬ಯದೆನಿಸಿದೆ. ಈ ಹಿಂದೆ ನಡೆದ ಮಹಾಸಭೆಯ ಅಧೀವೇಶನಗಳಿಗೆ ಶಿವಲೋಕವಾಸಿಗಳಾದ ಶಿರಸಂಗಿ ದೇಸಾಯಿ ಲಿಂಗರಾಜರು, ವಂಟಮುರಿ ದೇಸಾಯಿ, ರಾಜಾ ಲಖಿಮಗೌಡರು, ಸರ್,ಕೆ.ವಿ, ಪಟ್ಟಣ, ಶೆಟ್ಟರು, ಅರಟಾಳ ರುದ್ರಗೌಡರು, ಎಂ, ಶಾಂತವರಪ್ಪನವರು, ಪ್ರೊ॥ ಬಸವನಾಳರು, ಮೊದಲಾದ ಮಹನೀಯರು ಅಧ್ಯಕ್ಷರಾಗಿ ಅನೇಕ ಮಹತ್ಕಾರ್ಯಗಳನ್ನು ನಿರ್ವಹಿಸಿರುತ್ತಾರೆಂದು ನಾವು ಹಿಂದಿನ ಮಹಾಸಭಾ ವರದಿಗಳಿಂದ ತಿಳಿದಿರುತ್ತೇವೆ. ಈ ಸಭೆಯ ಸಂಸ್ಥಾಪಕರು ಶಿವಯೋಗಮಂದಿರದ ಆಚಾರ್ಯರಾದ ಶ್ರೀ ಹಾನಗಲ್ ಕುಮಾರಸ್ವಾಮಿಗಳೆಂದೂ, ಈ ಮಹಾಸಭೆಯ ಚಿರಸ್ಥಾಯಿ ನಿಧಿಯ ಸಂಸ್ಥಾಪಕರು ಪೂಜ್ಯರಾದ ಚಿತ್ರದುರ್ಗದ ಶ್ರೀ ಜಗದ್ಗುರು ಜಯದೇವ ಮುರಘರಾಜೇಂದ್ರ ಸ್ವಾಮಿಜಿಯವರೆಂದೂ ನಾವು ಕೇಳಿ ತಿಳಿಯುತ್ತೇವೆ. ಪ್ರಕೃತ ಬಸವ ಕಲ್ಯಾಣದ ಈ ಮಹಾಸಭೆಗೆ ನಿಯೋಜಿತ ಅಧ್ಯಕ್ಷರಾಗಿರತಕ್ಕವರು ವೀರಶೈವ ಸಮಾಜದಲ್ಲಿ ಅತ್ಯಂತ ಪ್ರಖ್ಯಾತವಾಗಿರುವ ಶ್ರೀ ಬಂಥನಾಳ ಶಿವಯೋಗಿಗಳಾದ ನಿ.ಪ್ರ. ಸಂಗನಬಸವ ಸಾಮಿಗಳು ಎಂಬುದನ್ನು ತಿಳಿದು ನಮಗೆ ಪರಮಾನಮದವಾಗಿದೆ. ಇಂತಹ ತಪೋಧನರ ನೇತೃತ್ವದಲ್ಲಿ ಕಲ್ಯಾಣ ಪಟ್ಟಣದಂತಹ ಪುಣ್ಯಭೂಮಿಯಲ್ಲಿ ನೀವು ನಡೆಸುತ್ತಿರುವ ಈ ಮಹಾಸಭೆಯು ಪೂರ್ಣ ಯಶಸ್ವಿಯಾಗಿ ನಡೆದು ಸಮಾಜಕ್ಕೂ, ದೇಶಕ್ಕೂ ಹೆಚ್ಚಿನ ಪ್ರಯೋಜನರನ್ನುಂಡು ಮಾಡುತ್ತವೆಂದು ನಾವು ನೆರೆ ನಂಬಿರುತ್ತೇವೆ.

ಒಂದೇ ಬಗೆಯ ಆಚಾರ ವಿಚಾರಗಳನ್ನು ಉಳ್ಳ ಹಾಗೂ ತಮ್ಮದೇ ಆದ ದರ್ಮದರ್ಶನ, ಸಾಹಿತ್ಯ, ಸಂಸ್ಕೃತ, ಮತ್ತು ಇತಿಹಾಸ ಪರಂಪರೆಗಳನ್ನು ಉಳ್ಳ ಒಂದು ಸಮಾಜದವರು ಹೀಗೆ ಒಂದೆಡೆ ಕೂಡಿ ತಮ್ಮ ಸಮಾಜ ಬಾಂಧವರ ಆಗುಹೋಗುಗಳ ಬಗ್ಗೆ ಆಲೋಚನೆ ನಡೆಸಿ ತಮ್ಮ ಹಾಗೂ ದೇಶದ ಅಭ್ಯುದಯಕ್ಕೆ ಕಾರಣವಾದ ಕಾರ್ಯಕಲಾಪಗಳನ್ನು ನಿರ್ವಹಿಸುವುದು ಯಾವ ದೃಷ್ಟಿಯಿಂದ ನೋಡೊದರೂ ಉತ್ತಮವಾದ ಅಭ್ಯದಯ ಸಾಧನವೆಂದೇ ನಾವು ತಿಳಿಯಬಹುದಾಗಿದೆ. "ಸಂಘೇ ಶಕ್ತಿಃ ಕಲೌ ಯುಗೇ" ಎಂಭ ಶಾಸ್ತ್ರ ವಾಕ್ಯವೈ ಕೂಡ

ಈ ಯುಗದ ಧರ್ಮವು ಜನರು ಒಟ್ಟುಗೂಡೊ ಕೆಲಸಮಾಡುವುದು ಉತ್ತಮ ಎಂಬುದನ್ನೇ ಭೋಧಿಸುತ್ತದೆ. ಆದುದರಿಂದ ವಿಶಾಲವಾದ ಈ ಭರತ ಖಂಡದಲ್ಲಿರುವ ಕರ್ನಾಟಕ, ಆಂಧ್ರ, ದ್ರಾವಿಡ, ಕೇರಳ, ಮಹಾರಾಷ್ಟ್ರ ಉತ್ತರ ಭಾರತ ಪ್ರದೇಶದಲ್ಲಿಯೂ, ಲಂಕಾದ್ವೀಪದಲ್ಲಿಯೂ ನೆಲೆಸಿರುವ ಸುಮಾರು ೫೦ ಲಕ್ಷ ವೀರಶೈವ ಸಮಾಜ ಬಾಂಧವರು ಅಭ್ಯದಯಕ್ಕಾಗಿ ಮತ್ತು ಆ ಸಮಾಜದ ಆರ್ಥಿಕ, ಔದ್ಯೋಗಿಕ, ಶೈಕ್ಷಣಿಕ, ವಾಙ್ಮಯಾತ್ಮಕ ಮತ್ತು ರಾಜಕಯ ಪ್ರಗತಿಗಲಿಗಾಗಿ ನೀವು ಹೀಗೆ ಒಂದೆಡೆ ಕೂಡಿ ಕಾಲೋಚಿತಮಾದ ತೀರ್ಮಾನಗಳನ್ನು ಕೈಗೊಂಡು ಅಭ್ಯುದಯದ ಮಾರ್ಗವನ್ನು ಅನುಸರಿಸುವುದು ಇತರ ಸಮಾಜ ಭಾಂಧವರಿಗೂ ಅನುಕರಣೀಯವೇ ಆಗಿದೆ. ವ್ಯಕ್ತಿಯು ಸಮಾಜದ ಅಂಗ, ಸಮಾಜವು ದೇಶದ ಒಂದು ಭಾಗ, ಸಮಗ್ರ ದೇಶದ ಅಭ್ಯುದಯಾಕಾಂಕ್ಷೆಯಲ್ಲಿ ವ್ಯಕ್ತಿ ಮತ್ತು ಸಮಾಜದ ಅಭಿವೃದ್ಧಿಯೂ ಸಹಾ ಅಪೇಕ್ಷಣೀಯವಾಗಿಯೇ ಇದೆ. ಈ ಅರ್ಥದಲ್ಲಿ ತಮ್ಮ ಮಹಾ ಸಭೆಯನ್ನು ಸ್ಥಾಪಿಸಿದ ಮಹನೀಯರು ಅತ್ಯಂತ ದೂರದೃಷ್ಟಿಯಿಂದ ಈ ಮಹಾ ಸಂಸ್ಥೆಯನ್ನು ನಡೆಸಿಕೊಂಡು ಬಂದಿದ್ದಾರೆಂದು ನಾವು ಭಾವಿಸಿದ್ದೇವೆ.

ವೀರಶೈವ ಸಮಾಜವು ಭರತ ಖಂಡದಲ್ಲಿ ಅನೇಕ ಶತಮನಗಳಿಂದ ಬೆಳೆದುಕೊಂಡು ಬಂದಿವೆಳ. ವೀರಶೈವ ವಿಭೂತಿಗಳಾದ ಶ್ರೀ ರೇಣುಕಾಚಾರ್ಯರು, ನೀಲಕೇಶ್ವರದು, ಸ್ವಪ್ರಭಾನಂದರು, ಮಗ್ಗೆಯ ಮಾಯಿದೇವರು, ಪಾಲ್ಕುಯಕಿಸೊಮನಾಥರು, ಮರಿತೋಂಡದಾರ್‍ಯರು, ಸಿದ್ಧವೀರಣಾದಾರ್‍ಯರು, ನಂಜಣಾಚಾರ್ಯರು ಮೊದಲಾದ ಮಹಾತ್ಮರು ಸಂಸ್ಕೃತ ಭಾಷೆಯಲ್ಲಿ ವಿಖ್ಯಾತವದ ಭಾಷ್ಯಗಳನ್ನೂ ದರ್ಶನ ಗ್ರಂಥಗಳನ್ನೂ ವಿರಚಿಸಿ ಭರತ ಖಂಡದ ಅದ್ಯಾತ್ಮ ಪ್ರಪಂಚದಲ್ಲೇ ಒಂದು ಕ್ರಮತಿಯನ್ನು ಎಸಗಿರುತ್ತಾರೆ. ಈ ಎಲ್ಲ ಶಿವಾಚಾರ್ಯರ ಹಿನ್ನೆಲೆಯೂ ಪ್ರಾಚೀನ ಶಿವಾಗಮುಗಳಲ್ಲಿಯೇ ಇದೆ. ಎಂಬುದನ್ನು ನಾವು ಈ ಮಹದಗ್ರಂಥಗಳ ಅಧ್ಯಯನದಿಂದ ಅರಿಯಬಹುದಾಗಿದೆ. ಕಲ್ಯಾಣದ ಶಿವಶರಣರಾದ ಶ್ರೀ ಪ್ರಭುದೇವರು, ಚನ್ನಬಸವೇಶ್ವರರು, ಸಿದ್ಧರಾಮೇಶ್ವರರು; ಮಾಚಿದೇವರು, ಸತ್ಯಕ್ಕನವರು ಮೋಳಿಗೆ ಮಾರಯ್ಯನವರು, ನುಲಿಯ ಚಂದಯ್ಯನವರು, ಅಕ್ಕಮಹಾದೇವಿಯವರು, ಅಕ್ಕ ನಾಗಮ್ಮನವರು, ನುಲಿಯ ಚಂದಯ್ಯನವರು, ಅಕ್ಕಮಹಾದೇವಿಯವರು, ಅಕ್ಕ ನಾಗಮ್ಮನವರು ಮೊದಲಾದ ಅನುಭವಿಗಳು ತಮ್ಮ ಅಸದೃಶವಾದ ಅನುಭವ ಮತ್ತು ಆಲೋಚನೆ ಫಲವಾಗಿ, ವೀರಶೈವ ದರ್ಶನವು ಅನುಭವ ಪ್ರಧಾನ ಎಂಬುದನ್ನೂ ಕೇವಲ ತರ್ಕಪ್ರಧಾನವಲ್ಲವೆಂಬುದನ್ನೂ ವಿದ್ವತ್ ಲೋಕಕ್ಕೆ ಸ್ಪಷ್ಟ ಪಡಿಸಿರುತ್ತಾರೆ. ಈ ಶಿವಶರಣರ ಅನುಭವವು ನಿಗಮಾಗಮ ಸಮ್ಮತವೆಂಬುದನ್ನು ಶೂನ್ಯಸಂಪಾದನೆ, ಗಣಬಾಷಿತ ರತ್ನಮಾಲೆ, ಮತ್ತು ಲಿಂಗಲೀಲಾವಿಲಾಸ ಮೊದಲಾದ ವಚನ ಗ್ರಂಥಗಳಿಂದ ನಾವು ಚೆನ್ನಾಗಿ ಅರಿಯಬಹುದಾಗಿದೆ. ಈ ಮೇಲೆ ಕಂಡಂಡೆ ಅಪೂರ್ವವಾದ ವೀರಶೈವ ಸಿದ್ಧಾಂತಕ್ಕೆ ಶಿವಶರಣರ ಅನುಭವಚ ಬೆಂಬಲ ಲಭಿಸಿದುದು ಈ ದರ್ಶನವು ಚಿನ್ನಕ್ಕೆ ಸುವಾಸನೆ ಬಂದಂತಾಗಿ ಭಾರತದಲ್ಲಿಯೇ ಅಪೂರ್ವನೆಂಬುದನ್ನು ಸಿದ್ಧಗೊಳಿಸಿದೆ, ಸಿದ್ಧಾಂತ ಮತ್ತು ಅನುಭವತಗಳು ಹಾಲು ಸಕ್ಕರೆಗಳಂತೆ ಪರಸ್ಪರ ಹೊಂದಿಕೊಂಡಿರುವುದು ವೀರಶೈವ ತತ್ವಜ್ಞಾನದ ಹಿರಿಮೆಗೆ ನಿದರ್ಶವೆನಿಸಿದೆ.

ವೀರಶೈವ ಸಮಾಜವು ಉತ್ತಮವಾದ ಸಾಹಿತ್ಯಕ್ಕೆ ಹೆಸರಾಗಿದೆ. ಸಂಸ್ಕೃತ ಭಾಷೆಯಲ್ಲಿ ಭಾಷ್ಯಕಾರರೂ, ಧರ್ಮ ಗ್ರಂಥಕಾರರೂ ಅಸಂಖ್ಯಾತರಾಗಿ ಹೋಗಿದ್ದಾರೆ. ಅಲ್ಲದೆ ಕನ್ನಡ, ತಮಿಳು, ತೆಲುಗು ಮತ್ತು ಮರಾಠಿ ಭಾಷೆಗಳಲ್ಲಿ ಕೂಡ ವೀರಶೈವ ಕವಿಗಳ ಶ್ರೇಷ್ಠವಾದ ಕಾವ್ಯಗಳನ್ನು ನಿರ್ಮಾಣಮಾಡಿ ಈ ದೇಶ ಭಾಷೆಗಳ ಅಭಿವೃದ್ಧಿಗೆ ಬಹು ಮಟ್ಟಿಗೆ ಕಾರಣಕರ್ತರಾಗಿದ್ದಾರೆ. ಉದಾಹರಣೆಗಾಗಿ ಕನ್ನಡದಲ್ಲಿ ಹರೀಶ್ವರ ಕವಿ, ರಾಗವಾಂಕ ಕವಿ, ನಿಜಗುಣ ಶಿವಯೋಗಿ, ಷಡಕ್ಷರ ದೇವ ಮೊದಲಾದವರೂ, ತೆಲಗಿನಲ್ಲಿ ಮಲ್ಲಿಕಾರ್ಜುನಪಂಡಿತಾರಾಧ್ಯರು, ಪಾಲ್ಕುರ್ಕಿ ಸೋಮಾನಾಥದೇವರು, ಪಿಡುಪರ್ತಿ ಸೋಮ ಮತ್ತು ಬಸವ ಕವೀಶ್ವರರೂ, ತಮೊಳು ಭಾಷೆಯಲ್ಲಿ ಶಿವಪ್ರಕಾಶಸ್ವಾಮಿಗಳ್, ಕರುಣಾಪ್ರಕಾಶಲ್, ಕುಮಾರದೇವರ್ ಮೊದಲಾದವರೂ ವಿರಚಿಸಿರುವ, ಮರಾಠಿ ಭಾಷೆಯಲ್ಲಿ ಮನ್ಮಥಸ್ವಾಮಿಗಳು, ಶಾಂತ ಲಿಂಗದೇಶಿಕರು ಮೊದಲಾದವರು ವಿರಚಿಸಿರುವ ಸುಂದರ ಕಾವ್ಯಗಳು ಆಯಾ ದೇಶೀಯರೇ ಅಲ್ಲದೆ ಸಮಗ್ರ ಭಾರತೀಯರ ಮನ್ನಣೆಗೆ ಪಾತ್ರವಾಗಿವೆ. ಹೀಗೆ ವೀರಶೈವ ಸಮಾಜವು ಉದಾತ್ತವಾದ ತತ್ವಜ್ಞಾನ, ಹಾಗೂ ಉಜ್ವಲವಾದ ಸಾಹಿತ್ಯ, ಸಂಸ್ಕೃತಿ ಇವುಗಳಿಂದ ಸ್ಪೂರ್ತಿಯನ್ನು ಪಡೆದಿದೆ. ಎಂಬುದನ್ನು ನಾವು ಗಮನಿಸಿದಾಗ ಅಂತಹ ಸಮಾಜದ ಪ್ರತಿನಿಧಿ ಸಂಸ್ಥೆಯಾದ ಈ ಮಹಾಸಭೆಯ ಮಹತ್ವವು ಎಷ್ಟೆಂಬುದನ್ನು ಸುಭಲಭವಾಗಿ ಅರಿಯಬಹುದಾಗಿದೆ.

ಪೂರ್ವದಲ್ಲಿ ವೀರಶೈವ ಧರ್ಮವು, ಸಮಗ್ರ ಭಾತರದಲ್ಲಿಯೇ ವ್ಯಾಪಿಸಿತ್ತೆಂಬುದನ್ನು ಬಸವ ಪುರಾಣಾದಿಗಳಲ್ಲಿ ಬರುವ ಮೋಳಿಗೆ ಮಾರಯ್ಯನವರು, ಶರಣ ಆದಿಶೆಟ್ಟಿಯವರು, ಉದ್ಭಟದೇವರು ಮೊದಲಾದವರ ಚರಿತ್ರಗಳಿಂದ ಅರಿಯಬಹುದಾಗಿದೆ. ಅಲ್ಲದೆ ವೀರಶೈವ ಮತಕ್ಕೆ ಸಂಬಂಧಪಟ್ಟ ಮಥ ಮಾನ್ಯಗಳು, ಹಿಮಾಲಯದ ಕೇದಾರ, ಪ್ರಯಾಗ, ಕಾಶಿ, ಶ್ರೀ ಶೈಲ, ಮಲೆಯ ಪರ್ವತದ ರಂಭಾಪುರಿ, ದಕ್ಷಿಣದ ಕುಂಭಕೋಣಂ, ಮಧುರ ಮೊದಲಾದ ಕಡೆಗಳಲ್ಲಿಯೂ ಲಂಕದ್ವೀಪದ ಜಾಪ್ನ ಪ್ರದೇಶದಲ್ಲಿಯೂ ಇರುವುದೆಂಬುದರಿಂದ ತಿಳಿಯಬಹುದು.

ನಮ್ಮ ದೇಶದಲ್ಲಿ, ನಾವೆಲ್ಲರೂ ಮನಗಂಡಿರುವಂತೆ ವೀರಶೈವ ಸಮಾಜ ಬಾಂಧವರು ಹೆಚ್ಚಾಗಿ ವ್ಯಾಪಾರ ಮತ್ತು ವ್ಯವಸಾಯಕರ್ಮಗಳನ್ನು ಕೈಕೊಂಡವರಾಗಿರುತ್ತಾರೆ. ಈ ಎರಡು ವೃತ್ತಿಗಳೂ ದೇಶದ ಸಂಪದಭಿವೃದ್ಧಿಗೆ ಆಹಾರಪೂರೈಕೆಗೆ ಬಹಳ ಸಹಯವಾದವುಗಳಾಗಿವೆ. ಘನವಾದ ಈ ವೃತ್ತಿಗಳನ್ನು ಅವಲಂಬಿಸಿ ತಕ್ಕಷ್ಟು ಧನಸಂಗ್ರಹವನ್ನು ಮಾಡಿ, ಅನೇಕ ದೇಶೋಪಯುಕ್ತ ಕಾರ್ಯಗಳನ್ನು ಮಾಡಿದ ಧರ್ಮಾತ್ಮರ ಸಂಖ್ಯೆ ಈ ಸಮಾಜದಲ್ಲಿ ಅಧಿಕವಾಗಿಯೇ ಇದೆ. ಮತ್ತು ಮಹಾ ಸಭೆಯ ಹಿಂದಿನ ವರದಿಗಳನ್ನು ಅವಲೋಕಿಸಿದಲ್ಲಿ ಕೀರ್ತಿಶೇಷರಿಂದ ಶಿರಸಂಗಿ ಲಿಂಗರಜರು; ವಂಟಮುರಿ ದೇಸಾಯಿಗಳು, ವಾರದ ಮಲ್ಲಪ್ಪನವರು; ಸರ್, ಪಟ್ಟಣ ಕಟ್ಟರು ಮೊದಲಾದವರು, ಇಂತಹ ಧರ್ಮಾತ್ಮರಲ್ಲಿ ಅಗ್ರಗಣ್ಯರಾಗಿ ಪರಿಶೋಭಿಸುತ್ತಿದ್ದಾರೆ.

ಕರ್ನಾಟಕ ಮತ್ತು ಮಹಾರಾಷ್ಟ್ರಾದಿ ದೇಶಗಳಲ್ಲಿ ವೀರಶೈವರಲ್ಲಿ ದಾನ ಶೂರರಾದ ಮಹನೀಯರ ಸಂಖ್ಯೆಯನ್ನು ನಾವು ಈಗಲೂ ಅಧಿಕಾಧಿಕವಾಗಿ ಕಾಣ ಬಹುದಾಗಿದೆ. ನಮ್ಮ ಮೈಸೂರು ದೇಶದಲ್ಲಿ ಕೈಲಾಸವಾಸಿಗಳಾ ಗುಬ್ಬಿ ತೋಟದಪ್ಪನವರು, ಗುರಿಕಾರ್ ಮರಿಮಲ್ಲಪ್ಪನವರು, ಎಲೆ ಮಲ್ಲಪ್ಪಶೆಟ್ಟರು, ಧರ್ಮಪ್ರಕಾಶ ಚಂದ್ರಗೌಡರು, ಈ ಮಹಾಸಭೆಯ ಅಧ್ಯಕ್ಷರಾಗಿದ್ದ ಸರ್, ಪುಟ್ಟಣ್ಣಶೆಟ್ಟರು ಮೊದಲಾದ ಅನೇಕ ಮಹನೀಯರು ಮಾಡಿರುವ ಧರ್ಮಕಾರ್ಯಗಳು ಈಗಲೂ ಪ್ರಸಿದ್ಧವಾಗಿವೆ. ಇಂತಹ ಉದಾರಿಗಳ ಸಹಾಯ ಸಹಾನುಭೂತಿಗಳ ಫಲವಾಗಿಯೇ ವೀರಶೈವ ಸಮಾಜದವರು ಹಲವಾರು ಕಾಲೇಜುಗಳನ್ನೂ, ನೂರಾರು ಶಾಲೆಗಳನ್ನೂ ಅನೇಕಾನೇಕ ಉಚಿತ ವಿದ್ಯಾರ್ಥಿ ನಿಲಯಗಳನ್ನೂ ಸ್ಥಾಪಿಸಿ ನಡೆಸಿಕೊಂಡುಬರಲು ಸಮರ್ಥರಾಗಿರುತ್ತಾರೆ. ವೀರಶೈವ ಸಮಾಜದ ಈ ಪರಿಸ್ಥಿತಿಯನ್ನೂ ದಾನ ಧರ್ಮ ಪರಾಯಣತೆಯನ್ನೂ ಯಾವ ದೇಶಾಭಿಮಾನಿಗಳು ತಾನೇ ಮೆಚ್ಚಿಕೊಳ್ಳುವುದಿಲ್ಲ?

ವೀರಶೈವ ಸಮಾಜವು ಅನೇಕ ಶಿವಯೋಗಿಗಳಿಗೂ ರಾಜಕಾರಣಿಗಳಿಗೂ ರಾಜಮನೆತನಗಳಿಗೂ, ದೇಶಸೇವಕರಿಗೂ ಹೆಸರಾಗಿದೆ ಎಂಬುದನ್ನು ನಾವಿಲ್ಲಿ ಸ್ಮರಿಸ ಬಹುದಾಗಿದೆ. ವೀರಶೈವ ಗುರುಪುಂಗವರು, ಕಾಕತೀಯ, ವಿಜಯನಗರ ಮೊದಲಾದ ಹಿರಿಯ ರಾಜ್ಯಗಳಿಗೂ ಮಾರ್ಗದರ್ಶಕರಾಗಿದ್ದು ಹಲವು ಮಹತ್ಕಾರ್ಯಗಲನ್ನು ಸಾಧಿಸಿರುವರೆಂಬುದಕ್ಕೆ ಇತಿಹಾಸದಲ್ಲಿ ನಿದರ್ಶನಗಳಿವೆ. ನಮ್ಮ ಮೈಸೂರ ರಾಜ ಮನೆತನದ ಸಂಸ್ಥಾಪಕರು ಒಬ್ಬ ಜಂಗಮ, ಒಡೆಯರು ಎಂಬುದನ್ನು ನೀವು ನಿಮ್ಮ ಸನ್ಮಾನ ಪತ್ರಿಕೆಯಲ್ಲಿ ಎಂದು ನಮ್ಮ ಸ್ಮರನೆಗೆ ತಂದಿರುವುದು ನಮಗೆ ಹೆಚ್ಚಿನ ಆತ್ಮಸ್ಫೂರ್ತಿಯನ್ನು ಉಂಟುಮಾಡಿದೆ. ಈ ಹಿಂದಿನ ನಮ್ಮ ಚರಿತ್ರೆಯ ಸ್ಮರಣೆಯು ನಾವು ಬಸವ ಕಲ್ಯಾನಕ್ಕೆ ಇಂದು ಆಗಮಿಸಿರುವುದು ಎಲ್ಲ ವಿಧದಿಂದಲೂ ನಮ್ಮನ್ನು ಸಾರ್ಥಕಗೊಳಿಸಿತು ಎಂದು ಅನ್ನಿಸಿದೆ.

ನಮ್ಮ ಇತಿಹಾಸದ ಗ್ರಂಥದ ಹಾಳೆಗಳನ್ನು ತಿರುವಿಹಾಕಿದರೆ, ಹೊಯ್ಸಳ ರಾಜ್ಯದ ಕೆರೆಯ ಪದ್ಮರಸರು, ಚಾಲುಕ್ಯರಾಜ್ಯದ ಕೊಂಡಗುಳಿ ಕೇಶಿರಾಜರು, ವಿಜಯನಗರ ಲಕ್ಕಣಾಮಾತ್ಯರು ಮತ್ತು ಜಕ್ಕಣಾಚಾರ್ಯರು, ಆಂಧ್ರದೇಶದ ಪಾಪಯಾಮಾತ್ಯರು, ತಮಿಳು ನಾಡಿನ ಮಾಣಿಕ್ಯವಾಚಕರು, ಕೆಳದಿರಾಜ್ಯದ ಷಡಕ್ಷರ ಮಂತ್ರಿಗಳು ಇತ್ಯಾದಿ ಪ್ರಾಚೀನ ಕಾಲದ ದಂಡನಾಯಕರ ಮತ್ತು ಮಂತ್ರಿಗಳ ಹೆಸರನ್ನು ಸ್ಮರಿಸಿಕೊಂಡಾಗ ವೀರಶೈವ ಸಮಾಜವು ಚೈತನ್ಯಪೂರ್ಣ ವಾದುದೆಂಬುದನ್ನು ನಾವು ಚೆನ್ನಾಗಿ ಅರಿಯಬಹುದಾಗಿದೆ.

ಇವೆಲ್ಲಕ್ಕೂ ಮಿಗಿಲಾಗಿ ನಾವು ಇಂದು ನೆರೆದಿರುವುದು ಚಾಲುಕ್ಯರ ಮತ್ತು ಕಲಚೂರ್ಯರ ಕಾಲದಲ್ಲಿ ಪ್ರಸಿದ್ಧವಾಗಿರುವ "ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ" ಎಂದು ಪಾಚೀನ ಕವಿಗಳಿಂದ ಅಭಿನಂದಿಸಲ್ಪಟ್ಟಿರುವ ಈ ಕಲ್ಯಾಣ ಪಟ್ಟಣವು ವೀರಶಯವ ಧರ್ಮದ ಮಹೋನ್ನತ ಸ್ಥಾನವೆನಿಸಿದೆ.

ಭಕ್ತಿಯೊಗಿಗಳಾದ ಬಸವಣ್ಣನವರು, ಜ್ಞಾನಯೋಗಿಗಳಾದ ಚೆನ್ನಬಸವಣ್ಣನವರು, ಪರಮ ವೈರಾಗ್ಯಮೂರ್ತಿಗಳಾದ ಅಲ್ಲಮ ಪ್ರಭುದೇವರು, ಶಿವಯೋಗ ಸಿದ್ಧರಾಮ ಸಿದ್ಧರಾಮೇಶ್ವರರು, ಮೂರ್ತಿವೆತ್ತ ಮುಕ್ತ್ಯಂಗನೆಯೆನಿಸಿದ ಅಕ್ಕಮಹಾದೇವಿಯವರು, ಸಾಕಾರ ವೀರಭದ್ರವೆನಿಸಿದ ಮಾಚಯ್ಯನವರು, ಸಾಧ್ವೀಶಿರೋಮಣಿಯರಾದ, ಬಸವೇಶ್ವರರ ಧರ್ಮಪತ್ನಿಯರಾದ ನೀಲಾಂಬಿಕೆ ಮತ್ತು ಗಂಗಾಬಿಕೆ ದೇವಿಯರು ಮೊದಲಾದವರೂ, ಕಾಯಕನಿಷ್ಠರಾದ ಮೋಳಿಗೆ ಮಾರಯ್ಯ, ಕಿನ್ನರಿ ಬ್ರಹ್ಮಯ್ಯ, ನುಲಿಯ ಚಂದ್ರಯ್ಯ, ಕಂಬಳಿ ಶಿವನಾಗಮಯ್ಯ ಇತ್ಯಾದಿ ಅಸಂಖ್ಯಾತ ಶರಣರೂ ಈ ಪುಣ್ಯಭೂಮಿಯಲ್ಲಿ ತಮ್ಮ ಮಹತ್ವವಾದ ಧರ್ಮೋದ್ಧಾರ ಕಾರ್ಯಗಳನ್ನು ನಡೆಸಿರುತ್ತಾರೆ. ಮಹಾನುಭಾವರಾದ ಆ ಶಿವಶರಣರು ತಪಸ್ಸು ಮಾಡಿದ, ಪವಾಡಗಳನ್ನು ಮೆರೆಸಿದ, ಲೋಕೋದ್ಧಾರವನ್ನು ಸಾಧಿಸಿದ, ಆತ್ಮೋದ್ಧಾರವನ್ನು ನಿರ್ವಹಿಸಿದ ಪವಿತ್ರ ಸ್ಥಾನದಲ್ಲಿ ನಾವಿಂದು ನೆಲೆಸಿರುತ್ತೇವೆ.

ಆಧಿನಿಕ ಸಾಧನಗಳಿಲ್ಲವಾದರೂ, ವೈಜ್ಞಾನಿಕವಾದ ಆಕರ್ಷಕ ಸನ್ನಿವೇಶಗಳು ಇಲ್ಲಿ ಕಡುಬರದಿದ್ದರೂ ನಾವೆಲ್ಲರು ಇಲ್ಲಿಗೆ ಒಂದು ಅವ್ಯಕ್ತವಾದ ಶಕ್ತಿಯಿಂದ ಆಕರ್ಷಿತಸಲ್ಪಟ್ಟಿರುತ್ತೇವೆ. ಆ ಮಹಾಶಕ್ತಿಯೇ ನಮ್ಮೆಲ್ಲರ ಹೃದಯದಲ್ಲಯೂ ನವ ಚೈತನ್ಯವನ್ನುಂಟುಮಾಡಿ ಈ ಮಹಾಸಭೆಯ ನಿಮಿತ್ತದಿಂದ ಇಲ್ಲಿ ನಮ್ಮನ್ನು ಒಟ್ಟು ಗೂಡಿಸಿದೆ. ಈ ದೃಷ್ಟಿಯಿಂದ ಈ ಬಸವ ಕಲ್ಯಾಣದ ವೀರಶೈವ ಮಹಾಸಭೆಯ

ಒಂದು ಅಪೂರ್ವವಾದ ತೇಜಸ್ಸಿನಿಂದ ಕಂಗೊಳಿಸುತ್ತದೆ. ಇತಿಹಾಸ ಪ್ರಸಿದ್ಧವಾದ ಚಾಲುಕ್ಯರ ಪ್ರಭುಶಕ್ತಿ, ಮಹಿಮಾಶಾಲಿಗಳಾದ ಶಿವಶರಣರ ಮಂತ್ರಶಕ್ತಿ ಇವುಗಳಿಂದ ಕಂಗೊಳಿಸುತ್ತಿದ್ದ ಈ ಕಲ್ಯಾಣನಗರವು ಇಂದು ಮಹಾಸಭೆಯವರ ಉತ್ಸಾಹಶಕ್ತಿಯಿಂದ ಕೂಡಿ ಆಧ್ಯಾತ್ಮಿಕ ತ್ರಿವೇಣೀ ಸಂಗಮದಂತೆ ಇದೆಯೆಂದು ನಮ್ಮ ಮನಸ್ಸಿಗೆ ಭಾಸವಾಗುತ್ತಿದೆ, ಆದುದರಿಂದಲೇ ನಾವು ಈ ಕಲ್ಯಾನ ಅಧಿವೇಶವು ಅಪೂರ್ವ ಯೋಗಾಯೋಗಾಗಳಿಂದ ಕೂಡಿದುದೆಂದೂ ಸಮಾಜಕ್ಕೆ ಕಲ್ಯಾಣ ಕಾರಕವೆಂದೂ ಹೇಳಲು ಹರ್ಷಗೊಳ್ಳುತ್ತೇವೆ.

ಈ ವೀರಶೈವ ಮಹಾಸಭೆಯು ಭಾರತೀಯ ಲಿಂಗವಂತ ಮಹಾ ಜನರ ಸೇವೆಯನ್ನೂ ಅಲ್ಲದೆ ಅಸಂಖ್ಯಾ ಹಿಂದುಳಿದ ಭಾರತೀಯ ಬಂಧುಗಲ ಸೇವಾ ಕಾರ್ಯವನ್ನು ಕೈಗೊಳ್ಳಬೇಕೆಂದು ನಾವು ಹೇಳಬಯಸುತ್ತೇವೆ. ಈ ಕಾರ್ಯವಯು ಲಿಂಗವಂತರಿಗೆ ಹೊಸದೇನೂ ಅಲ್ಲ. ಅವರ ಸಮಾಜದ ಮಂತ್ರದೇವತೆ ಎನಿಸಿದ ಶಿವರಣರು ಈ ವಿಷಯದಲ್ಲಿ ಅವರಿಗೆ ಮಾರ್ಗದರ್ಶನಗವನ್ನು ಮಾಡಿಯೇ ಇದ್ದಾರೆ.

ಶಿವಶರಣರ ಉಪದೇಶಗಳು ಅವರ ವಿಶ್ವಬಂಧುತ್ವಕ್ಕೆ. ದೀನದರಿದ್ರರ ಉದ್ಧಾಶಾಸಕ್ತಿಗೆ ಒಳ್ಳೆಯ ನಿದರ್ಶನವಾಗಿವೆ. ಕಲ್ಯಾಣದ ಪುಣ್ಯಭೂಮಿಯಲ್ಲಿ ಇಂದು ನೆರೆದಿರುವ ವೀರಶೈವ ಮಹಾಸಭೆಯವರು ಈ ದೀನ ದಲಿತರ ಉದ್ಧಾರ ಕಾರ್ಯ ವನ್ನು ಕೈಗೊಳ್ಳುವುದರ ಮೂಲಕ ನಮ್ಮ ಭಾರತದೇಶದ ಉನ್ನತಿಗೆ ನೆರವಾಗಬೇಕೆಂದು ನಾವು ಹೇಳಬಯಸುತ್ತೇವೆ. ಈ ಬಗ್ಗೆ ರಾಷ್ಟ್ರಪಿತ ಮಹಾತ್ಮ ಗಾಂಧಿಯವರ ಮೆಚ್ಚುಗೆಯನ್ನು ಕೂಡ ಪಡೆದಿರುವ ಶ್ರೀ ಬಸವೇಶ್ವರರ ಬೋಧೆ ತಮಗೆ ಮಾರ್ಗದರ್ಶಕವಾಗಿಯೇ ಇದೆ. ನಾವು ಈ ಹಿಂದೆ ಹೇಳಿದಂತೆ ಸಮಾಜವು ದೇಶದ ಒಂದು ಅಂಗವೆನಿಸಿದರೂ ಸಮಗ್ರದೇಶದ ಹಿತದೊಂದಿಗೆ ಪ್ರತಿಯೊಂದು ಸಮಾಜದ ಹಿತಾಹಿತಗಳೂ ಕೂಡಿವೆ ಎಂಬುದು ಇಂದಿನ ಕಾಲದಲ್ಲಿ ಅರಿಯಬೇಕಾದ ಮುಖ್ಯ ವಿಷಯವಾಗಿದೆ. ಭಾರತವೆಲ್ಲವೂ ಒಂದು ಕುಟುಂಬವೆಂಬಂತೆ ನಮ್ಮ ರಾಜ್ಯಾಂಗದಲ್ಲಿ ನಿರೂಪಿತವಾಗಿದೆ. ಆದುದರಿಂದ ಈ ವೀರಶೈವ ಮಹಾಸಭೆಯವರು ಕೈಕೊಳ್ಳುವ ಕಾರ್ಯಕಲಾಪಗಳು ವಿಶಾಲವಾದ ಕರ್ನಾಟಕದ ಹಾಗೂ ಭವ್ಯವಾದ ಭಾರತದ ಸಮಸ್ತ ಜನಾಂಗಗಳ ಹಿತಗಳಿಗೂ ಅನುಗುಣವಾಗಿಯೇ ಇರುವಂತೆ ಆಗಬೇಕೆಂಬು ನಮ್ಮ ನಾವು ಈ ಮಹಾಸಭೇಯವರ ಗಮನಕ್ಕೆ ತರಬೇಕಾಗಿಲ್ಲವೆಷ್ಟೆ? ಕಲ್ಯಾಣದ ಶರಣರು  ಪರಿತೋದ್ಧಾರ ಕಾರ್ಯಗಾಳಿಗಾಗಿ ತಮ್ಮ ಪ್ರಾಣಗಳನ್ನು ಕೂಡಾ ತೆತ್ತವೆಂಬ ವಿಷಯವನ್ನು ಬಸವಪುರಾಣಾದಿಗಳಲ್ಲಿ ನಾವು ಅರಿತಿರುತ್ತೇವೆ. ಅಲ್ಲದೆ, ಶರಣರ ತತ್ವಗಳು ವಿಆಶ್ವಶಾಂತಿಗೂ ದೇಶಾಭಿವೃದ್ದಿಗೂ ಸಾಹಿತ್ಯ ಸಂಸ್ಕೃತಿಗಳ ಉದ್ಧಾರಕ್ಕೂ ಸಹಾಯಕವಾದುವು. ಇಂತಹ ಉದಾತ್ತ ತತ್ವಗಳನ್ನು ಗಮನದಲ್ಲಿಟ್ಟು ಈ ಮಹಾಸಭೆಯವರು ತಮ್ಮ ತೀರ್ಮಾನಗಳನ್ನು ಕಾರ್ಯಕಲಾಪಗಳಲ್ಲಿ ಎಣಿಸುವಂತಾಗಲೆಂದು ನಾವು ಆಶಿಸುತ್ತೇವೆ.

ವಿಜಾಪುರದಲ್ಲಿ ವಿಷಯಕಲೇಜು, ಲಚ್ಯಾಣದಲ್ಲಿ ಟ್ರೈನಿಂಗ್ ಕಾಲೇಜು ವೊದಲಾದ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿ ಸರ್ವಧರ್ಮ ಸಮ್ಮೇಳನ, ಶಿವಾನುಭವ ಸಮ್ಮೇಳನ ಮೊದಲಾದ ಮಹತ್ಕಾರ್ಯಗಳನ್ನು ನಡೆಸಿ, ಕನ್ನಡ ಜನರ ಮನ್ನಣೆಗೆ ಪಾತ್ರರಾಗಿರುವ ಮತ್ತು ಕಲ್ಯಾಣದ ಶ್ರೀ ಶೂನ್ಯ ಸಿಂಹಾಸನದ ಜಗದ್ಗುರು ಅಲ್ಲಮ ಪ್ರಭುದೇವರ ಪರಂಪರೆಯವರೆನಿಸಿರುವ ಶ್ರೀ ಶಿವಯೋಗಿ ಬಂಥನಾಳೆ ಸಂಗನ ಬಸವ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ನಡೆಯಲಿರುವ ಈಮಹಾಸಭೆಯ ೧೬ನೆಯ ಅಧಿವೇಶನವು ಮಹಾಮಹಿಮರಾದ ಶ್ರೀ ಬಸವಾದಿ ಪ್ರಮಥಗಣಂಗಳ ಕೃಪೆಯಿಂದ ಯಶಸ್ವಿಯಾಗಿ ನಡೆಯಲೆಂದು ಹಾರೈಸಿ ಈ ಮಹಾಸಭಾ ಅಧಿವೇಶನವನ್ನು ನಾವು ಸಂತೋಷದಿಂದ ಉದ್ಘಾಟಿಸಿರುತ್ತೇವೆ. ಈ ಮಹಾಸಭೆಯ ಅಂಗವಾಗಿ ನಡೆಯುವ ಸಾಹಿತ್ಯ ಸಮ್ಮೇಳನ, ಮಹಿಳಾ ಸಮ್ಮೇಳನ, ತರುಣ ಸಮ್ಮೇಳನ, ಗ್ರಂಥ ಪ್ರದರ್ಶನ ಮೊದಲಾದುವು ಮಹಾಸಭೆಯ ಘನ ಉದ್ದೇಶಗಳಿಗೆ ಅನುಗುಣವಾಗಿ ನಡೆದು ಸಮಾಜದ ಮತ್ತು ದೇಶದ ಉನ್ನತಿಗೆ ಸಹಾಯವಾಗಲೆಂದೂ ನಾವು ಹಾರೈಸುತ್ತೇವೆ. ಈ ಸಂದರ್ಭದಲ್ಲಿ ಹೈದರಾಬಾದ್ ರಾಜ್ಯದ ಮಂತ್ರಿಗಳಾದ ಶ್ರೀ.ಡಾ.ಮೆಲ್ಕೋಟೆಯವರೂ, ಭಾತರದ ಎಲ್ಲ ಭಾಗಗಳ ವೀರಶೈವ ಸಮಾಜದ ಮುಖಂಡರೂ ಇಲ್ಲಿ ನೆರೆದಿರುವುದನ್ನು ನೋಡಿ ನಮಗೆ ಅಮಿತಾನುದವಾಗಿದೆ.

ಇದೇ ಸಂದರ್ಭದಲ್ಲಿ ಕಲ್ಯಾಣಿಯ ನಗರಪಾಲಕರು ನಮಗೆ ನೀಡಿರುವ ಆದರಪೂರ್ವಕವಾದ ಸ್ವಾಗತಕ್ಕೂ ಅವರು ತಮ್ಮ ಬಿನ್ನವತ್ತಳೆಯಲ್ಲಿ ನಮ್ಮ ವಿಚಾರವಾಗಿ ಆಡಿರುವ ಸವಿನುಡಿಗಳಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳನ್ನೂ ಸಲ್ಲಿಸಲು ಬಯಸುತ್ತೇವೆ.

॥ ಸರ್ವೇ ಜನಾಃ ಸುಖಿನೋ ಭವಂತು॥

ಜೈ ಹಿಂದ್

# ಶ್ರೀ ಕುಮಾರ ಯೋಗಿ ಕಣ್ಮರೆಯಾದ ದಿನ

• ಪಾಟೀಲ ಅಪ್ಪಣಗೌಡರು, ಸಿರೂರ

ಶ್ರೀ ಶಾಲಿವಾಹನ ಶಕಾರಂಭ ೧೮೫೯ನೆಯ ಸಂವತ್ಸರದ ಮಾಘ ಶು. ೭ ಬುಧವಾರಲ ದಕ್ಷಿಣ ಭಾರತದ ಉತ್ತರ ಕರ್ನಾಟಕ: ಮಧ್ಯಾಹ್ನದ ೨ರ ಸಮಯ. ಆಗಲೇ ಬಿಸಿಲುರಿಯು ಜನರನ್ನು ಉಸ್ಸೆಂದು ಉಸುರ್ಗರೆಯಲು ಹಚ್ಚಿ ತೃಪ್ತಿ ಪಡುತ್ತಲಿತ್ತು. ಪ್ರಶಾಂತ ಮಲಾಪಹಾರಿಣಿಯು ತನ್ನ ಅಬ್ಬರವನ್ನು ಇಬ್ಬದಿಯ ಗುಡ್ಡದ ಇರುಕಿನಲ್ಲಿ ತೋರುತ್ತಿದ್ದರೂ, ಅದರ ಸಪ್ಪಳದ ಅರಿವು ಆ ರೌದ್ರ ಸಮಯದಲ್ಲಿ ಯಾರಿಗೂ ಇಲ್ಲ. ಬಿಸಿಮಳಲಿನ ಸೆಕೆಯಿಂದ ಕಾಲು ಹೊರಗಿಡದಂತಾಗಿವೆ. ಗಿಡಮರಗಳಿಲ್ಲದ ಇಪ್ಪತ್ತನೆಯ ಶತಮಾನದ, ಗುಡ್ಡವು ಮರ ಬಂಡೆಗಳಿಂದ ಉಷ್ಣತೆಯನ್ನು ಜನರ ಮೇಲಿನ ಸಿಟ್ಟಿನಿಂದ ಕಾರಲಾರಂಭಿಸಿದೆ. ಇದೇನು ನಿಸರ್ಗ ನೀತಿಯೋ? ಯಾರಾದರೊಬ್ಬ ಹಳ್ಳಿಯ ಹುಂಬರು ಗಿಡ ಕಡಿದು ನಾಶಮಾಡಿದರೆ ಅದರ ಫಲವನ್ನು ನಿಷ್ಪಾಪಿ ಶಿವಯೋಗಿವೃಂದವು ಇಂದಿಗೂ ಅನುಭವಿಸಬೇಕು. ನಿಸರ್ಗದಲ್ಲಿಯೂ ಪಕ್ಷಪಾತವೇ? ಎಂದೊಮ್ಮೆ ಅನಿಸಿತೆನಗೆ. ಶಿವಯೋಗಿ ವಟುವೃಂದವೆಲ್ಲ ತಂಪಾದ ಆಶ್ರಯವನ್ನಾಶ್ರಯಿಸಿ ವಿಶ್ರಮಿಸುತ್ತಿದ್ದರೂ., ಬೇಸಿಗೆಯ ಅರುಣನ ಕೋಪದೃಷ್ಟಿಯು ಅವರ ಮೇಲೆಯೂ, ಆಗಿ ತನ್ನ ಕಿರಣಗಳನ್ನು ಅವರ ಮೇಲೆ ಬಿಡಲು ಸಮರ್ಥನಾದ ಆತನು ಮಾರುತನ ಮುಖಾಂತರ ತನ್ನ ಉಗ್ರತೆಯ ಪ್ರದರ್ಶನವನ್ನು ತೋರುತ್ತಿದ್ದಾನೆ. ಇಂತಹ ಬೇಸಿಗೆಯ ಏರು ಮಧ್ಯಾಹ್ನದ ಸಮಯ. ಯಾರೊಬ್ಬರೂ ಅತ್ಯವಶ್ಯ ಕಾರ್ಯಗಳ ವಿನಹ ಹೊರಗೆ ಅಡ್ಡಾಡಲಾರದ ಸಮಯ. ಪ್ರಶಾಂತ ಶಿವಯೋಗಾಶ್ರಮವೂ ರೌದ್ರವಾಗಿ ಕಾಣುವ ಬಿಸಿಲಿನ ಸಮಯ. ಆ ಆಶ್ರಮ ಸ್ಥಾಪಕಯೋಗಿ: ಅಲ್ಲಿದ್ದ ವಟು ಶಿವಯೋಗಿವೃಂದದ ಆಧಾರ ಸ್ತಂಭ ಗುರುಕುಮಾರಯೋಗಿ, ಹಾವೇರಿಯಲ್ಲಿ ತಿಂಗಳೊಪ್ಪತ್ತಿನಿಂದಲೂ ಶಿವನ ಕರೆಗೆ ಕೈ ನೀಡುತ್ತಿರುವ ಸಮಯ. ಅಂದಮೇಲೆ ಕೇಳುವುದೇನು? ಆಗ ಎಲ್ಲರ ಮುಖಮುದ್ರೆ ನೀರವ ನಿಶ್ಶಬ್ದ. ಇಂದಿಗೆ ಹೇಗೊ ನಾಳಿಗೆ ಹೇಗೊ ಎಂದು ಸರುವರೂ ಪಡುತ್ತಿರುವ ವೇದನೆಯ ಸಮಯ. ಇದು ಶಿವಯೋಗಮಂದಿರದ ಆಶ್ರಮದ ಆ ದಿನದ ಸಮಯ.

ಆ ವೇಳೆಗೆ ನಾನು ಆಶ್ರಮದ ಜೀವನ ಮಾರ್ಪಾಟು ಮಾಡುವ ಆ ಶಿವಯೋಗಮಂದಿರದ ಸೇವಕ. ಮಧ್ಯಾಹ್ನದ ಊಟ ತೀರಿಸಿಕೊಂಡು ಯೋಗಿಗಳ ಸಾನಿಧ್ಯದಲ್ಲಿ ಈ ವಿಷಯದ ಬಗೆಯಲ್ಲಿ ಯೋಚಿಸುತ್ತ ಮನದ ದುಮ್ಮಾನವನ್ನಿಮ್ಮಡಿ ಮಾಡಿಕೊಳ್ಳುತ್ತಲಿದ್ದೆ. ಅಂತರ್ಯದಲ್ಲಿ ಮನವು ಕಸಿವಿಸಿಗೊಳ್ಳುತ್ತಿದ್ದರೂ ಸಮಾಧಾನಕ್ಕಾಗಿ ಹಾದಿ ಹುಡುಕತ್ತಲಿದ್ದೆ.

ಇಷ್ಟರಲ್ಲಿ ಒಂದು ದಿನ! ದುಮ್ಮಾನದಿಂದ ಕೂಗುತ್ತಿರುವ ದನಿ! ಯಾರೀದ್ದೀರಿ ಸ್ವಾಮಿಗಳೇ!' ಎಂದು ಕೂಗುವ ದನಿ. ಮನುಷ್ಯನಿಗೆ ಭಯವಿರುವಲ್ಲಿಯೇ ಹೊತ್ತು ಮುಳುಗುತ್ತದೆಂಬ ನಾಡನುಡಿಯಲ್ಲವೆ? ಆ ದನಿಯು ನಮ್ಮೆಲ್ಲರನ್ನು ನಿಶ್ಚೇತನ ಮಾಡಿತು. ಅದರಲ್ಲಿಯೂ ಕಾಲೆಳೆಯುತ್ತ ಆ ದನಿಯತ್ತ ಧಾವಿಸಿದೆ.

'ಏನದು! ಏನು ಸುದ್ದಿ! ಎಲ್ಲಿಂದ ಬಂದೆ?' ಎಂದು ಆ ಗುರುವೃಂದಮಧ್ಯದಲ್ಲೇ ಕೇಳಿದೆ.

'ಗುರುಗಳೇ! ಇದು ತಾರು! ಬಾದಾಮಿಯಿಂದ ಇದೀಗ ಬಂದಿದ್ದೇನೆ' ಅಂತ ಕೊಟ್ಟ ಉತ್ತರ.

ಕೇಳಿ ಹೌ ಹಾರಿದೆವು. ಅವನನ್ನು ನೋಡಿ ಬೆರಗಾದೆವು.

ನಿಡಿದಾದ ಕಾಳುದೇಹ! ನೀಳಬಾಹು! ಓಡಿ ಬಂದ ದಣಿವಿನಲ್ಲಿ, ಅದೇ ನಿಂತ ಮಳೆಯ ನೀರುಹನಿಗಳು ಗಿಡದೆಲೆಗಳ ಮೇಲೆ ಮಿನುಗುವಂತೆ ಅವನ ಕರಿಯ ವಿಶಾಲ ಫಾಲದಲ್ಲಿ ಬೆವರು ಹನಿಗಳು ಮಿನುಗುತ್ತವೆ. ಹೆಚ್ಚಾಗಿ ಭಾರಹೊತ್ತ ತೇಜಿಯು ಬಹು ಭಾರದಿಂದ ಮೈ ಬೆವರಿ ನೀರು ಸುರಿದರೂ ಅದಕ್ಕೆ ಅದರ ಅರಿವಾಗದೆ ಆನಂದದಿಂದ ತನ್ನ ಕರ್ತವ್ಯದಕ್ಷತೆಯನ್ನು ತೋರುವಂತೆ, ಓಡಿಬಂದ ದಾರಿಯ ದಣಿವಿನಿಂದ ತೇಕುತ್ತಿರುವ ಆ ಕಷ್ಟಮಯ ಪ್ರಸಂಗದಲ್ಲಿಯೂ ಅವನ ಮುಖಮುದ್ರೆಯು ಒಂದು ಅಮೌಲ್ಯ ಸಾಹಸ ಮಾಡಿದ ಪ್ರಾಣಿಯ ಆನಂದವನ್ನನುಭವಿಸುತ್ತಿರುವಂತೆ ಕಾಣುತ್ತಿತ್ತು. ಅವನನ್ನು ನೋಡಿ ಕೆಲನಿಮಿಷ ಜಗವಿಸ್ಮೃತಿಯಾಯಿತು. ಭಾವಿಕರ ಸ್ವಾಮಿಭಕ್ತಿಯ ಪ್ರಭಾವವೇ ಅಂತಹದು. ಆದರೆ! ಹೀಗೆ ಎಷ್ಟು ವೇಳೆ ಇರಬಹುದು? ಮತ್ತಷ್ಟರಲ್ಲಿ ಅವನು ತಂದ ಕಾಗದದ ಕಡೆಗೆ ಹೋಯಿತು ನಮ್ಮ ಮನಸ್ಸು, ಕೇಳಿ ತೆಗೆದುಕೊಂಡೆ. ಆ ಅತ್ಯವಸರದೋಲೆಯು ನನ್ನ ಕೈಗೆ ಬಂದೊಡನೆ ಕೈ ನಡಗಹತ್ತಿದವು.

ಅಷ್ಟರಲ್ಲಿ ಎಲ್ಲ ಶಿವಯೋಗಿಗಳು ನನ್ನನ್ನು ಮುತ್ತಿದರು. ಅದನ್ನು ನೋಡ ಹತ್ತಿದರು. ಯಾರಿಗೂ ಅದನ್ನು ಓದುವ ವೇಳೆಯಷ್ಟು ಸಹ ಮನೋನಿಗ್ರಹವಿಲ್ಲ. ಬಂದಾತ ಅಂದಿರಬೇಕು. ಯೋಗಿಗಳಿಗೂ ಇಷ್ಟೊಂದು ಮನೋನಿಗ್ರಹವಿಲ್ಲ. ಬಂದಾತ ಅಂದಿರಬೇಕು. ಯೋಗಿಗಳಿಗೂ ಇಷ್ಟೊಂದು ಮನೋನಿಗ್ರಹವಿಲ್ಲವೆ? ಎಂದು. ಬಹು ದುಃಖದ, ಬಹುಸಂತಸದ ಸಮಯವು ನಿಜವಾಗಿಯೂ ಮನೋಮಿತಿಯನ್ನು ಮೀರಿ ಆಕರ್ಷಿಸುವದಷ್ಟೇ?

ಅದರಲ್ಲಿಯೂ ಸಾವಧಾನಿಸಿಕೊಂಡೆವು.

'ಶ್ರೀಗಳವರ ಪ್ರಕೃತಿ ಚಿಂತಾಜನಕ. ಸಮಾಧಿಗೆ ತಯಾರ ಇಡಿರಿ' ಎಂದು ಆ ತಾರಿನ ವಿಷಯ.

ಎಲ್ಲರ ಕೈಕಾಲೇ ಹೋದವು. ಕೈಲಿದ್ದ ಕಾಗದವು ಕಳಚಿ ಬಿದ್ದುದು ಯಾರಿಗೂ ಅರಿವಿಲ್ಲದಾಯ್ತು. ಕಣ್ಣೀರು ಜಲಧಾರೆಯಾಗಿ ಇಳಿಯಹತ್ತಿದವು. ಎಲ್ಲರಿಗೂ ದುಃಖ ವೇಗವು ಅರಿಯದಂತೆ ತನ್ನಿಂದ ತಾನೆ ಮುತ್ತಿತು.

ಮುಂದೇನು? ಅದು ದುಃಖಿಸುತ್ತ ಕೂಡುವ ಸಮಯವಲ್ಲ. ಅಂದು ಯಾರೂ ಆಶ್ರಮದಲ್ಲಿಲ್ಲ. ಆದರೂ ಬಿಡದು ದುಃಖ. ನಾನಂತೂ ಹೇಳಿ ಕೇಳಿ ಸಂಸಾರಿ. ಸುಖ ದುಗುಡ-ದುಮ್ಮಾನಗಳಿಗೊಳಗಾದವು, ಆದರೆ ಯೋಗಸಾಧಕರಾದ, ಗುರು ಕೃಪಾ ಕಟಾಕ್ಷಧೀನರಾದ ಶ್ರೀ ಶಿವಯೋಗಿಗಳವರಿಗೇಕೆ ದುಃಖದ ಕಲ್ಪನೆಯು ಬೇಕು ಎಂದು ನನ್ನ ಮನಸ್ಸಿಗೇ ಪ್ರಶ್ನಿಸಿದೆ. ಅದಕುತ್ತರವಿಷ್ಟೇ ಬಂತು; ಸಂಸಾರ ಲೌಕಿಕ ಮೋಹವಿದ್ದರೆ ಮುಮುಕ್ಷುಗಳಿಗೆ ಪಾರಮಾರ್ಥಿಕ ಮೋಹವಿರಲೇಬೇಕಲ್ಲವೇ? ಎಂದು ಮನಸ್ಸಿಗೆ ಪುನಃ ಪ್ರಶ್ನಿಸಲಾರದೆ ನಿರುತ್ತರನಾದೆ. ಆದರೂ ಶ್ರೀಗಳವರ ಒಂದಲ್ಲ ಎರಡಲ್ಲ ಅನೇಕಾನೇಕ ಮರೆಯದ ನೆನಹುಗಳು ಮನದಲ್ಲಿ ಬಂದು ಹಿಂಡಿ ಹಿಪ್ಪಿ ಮಾಡತೊಡಗಿದವು.

ಎಲ್ಲೋ! ನೀವು ಸಂಸಾರಿಗಳಾದರೇನು? ಇಲ್ಲಿ ಸೇವಕರಾದರೇನು? ಇದು ನಿಮ್ಮ ಭಾಗ್ಯ. ದಿನಾಲು ವ್ಯರ್ಥ ಹರಟೆಯಲ್ಲಿ ಕಳೆಯುವ ಕೆಲ ವೇಳೆಯನ್ನಾದರೂ ಇಲ್ಲಿ ನಡೆಯುವ ಪುರಾಣ-ಪುಣ್ಯಕಥೆಗಳಿಗಾಗಿ ಉಪಯೋಗಿಸಿಕೊಳ್ಳಬಾರದೇ ಅದು ನಿಮ್ಮ ಮುಂದಿನ ಜೀವನದಲ್ಲಿ ಮಾರ್ಪಾಟು ಮಾಡಲಾರದೇ! ಎಂದು ಒಮ್ಮೆ ನಿನ್ನ ಜೀವನದಲ್ಲಿ ಇಲ್ಲಿಗೆ ಬಂದ ಮೇಲೆ ಏನು ಬದಲು ಆಗಿದೆ? ಎಂದು ಮೊದಲಿನ ಹಾಗು ಅಲ್ಲಿದ್ದ ಜೀವನದ ಒರೆಹಚ್ಚಿ ನೋಡಿಸಿ ಹಾದಿತೋರಿದ ಘಟನೆ ಮತ್ತೊಮ್ಮೆ, ಅವರು ಧಾರ್ಮಿಕ-ಸಾಮಾಜಿಕ ರಂಗಗಳಲ್ಲಿ ದೇಹದ ಪರವೆಯಿಲ್ಲದೆ ಮಾಡಿದ ಮಾಡುತ್ತಿದ್ದ ಮಹತ್ಕಾರ್ಯಗಳ ನೆನವು ಇನ್ನೊಮ್ಮೆ, ಅಣಿಮಾದಿ ಅಷ್ಟ ಸಿದ್ಧಿಗಳನ್ನು ತೃಣಕ್ಕೆ ಬಗೆದು ಸಮಾಜ ಸೇವೆಯೇ ಈಶ್ವರ ಸೇವೆಯೆಂದರಿತು ಮಾಡಿದ ವೀರಶೈವ ಮಹಾಸಭೆ ಸ್ಥಾಪನೆ, ಧರ್ಮೋತ್ತೇಜಕ ಸಭೆ, ಪರಳಿ ಪ್ರಕರಣದಂತಹ ಚಿರಸ್ಥಾಯಿ ಘಟನೆಗಳು ನೆನಹು ಬೇರೊಮ್ಮೆ, ಅಧರ್ಮ ಅನಾಚಾರಗಳೇ ತಾಂಡವಾಡುತ್ತಿರುವ ಆ ಸಮಯದಲ್ಲಿ, ಅಷ್ಟಾವರಣದ ಅರಿವಿಲ್ಲದ ಆ ಕಾಲದಲ್ಲಿ ದಶಾಂಗ, ಧೂಪ, ಶಿವದಾರ, ವಿಭೂತಿ, ಪಂಚಸೂತ್ರಲಿಂಗ ಇವೆ ಮೊದಲಾದ ಸಣ್ಣದರದಿಂದ ದೊಡ್ಡ ವಿಷಯಗಳಲ್ಲಿಯೂ ಪರಿಶ್ರಮ ವಹಿಸಿ ದುಡಿದು ಆಚಾರ ಬೀಜವನ್ನು ಬಿತ್ತಿದ ಸ್ಮೃತಿಯು ಒಮ್ಮೊಮ್ಮೆ ಗುರು-ಚರವರ್ಯ ಅಜ್ಞಾನಾಂಧಕಾರ ನಾಶ ಮಾಡಿ ಅವರ ದ್ವೇಷಾಸೂಯೆಗಳನ್ನುಳಿದು. ಅವರಿಗೆ ಯೋಗ, ಶಾಸ್ತ್ರ ಆಗಮಗಳ ಜ್ಞಾನವನ್ನೂ, ಕನ್ನಡದ ಜನತೆಗೆ, ಕನ್ನಡ ಮಾತೆಯ ನಿಜಗುಣ ಶಿವಯೋಗಿಗಳ ಶಾಸ್ತ್ರಗಳ ದ್ವಾರಾ ಮೊಟ್ಟಮೊದಲು ಕನ್ನಡದ ಜ್ಞಾನವನ್ನು ಪುರಾತನರ ಗ್ರಂಥ-ತಾಳ ಓಲೆಗಳ ಮಹತ್ವದ ಅರಿವನ್ನು, ಕರ್ನಾಟಕದಲ್ಲಿಯೇ ಗಾಯನಕಲೆಯ ಶಾಸ್ತ್ರೀಯ ಅರಿವನ್ನು, ಗಾಂಧೀಜಿಗೇ ಖಾದಿಯ ಪಾಠ ಕಲಿಸಿ ಕೊಟ್ಟ ಆ ಯೋಗಿಯ ಮುಂಧೋರಣೆಯನ್ನು, ನೆನೆಯುತ್ತಿರುವ ಮನದ ಚಿತ್ರಪಟವು ಹಲವಾರು ಬಾರಿ ಬಂದು ದುಃಖದ ಮಡಲಿನಲ್ಲಿ ಮುಳುಗೇಳಿಸುತ್ತಿತು. ಇಂತಹ ದುಗುಡದ ಮುಸುಕಿನಲ್ಲಿರುವಾಗಲೇ ಮತ್ತೊಮ್ಮೆ ದನಿ ಬಂತು.

ಅಪ್ಪಾ! ಹೀಗೆ ಎಷ್ಟು ವೇಳೆಗಳೆಯುವುದು! ಎಂದು ಅದಕ್ಕೆ ನಿರುತ್ತರ! ಅದೇ ಮಾತು ಮತ್ತೊಮ್ಮೆ ಆ ವ್ಯಕ್ತಿಯಿಂದ ಬಂತು. ಕರ್ತವ್ಯ ತತ್ಪರರಾಗಲೇ ಬೇಕಾಯಿತು. ಆದೆವು.

ಉಸುಕು-ಸುಣ್ಣ ತರಿಸಿ ಆಯಿತು. ಯೋಗಿಯ ಅನಂತ ಕಾಲ ನಿವಾಸದ ತಯಾರಿಗಾಗಿ ಸಾಧನ ಸಾಮಗ್ರಿಗಳೆಲ್ಲವೂ ಅಣಿಯಾದವು.

ಅದೇ ದಿನ. ಸಾಯಂಕಾಲ ಐದು-ಐದೂವರೆ ಭಾವಿಸಿರಬಹುದು. ಸೂರ್ಯನು ತನ್ನ ಪ್ರಖರತೆಯನ್ನು ಕಡಿಮೆ ಮಾಡಿದ್ದಾನೆ. ಮಂದ ಮಾರುತನು ಆ ಇಬ್ಬದಿ ಗುಡ್ಡದ ಸಂಧಿಯಿಂದಲೂ ಇಣಿಕಿ ಬಿಸಿಲಿನ ಬೇಗೆ ಕಳೆದು ಮನೋಲ್ಲಾಸ ಪಡಿಸುವ ಕಾರ್ಯ ಸಾಧ್ಯವಾದಷ್ಟು ನಡೆಸಿದ್ದಾನೆ. ಆದರೆ ಯಾರಿಗೆ ತಾನೆ ಅರಿವು? ಮನದ ಆನಂದ ಸಮಯಕ್ಕೆ ನೈಸರ್ಗಿಕ ಆನಂದದ ಘಟನೆಗಳು ನಡೆದರೆ ಅಲ್ಲವೇ? ಮನುಷ್ಯನಿಗೆ ಅದರ (ಆನಂದದ) ಅನುಭವವಾಗುವುದು. ಅದರ ಅರಿವು ಯಾರಿಗೂ ಇಲ್ಲ. ಎಲ್ಲರೂ ದುಃಖದ

ಇಳಿಮುಖದಲ್ಲಿ ಒಂದಿಲ್ಲೊಂದು ಒಲ್ಲೆಂದರೂ ಮಾಡಲೇಬೇಕಾದ ಕಾರ್ಯದಲ್ಲಿ ತೊಡಗಿರಲು ಲೈನದ ಕಡೆಯಿಂದ ಸಣ್ಣ ಮೋಟಾರ ಕಾರೊಂದರ ದನಿ. ಎಲ್ಲರ ಕಿವಿ ಆ ಕಡೆಗೆ. ಆದರೆ! ಮತ್ತೆ ನಿಶ್ಶಬ್ದ, ಸ್ತಬ್ಧತೆ ಅನ್ನುವಷ್ಟರಲ್ಲಿಯೇ ಬಂದು ನಿಂತಿತೊಂದು ಕಾರು. ಅಲ್ಲೇನಿದೆ! ಕೇಳಿದರೆ ನೋಡಿದರೆ ಏನಿಲ್ಲ, ಕಕ್ಕಾವಿಕ್ಕಿಯಾಗಿ ನಿಲ್ಲುವಷ್ಟರಲ್ಲಿ ಮತ್ತೊಂದು ಕಾರು ಬಂದು ನಿಂತಿತು. ಅದರಲ್ಲಿರುವನು ಕಾರಣಿಕಯೋಗಿ! ಇಹಲೋಕದ ಕಾರ್ಯ ತೀರಿಸಿ ಪುಷ್ಪದಲ್ಲಿ ಪರಿಮಳವು ಯಾರೂ ಅರಿಯದ ಹಾಗೆ ಸೇರಿವಂತೆ ನಶ್ವರ ದೇಹ ತ್ಯಜಿಸಿ ಶಾಶ್ವತ ಚಿತ್ಕಲೆಯಲ್ಲಿ ಪ್ರವೇಶಿಸಲಿರುವ ಅಮರಯೋಗಿ! ಅರವತ್ತು ಮೂರು ವರ್ಷ ಪ್ರಜ್ವಲಿಸಿ ನಂದುತ್ತಿರುವ ಸಮಾಜಜ್ಯೋತಿ!

ನೋಡಲು ತವಕ. ಅದೆಷ್ಟೋ ಹಂಬಲ. ಆದರೂ ನೋಡಲು ಧೈರ್ಯ ಬಾರದು. ದೂರದಿಂದಲೇ ನೋಡಿ ಮನವಾರೆ ನಮಿಸಿದೆವು. ಉಸಿರ್ಗರೆದೆವು ಕಣ್ಣೀರು ಕರೆದೆವು.

ಮೊದಲೇ ತಯಾರಿಸಿದಂತೆ ಮಡಿಯಿಂದ ಸ್ನಾನ ಪೂಜಾ ಮಾಡಿ ತಯಾರ ಇದ್ದ ಯೋಗಿಗಳು ಅವರ ಸ್ನಾನಾದಿ ಪೂಜಾ ಪಾದೋದಕಕಾಂತ ಕಾರ್ಯಗಳನ್ನೆಸಗಿ ಮಂಗಲ ಗೀತೆಗಳನ್ನು ಅನನ್ಯವಾಗಿ ಹಾಡಹತ್ತಿದರು. ಯಾವುದಕ್ಕೂ ದುಃಖದ ಸಮಯದಲ್ಲಿ ನೋಡಿ! ಅವರ ಅಂತರಾತ್ಮನು ಪರಮಾತ್ಮನನ್ನೊಡಗೂಡುವ ಕಾಲ. ಇಂಥ ಮಂಗಲ ಪ್ರಸಂಗದಲ್ಲಿ ನಮ್ಮೆಲ್ಲರ ವ್ಯಸನ ದೋಷಾದಿಗಳನ್ನು ಬಿಟ್ಟು ಶಿವಧ್ಯಾನಾಸಕ್ತನಾಗಿರುವುದು ಕರ್ತವ್ಯವಲ್ಲವೇ? ನಾವೂ ಶಿವನಾಮ ಪಾಡಹತ್ತಿದೆವು. ಎಲ್ಲರ ಕೆಲಸ ಕಾರ್ಯಗಳಲ್ಲಿಯೂ ಶಿವನಾಮ ಭಜನೆಯ ಕಾರ್ಯ.

ಇಂತು ಶಿವನಾಮ ಪಠನೆಯೆಲ್ಲೆಲ್ಲ ನಡೆದಿರುವಾಗ ಯೋಗಿಯು ಶಿವಧ್ಯಾನಾಸಕ್ತನಾಗಿರುತ್ತಿದ್ದನು.

ಅಂದೇ ಸಂಜೆಯ ೬॥ ೭ ಗಂಟೆಯ ಸಮಯ. ಭಾರತಕ್ಕೆ ಕನ್ನಡ ನಾಡಿಗೆ ವೀರಶೈವ ಧರ್ಮಕ್ಕೆ ಕಠೋರಶಾಸನದ ಸಮಯ. ಜಗದೀಶನು ನಮ್ಮ 'ಸುಕುಮಾರ' ಯೋಗಿಗೆ ಇನ್ನುಸ 'ಇಲ್ಲಿ ನಿನ್ನ ಕೆಲಸವಿಲ್ಲ. ನನ್ನೆಡೆಗೆ ಬಂದು ಬಿಡು' ಎಂದು ಕರೆದ ಸಮಯ. ಆಗ ಯೋಗಿಯು 'ಶಿವಯೋಗಮಂದಿರ ಶಿವಯೋಗಮಂದಿರ ಶಿವಯೋಗಮಂದಿರ ಬಾಳಲಿ. ನೀವು ಬಾಳಿ ಅದನ್ನು ಬದುಕಿಸಿರಿ. ನನಗಿನ್ನೊಮ್ಮೆ ಈ ಶಿವಯೋಗಮಂದಿರಕ್ಕಾಗಿ, ಈ ಸಮಾಜ ಸೇವೆಗಾಗಿ ಜನುಮವಾದರೆ ಆಗಲಿ' ಎಂದು ಸುತ್ತಲೂ ಶಿವನಾಮ ಪಾಡುವ ಯೋಗಿಗಳ ಕರ್ಣಪಟಲದಲ್ಲಿ ನಿನದಿಸುವಂತೆ ಅಂದು ಅಮರಜ್ಯೋತಿಯಲ್ಲಿ ಲೀನವಾಗಿ ಅಮರನಾದ; ಅನಂತನಲ್ಲಿ ಅಂತರ್ಧಾನವಾದ. ಆ ಸಮಯ ಅದೆಂದಿಗೂ ನನ್ನ ಹೃತ್ಪಟಲದಿಂದ ಅಳಿಯಲಾರದು.

ಇನ್ನೇನು ಎರಡು ಮೂರು ದಿನವೇಕೆ? ಹತ್ತೆಂಟು ದಿನಗಳವರೆಗೂ ಆ ಆಶ್ರಮದಲ್ಲಿ ಜನರ ಜಾತ್ರೆ! ಯೋಗಿಗಳಸ, ಭಕ್ತರ, ಬರುವಿಕೆಗೆ ಬಿಡುವಿಲ್ಲ. ಅನವರತವೂ ದಾಸೋಹ ಗಣಾರಾಧನೆಗಳು ಸಾಂಗವಾದವು. ಮುಂದೊಂದು ದಿನ ಚಿತ್ರಕಲ್‌ದುರ್ಗದ ಮಹಾಸನ್ನಿಧಿಯು ದಯಮಾಡಿಸಿ ಆ ಯೋಗಿಯ ನೆನಹಿನಿಂದ ಪರಿತಪಿಸಿದ ದೃಶ್ಯವು ಹೃದಯದ್ರಾವಕವಾಗಿತ್ತು.

ಆದರೆ! ಈಗ ಆ ಕುಮಾರ ಯೋಗಿಯ ಪವಿತ್ರ ದೇಹ! ಮಣ್ಣಿನ್ಲಿ ಮಣ್ಣು ಆತ್ಮವು ಬಯಲಲ್ಲಿ ಬಯಲು ಆಗಿ ಹೋಗಿದೆ. ಆದರೆ ಅವನ ಕೀರ್ತಿಶರೀರ ಕನ್ನಾಡಿಗೆ ವೀರಶೈವ ಧರ್ಮಕ್ಕೆ ಭಾರತಯ ಸರ್ವಧರ್ಮಗಳಿಗೆ ಹಾದಿ ದೀವಿಗೆಯಾಗಿ ಬೆಳಗುತ್ತಿದೆ. ಆ ಬೆಳಕಿನಲ್ಲಿಯೇ ನಾವು ಸಾಗಬೇಕು. ಹಾಯ್, ಇಪ್ಪತ್ತನೆಯ ಶತಮಾನದ ಅಭಿನವ ಬಸವ! ಇನ್ನೊಮ್ಮೆ ಬರಲಾರೆಯಾ! ನಿನ್ನ ಕೆಲಸ ಅಪೂರ್ಣವಾಗಿಲ್ಲವೆ? ಬಂದು ನಿಜಧರ್ಮವನ್ನರುಹಿ ಪೂರ್ಣ ಮಾಡಲಾರೆಯಾ!

■■

## ಶಿವಯೋಗ ಮಂದಿರ : ಹಿನ್ನೆಲೆ

### • ವೀರಶೈವ ಮಹಾಸಭೆಯ ನಾಲ್ಕನೆಯ ಅಧಿವೇಶನ

ಕ್ರಿ.ಶ. ೧೯೦೮ ನೆಯ ಡಿಸೆಂಬರ ೨೮, ೨೯, ೩೦ನೆಯ ದಿನಾಂಕಗಳಲ್ಲಿ ಶ್ರೀ ಮದ್ವೀರಶೈವ ಮಹಾಸಭೆಯ ೪ನೆಯ ಅಧಿವೇಶನವು ಬಾಗಲಕೋಟೆಯಲ್ಲಿ ನೆರೆಯಿತು. ಇದುವರೆಗೆ ಜರುಗಿದ ಮಹಾಸಭೆಯ ಅಧಿವೇಶನಗಳಲ್ಲಿ ಬಾಗಲ-ಕೋಟೆಯ ಅಧಿವೇಶನವು ಬಹಳ ಮಹತ್ವವುಳ್ಳುದು. ಈ ಅಧಿವೇಶನದಲ್ಲಿಯೇ ಹಾನಗಲ್ಲ ಶ್ರೀಗಳವರ ಸತ್ಯಸಂಕಲ್ಪಕ್ಕೆ ವಿಧಾಯಕ ರೂಪ ಬಂದುದು, ಜನತೆಯ ಮನ್ನಣೆ ದೊರೆತುದು. ಶಿವಯೋಗ ಮಂದಿರವನ್ನು ಸ್ಥಾಪಿಸುವ ಮುನ್ನ ಜನತೆಯ ಅಭಿಪ್ರಾಯವನ್ನು ತಿಳಿಯಬೇಕೆಂದೆ ಹಾನಗಲ್ಲ ಮಹಾಸ್ವಾಮಿಗಳವರು ಈ ಅಧಿವೇಶನವನ್ನು ಬಾಗಲಕೋಟೆಯಲ್ಲಿ ಕೂಡುವಂತೆ ಪ್ರೇರಣೆಯನ್ನಿತ್ತರು. ಹಾನಗಲ್ಲ ಶ್ರೀಗಳವರು ಲಿಂ. ಬೀಳೂರ ಶ್ರೀ ಗುರುಬಸವ ಮಹಾಸ್ವಾಮಿಗಳವರ ಮತ್ತು ಭಕ್ತರ ನೆರವಿನಿಂದ ಈ ಅಧಿವೇಶನವನ್ನು ಬಹಳ ಯಶಸ್ವಿಯಾಗಿ ಜರುಗಿಸಿದರು.

ಈ ಅಧಿವೇಶನದ ಸಭಾಮಂದಿರ ತೆಂಗಿನ (ಟೀಕಿನ) ಮಠದ ಬೈಲಿನಲ್ಲಿ ಅಂದವಾಗಿ ರಚಿತವಾಗಿತ್ತು, ೫೦೦೦ ಸಾವಿರ ಜನರು ಕುಳಿತುಕೊಳ್ಳುವಷ್ಟು ವಿಶಾಲವಾಗಿತ್ತು ಅಧ್ಯಕ್ಷರ ವೇದಿಕೆ ಭವ್ಯವಾಗಿತ್ತು ಮಹಾಸಭೆಯ ಕಾರ್ಯಕಲಾಪಗಳು ಪ್ರಾರಂಭ ವಾಗುವ ಮುನ್ನ ಮಹಾ ಶಿವಾನುಭಾವಿಗಳಾದ ವಯೋವೃದ್ಧ ಮಲ್ಲನಕೆರೆಯ ಶ್ರೀ ನಿ.ಪ್ರ. ಚೆನ್ನಬಸವ ಮಹಾಸ್ವಾಮಿಗಳವರು ವೇದಿಕೆಯ ಮೇಲೆ ರಚಿತವಾಗಿದ್ದ ಶೂನ್ಯ ಸಿಂಹಾಸನವನ್ನು ಜಯಜಯಕಾರದೊಂದಿಗೆ ಆರೋಹಿಸಿದರು; ನಂತರ ಶ್ರೀಮಂತ ಲಖಮಗೌಡ ಬಸವಪ್ರಭು ಸರದೇಸಾಯಿ ಸಂಸ್ಥಾನ ಒಂಟಮುರಿ ಅವರು ಅಧ್ಯಕ್ಷ ಪೀಠವನ್ನು ಅಲಂಕರಿಸಿದರು. ಅಂದಿನ ಮಹಾಸಭೆಯ ದೃಶ್ಯ ೧೨ನೆಯ ಶತಮಾನದ ಕಲ್ಯಾಣದಲ್ಲಿಯ ಶಿವಾನುಭವ ಮಂಟಪದ ನೆನಪು ತರುವಂತಿದ್ದಿತು. ಜನತೆಯಲ್ಲಿ ಉತ್ಸಾಹ, ಭಕ್ತಿ-ಭಾವ ಹೊರಹೊಮ್ಮಿದ್ದವು.

ಈ ಅಧಿವೇಶನದ ಕಾರ್ಯಗಳು ಮೂರು ದಿನಗಳವರೆಗೂ ಸಾಂಗವಾಗಿ ಸಾಗಿದವು. ಮೊದಲನೆಯ. ದಿನ : ಸೋಮವಾರ ದಿನಾಂಕ ೨೮-೧೨-೧೯೦೮ ರಂದು ಸ್ವಾಗತಾಧ್ಯಕ್ಷರಾದ ಶ್ರೀ ಘಟಬಸವಪ್ಪ ಮೋಟಗಿ ಅವರು ಭಾಷಣ ಮಾಡುತ್ತ ''ಮಹಾಶಯರೆ, ಈ ಸಭೆಯು ನೆರೆಯಲಿಕ್ಕೆ ಯೋಗ್ಯವಾದ ದೊಡ್ಡ ದೊಡ್ಡ ಪಟ್ಟಣಗಳಿರುತ್ತಿರಲು ಇಲ್ಲಿ ಕೂಡಲಿಕ್ಕೆ ಕಾರಣವೇನೆಂದರೆ ಇದರ ಉತ್ಪಾದಕರಾದ ಶ್ರೀ ನಿರಂಜನ ಹಾನಗಲ್ಲ ಕುಮಾರ ಸ್ವಾಮಿಗಳೂ ಹಾಗೂ ನಮ್ಮ ಮಠದ ಕೆಲವು ಜನ ಮಹನೀಯರೂ ಕೂಡಿ, ಈ ಮಠದ ಗುರುವರ್ಗದಲ್ಲಿ ಶಿವಯೋಗ ನಿರತರಾದವರು ವಿರಳವಿದ್ದು, ಈ ಕೊರತೆಯನ್ನು ದೂರ ಮಾಡುವ ಸದುದ್ದೇಶದಿಂದ ಶಿವಯೋಗ ಮಂದಿರವೆಂಬ ಸಂಸ್ಥೆಯನ್ನು ಸ್ಥಾಪಿಸುವ ಕುರಿತು ಆಲೋಚನಾ ಸಭೆಯನ್ನು ಇದೇ ಸ್ಥಳದಲ್ಲಿ ಕೂಡಿಸ ಬೇಕೆಂದು ಶ್ರೀಯುತ ಪ್ರಭಪ್ಪ ಮಾಳಗಿ ವಕೀಲ ಹುಬ್ಬಳ್ಳಿ ಇವರ ಮುಖಾಂತರ ಸೂಚನೆ ಕಳುಹಿಸಿದ್ದರ ಮೇರೆಗೆ ನಾವು ಆಲೋಚನಾಸಭೆಯನ್ನು ಹೋದ ಕಾರ್ತಿಕ ಶುದ್ಧ ೧೨, ದಿವಸ ಕೂಡಿಸಬೇಕೆಂದು ನಿಶ್ಚಯಿಸಿ, ಪ್ರಸಿದ್ಧ ಪತ್ರಿಕೆಗಳನ್ನು ಸಹ ಸುತ್ತಲು ಕಳುಹಿಸಿದೆವು. ಆದರೆ ಮಹಾಸಭೆಯನ್ನು ಕೂಡಿಸುವ ಕಾಲವು ಅತಿ ಸಮೀಪಿಸಿದಾಗ್ಯೂ ಅದನ್ನು ಎಲ್ಲಿ ಕೂಡಿಸಬೇಕೆಂಬ ನಿರ್ಧಾರವು ಆಗದೆ ಇದ್ದದರಿಂದಲೂ, ಶ್ರೀ ಜಗದ್ಗುರು ಚಿತ್ರಕಲ್ಲದುರ್ಗದ ಮಹಾಸ್ವಾಮಿಗಳ ಬಿರುದಾವಳಿ ಮುಂತಾದ ಹಕ್ಕಿನ ವಿಷಯವಾಗಿ ತೊಂದರೆಯುಂಟಾದ ಸಂಗತಿಯು ತಿಳಿದಿದ್ದರಿಂದಲೂ ನಮ್ಮಿಂದಾದಷ್ಟು ಸಮಾಜ ಸೇವೆಯನ್ನು ಮಾಡಬೇಕೆಂದು ಇಚ್ಛಿಸಿ, ಈ ಮಹಾಸಭೆಯ ವಿಷಯಗಳ ಜೊತೆಗೆ ಶಿವಯೋಗಮಂದಿರದ ವಿಷಯವನ್ನೂ, ಚಿತ್ರಕಲ್ಲ ಸಂಸ್ಥಾನದ ಬಿರುದಾವಳಿಗಳ ವಿಷಯವನ್ನು ಸೇರಿಸಿ, ಚರ್ಚಿಸಿ ನಿರ್ಣಯಿಸು ವುದಕ್ಕಾಗಿ ಈ ಮಹಾಸಭೆಯ ಕಾರ್ಯವನ್ನು ಕೈಕೊಂಡಿದ್ದರಿಂದ, ತಮ್ಮೆಲ್ಲರನ್ನು ಈ ದಿವಸ ಈ ಸಭಾಮಂಟಪದಲ್ಲಿ ಕಾಣುವ ಸುದಿನ ನಮಗೆ ಪ್ರಾಪ್ತವಾಯಿತು''. ಎಂದು ಹೇಳಿ ಎಲ್ಲರಿಗೂ ಸ್ವಾಗತ ಕೋರಿದರು. ನಂತರ ಸಭೆಗೆ ಯಶಕೋರಿ ಆಶೀರ್ವದಿಸಿದ ಚಿತ್ರಕಲ್ಲದುರ್ಗ ಮತ್ತು ಗದಗಿನ ಜಗದ್ಗುರು ಮಹಾಸ್ವಾಮಿಗಳವರ ಪತ್ರಗಳನ್ನು ಓದಲಾಯಿತು. ಗದಗಿನ ಶ್ರೀಮನ್ನಿರಂಜನ ತೋಂಟದಾರ್ಯ ಮಹಾಸ್ವಾಮಿ ಗಳವರು ''ಧಾರ್ಮಿಕ ಸ್ಥಿತಿಯ ಪುರೋಭಿವೃದ್ಧಿಯ ವೀರಶೈವ ಶಾಸ್ತ್ರವಿಹಿತ ಸದಾಚಾರ ವೀರಶೈವ ಮತತತ್ವಗಳ ಪ್ರಸಾರವನ್ನು

ಅವಲಂಬಿಸಿಕೊಂಡಿರುತ್ತದೆ. ವೀರಶೈವ ಧರ್ಮ ಪ್ರವರ್ತಕ ಗುರುಗಳು ಇವುಗಳಲ್ಲಿ ಪರಿಚಯವುಳ್ಳವರಾಗದೆ ಮತದಲ್ಲಿ ವೀರಶೈವಾಚಾರ ವೀರಶೈವ ಮತತತ್ತ್ವಗಳ ಪ್ರಚಾರವಾಗಲಾರದು. ಆದ್ದರಿಂದ ಗುರು ಪೀಠದವರಿಗೆ ಮತಾಚಾರ, ಮತತತ್ತ್ವಗಳ ನೈಪುಣ್ಯವನ್ನು ದೊರಕಿಸಿಕೊಡುವದಕ್ಕೋಸ್ಕರ ಒಂದು ಧಾರ್ಮಿಕ ವಿದ್ಯಾಪ್ರಸಾರಕ ಧನ ಸಂಘವನ್ನು ಕೂಡಿಸಿ ಅದರ ವಿನಿಯೋಗದಿಂದ ಸುವ್ಯವಸ್ಥಿತವಾಗಿ ಪ್ರಚಲಿತವಾಗುವ ಶಿವಯೋಗಮಂದಿರವೆಂಬ ಧಾರ್ಮಿಕ ವಿದ್ಯಾನಿಲಯವನ್ನು ಸ್ಥಾಪಿಸುವ ಅವಶ್ಯಕತೆ'' ಯನ್ನು ಒಪ್ಪಿ ನಿರೂಪ ಕಳಿಸಿ ಹರಸಿದ್ದರು.

ಆ ಮೇಲೆ ಅಧ್ಯಕ್ಷರಾದ ಶ್ರೀಮಂತ ಲಖಮನಗೌಡ ಬಸವಪ್ರಭು, ಬಾರ್–ಅಟ್–ಲಾ ಅವರು ತಮ್ಮನ್ನು ಅಧ್ಯಕ್ಷ ಸ್ಥಾನಕ್ಕೆ ಬರುವಂತೆ ಅನುಗ್ರಹಿಸಿದ ಹಾನಗಲ್ಲ ಶ್ರೀಗಳವರನ್ನು ಅಭಿವಂದಿಸಿ, ಧಾರ್ಮಿಕ ಸುಧಾರಣೆಯ ಬಗೆಗೆ ಮಾತನಾಡುತ್ತ ಸುಶಿಕ್ಷಿತರೂ ಸದಾಚಾರ ಸಂಪನ್ನರೂ ಆದವರನ್ನೇ ಮಠಾಧಿಕಾರಿ ಗಳನ್ನಾಗಿ ಮಾಡಿದರೆ ಅದರಿಂದ ಸಮಾಜಕ್ಕೆ ಲಾಭವಾಗುವ ದೆಂದು ಹೇಳುತ್ತ ಈ ಗುರುವರ್ಗದ ಶಿಕ್ಷಣಕ್ಕೆ ವಿಶೇಷ ಲಕ್ಷ್ಯ ಪೂರೈಸುವಂತೆ ಜನತೆಯಲ್ಲಿ ಮನವಿ ಮಾಡಿ ಕೊಂಡರು; ಮತ್ತು 'ನಾವಾದರೂ ಮಿಶನರಿಗಳಂತೆ ಯತ್ನಿಸಿದರೆ ಸುಲಭವಾಗಿ ಕಾರ್ಯ ಸಿದ್ಧಿಯನ್ನು ಪಡೆಯಬಹುದು' ಎಂದು ಸೂಚನೆಯನ್ನು ಮಾಡಿದರು; 'ವಿದ್ಯೆಯಿಂದ, ಆಚಾರ–ವಿಚಾರಗಳಿಂದ, ನಾಗರಿಕತೆಯಿಂದ, ಸಾಂಪತ್ತಿಕ ಸ್ಥಿತಿಯಿಂದ ಹಿಂದುಳಿದ ನಮ್ಮ ಸಮಾಜ ವನ್ನು ಉನ್ನತಾವಸ್ಥೆಗೆ ತರಲು ನಾವೆಲ್ಲ ಭೇದ ಭಾವಗಳನ್ನು ದೂರ ಮಾಡಿ ಸರ್ವತೋಮುಖವಾಗಿ ಪ್ರಯತ್ನಿಸಬೇಕು' ಎಂದು ಸಮಾಜ ಬಾಂಧವರಲ್ಲಿ ಹುಮ್ಮಸು ಹುಟ್ಟುವಂತೆ ಉದ್ಬೋಧಕವಾಗಿ ಹೇಳಿದರು.

ಮಂಗಳವಾರ ದಿನಾಂಕ ೨೯ ರಂದು ಮಧ್ಯಾಹ್ನ ೧೨–೩೦ ಗಂಟೆಗೆ ಎರಡನೆಯ ದಿನದ ಕಾರ್ಯಗಳು ಪ್ರಾರಂಭವಾದವು. ಒಟ್ಟು ೧೭ ನಿರ್ಣಯಗಳನ್ನು ಸೂಚಿಸಿ ಸರ್ವಾನುಮತದಿಂದ ಪಾಸು ಮಾಡಲಾಯಿತು. ಆ ಸೂಚನೆಗಳೆಲ್ಲ ಸಿಂಹಾಸನಾಧಿ ಪತಿಗಳ ಸುಧಾರಣೆ, ಗುರುವರ್ಗದವರ ಶಿಕ್ಷಣ, ವಿದ್ಯಾ ಪ್ರಸಾರ, ವೀರಶೈವ ಇತಿಹಾಸ– ಸಾಹಿತ್ಯಗಳ ಪ್ರಕಟನೆ, ವ್ಯಾಪಾರ–ಒಕ್ಕಲುತನಗಳ ಅಭಿವೃದ್ಧಿಯ ಯೋಜನೆ ಮೊದಲಾದ ವಿಷಯಗಳನ್ನು ಒಳಗೊಂಡಿದ್ದವು. ಇವುಗಳಲ್ಲಿ ಎರಡನೆಯ ನಿರ್ಣಯವಾದ 'ಶ್ರೀ ಶಿವಯೋಗ ಮಂದಿರ ಸ್ಥಾಪನೆ'ಗೆ ಹೆಚ್ಚಿನ ಮಹತ್ವವನ್ನು ಕೊಡಲಾಗಿತ್ತು.

''ವೀರಶೈವ ಸಮಾಜದಲ್ಲಿ ಸದ್ಯಃ ದುರ್ದೈವದಿಂದ ಧರ್ಮಗ್ಲಾನಿಯುಂಟಾ ಗುತ್ತಿದ್ದು ಅದನ್ನು ಹೋಗಲಾಡಿಸುವುದಕ್ಕೂ, ಶೂನ್ಯ ಸಿಂಹಾಸನಾಧ್ಯಕ್ಷರು, ಪಂಚಸಿಂಹಾಸನಾಧೀಶ್ವರರು, ಪಟ್ಟಚರಮೂರ್ತಿಗಳು ಮೊದಲಾದ ಪೂಜ್ಯರಾದ ಸ್ವಾಮಿಗಳವರಿಗೆ ಯೋಗ್ಯವಾದ ಶಿಕ್ಷಣವನ್ನು ಕೊಟ್ಟು; ಅವರಿಂದ ಸಮಾಜದಲ್ಲಿ ಭಕ್ತಮಾಹೇಶ್ವರರಿಬ್ಬರಿಗೂ ಶಿವಾನುಭವ ಶಾಸ್ತ್ರಜ್ಞಾನವನ್ನು ಪ್ರಸಾರಗೊಳಿಸಲಿಕ್ಕೂ 'ಶ್ರೀ ಶಿವಯೋಗಮಂದಿರ'ವೆಂಬ ಹೆಸರಿನಿಂದ ಒಂದು ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಈ ಮಹಾಸಭೆಯವರು ನಿರ್ಣಯ ಮಾಡುತ್ತಾರೆ''. ಎರಡನೆಯ ನಿರ್ಣಯದ ಪೂರ್ತಿ ಪಾಠವಿಂತಿದ್ದಿತು. ಈ ನಿರ್ಣಯವನ್ನು ಸ್ವಾಗತಿಸಿ ಅನೇಕರು ಭಾಷಣ ಮಾಡಿದರು.

ಮೊದಲು ದಾವಣಗೆರೆಯ ತೆಲಗಿಮಠದ ಶ್ರೀ ಚಂದ್ರಶೇಖರಶಾಸ್ತ್ರಿಗಳು ವಿಚಾರ ಪರಿಪ್ಲುತವಾದ ಭಾಷಣ ಮಾಡಿ ನಿರ್ಣಯವನ್ನು ಸಮರ್ಥಿಸಿದರು. ಅವರು ತಮ್ಮ ಭಾಷಣದಲ್ಲಿ 'ಶಿವಯೋಗ' ಶಬ್ದದ ಮಹತ್ವವನ್ನು ವಿವರಿಸಿ ''ಶಿವಯೋಗ ಮಂದಿರವೆಂಬ ಕಲ್ಪವೃಕ್ಷದ ಆಶ್ರಯದಿಂದ ನಮ್ಮ ಮತವು ಶಿವಯೋಗ, ಬ್ರಹ್ಮಚರ್ಯ ರಕ್ಷಣ, ಸದಾಚಾರ, ಸದ್ವಿದ್ಯಾವೃದ್ಧಿ ಮೊದಲಾದ ತನ್ನ ಇಷ್ಟಾರ್ಥ ಫಲಗಳನ್ನು ಪ್ರಕಾಶಿಸಲು ತುಂಬಾ ಅವಕಾಶವುಂಟಾಗುವುದು'. ಎಂದು ಹೇಳಿ ಶಿವಯೋಗ ಮಂದಿರದ ಸ್ಥಾಪನೆಯ ಅವಶ್ಯಕತೆಯನ್ನು ಸಮರ್ಥಿಸಿದರು.

ತರುವಾಯ, ಶ್ರೀ ದೊಡ್ಡಬಸವಪ್ಪ ಮಾಗಾನಹಳ್ಳಿ (ದಾವಣಗೇರಿ) ಅವರು ''ವಿದ್ಯಾಭ್ಯಾಸ ಸದಾಚಾರವೆಂಬ ಅಗ್ನಿ ಸ್ಪರ್ಶವು ನಮ್ಮ ಬಾಂಧವರಿಗೆ ಸಂಘಟಿತವಾದ ನಿಮಿಷದಲ್ಲಿಯೇ ಪವಿತ್ರರಾಗಿ ಪ್ರಕಾಶಿಸುವರು' ಎಂದು ತಮ್ಮ ದೃಢವಾದ ನಂಬುಗೆ ಯನ್ನು ವ್ಯಕ್ತಮಾಡಿ ''ಗುರುಗಳನ್ನು ವಿದ್ಯಾವಂತರನ್ನಾಗಿ ಮಾಡದ ವಿನಾಃ ನಮ್ಮ ಸಮಾಜದ ಸುಧಾರಣೆಯು ಆಗದು. ಆದಕಾರಣ, ಅದರ ಸಲುವಾಗಿ ಶ್ರೀ ಶಿವಯೋಗಮಂದಿರವನ್ನು ಸ್ಥಾಪಿಸುವದು ಅತ್ಯವಶ್ಯವಾಗಿದೆ''. ಹಿಂದಿನ ವ್ಯಾಖ್ಯಾತೃಗಳನ್ನು ಅನುಮೋದಿಸಿ ಅಭಿಮಾನದಿಂದ ಭಾಷಣ ಮಾಡಿದರು.

ನಂತರ, ಸೊಲ್ಲಾಪುರದ ಶ್ರೀಮಂತ 'ರಾವಸಾಹೇಬ' ಮಲ್ಲಪ್ಪಣ್ಣ ವಾರದ ಅವರು ''ಸಮಾಜದಲ್ಲಿ ಧರ್ಮ ಜಾಗೃತಿ ಯನ್ನುಂಟು ಮಾಡುವ ಉಪಾಯಗಳಲ್ಲಿ ಸಮಾಜದ ಗುರುವರ್ಗವನ್ನು ಸುಧಾರಿಸುವದೆ ಮೊದಲನೆಯ ಉಪಾಯವು. ಅದು ಕಾರ್ಯರೂಪದಲ್ಲಿ ಬರಬೇಕಾದರೆ ಶಿವಯೋಗಮಂದಿರ ಸಂಸ್ಥೆಯ ಸ್ಥಾಪನೆಯಾಗಲೇ ಬೇಕು. ಆ ಸಂಸ್ಥೆಯಲ್ಲಿ ಕೇವಲ ಸಣ್ಣ ವಯಸ್ಸಿನ ಅಂದರೆ ಎಂಟು ವರ್ಷದ ಮೊದಲು ಮಾಡಿ ೨೦ ವರ್ಷದವರೆಗೂ ಇರುವ ವಟುಗಳಿಗೆ....ಶಿಕ್ಷಣವನ್ನು ಕೊಡಬೇಕು.

ಅಲ್ಲಿನ ಅಧಿಕಾರಿಗಳು ಸದಾಚಾರ ಸುಶೀಲ ಸಂಪತ್ತಿ ಇವೇ ಮೊದಲಾದ ಸದ್ಗುಣಗಳುಳ್ಳವರು ಇರಬೇಕು. ನಮ್ಮ ವೀರಶೈವರ ಪುಣ್ಯ ಪರಿಪಾಕದಿಂದ ಇಲ್ಲವೆ ನಮ್ಮ ಸಮಾಜದ ಉನ್ನತಿಯ ಕಾಲವು ಸಮೀಪಿಸಿದುದರಿಂದಲೂ. ನಮ್ಮ ವೀರಶೈವರ ಸದ್ಗುಣಗಳಿಂದಲೂ ಎರಡನೆಯ ಶಿವನೆಂದೆನಿಸಿಕೊಳ್ಳುವ ಪೂಜ್ಯಪಾದರಾಗಿ ಪುಣ್ಯವಶಾತ್ ದೃಗ್ಗೋಚರರಾಗಿರುವ ಮಹನೀಯರಲ್ಲಿ ಅಗ್ರಗಣ್ಯರಾದ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು..... ಇವರ ಪ್ರೇರಣೆಯಿಂದಲೇ ಶಿವಯೋಗ ಮಂದಿರದ ಆಲೋಚನೆಯು ಹೊರಟಿದುದು ಅತ್ಯಂತ ಘನತರವಾಗಿರುವುದು. ಮತ್ತು ಆ ಸಂಸ್ಥೆಯಲ್ಲಿ ಅವರೇ ಸ್ವತಃ ಶಿಕ್ಷಣವನ್ನು ಕೊಡಲಿಕ್ಕೆ ಒಪ್ಪಿಕೊಂಡಿರುವ ಕಾರಣ, ಇಂಥ ಪರಮ ಪೂಜ್ಯರ ಶಿಕ್ಷಣದಿಂದ ಎಂಥ ಸುಶೀಲ ಜನರು ಹೊರಡುವರೆಂಬ ಬಗ್ಗೆ ವಿಚಾರ ಮಾಡುವದೇ ಅವಶ್ಯವಿರುವದಿಲ್ಲ''. ಎಂದು ಹೇಳಿ ನಿರ್ಣಯಕ್ಕೆ ಪೂರ್ಣ ಬೆಂಬಲ ಕೊಟ್ಟರು. ಮತ್ತು ಅವರು ಸಮಾಜದಲ್ಲಿರುವ ಗುರುವರ್ಗದವರ ಸ್ಥಿತಿಯನ್ನು ಕಂಡು ಕಳವಳಗೊಂಡು ''ಯೋಗ್ಯತೆಯುಳ್ಳ ವಟುಗಳನ್ನು ತಯಾರಿಸಿ, ನಮ್ಮ ಗುರುಪೀಠಕ್ಕೆ ಅರ್ಹರನ್ನಾಗಿ ಮಾಡುವದು ನಮ್ಮಗಳ ಕರ್ತವ್ಯವೆಂದು ಭಾವಿಸುತ್ತೇನೆ. ಅಂಥ ಗುಣವುಳ್ಳವರನ್ನು ತಯಾರಿಸಬೇಕಾದರೆ, ನಾವು ಮೇಲೆ ಹೇಳಿದಂತೆ ಶಿವಯೋಗಮಂದಿರವನ್ನು ಸ್ಥಾಪಿಸಿ, ಅದು ನಿರಾತಂಕವಾಗಿ ನಡೆಯುವಂತೆ ಮಾಡಬೇಕು''. ಬರಿಯ ವರ್ಗಣಿ(ಭಿಕ್ಷಾವೃತ್ತಿ)ಯಿಂದ ಮಂದಿರ ನಡೆಯಲಾರದು. ಆದಕ್ಕಾಗಿ ೫೦೦ರೂ.ಗಳಂತೆ ಶೇರು ಕೂಡಿಸಿ ಹತ್ತು ಲಕ್ಷದ ನಿಧಿಯನ್ನು ಸಂಗ್ರಹಿಸಿ ಒಂದು ನೂಲಿನ ಗಿರಣಿಯನ್ನು ಸ್ಥಾಪಿಸಬೇಕು. ಅದರ ಲಾಭದಲ್ಲಿ ಶಿವಯೋಗ ಮಂದಿರ ಮತ್ತು ಉಳಿದ ಮಠೋಪಯೋಗಿ ಕಾರ್ಯಗಳು ನಡೆಯುವಂತೆ ವ್ಯವಸ್ಥೆ ಮಾಡುವ ಬಗೆಗೆ ತಮ್ಮ ಸೂಕ್ತ ಸೂಚನೆಗಳನ್ನು ಮಾಡಿದರಲ್ಲದೆ ಮಠೋದ್ಧಾರಕರಾದ ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳವರಿಂದ ಆ ಕಾರ್ಯ ನಿಸಂಶಯವಾಗಿ ಸಹಜವಾಗಿಯೇ ಕೈಗೂಡುವದು'' ಎಂಬ ತಮ್ಮ ವಿಶ್ವಾಸವನ್ನು ತೋರಿಸಿ ಅಭಿಮಾನ ದಿಂದ ಭಾಷಣ ಮಾಡಿದರು.

ಆ ಮೇಲೆ ಕೊಲ್ಹಾಪುರದ ಶ್ರೀ ವೀರಬಸವಪ್ಪ ಶಿವಲಿಂಗಪ್ಪ ಶ್ರೇಷ್ಠಿ ಬಿ.ಎ. ಅವರು ಮರಾಠಿಯಲ್ಲಿ ಭಾಷಣ ಮಾಡುತ್ತ ಶಿವಯೋಗಮಂದಿರದ ಸ್ಥಾಪನೆಯ ಅವಶ್ಯಕತೆಯನ್ನು ಒತ್ತಿ ಹೇಳಿದರು. ಮತ್ತು ಪ್ರಭುಲಿಂಗಲೀಲೆ, ಪಾರಮೇಶ್ವರಾಗಮ ಮೊದಲಾದ ಪ್ರಮಾಣ ಗ್ರಂಥಗಳಿಂದ ಶಿವಯೋಗ ಮತ್ತು ಶಿವಯೋಗಿಗಳ ಮಹತ್ವವನ್ನು ವಿವೇಚಿಸಿ ಅಂಥ ಶಿವಯೋಗಿಗಳನ್ನು ತಯಾರಿಸುವ ಮಂದಿರವನ್ನು ಸ್ಥಾಪಿಸಲು ಯೋಗ್ಯ ಸ್ಥಾನ ಮತ್ತು ವೆಚ್ಚದ ಅಂದಾಜನ್ನು ಸಭೆಯ ಮುಂದಿಟ್ಟರು.

ನಂತರ ಹುಬ್ಬಳ್ಳಿಯ ಶ್ರೀ ಸಿದ್ಧರಾಮಪ್ಪ ದುಂಡಪ್ಪ ಪಾವಟೆ, ಬಿ.ಎ., ಎಲ್.ಎಲ್.ಬಿ. ಅವರು ಭಾಷಣ ಮಾಡಿದರು. (ನಮ್ಮ ದುರ್ದೈವದಿಂದ ಅದು ಈ ಮಹಾಸಭೆಯ ರಿಪೋರ್ಟಿನಲ್ಲಿ ಅಚ್ಚಾಗಿಲ್ಲ).

ಬಳಿಕ ಬೆಂಗಳೂರ ಶ್ರೀ ಶಿವಪ್ಪ ಶಾಸ್ತ್ರಿಗಳು ಈ ವಿಷಯವನ್ನೇ ಸಮರ್ಥಿಸುತ್ತ ವೀರಶೈವರಲ್ಲಿ ಕಂಡು ಬರುವ ಧರ್ಮಗ್ಲಾನಿಯನ್ನು ಕಳೆಯಲು ಗುರು ಶಿಷ್ಯರಿಬ್ಬರಿಗೂ ಸರಿಯಾದ ಶಿಕ್ಷಣ ದೊರೆಯಬೇಕು. ಆದಕ್ಕಾಗಿ ''ಭಕ್ತಮಾಹೇಶ್ವರ ಬಾಲಕರನ್ನು ಸ್ವಮತ ಪರಿಜ್ಞಾನವನ್ನುಂಟು ಮಾಡುವ ಶಿವಾನುಭವ ಶಾಸ್ತ್ರಗಳಲ್ಲಿ ಚಿಕ್ಕ ವಯಸ್ಸಿನಲ್ಲಿಯೇ ಸುಲಭವಾಗಿ ತಿಳಿಯಪಡಿಸುವ ಗ್ರಂಥಗಳಿಂದ ಪರೀಕ್ಷೆಯ ಮೂಲಕ ಬುದ್ಧಿವಂತರನ್ನು ಮಾಡಿಸುವದಲ್ಲದೆ ಶಿವಯೋಗಮಂದಿರವನ್ನು ಆಚಾರಕ್ಕೆ ಅನುಕೂಲವಾಗಲೆಂದು'' ತುಂಗಭದ್ರಾ ತೀರದಂತಹ ರಮ್ಯಸ್ಥಾನದಲ್ಲಿ ಸ್ಥಾಪಿಸ ಬೇಕೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿ ಅದರ ಸ್ಥಾಪನೆಯಿಂದ ಆಗುವ ಬ್ರಹ್ಮಚರ್ಯ, ಕ್ರಿಯಾಚಾರ, ಸ್ವಮತಶಾಸ್ತ್ರ ಪರಿಣತಿ ಮೊದಲಾದ ಲಾಭಗಳನ್ನು ವಿವರಿಸಿದರು. ಮತ್ತು ಆ ಸಂಸ್ಥೆಯ ವೆಚ್ಚಕ್ಕಾಗಿ ಸಮಾಜದಲ್ಲಿರುವ ಮಠಗಳ ಆಸ್ತಿಯನ್ನು ವಿನಿಯೋಗಿಸಿಕೊಳ್ಳುವಂತೆ ಸೂಚಿಸಿದರು.

ಅನಂತರ, ಹೊಸದುರ್ಗದ ಶ್ರೀ ಜಿ. ಮುರಿಗೆಪ್ಪನವರು ಧಾರ್ಮಿಕ ಶಿಕ್ಷಣದ ಅವಶ್ಯಕತೆ, ವೀರಶೈವ ಧರ್ಮತತ್ವಗಳ ಮಹತ್ವ ಮತ್ತು ಸಮಾಜ ಸುಧಾರಣೆಯ ಉಪಾಯಗಳನ್ನು ಕುರಿತು ವಿವರಿಸಿ ಅವುಗಳ ಸಾಧನೆಗಾಗಿ ಶಿವಯೋಗಮಂದಿರವನ್ನು ಸ್ಥಾಪಿಸಬೇಕೆಂದು ಸಮರ್ಥಿಸಿದರು.

ತರುವಾಯ ಗದುಗಿನ ಶ್ರೀ ಕಲಿಗಣನಾಥಯ್ಯ ಪಂಚಾಕ್ಷರ ಶಾಸ್ತ್ರಿಗಳವರು ಧರ್ಮಗುರುಗಳ ಶಿಕ್ಷಣಾಲಯವನ್ನು ಸ್ಥಾಪಿಸುವ ಶ್ರೀ ಕುಮಾರ ಮಹಾಸ್ವಾಮಿಗಳು ಆ ಆಲಯಕ್ಕೆ 'ಶಿವಯೋಗಮಂದಿರ'ವೆಂದು ಹೆಸರು ಇಟ್ಟ ಸಾರ್ಥಕತೆಯನ್ನು ಹೃದಯಂಗಮವಾಗಿ ಶಾಸ್ತ್ರಾಧಾರಗಳಿಂದ ಪ್ರತಿಪಾದಿಸಿದರು.

''ಶಿವ-ಯೋಗ-ಮಂದಿರ ಈ ಮೂರು ಶಬ್ದಗಳ ಅರ್ಥಗಳನ್ನು ವಿಚಾರಿಸುವದು ಅವಶ್ಯವಿದೆ. ಏಕೆಂದರೆ-ಪದ ಸಮೂಹ ರೂಪವಾದ ವಾಕ್ಯದ ಅರ್ಥವು ಪ್ರತ್ಯೇಕ ಶಬ್ದಾರ್ಥ ಜ್ಞಾನವಿಲ್ಲದೆಯೆ ತಿಳಿಯಲಾರದು. ಆದುದರಿಂದ ವಿಶಿಷ್ಟ ವಾಕ್ಯಾರ್ಥ ಜ್ಞಾನವು ಪ್ರತ್ಯೇಕ ಪದಾರ್ಥ ಜ್ಞಾನವನ್ನು ಅವಲಂಬಿಸಿರುತ್ತದೆ.

ಪ್ರಥಮದಲ್ಲಿ ಶಿವ ಶಬ್ದಾರ್ಥವನ್ನು ನಿರೂಪಿಸುತ್ತೇನೆ. ''ಶೇತೆ ಲೀಯತೆ ಜಗದಸ್ಮಿನ್ನಿತಿ ಶಿವಃ'' ಕೂರ್ಮ ಪಾದಗಳು ಹೊರಗೆ ತೋರಿ ಈ ಕೂರ್ಮದಲ್ಲಿಯೇ ಅಡಗುವಂತೆ, ದೃಶ್ಯಮಾನವಾದ ಸಕಲ ಚರಾಚರ ಪ್ರಪಂಚವು ಯಾವನಲ್ಲಿ ತೋರಿ ಪುನಃ ಅಡಕವಾಗುವದೋ ಅಂತಹ ಜಗದಧಿಷ್ಠಾನನಾದ ಪರಮಾತ್ಮನು ಈ ವ್ಯುತ್ಪತ್ತಿಯಿಂದ ಸಿದ್ಧವಾದ ಶಿವಶಬ್ದಕ್ಕೆ ವಾಚ್ಯ ನಾಗುತ್ತಾನೆ. ಅಥವಾ ''ಯಸ್ಮಿನ್ ಸಜ್ಜನ ಮನಾಂಸಿ ಶೇರತೆ ಯೋ ವಾ ಸಜ್ಜನ ಮನಸ್ಸು ಶೇತೆ ಸೋಽಪಿ ಶಿವಃ'' ಯಾವನಲ್ಲಿ ಸತ್ಪುರುಷರ ಮನಸ್ಸುಗಳು ಸೇರಿಕೊಳ್ಳುತ್ತವೆಯೋ ಅಥವಾ ಯಾವನು ಸಜ್ಜನರ ಮನಸ್ಸುಗಳಲ್ಲಿ ವಾಸ ಮಾಡುತ್ತಾನೆಯೋ ಅಂಥವನು ಶಿವನೆಂದು ಹೇಳಲ್ಪಡುತ್ತಾನೆ. ''ಶಾಮ್ಯತೀತಿ ಶಿವಃ'' ಅಪರಿಚ್ಛಿನ್ನ ಸುಖ ಸ್ವರೂಪನಾದುದರಿಂದ ಯಾವಾಗಲೂ ಶಾಂತಿಭರಿತನಾಗಿರುವನೆಂಬರ್ಥವು ಅಥವಾ ''ಶಿವಮಸ್ಯಾಸ್ತೀತಿ ಶಿವಃ'' ಅಂದರೆ ಕಲ್ಯಾಣಾಶ್ರಯನೆಂಬರ್ಥವು.

ಇನ್ನು ಯೋಗ ಶಬ್ದವನ್ನು ನಿರೂಪಿಸುತ್ತೇನೆ. ''ಯೋಗಶ್ಚಿತ್‌ವೃತ್ತಿನಿರೋಧಃ'' ಅಂದರೆ ನಿರ್ಮಲ ಸತ್ವಗುಣ ಪರಿಣಾಮವಾದ ಚಿತ್ತವೆಂಬ ಅಂತಃಕರಣ ವಿಶೇಷವು ಘಟಪಟಾದಿ ವಿಷಯಗಳಲ್ಲಿ ಸೇರಿ ತದಾಕಾರವಾಗಿ ವರ್ತಿಸೋಣವನ್ನು ತಡೆಯುವದೇ ಯೋಗವೆನಿಸಿಕೊಳ್ಳುವದು. ಎಂದು 'ಯೋಗ ಸೂತ್ರ' ಕಾರನಾದ ಭೋಜನು ಈ ಸೂತ್ರದ ಅರ್ಥವನ್ನು ಹೇಳುತ್ತಾನೆ. 'ಅಥ ಯೋಗಾನುಶಾಸನಂ' ಪ್ರಥಮ ಸೂತ್ರದ ವೃತ್ತಿಯಲ್ಲಿ 'ಯೋಗೋ ಯುಕ್ತಿಃ ಸಮಾಧಾನಂ' ಎಂದು ಅದೇ ವೃತ್ತಿಕಾರನಿಂದ ಹೇಳಲ್ಪಟ್ಟಿದೆ. ಇದರಿಂದ ಮನಸ್ಸಿನ ಶಾಂತತೆಯು ಅಂದರೆ ನಿರ್ವಿಕಾರತ್ವ ಯೋಗವೆಂಬುದಾಗಿಯೇ ಹೇಳಲ್ಪಟ್ಟಂತಾಯಿತು. ಮತ್ತು 'ಯೋಗಃ ಸಂಯೋಗ ಇತ್ಯುಕ್ತೋ ಜೀವಾತ್ಮ ಪರಮಾತ್ಮನೋಃ' ಜೀವಪರಮರ ಸಂಯೋಗವು ಅಂದರೆ 'ಸಮುದ್ರತರಂಗ ನ್ಯಾಯ'ದಿಂದ ಶಿವನಲ್ಲಿ ಅಭಿನ್ನತೆಯನ್ನೈದುವದು ಯೋಗವು ಎಂಬರ್ಥದಿಂದ ಶಿವಜೀವೈಕ್ಯವು ಯೋಗವೆಂದು ಹೇಳಲ್ಪಟ್ಟಂತಾಯಿತು. ಆ ಲಕ್ಷಣದಲ್ಲಿ ವಿಶೇಷಣೀಭೂತವಾದ ಶಿವಶಬ್ದ ಸಾರ್ಥಕ್ಯಕ್ಕೋಸ್ಕರ ಯೋಗ ಶಬ್ದಕ್ಕೆ ಸಂಯೋಗ ಮಾತ್ರಾರ್ಥಪರತ್ವವನ್ನು ಹೇಳಬೇಕು. ಇಂತಹ ಶಿವಯೋಗದ ವ್ಯಾಪ್ತಿಗೆ 'ತತ್ವಜ್ಞಾನಾನ್ಮುಕ್ತಿಃ' ಎಂಬ ಅಭಿಯುಕ್ತ ವಚನದ ಮೇರೆಗೆ ಕಾರಣವಾದ ತತ್ವಜ್ಞಾನದ ಸಂಪಾದನೆಯಲ್ಲಿ ಹೇತುಭೂತವಾದ ಚಿತ್ತಶುದ್ಧಿಯನ್ನುಂಟು ಮಾಡುವ ಶಿವಾಚಾರಗಳು ಕೂಡ ಧರ್ಮಶಬ್ದಾರ್ಥ ನಿರ್ವಚನ ಪ್ರಸ್ತಾವನದಲ್ಲಿ ಉದಾಹರಿಸಲ್ಪಟ್ಟ 'ತಾದರ್ಥ್ಯಾತ್...' ಎಂಬ ನ್ಯಾಯದಿಂದ ಶಿವಯೋಗಗಳೆನಿಸಿಕೊಳ್ಳುತ್ತವೆ. ಪ್ರಕರಣಾನುರೋಧದಿಂದ ಇದೇ ಅರ್ಥವನ್ನೇ ನಾವು ಅವಲಂಬಿಸತಕ್ಕದ್ದು ಯಾಕಂದರೆ–ಶಿವಾಚಾರಗಳ ಶಿವಾನುಭವ ಶಾಸ್ತ್ರಗಳನ್ನು ವೀರಶೈವರಲ್ಲಿ ಹಬ್ಬಿಸುವದೇ ಈ ಶಿವಯೋಗಮಂದಿರವನ್ನು ಸ್ಥಾಪಿಸುವ ಮಹಾಶಯರ ಉದ್ದೇಶ ವಿರುತ್ತದೆ.

ಕ್ರಮ ಪ್ರಾಪ್ತವಾದ ಮಂದಿರ ಶಬ್ದದ ಅರ್ಥವನ್ನು ವಿವರಿಸುತ್ತೇನೆ. 'ಮಾದ್ಯತೆ ಸುಪ್ಯತೆ ಅಸ್ಮಿನ್ ಇತಿ ಮಂದಿರಂ' ಅಂದರೆ ಎಲ್ಲಿ ಜನರು ನಿದ್ರಿಸುವರೋ ಅಥವಾ ಸಂತೋಷಿಸುವರೋ, ಅದು ಮಂದಿರವೆನಿಸಿಕೊಳ್ಳುವುದು. ಅಂದರೆ ವ್ಯವಹಾರ ಮುಂತಾದವುಗಳಿಂದ ಚಿತ್ತಕ್ಕೆ ಉಂಟಾದ ದಣಿವನ್ನು ಹೋಗಲಾಡಿಸಿಕೊಂಡು ಯಾವ ಸ್ಥಲದಲ್ಲಿ ಸಂತೋಷದಿಂದರಿವರೋ, ಅಂತಹ ಸ್ಥಲ ವಿಶೇಷವೇ ಮಂದಿರವೆನ್ನಲ್ಪಡು ವುದು..... ಎಲ್ಲಿ ಶಿವಾಚಾರ ಶಿವಾನುಭವ ವಿಷಯಗಳನ್ನು ಅಭ್ಯಾಸ ಮಾಡುವ ಶಿಷ್ಯರೂ, ಉಪದೇಶಿಕರಾದ ಗುರುಗಳೂ ನಿರ್ವಿಕಾರ ಚಿತ್ತತೆಯಿಂದ ವಾಸ ಮಾಡುವರೋ, ಅಂತಹ ಸ್ಥಾನ ವಿಶೇಷವು ಶಿವಯೋಗ ಮಂದಿರವೆಂದು ಹೇಳಲ್ಪಡುವದು.... ಸಂಸ್ಥೆಯ ಸ್ಥಾಪನೆಯ ಲಾಭವು ಯಾವುದೆಂದರೆ–ನಮ್ಮ ಗುರುವರ್ಗ ದವರಲ್ಲಿ ಬಿಕ್ಕಟ್ಟನ್ನು ಕಾಲಗತಿ ವೈಚಿತ್ರ್ಯದಿಂದ ಸಮಾಜದ ದುಸ್ಥಿತಿಯೆಂಬ ವೃಕ್ಷಕ್ಕೆ ಬೀಜಭೂತಗಳಾದ ಪರಸ್ಪರ ದ್ವೇಷಾಸೂಯೆ ಗಳು ಆವಿರ್ಭವಿಸಿ, ಒಬ್ಬರಿ ಗೊಬ್ಬರನ್ನು ಕೂಡದ ಹಾಗೆ ಮಾಡಿರುತ್ತವೆ. ಗುರುವರ್ಗದವರ ಪರಸ್ಪರ ವಿಭೇದವೇ ಸಮಾಜದ ಅನೈಕ್ಯಕ್ಕೆ ಕಾರಣವಾಗಿದೆ. ಆದುದರಿಂದ ಸಮಾಜದಲ್ಲಿ ಒಕ್ಕಟ್ಟು ಬೆಳೆಯುವುದಕ್ಕಾಗಿ ಗುರುವರ್ಗದವರಲ್ಲಿ ಬೆಳಸುವುದು ಸಮಾಜ ಸುಧಾರಣೆಗೆ ಯೋಗ್ಯವಾದ ಉಪಾಯ ವೆನಿಸಿಕೊಳ್ಳುತ್ತದೆ. ಬೇರೆ ಬೇರೆ ದೇಶದವರು ಆಗಿದ್ದಾಗ್ಯೂ ಒಂದೇ ಸ್ಥಲದಲ್ಲಿ ಕೂಡಿ ಅಭ್ಯಾಸ ಮಾಡೋಣದರಿಂದಲೂ ಮತ್ತು ವ್ಯವಹರಿಸೋಣದರಿಂದಲೂ, ಪರಸ್ಪರ ಮಿತ್ರತ್ವವು ಬೆಳೆಯುವಂತೆ ಎಲ್ಲ ಮಾಹೇಶ್ವರರನ್ನು ಒತ್ತಟ್ಟಿಗೆ ಕೂಡಿಸಿ, ಮತತತ್ವ ಮತಾಚಾರಾದಿಗಳನ್ನು ಅವರಿಗೆ ಬೋಧಿಸಿ, ಮುಂದೆ ಅವರನ್ನೇ ಗುರುಪೀಠಾಧಿ ಕಾರಿಗಳನ್ನಾಗಿ ಮಾಡಿದರೆ, ಅಭ್ಯಾಸ ಕಾಲದಲ್ಲಿ ಪರಸ್ಪರವಾಗಿ ಬೆಳೆದ ಮೈತ್ರಿಯು ವೃದ್ಧಿಗೊಳ್ಳುತ್ತ... ಎಲ್ಲ ವೀರಶೈವರ ಒಕ್ಕಟ್ಟನ್ನು ಹೆಚ್ಚಿಸಲೆಂಬುವದೊಂದು, ಈ ಶಿವಯೋಗಮಂದಿರದ ಸ್ಥಾಪನೋದ್ಯೋಗವನ್ನು ಕೊನೆಮುಟ್ಟಿಸು ದಾಗಿ ಸಮಾಜದ ಮೇಲಿನ ದಯೆಯಿಂದ ಅಹರ್ನಿಶಿಯಲ್ಲಿಯೂ ತ್ರಿಕರಣ ಶುದ್ಧಿ ಪೂರ್ವಕವಾಗಿ ಯತ್ನಿಸುತ್ತಿರುವ ಹಾನಗಲ್ಲ ಶ್ರೀ ಕುಮಾರಸ್ವಾಮಿಗಳ ದೊಡ್ಡ ಉದ್ದೇಶವಿರುತ್ತದೆ. ಈ ಮಹಾ ಕಾರ್ಯವನ್ನು ಕೈಕೊಂಡಿರುವ ಶ್ರೀ ಕುಮಾರಸ್ವಾಮಿಗಳ ಯತ್ನದ ಫಲವು ಶೀಘ್ರವಾಗಿ ಸಮಾಜಕ್ಕೆ ತೋರಲೆಂದು ಶ್ರೀ ಮದಂಬಿಕಾ ಹೃದಯಾರವಿಂದ ಸರೋಜ ಬಾಂಧವನಾದ ಪರಶಿವನನ್ನು ಸವಿನಯ ಭಕ್ತಿಪುರಸ್ಸರವಾಗಿ ಪ್ರಾರ್ಥಿಸಿ'' ಭಾಷಣವನ್ನು ಮುಗಿಸಿದರು.

ಈ ಪ್ರಕಾರ ಭಾಷಣಗಳಾದ ಮೇಲೆ ಅಧ್ಯಕ್ಷರು ಈ ನಿರ್ಣಯದ ಬಗ್ಗೆ ಸಭಿಕರ ಅಭಿಪ್ರಾಯವನ್ನು ಕೇಳಲು ಸರ್ವರೂ ಒಮ್ಮನದಿಂದ ಇದಕ್ಕೆ ತಮ್ಮ ಅನುಮೋದನ ವನ್ನು ಕೊಟ್ಟರು. ಶಿವಯೋಗ ಮಂದಿರದ ಸ್ಥಾಪನೆಯ ನಿರ್ಣಯವನ್ನು ಎಲ್ಲ ವೀರಶೈವ ಬಾಂಧವರೂ ಉತ್ಸಾಹದಿಂದ ಸ್ವಾಗತಿಸಿದರು. ವೀರಶೈವರ ಪ್ರಗತಿಪರ ಧರ್ಮಾಭಿಮಾನವೇ ಶಿವಯೋಗಮಂದಿರದ ರೂಪದಲ್ಲಿ ಮೈದಾಳಿ ಬಂದಿತು.

ಶ್ರೀ ಜಂಗಿನ ಮುರಿಗೆಯ್ಯನವರು ಈ ಅಧಿವೇಶನದ ಸ್ವಾಗತ ಸಮಿತಿಯ ಪ್ರಧಾನ ಕಾರ್ಯದರ್ಶಿಗಳಾಗಿದ್ದರು. ಅವರ ದಕ್ಷತೆ ಮತ್ತು ಕಾರ್ಯಕುಶಲತೆ ಯಿಂದಾಗಿ ಈ ಅಧಿವೇಶನವು ಬಹಳ ಯಶಸ್ವಿಯಾಗಿ ನೆರವೇರಿತು. ಶ್ರೀ ಘಟಬಸವಪ್ಪ ಲಿಂಗಪ್ಪ ಮೋಟಗಿ, ಶ್ರೀ ರುದ್ರಪ್ಪ ಮುರಿಗೆಪ್ಪ ಗೂಗವಾಡ, ಶ್ರೀ ದೊಡ್ಡಪ್ಪ ಬಸವಪ್ಪ ನಾಗರಾಳ, ಶ್ರೀ ಮಹಂತಪ್ಪ ರುದ್ರಪ್ಪ ತಪಶೆಟ್ಟಿ, ಶ್ರೀ ಸಿದ್ದಪ್ಪ ಜಿಗಜಿನ್ನಿ, ಶ್ರೀ ಅಯ್ಯಪ್ಪ ಬ್ಯಾಳಿ. ಶ್ರೀ ವೀರಭದ್ರಪ್ಪ ಕಿಣಗಿ ಮೊದಲಾದ ಬಾಗಲಕೋಟೆಯ ಪ್ರಮುಖರು ಬಹಳ ಉತ್ಸಾಹದಿಂದ ಕಾರ್ಯ ಮಾಡಿ ಅಧಿವೇಶನದ ಯಶಸ್ಸಿಗೆ ಕಾರಣರಾದರು. ಈ ಉತ್ಸವದ ವೈಭವ, ಸಭಾಮಂಟಪದ ರಮಣೀಯ ಶೃಂಗಾರ ಮತ್ತು ಲಿಂಗಾಯತ ಬಂಧುಗಳ ಕಾರ್ಯಕ್ಷಮತೆ, ಆಸ್ಥೆ, ಔದಾರ್ಯ ಸ್ವಧರ್ಮ ಪ್ರೀತಿಗಳನ್ನು ವಿಜಾಪುರದಲ್ಲಿ ಪ್ರಕಟವಾಗುತ್ತಿದ್ದ ಅಂದಿನ ಜನಪ್ರಿಯ ಪತ್ರಿಕೆಯಾದ 'ಕರ್ನಾಟಕ ವೈಭವ'ವು ಮುಕ್ತ ಕಂಠದಿಂದ ಹೊಗಳಿತು. ತಾ. ೨-೧-೧೯೦೯ ರಂದು ಈ ಪತ್ರಿಕೆಯಲ್ಲಿ ಪ್ರಕಟವಾದ ಮಹಾಸಭೆಯ ವಿಷಯಕ ಸುದ್ದಿಯನ್ನು ಓದಿ ಅಂದಿನ ಜನತೆಯ ಉತ್ಸಾಹ ಹುಮ್ಮಸುಗಳನ್ನು ಊಹಿಸಬಹು ದಾಗಿದೆ. ಅದರಂತೆ ಪುಣೆಯಲ್ಲಿ ಪ್ರಕಟವಾಗುತ್ತಿದ್ದ 'ವಂದೇಮಾತರಂ' ಮರಾಠಿ ದಿನ ಪತ್ರಿಕೆಯ ತಾ. ೩೦-೧-೧೯೦೯ರ ವರದಿ ಇಂತಿದೆ.

''ಇಷ್ಟು ದಿವಸಗಳ ವರೆಗೆ ನಿದ್ರಾವಸ್ಥೆಯಲ್ಲಿದ್ದ ಲಿಂಗಾಯತ ಸಮಾಜವು ಈಗ ಜಾಗ್ರತವಾಗಿ ಆತ್ಮ ಸಮಾಜದ ಉನ್ನತಿಯ ಬಗ್ಗೆ ಟೊಂಕ ಕಟ್ಟಿಕೊಂಡು ನಿಂತುದುದನ್ನು ನೋಡಿ ಯಾರಿಗೆ ತಾನೆ ಆನಂದವಾಗಲಿಕ್ಕಿಲ್ಲ! ನಮ್ಮ ಮೃತಪ್ರಾಯ ವಾದ ಕರ್ನಾಟಕ ದೇಶದಲ್ಲಿ ಬಂಗಾಳ, ಮಹಾರಾಷ್ಟ್ರಗಳಂತೆ ಜೀವ ಕಳೆಯು ತುಂಬ ಬೇಕಾದರ ಅದು ಲಿಂಗಾಯತ ಸಮಾಜದವರಿಂದಲೇ. ಯಾಕಂದರೆ-ಕರ್ನಾಟಕದಲ್ಲಿ ಅವರ ಸಂಖ್ಯೆಯೇ ಹೆಚ್ಚಿರುವದಲ್ಲದೆ, ಶ್ರೀಮಂತ ವರ್ಗದಲ್ಲಿಯೂ, ವ್ಯಾಪಾರಸ್ಥರ ವರ್ಗದಲ್ಲಿಯೂ, ಒಕ್ಕಲಿಗರ ವರ್ಗದಲ್ಲಿಯೂ ಅವರ ಅಂಗವೇ ವಿಶೇಷವಾಗಿ ರುವದು. ಇನ್ನು ಈ ಸಮಾಜಕ್ಕೆ ಶಿಕ್ಷಣದ ಸಂಸ್ಕಾರವಷ್ಟು ದೊರೆಯಲಿಕ್ಕೆ ಹತ್ತಿತೆಂದರೆ, ನಮ್ಮ ಕರ್ನಾಟಕದ ಅಭ್ಯುದಯಕ್ಕೆ ಪ್ರಾರಂಭವಾಗುವದು. ಈ ಅವರ ಅಭ್ಯುದಯಕ್ಕೆ ಅಂತಃಕಲಹವು ಮಾತ್ರ ಅಡ್ಡವಾಗತಕ್ಕದ್ದಲ್ಲವೆಂದು ನಾವು ಸೌಮ್ಯವಾಗಿ ಸೂಚಿಸುತ್ತೇವೆ''.

ಇದುವರೆಗೆ ನೆರೆದ ವೀರಶೈವ ಮಹಾಸಭೆಯ ೧೭ ಅಧಿವೇಶನಗಳಲ್ಲಿ ಬಾಗಲಕೋಟೆಯ ಅಧಿವೇಶನದಷ್ಟು ಅಚ್ಚುಕಟ್ಟುತನ, ಜನತೆಯಲ್ಲಿ ಒಮ್ಮನ ಉತ್ಸಾಹಗಳು ಇನ್ನಾವ ಅಧಿವೇಶನದಲ್ಲಿಯೂ ಕಂಡು ಬರಲಿಲ್ಲ. ಅದಕ್ಕೆ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರ ಮಾರ್ಗದರ್ಶನವೇ ಕಾರಣ, ಅಲ್ಲದೆ ಶಿವಯೋಗ ಮಂದಿರದ ಸ್ಥಾಪನೆಗೆ ಈ ಅಧಿವೇಶನ ನಾಂದಿಯಾಗಿ ಸುಂದರವಾಗಿ ನೆರವೇರಿತು.

ಧಾರವಾಡದ ಶ್ರೀ ಗುರುಬಸವಪ್ಪ ಫ. ಹಳಕಟ್ಟಿ (ಕ್ಲಾರ್ಕ, ಎಜ್ಯುಕೇಶನಲ್ ಇನ್ಸ್‌ಪೆಕ್ಟರ ಆಫೀಸ) ಅವರು ಶಿವಯೋಗ ಮಂದಿರದ ಸ್ಥಾಪನೆಯ ಅವಶ್ಯಕತೆಯನ್ನು ಕುರಿತು ಭಾಷಣ ಬರೆದು ಮಹಾಸಭೆಯ ಸ್ವಾಗತ ಸಮಿತಿಗೆ ಕಳಿಸಿದ್ದರು. ಆದರೆ ಅದನ್ನು ಸಭೆಯಲ್ಲಿ ಓದಲು ವಿಷಯ ನಿಯಾಮಕ ಕಮೀಟಿಯಿಂದ ಕಾಲಾವಕಾಶ ವಿಲ್ಲದೆ ಅನುಮತಿ ದೊರೆಯಲಿಲ್ಲ. ಅದನ್ನು ಮಹಾಸಭೆಯ ರಿಪೋರ್ಟಿನ ಪುರವಣಿ ಭಾಗದಲ್ಲಿ ಪ್ರಕಟಿಸಲಾಗಿದೆ. ಈ ಲಿಖಿತ ಭಾಷಣದಲ್ಲಿ ಶ್ರೀ ಹಳಕಟ್ಟಿ ಅವರು ''ಧಾರ್ಮಿಕ ಗುರುಗಳು ವಿಶಾಲ ಹೃದಯರೂ ಸಮಾಜಾಭಿಮಾನಿಗಳೂ ಆಗಿರಲೇ ಬೇಕು. ಆದುದರಿಂದ ಗುರುವರ್ಗದ ಬಾಲಕರಿಗೆ ಚಿಕ್ಕಂದಿನಿಂದಲೇ ತಕ್ಕ ಶಿಕ್ಷಣ ದೊರೆಯುವಂತೆ ಮಾಡಬೇಕಾಗುವದು. ಇದೇ ಮಂದಿರದ ಮೊದಲನೆಯ ಉದ್ದೇಶವು''.
''ನಮ್ಮಲ್ಲಿ ಮಹಾಪುರುಷರು ಉತ್ಪನ್ನರಾಗದ ಹೊರತು, ನಮ್ಮ ಸಮಾಜದ ವರ್ಚಸ್ಸು ಸಾಕಷ್ಟು ಬೆಳೆಯಲಾರದು..... ಸಮಾಜವು ಘನತೆಯನ್ನೈದಲು ಶಿವಯೋಗಿಗಳೇ ಕಾರಣರು.... ಕಾರಣ ಈ ಮಂದಿರದ ವಿದ್ಯಾರ್ಥಿಗಳಲ್ಲಿ ಯೋಗ ಸಾಧನೆಗೆ ತಕ್ಕವರಾದವರನ್ನು ಆರಿಸಿಕೊಂಡು ಅವರಿಗೆ ಈ ಸಾಧನವನ್ನು ಮಾಡಿಸುವ ಒಂದು ವರ್ಗವನ್ನು ಕಲ್ಪಿಸತಕ್ಕದ್ದು. ಯೋಗ ಸಾಧನೆಗೆ ತೊಡಗುವವರ ಮನಸ್ಸು ಸ್ಫಟಿಕದಂತೆ ನಿರ್ಮಲವಾಗಿರಬೇಕಾಗುವುದು. ಪ್ರಪಂಚದ ಮಾಯಾಪಾಶವನ್ನು ಹರಿದು ಬಿಡಬೇಕಾಗುವದು. ಮಾನಸಿಕ ಧೈರ್ಯ, ಸ್ವಾವಲಂಬನ, ಗುರುಭಕ್ತಿ ಇವುಗಳು ಮನಸ್ವೀ ಬಲಿಯಬೇಕಾಗುವುವು. ಲೋಭ, ಮದ, ಮತ್ಸರ ಮೊದಲಾದ ಷಡ್‌ರಿಪುಗಳನ್ನು ಜಯಿಸಬೇಕಾಗುವುದು. ಇಷ್ಟಾದ ಬಳಿಕ ಶಿವಯೋಗ ಸಾಧನಕ್ಕೆ ತಕ್ಕವರಾಗುವರು.

ಆದ್ದರಿಂದ ಈ ಮಂದಿರದೊಳಗಿನ ವಿದ್ಯಾರ್ಥಿಗಳಲ್ಲಿ, ಯೋಗ ಸಾಧನಕ್ಕೆ ತಕ್ಕವರಾರೆಂಬುದನ್ನು ಪರೀಕ್ಷಿಸಿ ಅವರಿಗೆ ಪ್ರತ್ಯೇಕವಾಗಿ ಪದ್ಧತಿಯ ಪ್ರಕಾರ ಶಿಕ್ಷಣ ಕೊಡುವ ವ್ಯವಸ್ಥೆಯಾಗತಕ್ಕುದು. ಹೀಗಾದರೆ ನಮ್ಮ ಗುರುವರ್ಗದೊಳಗಿನ ಆಚಾರ್ಯ ಗುರುಗಳಿಗೂ, ವಿರಕ್ತಗುರುಗಳಿಗೂ ಸರಿಯಾಗಿ ಶಿಕ್ಷಣ ದೊರೆಯಲಿಕ್ಕೆ ಮಾರ್ಗ ವಾಗುವುದು. ಈ ಕ್ರಮವು ಅಬಾಧಿತವಾಗಿ ಸಾಗಿದರೆ, ಕೆಲವು ವರ್ಷಗಳಲ್ಲಿಯೇ ನಮ್ಮಲ್ಲಿ ದೊಡ್ಡ ದೊಡ್ಡ ಶಾಸ್ತ್ರ ಕೋವಿದರೂ, ವೀರಶೈವ ಸಮಾಜೋತ್ಕರ್ಷವೇ ತಮ್ಮ ಉತ್ಕರ್ಷವೆಂದು ತಿಳಿಯುವ ಅಭಿಮಾನಶಾಲಿಗಳಾದ ಧರ್ಮಗುರುಗಳೂ, ವೀರಶೈವ ಧರ್ಮ ತತ್ತ್ವಗಳಲ್ಲಿ ಪಾರಂಗತರಾದ ಬೋಧಕರೂ ಶಿವಯೋಗ ಸಾಧನದ ಸಾಮರ್ಥ್ಯದಿಂದ ಇಡೀ ಜಗತ್ತನ್ನೇ ಉದ್ಧಾರ ಮಾಡುವ ಶಕ್ತಿಯುಳ್ಳ ಮಹತ್ಪುರುಷರೂ ಬೇಕಾದಷ್ಟು ನಿರ್ಮಾಣವಾಗುವರು. ಹೀಗಾದ ಪಕ್ಷದಲ್ಲಿ ನಮ್ಮ ಸಮಾಜವನ್ನು ಈಗ ಮುಸುಕಿರುವ ಅಜ್ಞಾನಾಂಧಕಾರವು ತೊಲಗಿ ಸುತ್ತಲೂ ಪ್ರಕಾಶಮಾನವಾಗುವುದು'' ಎಂದು ಶಿವಯೋಗಮಂದಿರದ ಸ್ಥಾಪನೆಯಿಂದ ಆಗುವ ಎರಡನೆಯ ಅತಿ ಮಹತ್ವದ ಉದ್ದೇಶವನ್ನು ಕುರಿತು ಹೇಳಿದರು; ಮಂದಿರದ ಸ್ಥಾಪನೆಗೆ ಬೇಕಾಗುವ ನಿಧಿಸಂಗ್ರಹ, ಅದರ ಸ್ಥಾನ, ಅಲ್ಲಿಯ ಕಟ್ಟಡಗಳ ನಿರ್ಮಾಣ, ವಿದ್ಯಾರ್ಥಿಗಳ ಚುನಾವಣೆ, ಅಭ್ಯಾಸ ಕ್ರಮ, ಶಿಕ್ಷಕರ ಯೋಜನೆ, ವಿದ್ಯಾರ್ಥಿಗಳ ಪ್ರಸಾದ ವಸತಿಗಳ ವ್ಯವಸ್ಥೆ ಮುಂತಾದ ವಿಷಯಗಳನ್ನು ಚೆನ್ನಾಗಿ ವಿವೇಚಿಸಿ, ಯೋಗ್ಯ ಕಟ್ಟಳೆಗಳನ್ನು ಮಾಡಿ ಅವುಗಳನ್ನು ಕಾರ್ಯಗತಗೊಳಿಸಲು ತಕ್ಕ ಸಮಿತಿಗಳನ್ನು ನೇಮಿಸಿ ಅವುಗಳ ಮುಖಾಂತರವಾಗಿ ಈ ಮಹತ್ಕಾರ್ಯವು ವ್ಯವಸ್ಥಿತ ರೀತಿಯಿಂದ ನಡೆಯುವಂತೆ ಮಾಡಬೇಕೆಂಬ ತಮ್ಮ ವಿಧಾಯಕ ಸೂಚನೆಯನ್ನು ಶ್ರೀ ಹಳಕಟ್ಟಿ ಅವರು ಬಹಳ ಕಳಕಳಿಯಿಂದ ಬರಹ ಮೂಲಕ ತಿಳಿಸಿದ್ದರು. ಈ ಲಿಖಿತ ಭಾಷಣವನ್ನು ಓದಿ ನಾವು ಅಂದಿನ ಶಿಕ್ಷಿತರು ಶಿವಯೋಗಮಂದಿರ ಬಗೆಗೆ ಎಂತಹ ಭವ್ಯ ದಿವ್ಯ ಕನಸನ್ನು ಕಟ್ಟಿದ್ದರೆಂಬುದನ್ನು ಅರಿಯಬಹುದಾಗಿದೆ. ಮಹಾ ಕರ್ಮಯೋಗಿಗಳಾದ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ಸಮಾಜಾಭಿಮಾನಿಗಳ ಈ ಆಶೆ ಆಕಾಂಕ್ಷೆಗಳನ್ನು ಈಡೇರಿಸುವ ಮಹತ್ತರವಾದ ಹೊಣೆಯನ್ನು ಹೊತ್ತು ದಕ್ಷತೆಯಿಂದ ನಿರ್ವಹಿಸಿದರು.

ಬಾಗಲಕೋಟೆಯಲ್ಲಿ ನೆರೆದ 'ಶ್ರೀ ಮದ್ವೀರಶೈವ ಮಹಾಸಭೆಯ ೮ನೆಯ ಅಧಿವೇಶನ'ದ ರಿಪೋರ್ಟಿನ ಆಧಾರದಿಂದ.

■■

# ಚಿತ್ತರಗಿ ಶಿವಯೋಗಿ ತೋರಿದ ಪುನೀತ ಸ್ಥಾನ

ವೀರಶೈವ ಮಹಾಸಭೆಯ ೬ನೆಯ ಅಧಿವೇಶನವು ಬಾಗಲಕೋಟೆಯಲ್ಲಿ ಕೂಡುವ ಮೊದಲೆ ಶಿವಯೋಗ ಮಂದಿರದ ಸ್ಥಾಪನೆಯ ಆಲೋಚನಾ ಕಮೀಟಿಯ ಪ್ರಸಿದ್ಧ ಪತ್ರಿಕೆಗಳನ್ನು ಮಹಾಸಭೆಯ ಹಸ್ತ ಪತ್ರಿಕೆಗಳೊಡನೆ ಎಲ್ಲ ಕಡೆಗೂ ಕಳಿಸಲಾಗಿದ್ದಿತು; ಮಂದಿರದ ಸ್ಥಾಪನೆಯ ವಿಷಯ ಸಾಕಷ್ಟು ಪ್ರಚಾರಗೊಂಡಿತ್ತು ಅಂತೆಯೆ, ಅನೇಕ ಕಡೆಯ ಅಭಿಮಾನಿ ಭಕ್ತರು ತಮ್ಮ ಪ್ರಾಂತಗಳಲ್ಲಿ ಇಂತಹ ಮಹಾಸಂಸ್ಥೆ ಜನ್ಮತಾಳಬೇಕೆಂದು ಹಂಬಲಿಸಿದರು; ಅದರ ಸ್ಥಾಪನೆಗೆ ಯೋಗ್ಯವಾದ ಸ್ಥಳಗಳನ್ನು ಗೊತ್ತುಮಾಡಿ ಅವುಗಳ ನಕಾಶೆಗಳೊಡನೆ ತಮ್ಮ ಸೂಚನೆಗಳನ್ನೂ ಕಳುಹಿಸಿದರು. ಸಮಾಜಾಭಿಮಾನಿ ಭಕ್ತರ ಈ ಎಲ್ಲ ಸೂಚನೆಗಳನ್ನು ಪರಾಮರಿಸಿ ವಿಚಾರಿಸುವದಕ್ಕಾಗಿ ಮಹಾಸಭೆಯ ಅಧಿವೇಶನದ ಮರುದಿನವೇ ಬಾಗಲಕೋಟೆ ಯಲ್ಲಿ ಶಿವಯೋಗಮಂದಿರದ ಆಲೋಚನಾ ಕಮೀಟಿಯವರು ಮಹಾಸಭೆಯ ಮಂಟಪದಲ್ಲಿಯೇ ರಾ. ಬ. ಶ್ರೀಮಂತ ಮಲ್ಲಪ್ಪ ಬಸವಪ್ಪ ವಾರದ ಅಪ್ಪಾಸಾಹೇಬ ರವರ ಅಧ್ಯಕ್ಷತೆಯಲ್ಲಿ ಕೂಡಿ ಶಿವಯೋಗಮಂದಿರದ ಸ್ಥಾಪನೆಯ ಬಗೆಗೆ ಕೂಲಂಕುಷವಾಗಿ ವಿಚಾರ ವಿನಿಮಯ ಮಾಡಿದರು. ಮಂದಿರದ ಸ್ಥಾಪನೆ, ಅದರ ಖರ್ಚು–ವೆಚ್ಚ ಮೊದಲಾದ ವಿಷಯಗಳನ್ನು ಚರ್ಚಿಸಿದರು. ಆದರೆ ಶಿವಯೋಗ ಮಂದಿರವನ್ನು ಎಲ್ಲಿ ಸ್ಥಾಪಿಸಬೇಕೆಂಬುದೊಂದು ದೊಡ್ಡ ಸಮಸ್ಯೆಯಾಗಿ ನಿಂತಿತು. ಶಿವಯೋಗ ಮಂದಿರ ಯಾರಿಗೆ ಬೇಡ ? ಎಲ್ಲರೂ ತಮ್ಮ ಭಾಗದಲ್ಲಿಯೇ ಸ್ಥಾಪಿತವಾಗಲೆಂದು ಬಯಸುವವರೆ ? ಅವರಲ್ಲಿ ಕೆಲವರು ದೊಡ್ಡ ನಗರಗಳಿಗೆ ಹತ್ತಿರವಾಗಿ ಸಂಸ್ಥೆಯು ಸ್ಥಾಪಿತವಾಗಬೇಕೆಂದು ಅನುಕೂಲತೆಯ ದೃಷ್ಟಿಯನ್ನು ಮುಂದು ಮಾಡಿದರು. ಕೆಲವರು ಐತಿಹಾಸಿಕ ಕ್ಷೇತ್ರಗಳಲ್ಲಿ ಮಂದಿರದ ಸ್ಥಾಪನೆಯಾದರೆ ಜನರ ಸಂಪರ್ಕವಿರುವದೆಂದು ಭಾವಿಸಿದ್ದರು! ಈ ಸಮಸ್ಯೆಗೆ ಯಾರಿಂದಲೂ ಪರಿಹಾರ ನೀಡಲಾಗಲಿಲ್ಲ. ಕೊನೆಗೆ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳವರ ಸಲಹೆಯ ಮೇರೆಗೆ ಮಹಾಮಹಿಮರೂ ಪರಮಪೂಜ್ಯರೂ ಶಿವಾನುಭವ ಚರವರ್ಯರೂ ಆದ ಚಿತ್ತರಗಿ (ಇಳಕಲ್ಲ) ಶ್ರೀ ಮಹಾಂತ ಶಿವಯೋಗಿಗಳವರು ತೋರಿದ ಸ್ಥಾನದಲ್ಲಿಯೇ ಶಿವಯೋಗಮಂದಿರವನ್ನು ಸ್ಥಾಪಿಸಬೇಕೆಂಬ ನಿರ್ಣಯಕ್ಕೆ ಎಲ್ಲರೂ ಒಮ್ಮತದಿಂದ ಒಪ್ಪಿದರು.

ಆ ಮೇರೆಗೆ ಚಿತ್ತರಗಿಯ ಶ್ರೀ ಶಿವಯೋಗಿಗಳು ವಿಶೇಷ ಶ್ರಮವಹಿಸಿ ಶಿವಯೋಗಾಶ್ರಮಕ್ಕೆ ತಕ್ಕ ಪ್ರಶಾಂತವಾದ ಸ್ಥಾನವನ್ನು ಹುಡುಕಿಕೊಟ್ಟರು. ಹಾನಗಲ್ಲ ಶ್ರೀಗಳವರು ಅಲ್ಲಿಯೇ ತಮ್ಮ ಯೋಗ ದಂಡವನ್ನು ಊರಿ ಪರ್ಣಕುಟೀರವನ್ನು ಕಟ್ಟಿದರು. ಶಾಲಿವಾಹನ ಶಕೆ ೧೮೩೦ ಕೀಲಕನಾಮ ಸಂವತ್ಸರ ಮಾಘ ಶು. ರಥಸಪ್ತಮಿಯಂದು ಶಿವಯೋಗಮಂದಿರವು ಜನ್ಮ ತಾಳಿದ ಸುದಿನವಾಯಿತು.

ಮಂದಿರಕ್ಕೆ ಯೋಗ್ಯವಾದ ಸ್ಥಾನವನ್ನು ಹುಡುಕವಾಗ ಭಕ್ತರು ತಮಗೆ ಬೇಕಾದ ಸ್ಥಾನಗಳನ್ನು ಆರಿಸಿ ತೋರಿಸಿದಾಗ ನಿಷೇಧ ಸೂಚಕ ಸಂಕೇತಗಳೂ ಅಪಶಕುನಗಳೂ ತೋರಿದವಂತೆ! ಈಗಿನ ಶಿವಯೋಗಮಂದಿರದ ಸ್ಥಳವನ್ನು ಸೂಚಿಸಿದವರು ಸಾಮಾನ್ಯರಲ್ಲ; ಜ್ಞಾನ ದೃಷ್ಟಿಯ ನೆರವಿದ್ದ ಶ್ರೀ ಮಹಾಂತ ಶಿವಯೋಗಿಗಳು. ಅವರು ಬಿಲ್ವ ಶಮೀವೃಕ್ಷಗಳಿಂದ ತುಂಬಿದ ಮಲಾಪಹಾರಿ ನದಿಯ ಪವಿತ್ರ ಮತ್ತು ಪ್ರಶಾಂತ ಪ್ರದೇಶದಲ್ಲಿ, ನಿಸರ್ಗದ ಗರ್ಭಗುಡಿಯಲ್ಲಿ ಶಿವಯೋಗಮಂದಿರ ವಿರಬೇಕಾದುದು ಯೋಗ್ಯವೆಂದು ಗೊತ್ತುಮಾಡಿದರು.

(ಶ್ರೀ ಮದ್ವೀರಶೈವ ಶಿವಯೋಗಮಂದಿರ ಕ್ರಿ.ಶ. ೧೯೧೧ ಮತ್ತು ೧೯೩೪–೧೯೩೫ ನೆಯ ವರ್ಷಗಳ ವಾರ್ಷಿಕ ರಿಪೋರ್ಟುಗಳ ಆಧಾರದಿಂದ).

■■

# ಶಿವಯೋಗಮಂದಿರ ಸ್ಥಾಪನೆ

ಪ್ರಾಚೀನ ಕಾಲದಿಂದಲೂ ಆಶ್ರಮಗಳೆ ಭಾರತೀಯ ಸಂಸ್ಕೃತಿಯ ಕೇಂದ್ರಗಳಾಗಿವೆ. ಆಶ್ರಮಗಳು ವಿಶ್ವಶಾಂತಿಯ ಅಮರ ಸಂದೇಶವನ್ನು ಅನಾದಿ ಕಾಲದಿಂದಲೂ ಬೀರುತ್ತ ಬಂದಿವೆ. ತಪೋವನಗಳ ಸಾತ್ವಿಕ ವಾತಾವರಣ; ಸಹಜ ಸೌಂದರ್ಯಗಳು ಕಾಳಿದಾಸ, ಬಾಣ, ಭವಭೂತಿಯಂತಹ ಮಹಾಕವಿಗಳನ್ನು ಆಕರ್ಷಿಸಿವೆ. ಅವರ ಕಾವ್ಯಗಳಲ್ಲಿಯೆ ನಾವು ಆಶ್ರಮಗಳ ಸಜೀವ ಚಿತ್ರಗಳನ್ನು ಕಾಣುವದು. ನದಿಯ ತೀರದ ಪರ್ಣಕುಟೀರಗಳಲ್ಲಿ ವಾಸವಾಗಿದ್ದು ಋಷಿಗಳು ವಟುಗಳಿಗೆ ಆಧ್ಯಾತ್ಮ ವಿದ್ಯೆಯನ್ನು ಕಲಿಸುತ್ತಿದ್ದರು. ಅಂದಿನ ಬಲಶಾಲಿ ಚಕ್ರವರ್ತಿಗಳೂ ಈ ಋಷಿಗಳ ಆತ್ಮಬಲದ ಮುಂದೆ ತಲೆಬಾಗಿ ನಿಲ್ಲುತ್ತಿದ್ದರು; ಅವರಿಂದಲೇ ಪ್ರೇರಣೆ ಪಡೆದು ಪ್ರಜಾಪಾಲನೆಯನ್ನು ಸರಿಯಾಗಿ ಮಾಡಲು ಸಾಮರ್ಥ್ಯ ಪಡೆಯುತ್ತಿದ್ದರು. ಆಧ್ಯಾತ್ಮ-ಭೌತಿಕ ಬಲಗಳೆರಡೂ ಮಾನವನ ಕಲ್ಯಾಣಕ್ಕೆಂದು ಒಂದುಗೂಡಿದ ಕಾಲವದು. ಅರಮನೆ ಗುರುಮನೆಗಳ ಈ ಸುಂದರ ಸಂಬಂಧ ಭಾರತೀಯ ಸಂಸ್ಕೃತಿಯ ಸಮನ್ವಯ ದೃಷ್ಟಿಯ ಸಜೀವ ಪ್ರತೀಕ.

ಈ ತಪೋವನಗಳಲ್ಲಿಯೇ ಋಷಿ ಮುನಿಗಳು ಯೋಗಿಗಳು ವಾಸವಾಗಿದ್ದು ಧರ್ಮ ಸಂಸ್ಕೃತಿಗಳ ಬೆಳಗನ್ನು ಲೋಕದಲ್ಲಿ ಬೀರುತ್ತಿದ್ದರು. ಪೂರ್ವದಲ್ಲಿ ಸದಾನಂದನೆಂಬ ಶಿವಯೋಗಿಯು ಶ್ರೀಶೈಲದಲ್ಲಿದ್ದು ಶಿವಯೋಗವನ್ನುಪದೇಶಿಸಿ ಶ್ವೇತ ಪಿಂಗಳಾದಿ ಶಿಷ್ಯರನ್ನು ಉದ್ಧರಿಸಿದನು. ಶ್ರೀ ರೇಣುಕಾರಾಧ್ಯ ಮೊದಲಾದ ಆಚಾರ್ಯರು ಮಲಯಾಚಲಾದಿ ದಿವ್ಯ ಸ್ಥಾನಗಳಲ್ಲಿ ಶಿವಯೋಗ ಮಂಟಪದಲ್ಲಿ ಕುಳಿತು ಅಗಸ್ತ್ಯ ಮುಂತಾದ ಮುನಿಗಳಿಗೆ ಷಟ್‌ಸ್ಥಲ ಸಿದ್ಧಾಂತವನ್ನು ಉಪದೇಶಿಸಿದರು. ಮಲ್ಲಿಕಾರ್ಜುನಯೋಗಿ, ಮಂಚಣ ಪಂಡಿತ ಮೊದಲಾದ ಮಹಿಮರು ಮಾದಿರಾಜಾದಿ ಶಿಷ್ಯರಿಗೆ ಶ್ರೀಗಿರಿ ಮೊದಲಾದ ಕ್ಷೇತ್ರಗಳಲ್ಲಿ ವೀರಶೈವ ಸಿದ್ಧಾಂತವನ್ನು ಬೋಧಿಸಿದರು. ಹನ್ನೆರಡನೆಯ ಶತಮಾನದಲ್ಲಿ ಪ್ರಭುದೇವರು, ಬಸವೇಶ್ವರ ದೇವರು, ಚೆನ್ನಬಸವೇಶ್ವರ ಮೊದಲಾದ ಪ್ರಮಥರು ಕಲ್ಯಾಣದಲ್ಲಿಯ ತ್ರಿಪುರಾಂತಕೇಶ್ವರನ ಕೆರೆಯ ತೀರದ ಬಿಲ್ವವನದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ ವೀರಶೈವ ಮತವನ್ನು ಉದ್ಧರಿಸಿದರು, ತತ್ವಪ್ರಸಾರ ಮಾಡಿದರು. ಅಲ್ಲಮಪ್ರಭು ದೇವರು ಶೂನ್ಯ ಸಿಂಹಾಸನಾರೂಢವಾಗಿ ಶರಣರಿಗೆ ಶಿವಾನುಭವ ವನ್ನು ಬೋಧಿಸಿದರು. ಈ ಪ್ರಕಾರ ವಾಗಿ ಲೋಕ ಕಲ್ಯಾಣ ಭಾವನೆಯಿಂದ ಮತ ತತ್ವಗಳ ಪ್ರಸಾರ ಕಾರ್ಯವು ಮೊದಲಿನಿಂದಲೂ ಈ ತಪೋವನಗಳಿಂದಲೇ ನಡೆದು ಬಂದಿವೆ. ಇಂತಹ ಪವಿತ್ರ ಪರಂಪರೆಯಲ್ಲಿ ಬೆಳೆದು ಬಂದ ಸಂಸ್ಥೆ ಶಿವಯೋಗ ಮಂದಿರ. ಶಿವಯೋಗ ಮಂದಿರ ಒಂದು ಆದರ್ಶ ಶಿವಯೋಗಾಶ್ರಮ. ಅಲ್ಲಿ ಮಂತ್ರಾದಿಯೋಗಗಳ ಸಾರಸರ್ವಸ್ವವಾದ ಶಿವಯೋಗದ ಸಾಧನೆಯನ್ನು ಮಾಡಲು ಎಲ್ಲ ಸೌಕರ್ಯಗಳನ್ನು ಒದಗಿಸಲಾಗಿದೆ.

ಶಿವಯೋಗಮಂದಿರವು ಜನ್ಮತಾಳುವ ಮುನ್ನವೇ ೧೫ನೆಯ ಶತಮಾನದಲ್ಲಿದ್ದ ಮಹಾ ಶಿವಶರಣ ಘಟ್ಟಿವಾಳಯ್ಯಗಳು ತಮ್ಮ ಕಾಲಜ್ಞಾನದಲ್ಲಿ ಹೀಗೆ ಭವಿಷ್ಯ ನುಡಿದಿರುವರು.

"ಗಿಡಮಾಗಡಿಯೆಂಬ ಪುರದ ಜಂಗಮದೇವ
ಮೃಡಕಣಾ ಭಿಕ್ಷವ ಬೇಡ್ಯಾನು
ಪೊಡವಿಯೆ ಬಾಗಿ ನೀಡಲು ಆತನು
ದೃಢದಿಂದ ನೀಡಿಕೊಂಡಾನು
ಮಲಾಪಹಾರಿಯ ತೀರದಿ ವಿರಕ್ತ ಜಂಗಮನೊಬ್ಬ
ನಲವಿಂದೆ ಹುಚ್ಚನೆನಿಸ್ಯಾನು
ಲೋಲಜನಗಳು ಹೆಸರನೆ ಇಟ್ಟಾರು
ಸ್ಥಲದೊಳು ಹೊಳಿಸಿಕೊಂಡಾನು"

ಎಂಬ ಕಾಲಜ್ಞಾನವು ಸಾಧಕವಾಗಿದೆ. ಇಲ್ಲಿ ಹೇಳಿರುವಂತೆ ಶಿವಯೋಗಮಂದಿರವು ಬದಾಮಿಯ ಪೂರ್ವಕ್ಕಿರುವ 'ಮಾಗಡಿ' ಎಂಬ ಮಹಾಕೂಟ ಕ್ಷೇತ್ರದ ಪರಿಸರದಲ್ಲಿಯೇ ಸ್ಥಾಪಿತವಾಗಿದೆ. ಅದನ್ನು ಕಟ್ಟಲು ಹಾನಗಲ್ಲ ಶ್ರೀಗಳವರು ನಾಡಿನಲ್ಲೆಲ್ಲ

ಸಂಚರಿಸಿ ಲಕ್ಷಾಂತರ ರೂಪಾಯಿಗಳ ನಿಧಿಯನ್ನು ಕೂಡಿಸಿದರು. ಜನರು ಮುಕ್ತ ಹಸ್ತರಾಗಿ ವಿರಾಗಿಯ ಜೋಳಿಗೆಯನ್ನು ತುಂಬಿದರು. ಶ್ರೀಗಳವರು ತಮ್ಮ ಇಡಿಯ ಆಯುಷ್ಯವನ್ನೇ ಶಿವಯೋಗಮಂದಿರದ ಸರ್ವತೋಮುಖವಾದ ಏಳ್ಗೆಗೆ ಮುಡುಪಾಗಿರಿಸಿದರು; ವೀರವಿರಕ್ತರೆನಿಸಿದರು ಮತ್ತು ಕೊನೆಗೆ ಅಲ್ಲಿಯೇ ಸಮಾಜದ ಹಿತಚಿಂತನೆಯನ್ನು ಮಾಡುತ್ತ ಲಿಂಗೈಕ್ಯ ರಾದರು. ಹೀಗೆ ಶಿವಯೋಗಮಂದಿರದ ಅಸ್ತಿತ್ವಕ್ಕೆ ಪುರಾತನರ ಅಪೇಕ್ಷೆಯೂ, ಈಶ್ವರೀಯ ಸಂಕೇತವೂ ಕಾರಣವಾಗಿದೆ ಯೆಂದು ನಂಬಬಹುದಾಗಿದೆ.

ಪರಮ ತಪಸ್ವಿ ಎಡೆಯೂರ ಸಿದ್ಧಲಿಂಗೇಶ್ವರರ ಶಿಷ್ಯ ಪರಂಪರೆಯಲ್ಲಿಯ ವೈರಾಗ್ಯಶೀಲರೂ, ಮಹಾಶಿವಾನುಭಾವಿಗಳೂ, ಶಿವಯೋಗಿವರ್ಯರೂ, ನಿಜಗುಣರ ತತ್ತ್ವಶಾಸ್ತ್ರಗಳಲ್ಲಿ ಪರಿಣಿತರೂ ಆದ ಲಿಂ. ಎಳಂದೂರ ಶ್ರೀ ಬಸವಲಿಂಗ ಮಹಾಸ್ವಾಮಿಗಳವರು ನಾಡಿನಲ್ಲಿ ಸಂಚರಿಸುವಾಗ ಜನತೆಯಲ್ಲಿ ಧಾರ್ಮಿಕ ಪ್ರವೃತ್ತಿಯು ಹ್ರಾಸಗೊಳ್ಳುತ್ತಿರುವದನ್ನು ಕಂಡು ಮರುಗಿದರು; ಅದರ ಪರಿಹಾರಕ್ಕೆ ಶಿವಯೋಗ ಸಾಧನೆಯೇ ಪರಮೋಪಾಯವೆಂದು ಬಗೆದರು. ಆಗ ಹಾನಗಲ್ಲ ಕುಮಾರ ಮಹಾಸ್ವಾಮಿಗಳು ಸಾಧಕ ಜಿಜ್ಞಾಸುಗಳಾಗಿದ್ದು ತಮ್ಮ ಭವಿಷ್ಯವನ್ನು ರೂಪಿಸಬಲ್ಲ ಸಮರ್ಥ ಗುರುವಿನೊಬ್ಬನ ದರ್ಶನ ಪಡೆಯಲು ಆತುರಗೊಂಡರು. ಹುಬ್ಬಳ್ಳಿಯಲ್ಲಿ ಆಕಸ್ಮಿಕವಾಗಿ ಶ್ರೀ ಎಳಂದೂರ ಮಹಾಶಿವಯೋಗಿಗಳವರ ದರ್ಶನವಾಯಿತು. ಸೂರ್ಯೋದಯದಿಂದ ಕಮಲವು ವಿಕಾಸಗೊಳ್ಳುವಂತೆ ಚಿತ್ಸೂರ್ಯ ಗುರುವರ್ಯನ ದರ್ಶನದಿಂದ ಸಾಧಕ ಶ್ರೀಗಳವರ ಹೃದಯವರಳಿತು. ವಿವೇಕಾನಂದ–ರಾಮಕೃಷ್ಣ ಪರಮಹಂಸರಂತೆ ಈ ಆದರ್ಶ ಗುರುಶಿಷ್ಯರ ಸಮಾಗಮವು ನಾಡಿನ ಭವ್ಯ ಭವಿತವ್ಯವನ್ನು ರೂಪಿಸಿತು.

ಹಾನಗಲ್ಲ ಶ್ರೀಗಳವರು ನಿಜಗುಣ ಶಿವಯೋಗಿಗಳ ತಪೋಭೂಮಿಯಾದ ಶ್ರೀ ಶಂಭುಲಿಂಗನ ಬೆಟ್ಟದಲ್ಲಿ ಗುರುವಿನ ಸೇವೆಮಾಡಿ ಉಪದೇಶ ಪಡೆದು ಮನೋನಿಗ್ರಹಕ್ಕೆ ಸಾಧನವಾದ ಹಠಯೋಗವನ್ನೂ, ವೀರಶೈವ ಧರ್ಮ ತತ್ತ್ವಗಳ ಸಾರಸರ್ವಸ್ವವಾದ ಶಿವಯೋಗವನ್ನೂ ಕ್ರಮವರಿತು ತಿಳಿದು ಆಚರಿಸಿದರು. ಎಳಂದೂರ ಶ್ರೀಗಳವರು, ಹಾನಗಲ್ಲ ಶ್ರೀಗಳವರ ಯೋಗ್ಯತೆಯನ್ನು ಕಂಡು ಮೆಚ್ಚಿ ಅವರಿಗೆ ತಮ್ಮ ಯೋಗದಂಡವನ್ನು ಕೊಟ್ಟು ಆಶೀರ್ವದಿಸಿ ಲಿಂಗೈಕ್ಯರಾದರು. ಎಳಂದೂರ ಶ್ರೀಗಳವರ ಮನದಲ್ಲಿ ಆಳವಾಗಿ ಇಳಿದ 'ಶಿವಯೋಗ ಶಿಕ್ಷಣವನ್ನು ಕೊಡುವ ಮಂದಿರವನ್ನು ಕಟ್ಟಬೇಕೆ'ಂಬ ಪವಿತ್ರ ಸಂಕಲ್ಪದ ಬೇರು ಮಾತ್ರ ಹಾನಗಲ್ಲ ಶ್ರೀಗಳವರ ಮನೋಭೂಮಿಯಲ್ಲಿ ಅಂಕುರಿತವಾಯಿತು. ಹಾನಗಲ್ಲ ಶ್ರೀಗಳವರು ಬಿದರಿ ಕುಮಾರ ಶಿವಯೋಗಿಗಳ ಅನುಗ್ರಹಕ್ಕೆ ಪಾತ್ರರಾಗಿ ಅವರ ಆಗ್ರಹದಂತೆ ಮನವಿಲ್ಲದಿದ್ದರೂ ಹಾನಗಲ್ಲ ಪೀಠವನ್ನು ಅಲಂಕರಿಸಿದರು. ಆದರೂ ಅವರ ಮನಕ್ಕೆ ನೆಮ್ಮದಿಯಿರಲಿಲ್ಲ, ಗುರುವರ್ಯರ ಸಂಕಲ್ಪವನ್ನು ಕಾರ್ಯರೂಪಕ್ಕೆ ತರುವ ಬಗೆ ಎಂತು ಎಂದು ಕನವರಿಸುತ್ತಿದ್ದರು. ಅದಕ್ಕೆ ಕಾಲ ಹದವಾಗಿ ಬಂದಿತು. ಬಾಗಲಕೋಟೆಯ ವೈರಾಗ್ಯದ ಮಲ್ಲಣಾರ್ಯರು ಹಾನಗಲ್ಲಿಗೆ ಬಂದರು; ಮನೋನಿಗ್ರಹಕ್ಕೆ ಶಿವಯೋಗವೇ ಪರಮ ಸಾಧನವೆಂದು ಶ್ರೀಗಳವರಿಂದ ಕೇಳಿ, ಕಂಡು ಕಡು ಸಂತಸಪಟ್ಟರು. ಸಮಾಜದಲ್ಲಿಯ ಅಜ್ಞತೆಯ ಕತ್ತಲೆಯನ್ನು ಕಳೆಯುವ ಉಪಾಯಗಳನ್ನು ಯೋಚಿಸಿದರು. ಪರಸ್ಪರ ವಿಚಾರ ವಿನಿಮಯವಾಗಿ ಈರ್ವರೂ ಕೂಡಿ ಶಿವಯೋಗ ಜ್ಞಾನವನ್ನು ಗುರು–ವಿರಕ್ತರಿಗೂ ಮತ್ತು ಮುಮುಕ್ಷುಗಳಿಗೂ ಬೋಧಿಸುವ ಸಂಸ್ಥೆಯೊಂದನ್ನು ಅವಶ್ಯವಾಗಿ ಸ್ಥಾಪಿಸಬೇಕೆಂದು ಸಂಕಲ್ಪ ಮಾಡಿದರು. ಮಲ್ಲಣಾರ್ಯರು ಅದಕ್ಕಾಗಿ ಜೋಳಿಗೆಯನ್ನು ಹಾಕುವದಾಗಿ ಪ್ರತಿಜ್ಞೆ ಮಾಡಿದರು. ಆದರೆ ಮಲ್ಲಣಾರ್ಯರು ಲಿಂಗೈಕ್ಯರಾದರು. ಹಾನಗಲ್ಲ ಶ್ರೀಗಳವರು ಧೈರ್ಯದಿಂದ ಗುರುಗಳ ಸಂಕಲ್ಪವನ್ನು ಶ್ರೀ ಮಲ್ಲಣಾರ್ಯರ ಪ್ರತಿಜ್ಞೆಯನ್ನು ಕೈಗೂಡಿಸಲು ದೃಢ ನಿಶ್ಚಯ ಮಾಡಿದರು. ಅನಂತಪುರ–ಕೆಳದಿ ಯಲ್ಲಿ ನಡೆದ ಮಂಟಪ ಪೂಜಾ ಮಹೋತ್ಸವದಲ್ಲಿ ಹಾವೇರಿ ಶ್ರೀಗಳವರೊಡನೆ ವಿಚಾರಿಸಿ ಹಾನಗಲ್ಲ ಶ್ರೀಗಳವರು ಶಿವಯೋಗಮಂದಿರವನ್ನು ಸ್ಥಾಪಿಸಲು ಜೋಳಿಗೆ ಹಾಕುವ ದೃಢ ನಿರ್ಧಾರವನ್ನು ಮಾಡಿದರು. ಶ್ರೀಗಳವರ ಪ್ರೇರಣೆಯಂತೆ ೧೯೦೮ ರಲ್ಲಿ ಬಾಗಲಕೋಟೆಯ ಅ.ಭಾ. ವೀರಶೈವ ಮಹಾಸಭೆಯಲ್ಲಿ ಸರ್ವಾನುಮತದಿಂದ ಶಿವಯೋಗಮಂದಿರ ಸ್ಥಾಪನೆಯಾಗ ಬೇಕೆಂದು ನಿರ್ಣಯಿಸಲಾಯಿತು.

■■

# ಶ್ರೀ ಶಿವಯೋಗಮಂದಿರ ಸೃಷ್ಟಿ-ದೃಷ್ಟಿ

• ಶ್ರೀ ಜ.ಚ.ನಿ.

ವ್ಯಕ್ತಿ ವಿಕಾಸದ ಮುಖದಿಂದ ಸಾಮಾಜಿಕ ವಿಕಾಸ ಕ್ಷೇತ್ರದಲ್ಲಿ ಸಾಹಿತ್ಯ ಪ್ರಕಾಶ ಪ್ರಪಂಚದಲ್ಲಿ ಸಂಸ್ಥೆಗಳ ಸ್ಥಾನ ಬಹು ಎತ್ತರದೆಂಬುದಕ್ಕೆ ಸತ್ಯ ಸಾಕ್ಷಿಯಾಗಿ ನಿತ್ಯದೀಕ್ಷೆಗೊಂಡು ನಿಂತಿದೆ. ಶಿವಯೋಗಮಂದಿರ. ವ್ಯಕ್ತಿವಿಕಾಸ ಸಾಧನಗಳು ಅನಂತ. ಅವುಗಳಲ್ಲಿ ಮುಖ್ಯವಾಗಿ ಎರಡು ಬಗೆ; ಒಂದು ಭೌತಿಕ, ಇನ್ನೊಂದು ಆಧ್ಯಾತ್ಮಿಕ. ಮೊದಲಿನದು ಗೌಣ, ಸಹಕಾರಿ. ಎರಡನೆಯದು ಮುಖ್ಯ ಫಲಕಾರಿ. ಇದನ್ನು ಚೆನ್ನಾಗಿ ನಿಟ್ಟಿಸಿ ಮಿಗಿಲಾಗಿ ಅಧ್ಯಾತ್ಮಿಕ ಸಾಧನೆಗಾಗಿಯೆ ಮೀಸಲಾಗಿ ಮೈಯ್ವೆತ್ತಿದೆ ಶಿವಯೋಗಮಂದಿರ.

ಶಿವಯೋಗಮಂದಿರ ಮೈದಾಳಿ ಇಂದಿಗೆ ಅಯ್ವತ್ತು ವರುಷಗಳಾದವು. ವ್ಯಕ್ತಿ ಅಥವಾ ಸಂಸ್ಥೆಗಳ ಜೀವನದಲ್ಲಿ ಈ ಮಧ್ಯಬಿಂದುವಿನ ವಯಸ್ಸು ವಿಶೇಷ ವರ್ಚಸ್ಸುಳ್ಳದು; ಸುವರ್ಣ ವರ್ಣವುಳ್ಳದು. ಸ್ವಾನುಭವ ಸುಮಧುರ ಫಲಭರಿತವಾದುದು.

ಶಿವಯೋಗಮಂದಿರ ಸಂಸ್ಥೆಯ ಗುರಿ ಅದರ ಹೆಸರಿನಲ್ಲಿಯೆ ಹೆಪ್ಪುಗಟ್ಟಿದೆ. ಶಿವಯೋಗ ಸಂಪತ್ತನ್ನು ತನ್ನ ಈ ಐವತ್ತು ವಯಸ್ಸಿನಲ್ಲಿ ಹಲವಾರು ವ್ಯಕ್ತಿಗಳಲ್ಲಿ ತುಂಬಿ ತುಳುಕಿಸಿದೆ; ಸಾಹಿತ್ಯ ಸಂಪತ್ತನ್ನು ಸೂರೆಗೊಂಡಿದೆ; ಸಂಗೀತರಸ ಗಂಗೆಯನ್ನು ಹರಿಯಿಸಿದೆ; ಸಾಮಾಜಿಕ ಸುಧಾರಣೆಗಳನ್ನು ಎಸಗಿದೆ.

ಮಾನವನ ಮುನ್ನಡೆಗೆ ಮನೋವಿಕಾಸವೆ ಮೂಲ. ಆ ಮನೋವಿಕಾಸಕ್ಕೆ ಮನೋನಿರೋಧವೆ ಮೂಲ. ಈ ಮೂಲವನ್ನರಿತು ಈ ಸಂಸ್ಥೆ ಇದಕ್ಕಾಗಿ ಹೆಣಗಿತು; ಹೆಣಗುತಿದೆ. 'ಚಿತ್ತಚಾಂಚಲ್ಯವನ್ನು ಅಡಗಿಸಿ ಆ ನಿಶ್ಚಲ ಚಿತ್ತದಲ್ಲಿ ಮಂಗಲ ನೆನಹು ನಿಲ್ಲುವುದೆ ಶಿವಯೋಗ; ಆ ನೆನಹು ಮಣಿಹದಲ್ಲಿ ಮೂಡಿ ಬರುವುದೆ ಮಂದಿರ. ಅಂತಹ ಶಿವಯೋಗದ ಮಂಗಳ ಪ್ರಭಾವದಿಂದ ಪ್ರಜ್ವಲಿಸುವ ಅಚ್ಚಳಿಯದ ಜಂಗಮ ಮಂದಿರಗಳನ್ನು ಜನಾಂಗಕ್ಕೆ ತೋರುವುದೆ– ಒಳಿತಾದ ವಾತಾವರಣವನ್ನು ಬೀರುವದೆ 'ಶಿವಯೋಗಮಂದಿರ' ಹೃದಯ ಧ್ಯೇಯ. ಆ 'ಶಿವಯೋಗದ ಮಂದಿರ'ದಲ್ಲಿ ಅಂತಹ ಅನೇಕ ದಿವ್ಯ ವ್ಯಕ್ತಿಗಳು ತಯಾರಾದರು. ಅವರೇ ಈ ಮಂದಿರದ ದೇವಮೂರ್ತಿಗಳು, ದಿವ್ಯಮೂರ್ತಿಗಳು.

ಶಿವಯೋಗಮಂದಿರದ ಹೆಗ್ಗುರಿಯು ಅದರ ಹೆಸರಿನಲ್ಲಿಯೆ ಹೆಪ್ಪುಗಟ್ಟಿರುವಂತೆ ಅದರ ಹೆಚ್ಚಳಿಕೆಯು ಅದರಲ್ಲಿಯೆ ಇದೆ. ಶಿವಯೋಗಕ್ಕಿಂತ ಶ್ರೇಷ್ಠ ಯೋಗವಿಲ್ಲ. ಉಳಿದ ನಾಲ್ಕು ಯೋಗಗಳು ಮಾನವನ ಉಪಾಂಗ ಸಾಧಕಗಳೇ ಹೊರತು ಮುಖ್ಯಾಂಗ ಸಾಧಕಗಳಲ್ಲ. ಈ ಅರ್ಥ ಈ ಅಭಿಪ್ರಾಯ ಅವುಗಳ ಹೆಸರುಗಳಲ್ಲಿಯೆ ಹೆಚ್ಚು ನಿಚ್ಚಳವಾಗಿದೆ. ಹಠಯೋಗ ಶರೀರಶುದ್ಧಿಗೆ, ಶುದ್ಧ ಶರೀರ ಪ್ರಾಪ್ತಿಗೆ ಮೀಸಲು. ಮಂತ್ರಯೋಗ ಮಾತಿನ ಶುದ್ಧಿಗೆ, ಶುದ್ಧ ಮಾತಿನ ಪ್ರಾಪ್ತಿಗೆ ಮೀಸಲು. ಲಯಯೋಗ ಉಸಿರಿನ ಶುದ್ಧಿಗೆ, ಆ ಶುದ್ಧ ಉಸಿರಿನ ಪ್ರಾಪ್ತಿಗೆ ಮೀಸಲು. ರಾಜಯೋಗ ಮೈ–ಮಾತು–ಉಸಿರುಗಳಿಗೆ ರಾಜನಾದ 'ಜೀವ'ನ ಶುದ್ಧಿಗೆ. ಶುದ್ಧ ಜೀವಪ್ರಾಪ್ತಿಗೆ ತವರು. ಆ ಶುದ್ಧಾತ್ಮನು ಪರಮಾತ್ಮನಾಗುವುದೆ ಶಿವಯೋಗ. ಇಂತಹ ಅಗ್ಗಳದ ಶಿವಯೋಗಕ್ಕೆ ಮಂದಿರ ಮಂಗಳಸ್ಥಾನ ಶಿವಯೋಗಮಂದಿರ. ಹೆಸರಿನ ಹಿರಿಮೆಗೆ ಇದಕ್ಕಿಂತ ಹೆಚ್ಚಿನ ಮಾತು ಬೇಕಿಲ್ಲ.

ಶಿವ ಅಂದರೆ ಮಂಗಳ ಮತ್ತು ಮಹಾದೇವ. ಆ ಮಂಗಳ ಪ್ರಾಪ್ತಿಗೆ ಮಂದಿರ ಶಿವಯೋಗಮಂದಿರ. ಎರಡನೆಯ ಅರ್ಥ ಪರಮಾತ್ಮ ಆ ಪರಮಾತ್ಮನ ಸತ್ಯ; ನಿತ್ಯ ಚಿದಾನಂದರೂಪ; ಪರಿಪೂರ್ಣ ಸ್ವರೂಪ. ಆ ಸಚ್ಚಿದಾನಂದ ನಿತ್ಯ ಪರಿಪೂರ್ಣರೂಪ ಶಿವನ ಸಂಪ್ರಾಪ್ತಿಯೆ ಸಾಮರಸ್ಯವೆ ಯೋಗ. ಆ ಶಿವಸಾಮರಸ್ಯ ಸಾಧನೆಯನ್ನು ಸಂಪಾದಿಸಿ ಕೊಡುವುದೆ ಶಿವಯೋಗ. ಅಂತಹ ಮಹತ್ತಿನ ಶಿವಯೋಗಕ್ಕೆ ಮಂಗಳ ಸ್ಥಾನ 'ಶಿವಯೋಗ ಮಂದಿರ'.

ಶಿವಯೋಗಮಂದಿರವು ಸದುದ್ದೇಶದಿಂದ ಸ್ಥಾಪಿತವಾದ ಸಂಸ್ಥೆ. ಸದ್ಧರ್ಮ ಪ್ರಸಾರಕ್ಕಾಗಿ ಸಂಸ್ಥಾಪಿತವಾದ ಸಂಸ್ಥೆ. ಸಂಘ ಜೀವಿಗಳ–ಸಜ್ಜನ ಜೀವನವುಳ್ಳವರ ಮುಖಾಂತರ ಸಮಾಜ ಸುಧಾರಣೆಗಾಗಿ ಸೃಷ್ಟಿಸಲ್ಪಟ್ಟ ಸಂಸ್ಥೆ. ನಿರ್ದಿಷ್ಟವೂ ನಿರ್ದುಷ್ಟವೂ ಆದ ಧ್ಯೇಯ ಸಾಧನೆಗಾಗಿ ಸಂವೃದ್ಧಿಗೊಳಿಸಿದ ಸಂಸ್ಥೆ. ಕುಮಾರ ಯೋಗಿಯ ಕಾರಣಿಕತೆಯ ಕುರುಹಾಗಿ ರೂಪುಗೊಂಡ ಸಂಸ್ಥೆ. ಸಮಾಜ ಮಂದಿರದ ಸುವರ್ಣ ಕಳಸವಾಗಿ ಕಂಗೊಳಿಸಿದ ಸಂಸ್ಥೆ. ಶಿವಯೋಗಮಂದಿರವು ಶಿವಯೋಗಕ್ಕೆ ಮಂದಿರವಾದಂತೆ ಸಮಾಜವೆಂಬ ಶಿವನಿಗೂ ಸಾಧಕರೆಂಬ ಶಿವಪ್ರಮಥರಿಗೂ ಮಂದಿರವಾಗಿ ಸೃಷ್ಟಿಯಾದ ಸಂಸ್ಥೆ. ಆಶ್ರಮಗಳ ಧ್ಯೇಯಕ್ಕಿಂತಲೂ

ವಿಶಾಲವಾದ ಧ್ಯೇಯವುಳ್ಳ ಏಕೈಕ ಸಂಸ್ಥೆ. ಇದನ್ನು ಹೋಲುವ ಸಂಸ್ಥೆ ಸಮಾಜದಲ್ಲಿ ಹಿಂದಿಲ್ಲ, ಇಂದಿಲ್ಲ; ಮುಂದೆ ಹೇಗೋ! ಕ್ರೈಸ್ತರ ಚರ್ಚುಗಳಿಗಿಂತ, ಬೌದ್ಧರ ವಿಹಾರಗಳಿಗಿಂತ ವಿಲಕ್ಷಣವಾದ ಸಂಸ್ಥೆಯಿದೆಂದರೆ ಅಲ್ಲಗಳೆಯುವಂತಿಲ್ಲ.

ಎಳೆ ಮಕ್ಕಳ ತಿಳಿ ಮನಸ್ಸನ್ನು ಶಿವಯೋಗದಲ್ಲಿ ಎರಕಹೊಯ್ದು ಮುದ್ದುರೂಹಿನ ಮಂಗಳ ಮೂರ್ತಿಗಳನ್ನಾಗಿ ತಯಾರಿಸುವ ಪಡಿಯಚ್ಚು ಈ ಸಂಸ್ಥೆ. ಪರಿಶುದ್ಧ ಆಹಾರ, ಪರಿಶುದ್ಧ ವಿಹಾರ, ಪರಿಶುದ್ಧ ವಿಚಾರ, ಪರಿಶುದ್ಧ ಆಚಾರಗಳನ್ನು ಅಲ್ಲಿನ ಸಾಧಕರಿಗೆ ಸಣ್ಣವಟುಗಳಿಗೆ ಪ್ರಸಾದಿಸಿತು ಈ ಸಂಸ್ಥೆ. ಪ್ರಾಪಂಚಿಕ ವಾತಾವರಣಕ್ಕೆ ಅಲ್ಲಿ ತೃಣವಾದರೂ ಅನುವಿಲ್ಲ. ಶಿವಭಜನೆ, ಶಿವಪೂಜೆ, ಸ್ವಾಧ್ಯಾಯ, ಸುಶ್ರವಣ, ಯೋಗ ಸಾಧನೆಗಳಲ್ಲಿ ಎಲ್ಲರೂ ಎಲ್ಲ ಕಾಲದಲ್ಲಿ ತಲ್ಲೀನರಾಗಿರುವರು. ಸಾಧನೆಯು ಸಿದ್ಧಿಗೇರಿದ ಮೇಲೆ, ಸಾಧಕರು ಶಿವಯೋಗಿಗಳಾದ ಮೇಲೆ ಮಠಾಧಿಪತಿಗಳಾಗಿಯೋ ಆಗದೆಯೋ ಸಾಮಾಜಿಕ ಸುಧಾರಣೆಗೆ ಕಂಕಣಬದ್ಧರಾಗಬೇಕು, ಸಾಂಸ್ಕೃತಿಕ ಆವಿಷ್ಕರಣಕ್ಕೆ ಸಂಸಿದ್ಧರಾಗಬೇಕು.

ಈ ರೀತಿ ವ್ಯಷ್ಟಿ–ಸಮಷ್ಟಿ ಜೀವನೋನ್ನತಿಯ ಗುರಿಗೆ ಗಮನವಿತ್ತು ಜೀವನವನ್ನೇ ಅದಕ್ಕಾಗಿ ಮುಡಿಪಿಟ್ಟವರಿಗೆ ಮಾತ್ರ ಅಲ್ಲಿನ ವಾಸಕ್ಕೆ ಪ್ರವೇಶ; ಅಲ್ಲಿನ ಸಾಧನೆಗೆ ಅವಕಾಶ. ಅಲ್ಲಿ ಪ್ರವೇಶ ಪಡೆದವರೆಲ್ಲರೂ ತಂತಮ್ಮ ಮನೆ ಮಾರುಗಳ– ಆಸ್ತಿಪಾಸ್ತಿಗಳ–ಬಂಧುಬಳಗದ–ತಂದೆತಾಯಿಗಳ ಮೋಹ ಮಮಕಾರಗಳನ್ನು ಸಂಪೂರ್ಣ ಮುರಿದಿಕ್ಕಿರಬೇಕು; ಇಲ್ಲವೆ ಮರೆ ಮಾಡಿರಬೇಕು. (ಶಿವಯೋಗ ಮಂದಿರವೆ ತನ್ನ ಜನ್ಮಭೂಮಿ; ಹಾನಗಲ್ಲ ಶ್ರೀ ಕುಮಾರಯೋಗಿಯೇ ತನ್ನ ಸ್ವಾಮಿ). ತನಗೆ ಬೇರಿನ್ನು ಯಾವ ಪೂರ್ವಾಶ್ರಯ ಸಂಬಂಧವಿಲ್ಲೆಂದು ದೃಢವಾಗಿ ನಂಬಿರಬೇಕು.

ಇಂದಿಗೆ ಐವತ್ತು ವರುಷಗಳ ಹಿಂದೆ ವೀರಶೈವ ಸಮಾಜವು ನಟ್ಟಿರುಳಿನಲ್ಲಿತ್ತು. ಅದರ ನೈತಿಕ ತಾತ್ತ್ವಿಕ ರಕ್ತನಾಳಗಳ ಹರಿದಾಟವೆ ಕಮ್ಮಿಯಾಗಿತ್ತು. ಅಷ್ಟಾವರಣಗಳಲ್ಲಿ ನಿಷ್ಠೆಯಿಲ್ಲದಾಗಿತ್ತು. ಪಂಚಾಚಾರಗಳ ಪರಿಚಯವಿಲ್ಲದಾಗಿತ್ತು. ಷಟಸ್ಥಲ ಸುವಾಸನೆ ಯಂತೂ ತೀರ ಶೂನ್ಯವಾಗುತ್ತ ಬಂದಿತ್ತು. ವಿದ್ಯಾವ್ಯಾಸಂಗವಿರಲಿಲ್ಲ. ಕಲಾಪ್ರೇಮ ಕಣ್ಮುಚ್ಚಿತ್ತು. ಇವೆಲ್ಲವುಗಳ ಪ್ರಕಾಶಕ್ಕಾಗಿ ಪುನರುದ್ಧಾರಕ್ಕಾಗಿ ಈ ಸಂಸ್ಥೆ ಜನ್ಮತೊಟ್ಟಿತು. ಈ ನಿಟ್ಟಿನಲ್ಲಿ ಇಡೀ ಸಮಾಜಕ್ಕೆ ಇದೊಂದೇ ಒಂದು ಸಂಸ್ಥೆ! ಆದರೂ ಜನನ ರೋಗಗಳಿಗೇನು ಕಡಿಮೆಯಿರಲಿಲ್ಲ. ಅವನ್ನೆಲ್ಲ ಎದುರಿಸಿ ಏರಿ ಬರುವಂತೆ ತನ್ನ ಈ ಮಗುವನ್ನು ಸಾಕಿ ಸಲಹುವ ಸಾಮರ್ಥ್ಯ ಆ ಕಾರಣಿಕ ಕುಮಾರ ಯೋಗಿಯಲ್ಲಿತ್ತು. ಅದರಿಂದಾಗಿ ಇನಿತು ದೀರ್ಘಕಾಲ ಈ ಸಂಸ್ಥೆ ಬಾಳಿ ಬೆಳಗಿತು; ಬೆಳಗಲಿದೆ.

ಒಂದು ಸಂಸ್ಥೆಯ ಪ್ರಗತಿಗೆ–ಪುಷ್ಟಾಂಗಕ್ಕೆ ಜನ–ಧನಗಳೆ ಬೆಂಬಲ. ಅವಿಲ್ಲದ ಸಂಸ್ಥೆ ಅದೆಂದಿಗೂ ಮುಂದುವರಿಯದು. ಆದರ ಅರುಣೋದಯದೊಡನೆ ಅಂಧಕಾರೋದಯವೂ ಕಟ್ಟಿಟ್ಟ ಬುತ್ತಿ. ಆದರೆ ಈ ಸಂಸ್ಥೆಗೆ ಹಾಗಾಗಲಿಲ್ಲ. ಪೂಜ್ಯ ಹಾನಗಲ್ಲ ಕುಮಾರ ಶಿವಯೋಗಿಯ ಕೃಪಾಬಲದಿಂದ ಜನತೆಯ ಬೆಂಬಲವಿತ್ತು. ಆತನ ಅಮೋಘ ಕರ್ತವ್ಯ ಶಕ್ತಿಯಿಂದ ಬರಬರುತ್ತ ಆರ್ಥಿಕ ಬಲವೂ ಬೆಂಗೂಡಿ ಬಂತು. ಸಂಸ್ಥೆ ಇನಿತೊಂದು ಕಾಲ ತಲೆಯೆತ್ತಿ ನಿಂತಿತು.

ಯಾವ ಸಂಸ್ಥೆಯೆ ಆಗಲಿ ಅದರ ಚಿರಾಯುತನಕ್ಕೆ ಬರೀ ಭೌತಿಕ ಶಕ್ತಿಯೆ ಸಾಧನವಲ್ಲ. ಭೌತಿಕ ಶಕ್ತಿ ಬರೀ ಭೂಷಣ, ಬರೀ ಥಳಕು ಮಾತ್ರ. ಅದು ಚೇತನ ವಾಗಲಾರದು; ಅದು ಚಿರಕಾಲವಿರದು. ಚಿರಕಾಲ ಬಾಳಿಸಬಲ್ಲುದು ಆಧ್ಯಾತ್ಮಿಕ ಚೇತನ. ಆ ಚೇತನವನ್ನು ಚೆನ್ನಾಗಿ ತನ್ನೊಳಗೆ ತುಂಬಿಕೊಂಡು ಪರಿಣಮಿಸಿಕೊಂಡಿದೆ. ಈ ಶಿವಯೋಗ ಮಂದಿರ ಸಂಸ್ಥೆ!

ಜಗತ್ತು ಜಡ ದ್ರವ್ಯಗಳಿಂದ ತುಂಬಿರುವಂತೆ ಜನತೆಯೂ ಜಡಜೀವನದತ್ತ ಹೆಚ್ಚಾಗಿ ಹೆಚ್ಚು ಆಸಕ್ತಿಯಿಂದ ಸಾಗುತ್ತಿದೆ; ಸಾಯುತ್ತಿದೆ. ದಿಟವಾಗಿ ದಿಟ್ಟಿಸಿದರೆ ಮಾನವನ ಧ್ಯೇಯ ಅದಲ್ಲ. ಮಾನವನು ಚೇತನ ಸ್ವರೂಪಿ, ಚಿನ್ಮಯ ರೂಪಿ. ಜಡ ಪ್ರಕೃತಿಯು ತನ್ನ ಚಿನ್ಮಯರೂಪದ ಸಾಕ್ಷಾತ್ಕಾರ ಪಡೆಯಲಿಕ್ಕಾಗಿ ತನಗೆ ಸಾಧನವಾಗಿ ಸೇರಿದೆ. ಬರೀ ಸಾಧನೆಯಲ್ಲಿಯೇ ನಿಲ್ಲುವುದು ಪುರುಷಾರ್ಥವಲ್ಲ. ತ್ಯಾಗದಿಂದ ಭೋಗದಿಂದ ಸಚ್ಚಿದಾನಂದ ಯೋಗವನ್ನು ಪಡೆವ ಮಧುರ ಸುಂದರ ರಹಸ್ಯವನ್ನು ಮಾನವನು ಮನಗಾಣಬೇಕು. ಅದನ್ನು ಮನಗಾಣಿಸಲು 'ಈ ಶಿವಯೋಗಮಂದಿರ' ಸಂಸ್ಥೆಯ ಸೃಷ್ಟಿ ಮತ್ತು ಸ್ಥಿತಿ.

ಇಂತಹ ಸಂಸ್ಥೆಗಳ ಬಾಳೇ ಸಾಮಾಜಿಕ ಬಾಳು ಮತ್ತು ಬೆಳಗು. ಇಂತಹ ಸಂಸ್ಥೆಗಳು ಬಾಳಿದಷ್ಟೂ ಸಮಾಜಗಳು ಸರ್ವಾಂಗ ಸುಂದರವಾಗಿ ಸಂಸ್ಕೃತಿ ಚಂದಿರವಾಗಿ ಬಾಳಬಲ್ಲವು, ಬೆಳಗಬಲ್ಲವು.

ಸಂಸ್ಥೆಗಳ ಅಸ್ತಿತ್ವಕ್ಕೆ ಸ್ಥಾನ ಮಹತ್ವವೂ ಒಂದು ಮುಖ್ಯಾಂಗ. 'ಶಿವಯೋಗ ಮಂದಿರ ಸ್ಥಳವು ಮಹತ್ತಿನಿಂದ ಮೆರೆಯುತ್ತಿದೆ. ಅದರ ಸುತ್ತು ಐತಿಹಾಸಿಕ ಸ್ಥಲಗಳಿವೆ; ಗ್ರಾಮಗಳಿವೆ. ಋಷ್ಯಾಶ್ರಮಗಳೂ ದೇವಸ್ಥಳಗಳೂ ಇವೆ. ಇವಲ್ಲದೆ ಪುರಾಣ ಪ್ರಸಿದ್ಧವಾದ ಮಹಾಕೂಟಾದಿ ತೀರ್ಥ ಕ್ಷೇತ್ರಗಳೂ ಇವೆ. ನಿಸರ್ಗ ಸೌಂದರ್ಯಕ್ಕೆ ಕೊರತೆಯಿಲ್ಲ. ಶಿವಯೋಗಮಂದಿರದ

ಸುತ್ತೂ ಬೆಟ್ಟಗಳ ಸಾಲು. ಬಲಕ್ಕೆ ಹರಿವ ಹೊನಲು. ತರತರದ ತರುಗಳ ಗುಂಪು; ತರುಲತೆಗಳ ಹೂಗಳ ಕಂಪು. ಕೋಗಿಲೆಗಳ ಕಲರವದಿಂಪು. ನವಿಲುಗಳ ನರ್ತನದ ಸೊಂಪು. ಇವೆಲ್ಲವೂ 'ಶಿವಯೋಗಮಂದಿರ' ಸಂಸ್ಥೆಗೆ ಮಿಗಿಲಾದ ಕಳೆಯನ್ನು ತಂದಿವೆ. ಸುರುಚಿರವಾದ ಸ್ಥಿತಿಯನ್ನುಂಟು ಮಾಡಿವೆ.

ಧಾರ್ಮಿಕಾಚರಣೆಗಳಿಲ್ಲದೆ ಒಣಗಿ ನಿಂತ ಧಾರ್ಮಿಕ ಮರುಭೂಮಿಯ ಮೇಲೆ ಆಧ್ಯಾತ್ಮಿಕ ರಸದ ಹೊನಲನ್ನು ಹರಿಸಿತು ಶಿವಯೋಗಮಂದಿರ. ಸಾಮಾಜಿಕರ ಮೇಲೆ ದಟ್ಟಾಗಿ ಬಿದ್ದ ಅವಿದ್ಯೆಯೆಂಬ ನೆರಳನ್ನು ನಿವಾರಿಸಿ ವಿದ್ಯಾಕಿರಣಗಳನ್ನು ಹರಡಿ ಬೆಳಕ ನೀಡಿತು. ಶಿವಯೋಗಮಂದಿರ. ನೈತಿಕ, ಸಾಂಸ್ಕೃತಿಕ ಮುಂತಾದ ಹುಲುಸಾದ ಬೆಳೆ ಬೆಳೆಯಿತು. ಶಿವಯೋಗ ಮಂದಿರ. ಮಠಗಳಿಗೆ ಮೂರ್ತಿಗಳನ್ನು ಮೇಲ್ಮಟ್ಟದಲ್ಲಿ ಸಂಸ್ಕರಿಸಿ ತಯಾರಿಸುವ ಅತ್ಯುಚ್ಚ ಆದರ್ಶ ಸಂಸ್ಥೆ ಶಿವಯೋಗಮಂದಿರ. ವ್ಯಷ್ಟಿ ಸುಧಾರಣೆಯಿಂದ ಸಮಷ್ಟಿ ಸುಧಾರಣೆಯನ್ನು ಸಾಧಿಸಿತು ಶಿವಯೋಗಮಂದಿರ. ಅನೇಕರನ್ನು ಅನಾರ್ಯ ಜೀವನದಿಂದ ಆರ್ಯ ಜೀವನಕ್ಕೇರಿಸಿತು ಶಿವಯೋಗ ಮಂದಿರ. ದಾನವ ಜೀವಿಗಳನ್ನು ದೇವ ಜೀವಿಗಳನ್ನಾಗಿಸಿತು ಶಿವಯೋಗಮಂದಿರ. ಮಾನವ ಹೃದಯರನ್ನು ಮಹಾದೇವ ಹೃದಯರನ್ನಾಗಿ ಮಾಡಿತು ಶಿವಯೋಗ ಮಂದಿರ.

ಇಲ್ಲಿ ಬಳಸಿದ 'ಆರ್ಯ' ಪದಕ್ಕೆ ಜಾತಿ, ಪಂಥ, ಪಂಗಡ–ಈ ಯಾವ ಅರ್ಥವಲ್ಲ, ಸಾಂಸ್ಕೃತಿಕ ಸ್ವಾನುಭಾವಿಕ ಜೀವನದ ಸಂಕೇತವದು. 'ದಾನವ' ಪದಕ್ಕೂ ಇಲ್ಲಿ ಜಾತಿಗೀತಿಗಳ ಸೋಂಕಿಲ್ಲ, ಅನೈತಿಕತೆ, ಅನುದಾರತೆ, ಕಪಟ, ಕ್ರೌರ್ಯ, ಕ್ಷುದ್ರಭಾವ, ಅಸತ್ಯ, ಮೋಸ ಮುಂತಾದ ದುರ್ಗುಣ ಸೂಚಕವದು. ಶಿವಯೋಗ ಮಂದಿರವು ಐವತ್ತು ವರುಷಗಳಿಂದ ಧಾರ್ಮಿಕ, ಆಧ್ಯಾತ್ಮಿಕ, ಸಂಗೀತ, ಸತ್ಕೃತಿ ಸಂಗ್ರಹ, ಸಾಮಾಜಿಕ ಮುಂತಾದ ಕ್ಷೇತ್ರಗಳ ಪಯಣಿಗರಿಗಾಗಿ ತನ್ನದೇ ಆದ ದಾರಿದೀಪಗಳನ್ನು ಇತ್ತಿದೆ.

ಶಿವಯೋಗಮಂದಿರವು ಸಮಾಜ ಪುರುಷನಿಗಾಗಿ ಬೆಳೆದ ಆಧ್ಯಾತ್ಮಿಕದ ಒಂದು ಪರಮಾಮೃತ ಫಲ. ಸಾಹಿತ್ಯದ ಸುಗಂಧ ಸೂಸುವ ಸುಂದರ ಕಮಲ. ಸಂಗೀತದ ಸುಮಧುರ ಜಲ. ಶಿವಯೋಗಮಂದಿರ ಶಕ್ತಿ ಅಪಾರವಾದುದು. ಜೀವಂತ ವ್ಯಕ್ತಿ ರೂಪದಲ್ಲಿ ನಾಡಿನ ತುಂಬ ನಾಲ್ಕು ನಿಟ್ಟಿನಲ್ಲಿ ವಿರಾಜಿಸುತ್ತಿವೆ; ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ, ಶೈಕ್ಷಣಿಕ, ಆಧ್ಯಾತ್ಮಿಕ, ಸಂಗೀತ ಮುಂತಾದ ಸತ್ಕಾರ್ಯಗಳನ್ನು ಕೈಕೊಂಡು ಸಾಗಿಸುತ್ತಿವೆ. ಶಿವಯೋಗಮಂದಿರದ ಮೂರ್ತಿ ಕೀರ್ತಿಗಳಾಗಿ ಕಂಗೊಳಿಸುತ್ತಿವೆ. ಅವರೇ ಮಠಾಧಿಪತಿಗಳು. ಅವರ ಮುಖಾಂತರ ಶಿವಯೋಗ ಮಂದಿರವು ಸಾಮಾಜಿಕರನ್ನು ನಾಡಿಗರನ್ನು ಸಂಸ್ಕರಿಸುತ್ತಿದೆ; ಶಾಂತಿ ಪ್ರದಾಯಕವಾಗಿ ನಿಂತಿದೆ. ಮಠಾಧಿಪತಿಗಳ ಮುಖಾಂತರ ತನ್ನ ಮರ್ತ್ಯದ ಮಣಿಹವನ್ನು ಮುಂದುವರಿಸುತ್ತಿದೆ. ನಾನಾ ಬಗೆಗಳಲ್ಲಿ ಜನತೆಯ ಬಾಳು ಬದುಕುಗಳನ್ನು ಹಸನಗೊಳಿಸುತ್ತಿದೆ. ನಡೆ–ನುಡಿಗಳನ್ನು ನಯಗೊಳಿಸುತ್ತಿದೆ. ಜನತೆಯ ಸೇವೆಯನ್ನು ಸತತ ಸಲ್ಲಿಸುತ್ತಿದೆ. ಬಾಳಿನ ಬೇಸರಿಕೆಯನ್ನು ಕಡಿಮೆ ಮಾಡುತ್ತಿದೆ. ಬದುಕಿನ ಸಾರ್ಥಕತೆಯನ್ನು ಕೈಗೂಡಿಸುತ್ತಿದೆ. ಒಟ್ಟಿನಲ್ಲಿ ತನ್ನ ಮಠಾಧಿಪತಿಗಳ ಮುಖಾಂತರ ಜ್ಞಾನ–ಕ್ರಿಯೆಗಳ ಪ್ರಸಾರ ದಾಸೋಹ ಸೇವೆ ಸಾಧ್ಯವಾದ ಮಟ್ಟಿಗೆ ಸಾಂಗವಾಗಿ ಸಾಗುವಂತಾಗಿದೆ.

ಶಿವಯೋಗಮಂದಿರ ಸಂಸ್ಥೆಯ ಈ ಅರ್ಧಶತಮಾನದ ಪ್ರಗತಿಪಥದಲ್ಲಿ ಚಕ್ರನೇಮಿಕ್ರಮದಂತೆ ಏರಿಳಿತಗಳಿಲ್ಲದಿಲ್ಲ; ಹಗಲಿರುಳುಗಳು ಬಾರದಿಲ್ಲ, ಮುನ್ನಡೆ– ಹಿನ್ನಡೆಗಳು ಸಂಭವಿಸದಿಲ್ಲ, ಕಷ್ಟ–ಸುಖಗಳು ಕಾಣದಿಲ್ಲ, ಆದರೂ ಅವೆಲ್ಲವನ್ನು ಜೀರ್ಣಿಸಿಕೊಂಡು ಜಾಗ್ರತವಾಗಿದೆ; ಇನಿತೊಂದು ಕಾಲ ಬಾಳಿದೆ; ಬದುಕಿದೆ.

ಇಂದಿನದು ವಿಜ್ಞಾನಯುಗ. ಇಂದಿನ ಜಗತ್ತು ಮತ್ತು ಜನತೆ ವಿಶಾಲ ವಿಚಾರದತ್ತ ಮುನ್ನಡೆಯುತ್ತಿದೆ. ಈ ಅರ್ಧಶತಕದಲ್ಲಿ ತನ್ನ ಆಧ್ಯಾತ್ಮಿಕ ಶಕ್ತಿಯನ್ನು ಸಂಪಾದಿಸಿಕೊಂಡ ಈ ಸಂಸ್ಥೆ ಇನ್ನು ಮುಂದೆ ಇದರೊಡನೆ ಬೌದ್ಧಿಕ ಭೌತಿಕ ಶಕ್ತಿ ಸಂಪದಗಳನ್ನು ಸಂಪಾದಿಸಿಕೊಳ್ಳಬೇಕಾಗಿದೆ. ವ್ಯಕ್ತಿಗಳ ಆತ್ಮಿಕ ಹಾರ್ದಿಕ ಶಕ್ತಿಯನ್ನು ಸಮೃದ್ಧಿಗೊಳಿಸಿದಂತೆ ಇನ್ನು ಮುಂದೆ ಭೌತಿಕ ವೈಜ್ಞಾನಿಕ ಶಕ್ತಿಗೆ ಸಂಚಲನೆಯನ್ನು ಸಂಚಯಿಸಬೇಕಾಗಿದೆ. ಆಧುನಿಕ ವಿಶಾಲ ಸಾಂಸ್ಕೃತಿಕ ನಾಗರಿಕ ನಿಟ್ಟಿನತ್ತ ಸಾಗಬೇಕಾಗಿದೆ. ಸಾಮ್ಯ ಶಾಂತಿ ಸಾಮ್ರಾಜ್ಯ ಸಂಸ್ಥಾಪಿಸಬೇಕಾಗಿದೆ; ಸಮರಸ ಭಾವವನ್ನು ಸಕಲರಲ್ಲಿ ಸಮೃದ್ಧಿಗೊಳಿಸಬೇಕಾಗಿದೆ. ಸರ್ವಧರ್ಮ ಸಮನ್ವಯವನ್ನು ಸಂವೃದ್ಧಿಗೊಳಿಸಬೇಕಾಗಿದೆ.

ವೀರಶೈವನಿಗೆ ಕೊಲನುಪಾಕಿ, ಶ್ರೀಶೈಲ, ಹಿಮವತ್ಕೇದಾರ, ಉಜ್ಜಯಿನಿ, ಕಾಶಿ, ಕಲ್ಯಾಣ, ಕೂಡಲಸಂಗಮ, ಬಾಗೇವಾಡಿ ಮುಂತಾದವುಗಳು ಹೇಗೆ ಮಾನ್ಯ ಮತ್ತು ಪೂಜ್ಯ ಸ್ಥಾನಗಳಾಗಿವೆಯೋ ಹಾಗೆ ಶಿವಯೋಗ ಮಂದಿರವೂ ಇಂದು ಮಾನ್ಯ ಸ್ಥಾನ ವಾಗಿದೆ; ಪುಣ್ಯಸ್ಥಾನವಾಗಿದೆ.

■■

# ಶಿವಯೋಗಮಂದಿರ ದರ್ಶನ

• ಕುಮಾರ ದೇವರು, ರಾಜೂರು

## ಶಿವಯೋಗಮಂದಿರ

ಹಾನಗಲ್ಲ ಕುಮಾರ ಶಿವಯೋಗಿಗಳು ಸ್ಥಾಪಿಸಿದ ಶಿವಯೋಗಮಂದಿರ ದಾಸೋಹ ಪರಂಪರೆ ಸದಾ ಸ್ಮರಣೀಯವಾದುದು. ಪೂಜ್ಯರು 12ನೇ ಶತಮಾನದ ಬಸವಾದಿ ಶಿವಶರಣರ ತತ್ವಸಂದೇಶಗಳನ್ನು 20ನೇ ಶತಮಾನದಲ್ಲಿ ಜನಮನಕ್ಕೆ ಮುಟ್ಟಿಸುವ ಮಹಾ ಕಾರ್ಯಯೋಜನೆ ರೂಪಿಸಿದ್ದರು. ದಾಸೋಹ ಸಂಸ್ಕೃತಿಯು ಉಜ್ವಲವಾಗಿ ಬೆಳಗಲಿ ಎಂಬ ಮಹದಾಶಯದಿಂದ ಶಿವಯೋಗಮಂದಿರ ಸಂಸ್ಥೆಯನ್ನು ಸ್ಥಾಪಿಸಿದರು. ಅಲ್ಲಿ ತರಬೇತಿ ಪಡೆದ ನಾಗನೂರು ರುದ್ರಾಕ್ಷಿಮಠದ ಪೂಜ್ಯ ಡಾ. ಶಿವಬಸವ ಸ್ವಾಮಿಗಳು, ಭಾಲ್ಕಿ ಹಿರೇಮಠದ ಚನ್ನಬಸವ ಪಟ್ಟದ್ದೇವರು ಗಡಿಭಾಗಗಳಲ್ಲಿ ಉಚಿತ ಪ್ರಸಾದ ನಿಲಯ ಸ್ಥಾಪಿಸುವ ಮೂಲಕ ಮಾಡಿದ ಶೈಕ್ಷಣಿಕ ಕ್ರಾಂತಿ ಅನೂಹ್ಯವಾದುದು. ಹಾನಗಲ್ಲ ಕುಮಾರ ಶಿವಯೋಗಿಗಳ ಕರಕಮಲ ಸಂಜಾತರಾದ ಅನೇಕ ಲಿಂಗಾಯತ ಮಠಾಧಿಪತಿಗಳು ಅಕ್ಷರ ಸಂಸ್ಕೃತಿ ಉಳಿಸಲು ಉಚಿತ ಪ್ರಸಾದ ನಿಲಯಗಳನ್ನು ಸ್ಥಾಪಿಸುವ ಮೂಲಕ ನಾಡಿನೆಲ್ಲೆಡೆ ಮಾಡಿದ ಜಾಗೃತಿ ಅನನ್ಯವಾದುದು. ಅಂತೆಯೇ ಶಿವಯೋಗ ಮಂದಿರ ಮತ್ತು ಅಲ್ಲಿಯ ಪ್ರಸಾದ ಸೇವಿಸಿ ಬೆಳೆದ ಇತಿಹಾಸವನ್ನು ಅವಲೋಕಿಸುವಾಗಲೆಲ್ಲ ಶಿವಯೋಗಮಂದಿರವನ್ನು ತಪ್ಪದೇ ಸ್ಮರಿಸಬೇಕಾದುದು ನಮ್ಮ ಆದ್ಯ ಕರ್ತವ್ಯ.

ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಉದಾರಚರಿತರು. ಸಕಲ ಪ್ರಾಣಿಗಳಿಗೆ ಲೇಸನೇ ಬಯಸುವ ಶರಣರು. ಅಂತೆಯೇ ಸಕಲರಿಗೆ-ವಿಶೇಷವಾಗಿ ಮಠಾಧಿಪತಿಗಳಾಗುವವರಿಗೆ ಶಿವಯೋಗದ ಗುಟ್ಟನ್ನು ಅರಿತು ಸಮಾಜೋದ್ಧಾರ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳ ಬೇಕೆಂಬಾಶಯದಿಂದ ಬಾಗಲಕೋಟ ಜಿಲ್ಲೆಯ ಬದಾಮಿ ಸಮೀಪ 'ಶಿವಯೋಗಮಂದಿರ" ಸಂಸ್ಥೆಯನ್ನು ಸ್ಥಾಪಿಸಿದರು. ಕ್ರಿ.ಶ. 1909 ಕೀಲಕನಾಮ ಸಂವತ್ಸರದ ಮಾಘ ಶುದ್ಧ ಸಪ್ತಮಿಯ ಶುಭದಿನದಂದು ಚಿತ್ತರಗಿ, ಇಳಕಲ್ಲ ವಿಜಯಮಹಾಂತೇಶ್ವರ ಶಿವಯೋಗಿಗಳ ಲಿಂಗಹಸ್ತದಿಂದ ಲಿಂಗಮುದ್ರೆಯ ಅಡಿಗಲ್ಲನ್ನು ಇಡಿಸಲಾಯಿತು. ಅಡಿಗಲ್ಲು ಸಮಾರಂಭದ ಮುಖ್ಯ ನೇತೃತ್ವವನ್ನು ಶ್ರೀಕುಮಾರ ಶಿವಯೋಗಿಗಳು ವಹಿಸಿಕೊಂಡಿದ್ದರು. ಹರಗುರು ಚರಮೂರ್ತಿಗಳು, ಸಮಾಜದ ಗಣ್ಯ ಮಾನ್ಯರು ಆಗಮಿಸಿದ್ದರು. ಸಮಗ್ರ ಲಿಂಗಾಯತ ಸಮಾಜಕ್ಕೆ ದಟ್ಟವಾಗಿ ಆವರಿಸಿದ್ದ ಕತ್ತಲೆಯನ್ನು ಕಳೆದೋಡಿಸಲು ಬಾಲರವಿಯಂತೆ ಶಿವಯೋಗಮಂದಿರ ಉದಿಸಿತು.

ಮಲಪ್ರಭಾ ನದಿಯ ತಟಾಕದಲ್ಲಿ ಶಿವಯೋಗಮಂದಿರದ ಮೊಳಕೆಯೊಡೆ ಯಿತು. ಅದೊಂದು ಸುಂದರ ತಾಣ. ಸುತ್ತಲೂ ಎದ್ದು ನಿಂತ ಸಣ್ಣ ದೊಡ್ಡ ಬೆಟ್ಟಗಳು, ದಟ್ಟವಾಗಿ ಬೆಳೆದ ಗಿಡಮರಗಳು, ಬಿಲ್ವ ವೃಕ್ಷಗಳು, ಮಲ್ಲಿಗೆ ಬಳ್ಳಿಗಳು ಮನಮೋಹಕವಾಗಿದ್ದವು. ನದಿಯ ನೀರಿನ ಜುಳು ಜುಳು ಹರಿವ ಶಬ್ದ, ಗಿಳಿ, ಕೋಗಿಲೆಗಳ ಕಲರವ ಕಿವಿಗೆ ಇಂಪನ್ನೀಯುತ್ತಿದ್ದವು.

ಐತಿಹಾಸಿಕ ಪ್ರಸಿದ್ಧಿ ಪಡೆದ ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಬನಶಂಕರಿ ಗುಡಿಶಿಖರಗಳ ಮಧ್ಯವರ್ತಿ ಪ್ರದೇಶವನ್ನು ಕೇಂದ್ರಸ್ಥಳವನ್ನಾಗಿ ಆಯ್ಕೆ ಮಾಡಿದ ಶಿವಯೋಗಮಂದಿರಕ್ಕೆ ಎಲ್ಲಿಲ್ಲದ ಮಹತ್ವ ಪ್ರಾಪ್ತವಾಯಿತು. ಬಾದಾಮಿ ಬಾಗಿಲಕೋಟೆ ಮುಂತಾದ ಜನನಿಬಿಡ ಪಟ್ಟಣಗಳಿಂದ ದೂರದಲ್ಲಿದ್ದ ಅದು ನಿಸರ್ಗಧಾಮವಾಯಿತು; ಪುಣ್ಯಸ್ಥಳವಾಯಿತು.

## ಮೂಲ ಉದ್ದೇಶ

ಲಿಂಗಾಯತ ಧರ್ಮದ ಸಾಹಿತ್ಯ, ಸಂಸ್ಕೃತಿ, ತತ್ವಗಳ ಆಳವಾದ ಅಭ್ಯಾಸ ಮಾಡಿ ನಶಿಸುತ್ತಿದ್ದ ಲಿಂಗಾಯತ ಸಮಾಜದ ಸರ್ವತೋಮುಖ ಏಳ್ಗೆ ಮಾಡಬಲ್ಲ ವಟುಸಾಧಕರಿಗೆ ಶಿಕ್ಷಣ ಮತ್ತು ತರಬೇತಿ ಕೊಡಿಸುವುದೇ ಇದರ ಸ್ಥಾಪನೆಯ ಉದ್ದೇಶವಾಗಿತ್ತು. ಲಿಂಗಾಯತರು ಕ್ರಿ.ಶ. 1900 ರ ಪೂರ್ವದಲ್ಲಿ ಶಿಕ್ಷಣದಲ್ಲಿ ಅತ್ಯಂತ ಹಿಂದುಳಿದವರಾಗಿದ್ದರು. ನಿರಕ್ಷರಕುಕ್ಷಿಗಳಾದ ಅವರಲ್ಲಿ ಅಜ್ಞಾನ ಬಡತನಗಳು ತಾಂಡವಮಾಡುತ್ತಿದ್ದವು. ಮೂಢನಂಬಿಗೆ ಮನದಾಳದಲ್ಲಿ ಬೇರು ಬಿಟ್ಟಿತ್ತು. ಅದರ ಪರಿಣಾಮವಾಗಿ ಅವರು ಕಂದಾಚಾರಗಳಲ್ಲಿ ಮುಳುಗಿದ್ದರು. ವ್ಯಾಪಾರ ವ್ಯವಹಾರಗಳಲ್ಲಿ ಹಿಂದುಳಿದಿದ್ದರು. ಮೂಲ ಉದ್ಯೋಗವಾದ ಕೃಷಿ ಕನಿಷ್ಠ ಮಟ್ಟಕ್ಕೆ ಇಳಿದಿತ್ತು. ಕೂಲಿ-ಕಂಬಳಿ ಮಾಡಿದರೂ ಸಾಧಾರಣ ಜೀವನ ನಿರ್ವಹಣೆ ಮಾಡುವುದು ಅವರಿಗೆ ಅಸಾಧ್ಯವಾಗಿತ್ತು. ಇಡೀ ಸಮಾಜ ಆರ್ಥಿಕವಾಗಿ ಅಧೋಗತಿಗಿಳಿದಿತ್ತು. ಒಗ್ಗಟ್ಟು ಮಾಯವಾಗಿ ಸಮಾಜ ಒಡೆದ ಕನ್ನಡಿಯಂತಾಗಿತ್ತು.

ಹೀಗೆ ಅಧೋಗತಿಗಿಳಿದಿದ್ದ ಲಿಂಗಾಯತ ಸಮಾಜವನ್ನು ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿಕವಾಗಿ, ಔದ್ಯೋಗಿಕವಾಗಿ ಉನ್ನತ ಸ್ಥಿತಿಗೆ ತರುವುದೇ ಇದರ ಪ್ರಮುಖ ಉದ್ದೇಶವಾಗಿತ್ತು.

ಸಮಾಜದ ಧರ್ಮಕಾರ್ಯಗಳನ್ನು ಕಟ್ಟುನಿಟ್ಟಾಗಿ ನಿರ್ವಹಿಸಬೇಕಾದ ಗುರುಗಳಲ್ಲಿಯೂ ಐಕ್ಯಮತವಿರಲಿಲ್ಲ. ಲಿಂಗಾಯತ ಸಮಾಜ ಪುರುಷನ ರಕ್ಷಣೆ ಮಾಡುವ ಮಣಿಹವನ್ನು ಹೊತ್ತು ಕೊಂಡಿದ್ದ ಜಂಗಮ ಗುರುಗಳ ಸ್ಥಿತಿಯೂ ಬಡತನಕ್ಕೆ ಪಕ್ಕಾಗಿತ್ತು. ಶೈಕ್ಷಣಿಕವಾಗಿ ಹಿಂದುಳಿದಿತ್ತು.

ಹೀಗೆ ಗುರುಗಳಲ್ಲಿದ್ದ ಅಜ್ಞಾನವನ್ನು ಅಳಿಸಿ ಹಾಕಿ ಅವರನ್ನು ಸಮಾಜ ಸೇವೆಗಾಗಿ ಸಿದ್ಧಗೊಳಿಸುವುದೇ ಶಿವಯೋಗಮಂದಿರದ ಉದ್ದೇಶವಾಗಿತ್ತು. ಈ ಮಹೋದ್ದೇಶ ಸಾಧನೆಗಾಗಿ ಅದರ ಉತ್ಪಾದಕರಾದ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ತಮ್ಮ ಜೀವಾಂತ್ಯದವರೆಗೆ ಶ್ರಮಿಸಿದರು. ಅದೊಂದು ಬೃಹತ್ ಸಂಸ್ಥೆಯಾಗಿ, ಧರ್ಮಗುರುಗಳ ತರಬೇತಿ ಕೇಂದ್ರವಾಗಿ ಬೆಳೆಯಲು ಕಾರಣಿಭೂತರಾದರು.

**ವಟು-ಸಾಧಕರ ಮಂದಿರ ಪ್ರವೇಶ :**

ಕರ್ನಾಟಕ, ಮಹಾರಾಷ್ಟ್ರ ಮುಂತಾದ ಪ್ರಾಂತಗಳ ಹಳ್ಳಿ ಪಟ್ಟಣಗಳಲ್ಲಿ ವಾಸವಾಗಿದ್ದ ಚಿಕ್ಕವಯೋಮಾನದ ಮಕ್ಕಳಿಗೆ ಮಂದಿರದಲ್ಲಿ ಪ್ರವೇಶವನ್ನು ನೀಡಲಾಯಿತು. ಮೊದಲ ತಂಡದಲ್ಲಿ ಕೇವಲ ಏಳು ಬಾಲಕರನ್ನು ತರಬೇತಿಗಾಗಿ ಆಯ್ಕೆ ಮಾಡಲಾಯಿತು. ಪ್ರಥಮ ವರ್ಗದವರೆಂಬ ಕಾರಣದಿಂದ ಅವರ ಹೆಸರುಗಳನ್ನಿಲ್ಲಿ ನಮೂದಿಸುತ್ತೇವೆ: 1. ಬಿದರಿ ಸವದತ್ತಿ ಅಪ್ಪಯ್ಯ ಸ್ವಾಮಿಗಳು 2. ನವಿಲುಗುಂದ ಗವಿಮಠದ ಬಸವಲಿಂಗ ಸ್ವಾಮಿಗಳು 3. ಕುಷ್ಟಗಿ ಪಟ್ಟದ್ದೇವರು 4. ಕುರವತ್ತಿಯ ಮಹಾದೇವ ಸ್ವಾಮಿಗಳು 5. ಬಾಗಿಲಕೋಟೆಯ ಶಿವಮೂರ್ತಿ ಸ್ವಾಮಿಗಳು 6. ಕೊಪ್ಪದ ಮಹಾಂತ ಸ್ವಾಮಿಗಳು 7. ಮಮದಾಪುರದ ಮರಿದೇವರು ಈ ಏಳು ಜನ ಸಾಧಕರಿಂದ ಪ್ರಾರಂಭವಾದ ಶಿವಯೋಗಮಂದಿರಕ್ಕೆ ವರ್ಷ ವರ್ಷವೂ ವಿದ್ಯಾರ್ಥಿಗಳ ಸಂಖ್ಯೆ ಬೆಳೆಯುತ್ತ ಹೋಯಿತು. ಒಂದೊಂದು ವರ್ಷ ವಿದ್ಯಾರ್ಥಿಗಳ ಸಂಖ್ಯೆ 100ಕ್ಕೂ ಮಿಕ್ಕಿರುತ್ತಿತ್ತು. ಆಯ್ಕೆಯಲ್ಲಿ ಜಂಗಮ ವಟುಗಳ ಸಂಖ್ಯೆಯೇ ಅಧಿಕವಾಗಿರುತ್ತಿದ್ದರೂ ಭಕ್ತವರ್ಗದ ವಟುಗಳಿಗೂ ಅಲ್ಲಿ ಪ್ರವೇಶ ಸಿಗುತ್ತಿತ್ತೆಂದು ತಿಳಿದು ಬರುತ್ತದೆ. ಮೇಲಿನ ಪ್ರಥಮ ವರ್ಗದ ಏಳು ವಿದ್ಯಾರ್ಥಿಗಳಲ್ಲಿ ಒಬ್ಬಿಬ್ಬರು ಭಕ್ತವರ್ಗದಿಂದ ಬಂದವರಾಗಿದ್ದರೆಂದು ಹೇಳಲಾಗುತ್ತದೆ. ಶ್ರೀಕುಮಾರ ಶಿವಯೋಗಿಗಳ ದೃಷ್ಟಿ ಅತ್ಯಂತ ವಿಶಾಲವಾಗಿತ್ತೆಂಬುದಕ್ಕೆ ಅವರು ರೂಪಿಸಿದ ಒಂದೆರಡು ಉದ್ದೇಶಗಳನ್ನಿಲ್ಲಿ ಉದಾಹರಿಸುತ್ತೇವೆ.

"ಸಾಧ್ಯವಾದ ಹಾಗೆ ಭಕ್ತ ಮಾಹೇಶ್ವರರಲ್ಲಿ ಸಂಸಾರಿಗಳಾದರೂ ಬ್ರಹ್ಮಚರ್ಯ ಪಾಲನೆ ಮತ್ತು ಮತ ತತ್ವಗಳನ್ನು ಅಭ್ಯಾಸ ಮಾಡಲಿಕ್ಕೆ ಶಿವಯೋಗಮಂದಿರದಲ್ಲಿ ಅನುಕೂಲತೆಯನ್ನು ಮಾಡಿಕೊಡುವುದು" (ಬೆಳಗು ಸ್ಮರಣ ಸಂಚಿಕೆ ಪು.222)

"ಅಧ್ಯಕ್ಷರಾದ ಸ್ವಾಮಿಗಳ ಅಥವಾ ಟ್ರಸ್ಟ ಕಮೀಟಿಯವರ ಅನುಕೂಲವರಿತು ಸಂಸಾರಿಗಳಾಗತಕ್ಕ ವೀರಶೈವ ಬ್ರಹ್ಮಚಾರಿಗಳಿಗೂ, ಭಕ್ತ ಮಾಹೇಶ್ವರರ ಮಕ್ಕಳಿಗೂ, ನೈತಿಕ, ಧಾರ್ಮಿಕ ಮತ್ತು ಆಧ್ಯಾತ್ಮಿಕ ಜ್ಞಾನವಾಗುವಂಥ ಶಿಕ್ಷಣ ಕೊಡುವುದು" (ಬೆಳಗು ಪು. 223)

ಮೇಲಿನ ಉದ್ದೇಶಗಳಿಂದ ಭಕ್ತವರ್ಗದ ವಿದ್ಯಾರ್ಥಿಗಳಿಗೆ ಮಾಹೇಶ್ವರ ದೀಕ್ಷೆಯನ್ನಿತ್ತು ಮಠಾಧಿಪತಿಗಳನ್ನಾಗಿ ನೇಮಿಸಿ ಸಮಾಜ ಸೇವೆಗೆ ಅಣಿಗೊಳಿಸಬೇಕೆಂಬ ವಿಶ್ವದೃಷ್ಟಿ ಶ್ರೀ ಕುಮಾರ ಶಿವಯೋಗಿಗಳದ್ದಾಗಿತ್ತೆಂಬ ಭಾವ ವ್ಯಕ್ತವಾಗುತ್ತದೆ. ಜಂಗಮದೀಕ್ಷೆ ಪಡೆದ ವಿದ್ಯಾರ್ಥಿಗಳು ಶಿವಯೋಗಮಂದಿರದಲ್ಲಿ ತರಬೇತಿ ಪಡೆದ ನಂತರ ಅವರು ವಿರಕ್ತಮಠದ ನಿರಾಭಾರಿ ಅಧಿಕಾರಕ್ಕೂ, ಗುರುಸ್ಥಲದ ಪಟ್ಟಚರಂತಿ ಅಧಿಕಾರಕ್ಕೂ ಅರ್ಹರಾಗುತ್ತಿದ್ದರು. ಹೀಗೆ ಲಿಂಗಾಯತ ಸಮಾಜದ ವಿವಿಧ ಮಠಗಳ ಸುಧಾರಣೆಗೆ ಹಾದಿಯನ್ನು ಹಾಕಿಕೊಟ್ಟಂತಾಯಿತು.

**ವಿದ್ಯಾರ್ಥಿಗಳ ಅರ್ಹತೆ :**

ವಿದ್ಯಾರ್ಥಿಗಳಿಗೆ ಪ್ರವೇಶ ಪಡೆಯಲು ಬೇಕಾದ ವಿದ್ಯಾರ್ಹತೆಗಳು ಇಷ್ಟೇ ಇರಬೇಕೆಂಬ ನಿಯಮವಿಲ್ಲ. ಆದರೆ ವಯಸ್ಸಿನ ನಿರ್ಬಂಧವಿದೆ. ಕನಿಷ್ಠ 8 ರಿಂದ 12 ವರ್ಷದೊಳಗಿನ ವಯಸ್ಕರಾದ ವಿದ್ಯಾರ್ಥಿಗಳಿಗೆ ಪ್ರವೇಶವಿದ್ದಿತು. ಅವರಿಗೆ 'ವಟು'ಗಳೆಂದು ಕರೆಯಲಾಗುತ್ತದೆ. ಅಲ್ಲದೆ ಅವರಿಗೆ 'ಆರ್ಯ'ರೆಂದೂ ಸಂಬೋಧಿಸಲಾಗುತ್ತಿತ್ತು. ಇವರ ವೇಷಭೂಷಣಗಳಲ್ಲಿ, ಊಟ-ಉಪಚಾರಗಳಲ್ಲಿ ಕಟ್ಟುನಿಟ್ಟಿನ ನಿಯಮಗಳಿವೆ.

12 ವರ್ಷಗಳ ಮೇಲಿನ ವಯಸ್ಕರಿಗೆ 'ಸಾಧಕ'ರೆಂದು ಹೆಸರು. ಅವರು ಲಿಂಗಾಯತ ಸಾಹಿತ್ಯದಲ್ಲಿ, ಯೋಗಾಭ್ಯಾಸದಲ್ಲಿ ಪರಿಣಿತಿ ಪಡೆಯಬೇಕಾಗುತ್ತಿತ್ತು. ಗುರುಗಳ ಅನುಗ್ರಹ ಪಡೆದು 'ದೇಶಿಕ'ರೆಂಬ ಅಭಿದಾನ ಹೊಂದುತ್ತಿದ್ದರು. ಇವರು ವಿರಕ್ತಮಠಕ್ಕೆ ಅಧಿಕಾರಿಗಳಾದರೆ 'ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ' ಸ್ವಾಮಿಗಳಾಗುತ್ತಾರೆ. ಗುರುಮಠಕ್ಕೆ ಅಧಿಕಾರಿಗಳಾದರೆ 'ಶ್ರೀಮದ್'ಘನಲಿಂಗ

ಚಕ್ರವರ್ತಿ ಶಿವಾಚಾರ್ಯ'ರೆಂದು ಕರೆಯಿಸಿಕೊಳ್ಳುತ್ತಾರೆ. ಸಾಮಾಜಿಕ ಸೇವೆಗಳು ವ್ಯತ್ಯಾಸ ಹೊಂದುತ್ತ ಹೋದಂತೆ ಅವರ ಪದವಿಗಳು, ಆಚಾರಗಳು ಭಿನ್ನವಾದರೂ ಅವರು ಒಂದೇ ಗಿಡದ ಟೊಂಗೆಗಳೆಂಬುದನ್ನು ಮರೆಯುವಂತಿಲ್ಲ. ಪಟ್ಟದ್ದೇವರು ಪ್ರಸಂಗಾನುಸಾರ ವಿಶೇಷ ಸಂಸ್ಕಾರದೊಂದಿಗೆ ವಿರಕ್ತ ಸ್ವಾಮಿಗಳಾಗಿಯೂ ಅಧಿಕಾರ ವಹಿಸಿಕೊಳ್ಳಬಹುದು.

**ಆಹಾರ-ವಿಹಾರ :**

ಪ್ರವೇಶ ಪಡೆದ ವಟು-ಸಾಧಕರು ತರಬೇತಿಯ ನಂತರ ವಿವಿಧ ಮಠಗಳಿಗೆ ಅಧ್ಯಕ್ಷರಾಗಿ ಸಮಾಜೋದ್ಧಾರದ ಗುರುತರ ಹೊಣೆಯನ್ನು ಹೊತ್ತುಕೊಳ್ಳಬೇಕಾದ್ದರಿಂದ ಅವರಿಗೆ ಅತ್ಯಂತ ಕಟ್ಟುನಿಟ್ಟಿನ ಆಹಾರಕ್ರಮವನ್ನು ವಿಧಿಸಲಾಗಿತ್ತು. ಕೆಲವು ಆಹಾರ ಪದಾರ್ಥಗಳನ್ನು ಸ್ವೀಕರಿಸುವುದಕ್ಕೆ ನಿರ್ಬಂಧವಿತ್ತು. ಸಾತ್ವಿಕ ಪದಾರ್ಥಗಳನ್ನು ಸೇವಿಸಬೇಕಾಗಿತ್ತು. 'ಮೌನದಲುಂಬುದು ಆಚಾರವಲ್ಲ. ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು'-ಎಂಬ ಶರಣರ ತತ್ವದಂತೆ ಊಟದ ಸಮಯದಲ್ಲಿ ಒಬ್ಬೊಬ್ಬರು ಒಂದೊಂದು ವಚನವನ್ನು ಪಠಿಸುತ್ತಿರಬೇಕಾಗಿತ್ತು.

**ವಟು-ಸಾಧಕರ ದಿನಚರಿ**

ಪ್ರತಿಯೊಬ್ಬರೂ ಬೆಳಗಿನ 4 ಗಂಟೆಗೆ ಏಳಬೇಕು. ಮುಖಮಾರ್ಜನ ಭಸ್ಮಧಾರಣ ಮಾಡಿಕೊಂಡು, ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಬೇಕು. 'ಏಳಯ್ಯ ನಿಮ್ಮ ತಾಯ್ತಂದೆಗಳು ಬಂದಿಹರು' ಎಂಬ ಮುಳಗುಂದ ಬಾಲಲೀಲಾ ಮಹಾಂತಶಿವಯೋಗಿ ಕೃತ ಪ್ರಾರ್ಥನಾ ಪದ್ಯದೊಂದಿಗೆ ದಿನದ ಕಾರ್ಯಕ್ರಮಗಳು ಪ್ರಾರಂಭವಾಗುತ್ತಿದ್ದವು. ರಾತ್ರಿ 10 ಗಂಟೆಯವರೆಗೆ, ಸ್ವಾಧ್ಯಾಯ, ಯೋಗ, ಪಾಠ-ಪ್ರವಚನ, ಸ್ನಾನ, ಇಷ್ಟಲಿಂಗಪೂಜೆ, ಬರಹ, ವಾಚನ, ಕಾಯಕ-ಇತ್ಯಾದಿ ಎಡೆಬಿಡದ ಕಾರ್ಯಕ್ರಮ ಪೂರೈಸಿ ನಿದ್ರೆ ಮಾಡುವುದು ನಿಶ್ಚಿತಪಡಿಸಿದ ಪದ್ಧತಿಯಾಗಿತ್ತು.

**ಶಿಕ್ಷಣ ಕ್ರಮ :**

ಮೇಲೆ ತಿಳಿಸಿದಂತೆ 8ರಿಂದ 12 ವರುಷದ ವಿದ್ಯಾರ್ಥಿಗಳಿಗೆ ಪ್ರವೇಶವಿದ್ದುದರಿಂದ ಅಷ್ಟರವರೆಗೆ 4-5 ನೇ ವರ್ಗಗಳಲ್ಲಿ ಅವರು ಉತ್ತೀರ್ಣರಾಗಿರುತ್ತಿದ್ದರು. ವಟುಗಳು ಸರಕಾರಿ ಕನ್ನಡ ಶಾಲಾ ಪಠ್ಯಕ್ರಮದಂತೆ 7ನೆಯ ವರ್ಗದವರೆಗೆ ಕನ್ನಡದಲ್ಲಿ ಅಭ್ಯಾಸ ಮಾಡಬೇಕಾಗುತ್ತಿತ್ತು. ಅಲ್ಲದೆ ಶಿವಶರಣರ ವಚನಗಳನ್ನು ಕಂಠಪಾಠ ಮಾಡಬೇಕಾಗುತ್ತಿತ್ತು.

ಸಾಧಕರಿಗೆ ವಿವಿಧ ಹಂತದ ಪಠ್ಯಕ್ರಮದಂತೆ ಸಂಸ್ಕೃತವನ್ನು ಕಲಿಸಲಾಗುತ್ತಿತ್ತು. ಭಂಡಾರಕರ ಸಂಸ್ಕೃತ ವ್ಯಾಕರಣ ಗ್ರಂಥಗಳು ಅಮರಕೋಶ, ರಘುವಂಶ, ಕುಮಾರಸಂಭವ, ಬಾಣಕಾದಂಬರಿ, ಪಾಣಿನಿ ಸೂತ್ರ ಇತ್ಯಾದಿ ಶ್ರೇಷ್ಠದರ್ಜೆಯ ಸಂಸ್ಕೃತ ಗ್ರಂಥಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಲಾಗಿತ್ತು.

ಶತಕತ್ರಯ, ಶೂನ್ಯಸಂಪಾದನೆ, ಪ್ರಭುಲಿಂಗಲೀಲೆ ಮುಂತಾದ ಕೃತಿಗಳ ಅಭ್ಯಾಸವನ್ನು ಕಡ್ಡಾಯಗೊಳಿಸಲಾಗಿತ್ತು.

**ಪ್ರಾಯೋಗಿಕ ತರಬೇತಿ :**

ಶಿವಯೋಗಮಂದಿರದ ಶಿಕ್ಷಣ ತರಬೇತಿಯು ಕೇವಲ ಓದು-ಬರಹ, ಪೂಜೆ-ಪುನಸ್ಕಾರಗಳಿಗೆ ಮೀಸಲಾಗಿರಲಿಲ್ಲ. ಕಾಯಕ ಪದ್ಧತಿಗೆ ಹೆಚ್ಚು ಒತ್ತು ಕೊಡಲಾಗಿತ್ತು. ಶ್ರೀ ಕುಮಾರ ಶಿವಯೋಗಿಗಳು ಉತ್ತಮ ಪ್ರವಚನಕಾರರಾಗಿದ್ದರು. ವಿದ್ಯಾರ್ಥಿಗಳಿಗೆ ಶಿವಾನುಭವ ಕುರಿತು ಪ್ರವಚನ ಮಾಡುತ್ತಿದ್ದರು. 'ಶಿವಾನುಭವ'ದ ಬಗೆಗೆ ವಿದ್ಯಾರ್ಥಿಗಳೊಂದಿಗೆ ಚರ್ಚಿಸುತ್ತಿದ್ದರು. ಗುರು-ಶಿಷ್ಯ ಸಂವಾದದಿಂದ ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಜ್ಞಾನ ಉಂಟಾಗುತ್ತಿತ್ತು. ತಮಗನಿಸಿದ ಶಿವಾನುಭವವನ್ನು ಬರೆಯಬೇಕೆಂಬುದು ಕಡ್ಡಾಯವಾಗಿತ್ತು. ಪುರಾಣಗಳ ಅರ್ಥವಿವರಿಸುವ ಕಲೆಯನ್ನು ಕಲಿಸಿ-ಕೊಡಲಾಗುತ್ತಿತ್ತು. ತೋಟಗಳನ್ನು ಬೆಳೆಸುವ ಹವ್ಯಾಸದಲ್ಲಿ ಕಾಯಕದ ಮಹತ್ವವನ್ನು ತಿಳಿಸಿಕೊಡುತ್ತಿದ್ದರು. ಶಾರೀರಿಕ ಶ್ರಮವಹಿಸಿ ಶಿವಯೋಗಮಂದಿರದಲ್ಲಿ ಹಣ್ಣಿನ ಗಿಡಮರಗಳನ್ನು ಹಚ್ಚಿ ಬೆಳೆಸುವುದನ್ನು ರೂಢಿ ಮಾಡಿಸುತ್ತಿದ್ದರು. ವಾರವಾರವು ಚರ್ಚಾಕೂಟವನ್ನು ಏರ್ಪಡಿಸಿ ಸಾಧಕರಿಗೆ ಭಾಷಣಕಲೆಯನ್ನು ಹೇಳಿಕೊಡುತ್ತಿದ್ದರು. ನಿಬಂಧ ಬರೆಯುವುದು ಕರಗತವಾಗುವಂತೆ ನೋಡಿಕೊಳ್ಳುತ್ತಿದ್ದರು. ಅತಿಥಿ-ಅಭ್ಯಾಗತರನ್ನು ಆದರದಿಂದ ಕರೆತಂದು ಅವರಿಗೆ ಸ್ನಾನ ಪೂಜೆ ಪ್ರಸಾದ ವಿಶ್ರಾಂತಿ ಇತ್ಯಾದಿಗಳ ವ್ಯವಸ್ಥೆಯನ್ನು ಮಾಡಲು ಸಾಧಕರಿಗೆ ವಹಿಸಿಕೊಡುತ್ತಿದ್ದರು. ವಿದ್ಯಾರ್ಥಿ-ಗಳಲ್ಲಿ ಯಾರಾದರೂ ಬೇನೆ ಬಿದ್ದರೆ ಅವರ ಯೋಗ್ಯ ಆರೈಕೆ ಮಾಡುವುದು ಇತರ ಸಾಧಕರ ಆದ್ಯಕರ್ತವ್ಯವಾಗಿತ್ತು. ಒಟ್ಟಿನಲ್ಲಿ ಗುರುಗಳು ಶಿಷ್ಯರು ಪ್ರಾಧ್ಯಾಪಕರು ಒಂದೇ ಕುಟುಂಬದ ಬಂಧುಗಳಂತೆ ಶಿವಯೋಗಮಂದಿರದಲ್ಲಿ ವಾಸವಾಗಿದ್ದರು. ವಿದ್ಯಾರ್ಥಿಗಳಿಗೆ ಬೋಧಕರು ಶ್ರದ್ಧೆಯಿಂದ ಕಲಿಸುವುದಲ್ಲದೆ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ಹಾನಗಲ್ಲ ಕುಮಾರ ಸ್ವಾಮಿಗಳು ಶಿವಯೋಗ ಮಂದಿರದಲ್ಲಿ ಪ್ರವೇಶ ಪಡೆಯುವ ಸಾಧಕರಿಗೆ ಉಪಯುಕ್ತವಾಗುವಂತೆ

ಶಿಕ್ಷಣ ಕ್ರಮವನ್ನು ಪ್ರಾರಂಭದಲ್ಲಿ ರೂಪಿಸಿದ್ದರು. ಆದರೆ ಆ ಪಠ್ಯಕ್ರಮದಲ್ಲಿ ಕೆಲವು ಕೊರತೆಗಳು ಕಾಣಹತ್ತಿದ್ದವು. 1950ರಲ್ಲಿ ಶಿಕ್ಷಣ ತರಬೇತಿಗಳಲ್ಲಿ ಕಂಡುಬಂದ ಕೊರತೆಗಳನ್ನು ಹೋಗಲಾಡಿಸಿ ನವೀನ ಮಾದರಿಯ ಪಠ್ಯಕ್ರಮವನ್ನು ಸಿದ್ಧಪಡಿಸಿಕೊಡುವಂತೆ ಶಿವಯೋಗಮಂದಿರದ ಟ್ರಸ್ಟ ಕಮೀಟಿಯ ಅಂದಿನ ಅಧ್ಯಕ್ಷರಾದ ಶ್ರೀ ಮನ್ಮಹಾರಾಜ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು ಮೂರುಸಾವಿರಮಠ ಹುಬ್ಬಳ್ಳಿ ಅವರು ಸುಪ್ರಸಿದ್ಧ ಶಿಕ್ಷಣ ತಜ್ಞರೂ, ಲೇಖಕರೂ ಆಗಿದ್ದ ಪ್ರೊ.ಎಸ್.ಎಸ್.ಬಸವನಾಳ ಮತ್ತು ಡಾ॥ ಎಸ್.ಸಿ.ನಂದೀಮಠ ಅವರಲ್ಲಿ ವಿಜ್ಞಾಪಿಸಿ-ಕೊಂಡರು. ವಿದ್ವಾಂಸರೀರ್ವರು ದೀರ್ಘಾಲೋಚಿಸಿ ತಮ್ಮ ತಮ್ಮ ಅರಿವಿಗೆ ಸರಿಕಂಡಂತೆ ಪಠ್ಯಕ್ರಮವನ್ನು ಸಿದ್ಧಪಡಿಸಿಕಳಿಸಿದರು. ಈರ್ವರ ಅಭಿಪ್ರಾಯಗಳು ಹೆಚ್ಚು ಕಡಿಮೆ ಒಂದೇಯಾಗಿರುವುದಾಗಿ ಕಂಡು ಬರುತ್ತದೆ. ಎರಡನ್ನೂ ಕ್ರೋಢೀಕರಿಸಿ ನಾವಿಲ್ಲಿ ಸಂಕ್ಷೇಪವಾಗಿ ವಿವರಿಸಿದ್ದೇವೆ.

ಶಿಕ್ಷಣದ ಅವಧಿ 12 ವರುಷ

ಪ್ರಾಥಮಿಕ 4 ವರುಷ

ಮಾಧ್ಯಮಿಕ 3 ವರುಷ ಪ್ರಾಥಮಿಕ+ಹೈಸ್ಕೂಲ ವಿದ್ಯಾಭ್ಯಾಸಕ್ಕೆ ಸಮ

ವಿಶಾರದ 2 ವರುಷ ಪ್ರೀಯುನಿವರ್ಸಿಟಿ ವಿದ್ಯಾಭ್ಯಾಸಕ್ಕೆ ಸಮ

ಕೋವಿದ 3 ವರುಷ ಪದವಿ ಪರೀಕ್ಷೆ (ಬಿ.ಎ) ವಿದ್ಯಾಭ್ಯಾಸಕ್ಕೆ ಸಮ

ಹೀಗೆ 10–12 ವರ್ಷ ವಯಸ್ಸಿನ ವಿದ್ಯಾರ್ಥಿಗಳು ತಮ್ಮ 22–24 ನೆಯ ವಯಸ್ಸಿಗೆ ಈ ಪಠ್ಯಕ್ರಮವನ್ನು ಪೂರೈಸಬಹುದು. ಈ ವಯಸ್ಸಿಗೆ ಅವರ ಮಾನಸಿಕ ಬೆಳವಣಿಗೆ ಸಾಕಷ್ಟು ವಿಕಾಸಗೊಳ್ಳುವುದು. ಅವರು ಪದವೀಧರರಾಗಿ ಸ್ನಾತಕೋತ್ತರ ಪದವಿಗೆ (ಎಂ.ಎ) ಅಭ್ಯಸಿಸಲಿಚ್ಛಿಸಿದರೆ ಅದಕ್ಕೆ ಅನುಕೂಲ ಮಾಡಿಕೊಡುವ ಅಗತ್ಯವಿದೆ.

(1) ಪ್ರಾಥಮಿಕ ಹಂತದಲ್ಲಿ ಕನ್ನಡ, ಸಂಸ್ಕೃತ, ಇಂಗ್ಲೀಷ ಭಾಷೆಗಳ ತಿಳಿವಳಿಕೆಯನ್ನು ಮಾಡಿಕೊಡಬೇಕು. ಜೊತೆಗೆ ಕರ್ನಾಟಕದ ಮತ್ತು ಭಾರತದ ಇತಿಹಾಸವಿದೆ. ಭೌಗೋಳಿಕ ಪರಿಜ್ಞಾನ ಮಾಡಿಕೊಡಬೇಕು. ವ್ಯಾವಹಾರಿಕ ಗಣಿತವನ್ನು ಕಲಿಸಬೇಕು.

(2) ಪ್ರಾಥಮಿಕ ಹಂತದಲ್ಲಿ ಕಲಿಸಿದ ವಿಷಯಗಳ ಮುಂದುವರಿಕೆ ಮತ್ತು ಹಿಂದೀ ಮತ್ತು ಬೀಜಗಣಿತಗಳನ್ನು ತಕ್ಕಮಟ್ಟಿಗೆ ಹೇಳಿಕೊಡಬೇಕು. ಮ್ಯಾಟ್ರಿಕ್ ಅಥವಾ ಇಂದಿನ ಎಸ್.ಎಸ್.ಎಲ್.ಸಿ ಅಭ್ಯಾಸದ ಪಠ್ಯಕ್ರಮಕ್ಕೆ ಸರಿಯಾಗುವಂತಿರಬೇಕು.

(3) ವಿಶಾರದ ಪದವಿಗೆ ಕನ್ನಡ ವಚನ ವಾಙ್ಮಯ, ವೀರಶೈವದ ಕೆಲವು ಕಾವ್ಯಗಳ ಸ್ಥೂಲ ಪರಿಚಯ ಮಾಡಿಕೊಡಬೇಕು. ಸಂಸ್ಕೃತ, ಕಾವ್ಯ, ಅಲಂಕಾರ, ನಾಟಕಗಳ ಸ್ಥೂಲ ಪರಿಚಯ, ಸುಲಭ ಇಂಗ್ಲೀಷ ಗ್ರಂಥಗಳನ್ನು ಓದಿ ತಿಳಿದುಕೊಳ್ಳುವಷ್ಟು ಪರಿಜ್ಞಾನ ಮಾಡಿಕೊಡಬೇಕು.

ಹಿಂದೀ ಭಾಷೆಯ ಸಾಹಿತ್ಯದ ಕೆಲವು ಕೃತಿಗಳ ಪರಿಚಯ ಮತ್ತು ಪ್ರಾರಂಭಿಕ ವಿಜ್ಞಾನದ ಮೂಲಸೂತ್ರಗಳ ಅರಿವು ಮೂಡಿಸಬೇಕು.

(4) ಕೋವಿದ ಪದವಿಗೆ ವಿಶಾರದ ಅಭ್ಯಾಸ ಕ್ರಮದ ಮುಂದುವರಿದ ವಿಷಯಗಳಿಗೆ ಒತ್ತುಕೊಡಬೇಕು. ಕನ್ನಡದಲ್ಲಿ ಗ್ರಂಥ ರಚಿಸುವ ಸಾಮರ್ಥ್ಯ ಬರುವಂತೆ ಮಾರ್ಗದರ್ಶನ ಮಾಡಬೇಕು. ಹಿಂದೀ ಇಂಗ್ಲೀಷ ಭಾಷೆಗಳಲ್ಲಿ ಲೇಖನ ಬರೆಯುವುದಕ್ಕೂ ಭಾಷಣ ಮಾಡಲಿಕ್ಕೂ ಕಲಿಸಬೇಕು.

ಲಿಂಗಾಯತ ಧರ್ಮ, ತತ್ವ, ಸಾಹಿತ್ಯ, ಇತಿಹಾಸಗಳ ಆಳವಾದ ಅಭ್ಯಾಸಕ್ಕೆ ಪೂರಕವಾದ ಪಠ್ಯಕ್ರಮ ರಚಿಸಬೇಕು. ಭಾರತೀಯ ಷಡ್‌ದರ್ಶನ, ವಿಶ್ವಧರ್ಮಗಳ ಮೂಲತತ್ವಗಳು ಅನುಭಾವ ಶಾಸ್ತ್ರ, ಇತ್ಯಾದಿಗಳ ಪರಿಚಯ ಮಾಡಿಕೊಡಬೇಕು. ತೆಲುಗು, ತಮಿಳು, ಮರಾಠಿ ಭಾಷೆಗಳಲ್ಲಿ ಒಂದು ಭಾಷೆಯನ್ನು ಐಚ್ಛಿಕವಾಗಿ ಅಭ್ಯಸಿಸಬೇಕು.

(5) ಆಚಾರ್ಯ ಸ್ನಾತಕೋತ್ತರ ಪದವಿಗೆ ಲಿಂಗಾಯತ, ಭಾರತೀಯ, ಪಾಶ್ಚಿಮಾತ್ಯ ತತ್ವಜ್ಞಾನಗಳ ಮತ್ತು ವಿಶ್ವಧರ್ಮಗಳ ತುಲನಾತ್ಮಕ ಅಧ್ಯಯನಗಳಿಗೆ ಪ್ರಾಶಸ್ತ್ಯ ಕೊಡಬೇಕು.

ಮೇಲ್ಕಾಣಿಸಿದ ಪಠ್ಯಕ್ರಮವನ್ನು ಕಾರ್ಯಗತಗೊಳಿಸುವುದಕ್ಕೆ ಅಧಿಕ ಧನದ ಅವಶ್ಯಕತೆಯಿದೆ. ವಿದ್ವಾಂಸರಾದ ಪ್ರಾಧ್ಯಾಪಕರನ್ನು ನೇಮಿಸಿಕೊಂಡು ಯೋಗ್ಯ ವೇತನ ಕೊಡಬೇಕಾಗುತ್ತದೆ, ಇತರ ಸೌಲಭ್ಯಗಳನ್ನು ಒದಗಿಸಿಕೊಡ-ಬೇಕಾಗುತ್ತದೆ. ಪಾರದರ್ಶಕ ಆಡಳಿತಕ್ಕೆ ವ್ಯವಸ್ಥಾಪಕ ಮತ್ತು ನೌಕರರನ್ನು ಪಗಾರದ ಮೇಲೆ ನಿಯಮಿಸಿಕೊಳ್ಳುವುದು ಅತ್ಯಾವಶ್ಯಕ. ಇತ್ಯಾದಿ ಕಾರಣಗಳಿಂದಾಗಿ ಪ್ರೊ. ಬಸವನಾಳ ಮತ್ತು ಡಾ॥ ನಂದೀಮಠರು ಶಿವಯೋಗಮಂದಿರ ಸಂಸ್ಥೆಗೆ ಸಾದರ ಪಡಿಸಿದ ಪಠ್ಯಕ್ರಮವು ಕಾರ್ಯಗತವಾದಂತೆ ತೋರುವುದಿಲ್ಲ.

## 11. ಶ್ರೀ ವಿಜಯ ಮಹಾಂತೇಶ ಗ್ರಂಥಾಲಯ :

ಶ್ರೀ ಕುಮಾರ ಶಿವಯೋಗಿಗಳ ದೂರಾನ್ವಯ ದೃಷ್ಟಿಗೆ, ತತ್ಕಾಲಿಕ ಪ್ರಯೋಜನ ಬೀಳುವ ಸತ್ಕಾರ್ಯಕ್ಕೆ, ತಕ್ಷಣ ಗಮನ ಕೊಡುವ ಕ್ರಿಯೆಗೆ, ನಾವು ಬೆರಗು ಪಡುತ್ತೇವೆ. ಧರ್ಮಾಭಿವೃದ್ಧಿಗೆ, ಸಂಸ್ಕೃತಿಯ ಬೆಳವಣಿಗೆಗೆ ಸದ್‌ಗ್ರಂಥಗಳು ಜೀವಜಲವಾಗಿವೆಯೆಂಬುದನ್ನು ಅವರು ಚೆನ್ನಾಗಿ ಅರಿತಿದ್ದರು.

"ಭಯಂಕರವಾದ ಪರ್ವತಗಳು ನುಚ್ಚು ನೂರಾಗುತ್ತವೆ, ಸಾಮ್ರಾಜ್ಯಗಳು ತಲೆಯೆತ್ತಿ ಮರೆಯಾಗುತ್ತವೆ, ನಾಗರಿಕತೆಗಳು ಮೂಡಿ ಮಾಯವಾಗುತ್ತವೆ, ಆದರೆ ಗ್ರಂಥಗಳು ಕಾಲಗರ್ಭದಲ್ಲಿ ನಡೆದುದನ್ನು ನಿತ್ಯನೂತನವಾಗಿ ನಮಗೆ ತಿಳಿಯಪಡಿಸುತ್ತವೆ. ಕಾಲರಾಯನ ಪದತಲದಲ್ಲಿ ನುಚ್ಚುನೂರಾಗಿ ಹೋದ ವ್ಯಕ್ತಿಗಳ ಹೃದಯಾಂತರಾಳವನ್ನು ಅನಂತಕಾಲ ಬಿಚ್ಚಿ ತೋರಿಸಬಲ್ಲ ಅಮರ ಜೀವಿಗಳೆಂದರೆ ಗ್ರಂಥಗಳೇ" ಎಂದು ಕ್ಲೇರನ್ಸಡೇ ಹೇಳಿದ ವಿಚಾರಗಳನ್ನು ಶಿವಯೋಗಿ ಗಳಲ್ಲಿ ಕಾಣುತ್ತೇವೆ. ಅದಕ್ಕೆಂದೆ ಅವರು ಅಮೂಲ್ಯ ಗ್ರಂಥಗಳುಳ್ಳ ಗ್ರಂಥಾಲಯವನ್ನು ಸ್ಥಾಪಿಸಿದರು.

"ಶ್ರೀ ವಿಜಯ ಮಹಾಂತೇಶ ಗ್ರಂಥಾಲಯ"ವೆಂದು ಅದಕ್ಕೆ ನಾಮಕರಣ ಮಾಡಲಾಯಿತು. ತಾವೇ ಸಂಗ್ರಹಿಸಿದ ತಾಳೆಗರಿ, ಕೋರಿಕಾಗದ, ಹಸ್ತಪ್ರತಿಗಳು, ಕನ್ನಡ ಸಂಸ್ಕೃತ ಭಾಷೆಗಳಲ್ಲಿಯ ಲಿಂಗಾಯತ ಧರ್ಮಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಗ್ರಂಥಾಲಯದ ಮೂಲಸಂಗ್ರಹವಾಗಿ ನೀಡಿದರು. ಅದರ ಬೆಳವಣಿಗೆಗೆ ಇದು ನಾಂದಿಯಾಯಿತು. ಅವರ ಕಣ್ಣರಿಕೆಯಲ್ಲಿ ಬೆಳೆದು ನಿಂತಿತು.

"ನಾಡಿನ ನಾನಾ ಭಾಗಗಳಿಂದ ಅನೇಕ ಮಠಾಧಿಪತಿಗಳೂ ಸದ್ಗೃಹಸ್ಥರೂ ಗ್ರಂಥರತ್ನಗಳನ್ನು ಕೊಟ್ಟು ಗ್ರಂಥಭಂಡಾರವನ್ನು ತುಂಬಿದರು. ಅದು ನಾಡಿನ ಉತ್ತಮ ಪುಸ್ತಕಾಲಯಗಳ ಶ್ರೇಣಿಯಲ್ಲಿ ಪರಿಗಣಿತವಾಯಿತು. ಈ ಗ್ರಂಥಭಂಡಾರದಲ್ಲಿ ಮುನ್ನೂರು ರೂಪಾಯಿ ಬೆಲೆಬಾಳಿದ ಈಗ ಅಪ್ರಾಪ್ಯವಾದ 'ವಾಚಸ್ಪತ್ಯ' ಸಂಸ್ಕೃತ ವಿಶ್ವಕೋಶ, ನಾಲ್ಕು ವೇದಗಳು, ಉಪನಿಷತ್ತುಗಳು, ಮಠಾಚಾರ್ಯರ ಭಾಷ್ಯಗಳು, ವ್ಯಾಸಕೃತ ಹದಿನೆಂಟು ಪುರಾಣಗಳು ಅನರ್ಘ್ಯರತ್ನಗಳಾಗಿವೆ. ಶಿರಸಂಗಿ ಲಿಂಗರಾಜರೂ ಸೊಲ್ಲಾಪುರದ ಶ್ರೀಮಂತ ವಾರದ ಮಲ್ಲಪ್ಪನವರು ತಮ್ಮಲ್ಲಿಯ ಗ್ರಂಥ ಸಂಗ್ರಹವನ್ನು ಮಂದಿರದ ಗ್ರಂಥಾಲಯಕ್ಕೆ ದಾನವಾಗಿ ಕೊಟ್ಟುದನ್ನಿಲ್ಲಿ ಸಂಸ್ಥೆಯು ಸ್ಮರಿಸದಿರದು.

"ಅಂತೆಯೇ ಮೈಸೂರು ಪ್ರಾಚ್ಯ ಸಂಶೋಧನ ಶಾಖೆಯವರು ಮತ್ತು ಧಾರವಾಡದ 'ಕನ್ನಡ ಸಂಶೋಧನ ಸಂಸ್ಥೆ'ಯವರು ತಮ್ಮ ತಮ್ಮ ಪ್ರಕಟಣೆಗಳನ್ನು ಇಲ್ಲಿಯ ಭಂಡಾರಕ್ಕೆ ಉಚಿತವಾಗಿ ದಯಪಾಲಿಸುತ್ತ ಬಂದಿದ್ದಾರೆ. ಈಗ ಗ್ರಂಥಾಲಯದಲ್ಲಿ ನಾಲ್ಕು ಸಾವಿರಕ್ಕೂ ಮಿಕ್ಕಿದ ಅಚ್ಚಾದ ಗ್ರಂಥಗಳೂ ಮತ್ತು ಸಾವಿರಕ್ಕೂ ಹೆಚ್ಚಾಗಿ ಓಲೆಗರಿಯ ಅಪೂರ್ವ ಗ್ರಂಥಗಳ ಸಂಗ್ರಹವಿದೆ. "ಈ ಗ್ರಂಥ ಭಂಡಾರವು ಸಂಶೋಧಕ ವಿದ್ವಾಂಸರಿಗೆ, ಪಂಡಿತರಿಗೆ ಪ್ರೇರಣೆಯನ್ನು ನೀಡಿದೆ. ಪಂ. ಉಮಚಗಿಯ ಶಂಕರಶಾಸ್ತ್ರಿಗಳು ಇಲ್ಲಿಯೇ ಉಪನಿಷತ್ತುಗಳಿಗೆ ಸಂಸ್ಕೃತದಲ್ಲಿ ವೀರಶೈವ ಪರ ಭಾಷ್ಯಗಳನ್ನು, ವ್ಯಾಖ್ಯೆಗಳನ್ನು ಬರೆದರು. ಶ್ರೀ ವೀರಬಸಪ್ಪ ಶ್ರೇಷ್ಠಿಯವರು ಭಗವದ್ಗೀತೆಗೆ ಇಂಗ್ಲೀಷನಲ್ಲಿ ವೀರಶೈವ ಪರ ಅರ್ಥವನ್ನು ಬರೆದರು. ದ್ಯಾಂಪುರದ ಶ್ರೀ ಮಹಾಲಿಂಗಯ್ಯನವರು ನಿಜಗುಣರ ಗ್ರಂಥಗಳನ್ನು ಪರಿಷ್ಕರಿಸಿ ಬರೆದರು" (ಬೆಳಗು ಪು. 247)

ಹೀಗೆ ಶ್ರೀ ವಿಜಯ ಮಹಾಂತೇಶ ಗ್ರಂಥಾಲಯವು ಅಂದಿನ ಕಾಲದ ಅಪರೂಪದ ಸಂಶೋಧನ ಗ್ರಂಥಾಲಯವಾಗಿತ್ತೆಂದು ತಿಳಿಯುತ್ತದೆ. ನಾಡಿನಲ್ಲಿ ಪ್ರಖ್ಯಾತಿ ಪಡೆದಿದ್ದ ವಿದ್ವಾಂಸರಾದ ಡಾ. ಫ.ಗು. ಹಳಕಟ್ಟಿ, ಪ್ರೊ. ಶಿ. ಶಿ. ಬಸವನಾಳ, ರೆ. ಉತ್ತಂಗಿ ಚೆನ್ನಪ್ಪ, ಡಾ|| ಆರ್. ಸಿ. ಹಿರೇಮಠ, ಪ್ರೊ. ಎಸ್. ಎಸ್. ಭೂಸನೂರಮಠ ಡಾ|| ಸುಂಕಾಪುರ, ಪಂ. ಹೆಚ್. ದೇವೀರಪ್ಪ ಮುಂತಾದವರಿಗೆ ಗ್ರಂಥಾಲಯದಲ್ಲಿಯ ಗ್ರಂಥ ತಾಳೆಗರಿಗಳಿಂದ ಪ್ರತಿ ಮಾಡಿಸಿ ಕಳಿಸಿದ್ದಕ್ಕೆ ದಾಖಲೆಗಳುಂಟು. ಇದು ಸಂಶೋಧನ ಗ್ರಂಥಾಲಯವಾಗಿದ್ದು ಸಂಶೋಧಕರಿಗೆ ಯೋಗ್ಯ ಮಾಹಿತಿಯನ್ನು ಪೂರೈಸಿ ಸಹಾಯ ಮಾಡುವುದು ಪ್ರಮುಖ ಕರ್ತವ್ಯವಾಗಿದೆ. ಇಂಥ ಕರ್ತವ್ಯವನ್ನು ಇಂದಿಗೆ ಅರ್ಧಶತಮಾನದ ಹಿಂದೆ ನೆರವೇರಿಸಿದ ಈ ಗ್ರಂಥಾಲಯವು ಪುಣೆಯ ಸುಪ್ರಸಿದ್ಧ ಭಾಂಡಾರಕರ ಹಸ್ತಪ್ರತಿ ಸಂಶೋಧನ ಗ್ರಂಥಾಲಯವನ್ನು ನೆನಪಿಗೆ ತರುವಂತಿತ್ತು.

1939ರಲ್ಲಿ ಧಾರವಾಡದ 'ಕನ್ನಡ ಸಂಶೋಧನ ಸಂಸ್ಥೆ'ಯ ನಿರ್ದೇಶಕರಾಗಿದ್ದ ಮತ್ತು ಸಂಶೋಧಕರಾಗಿದ್ದ ಡಾ|| ಆರ್.ಎಸ್. ಪಂಚಮುಖಿಯವರು ಈ ಗ್ರಂಥಾಲಯಕ್ಕೆ ಭೇಟಿಯಿತ್ತು ಬರೆದ ಅಭಿಪ್ರಾಯವನ್ನಿಲ್ಲಿ ಎತ್ತಿ ಕೊಡುತ್ತೇವೆ.

"ಗ್ರಂಥಾಲಯದಲ್ಲಿ ಸಂಗ್ರಹಿಸಲ್ಪಟ್ಟಿರುವ ತಾಳೆಗರಿ ಗ್ರಂಥಗಳ ಪರಿಶೀಲನೆಗಾಗಿ ಬಂದೆ. ಸುವ್ಯವಸ್ಥಿತವಾಗಿ ಜೋಡಿಸಿಟ್ಟ ಹಸ್ತಪ್ರತಿ ಗಳನ್ನು ಕಂಡು ಅತ್ಯಂತ ಸಂತೋಷಪಟ್ಟೆ. ಆದರೂ ಸಹ ಇವುಗಳನ್ನು ಪರೀಕ್ಷಿಸಿ ವಿಷಯಾನುಕ್ರಮವಾಗಿ ಪುನರ್‌ವ್ಯವಸ್ಥೆಗೊಳಿಸುವುದು ಅವಶ್ಯಕತೆಯಿದೆ." ಮೈಸೂರಿನ ಮಹಾರಾಜಾ ಕಾಲೇಜಿನ ಪ್ರೊ. ಕ.ಮ.ರಾಘವಾಚಾರ್ ಅವರು 1946ರಲ್ಲಿ ತಮ್ಮ ಕಾಲೇಜಿನ ಬಿ.ಎ. ಆನರ್ಸ್ ಮತ್ತು ಎಂ.ಎ ವಿದ್ಯಾರ್ಥಿಗಳೊಂದಿಗೆ ಬಂದು ಗ್ರಂಥಭಾಂಡಾರವನ್ನು ನೋಡಿ ಅತ್ಯಂತ ಸಂತೋಷಪಟ್ಟಿದ್ದಾರೆ.

## ಶ್ರೀ ರೇವಣಸಿದ್ಧೇಶ್ವರ ವಾಚನಾಲಯ

ಲಿಂ. ರೇವಣಸಿದ್ಧಯ್ಯನವರು ಶಿವಯೋಗಮಂದಿರದ ಹಿತೈಷಿಗಳಾಗಿದ್ದರು. ಅದರ ಅಭಿವೃದ್ಧಿಗಾಗಿ ತಮ್ಮ ನಿವೃತ್ತ ಜೀವನವನ್ನು ಮುಡುಪಾಗಿಟ್ಟು ಶ್ರಮಿಸಿದರು. ಅವರ ಸ್ಮರಣೆಗಾಗಿ 'ರೇವಣಸಿದ್ಧೇಶ್ವರ ವಾಚನಾಲಯ' ಜನ್ಮ ತಳೆಯಿತು. ನವಿಲುಗುಂದದ ಗವಿಮಠಾಧ್ಯಕ್ಷರಾದ ಶ್ರೀ ಬಸವಲಿಂಗ ಸ್ವಾಮಿಗಳ ಮೂಲ ಪ್ರೇರಣೆಯಿಂದ ಇದು 1934ರಲ್ಲಿ ಪ್ರಾರಂಭವಾಯಿತು. ಲಿಂಗರಾಜ ಕಾಲೇಜಿನ ಅಂದಿನ ಪ್ರಿನ್ಸಿಪಾಲ ಡಾ|| ಶಿ.ಚಿ.ನಂದಿಮಠರು ಪ್ರಾರಂಭೋತ್ಸವದ ಮುಖ್ಯ ಉದ್ಘಾಟಕರಾಗಿ ಆಗಮಿಸಿದ್ದರು.

ಇದರ ಮುಖ್ಯ ಉದ್ದೇಶವು ವಟು-ಸಾಧಕರಿಗೆ ಪ್ರಚಲಿತ ವಿಷಯಗಳ ಪರಿಚಯ ಮಾಡಿಕೊಡುವುದಾಗಿತ್ತು. ಕನ್ನಡ ದೈನಿಕ, ಸಾಪ್ತಾಹಿಕ, ಪಾಕ್ಷಿಕ ಮತ್ತು ಮಾಸಿಕ ಪತ್ರಿಕೆಗಳನ್ನು ಈ ವಾಚನಾಲಯಕ್ಕೆ ತರಿಸಿಕೊಳ್ಳಲಾಗುತ್ತಿತ್ತು. ಇಂದು ಅದು ಅಸ್ತಿತ್ವದಲ್ಲಿದೆಯೆಂಬ ವಿಷಯ ಈ ಲೇಖಕನ ಗಮನಕ್ಕೆ ಬಂದಿಲ್ಲ.

ಕೆಲವು ಮಹತ್ವದ ಮಾಸಿಕ, ತ್ರೈಮಾಸಿಕ ಪತ್ರಿಕೆಗಳ ಹಿಂದಿನ ಸಂಚಿಕೆ (ಸಂಪುಟ)ಗಳನ್ನು ಸಂಗ್ರಹಿಸುತ್ತ ಬಂದಿದ್ದರೆ ಇಂದು ಅದು ಅಮೂಲ್ಯ ಆಸ್ತಿಯಾಗಿ ಗಣಿಸಲ್ಪಡುತ್ತಿತ್ತು. ಕಾಲಾಯತಸ್ಮೈ ನಮಃ

## ಸುಕುಮಾರ ಪತ್ರಿಕೆ

ಶಿವಯೋಗಮಂದಿರದ ಕಾರ್ಯಚಟುವಟಿಕೆಗಳು ಕ್ರಮೇಣ ವೈವಿಧ್ಯಮಯವಾಗಿ ವಿಸ್ತಾರಗೊಳ್ಳುತ್ತ ನಡೆದವು. ಸಾಧಕರಲ್ಲಿ ಲೇಖನ ಕಲೆ ಕುದುರಿದಂತೆ 'ಸುಕುಮಾರ' ಎಂಬ ತಲೆಬರಹದ ಕೈಬರಹದ ಪತ್ರಿಕೆಯನ್ನು ಹೊರಡಿಸಲು ನಿರ್ಧರಿಸಲಾಯಿತು.

ಅದರ ಸಂಪಾದಕರು ಶ್ರೀ ಬಸವಲಿಂಗದೇವರಾಗಿದ್ದರು. ಅಡ್ನೂರ ಚಂದ್ರಶೇಖರ ದೇಶಿಕರು (ಜಚನಿ) ಸುಂದರ ಹಸ್ತಾಕ್ಷರಗಳಲ್ಲಿ ಎಲ್ಲ ಲೇಖನಗಳನ್ನು ಬರೆಯುತ್ತಿದ್ದರು. ಶ್ರೀ ಸದಾಶಿವ ಸ್ವಾಮಿಗಳು ಆಕರ್ಷಕ ಅಂದವಾದ ಸಂದರ್ಭೋಚಿತ ಚಿತ್ರ ಬರೆದು ಹಸ್ತಪ್ರತಿಯ ಸೊಬಗನ್ನು ಹೆಚ್ಚಿಸುತ್ತಿದ್ದರು. 1951ರಲ್ಲಿ 'ಸುಕುಮಾರ' ಅಚ್ಚಿನ ಮನೆ ಸೇರಿ ಮಾಸಿಕ ಪತ್ರಿಕೆಯಾಗಿ ಶ್ರೀ ಉಮಾಪತಿ ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಪ್ರಕಟವಾಯಿತು. ಪ್ರಕಟನೆಯು ಪ್ರತಿತಿಂಗಳ ತಪ್ಪದೆ ಹೊರಬೀಳುವಷ್ಟು ಸಶಕ್ತವಾಯಿತು. 'ಹಮ್ಮೀರ ಕಾವ್ಯ' 'ಪರಮಾರ್ಥ ಪ್ರಕಾಶಿಕೆ' 'ಲಿಂಗಧಾರಣ ಚಂದ್ರಿಕೆ' 'ಮಣಿ ಮುಕುರ' ಮುಂತಾದ ಮಹತ್ವದ ಕೃತಿಗಳು ಧಾರಾವಾಹಿಯಾಗಿ ಸುಕುಮಾರದಲ್ಲಿ ಪ್ರಕಟವಾಗಿವೆ. 1955ರಲ್ಲಿ ನಿವೃತ್ತ ಶಿರಸ್ತೇದಾರ ಎಸ್.ಎಫ್.ಪಾಟೀಲರು ಸಂಪಾದಕರಾದರು. 1958ರವರೆಗೆ ಅವರು ಸಂಪಾದಿಸುತ್ತ ಬಂದಿದ್ದು, ಅನಂತರ ಪಂ.ಗುರುಸಿದ್ಧ ಶಾಸ್ತ್ರಿಗಳು ಸಂಪಾದಕತ್ವ ವಹಿಸಿ ಅದನ್ನು ಜನಪ್ರಿಯಗೊಳಿಸಿದರು. ಮುನಃ 2-3 ವರುಷಗಳಲ್ಲಿ 'ಸುಕುಮಾರ' ಏಕಾಏಕಿ ನಿಂತು ಹೋಯಿತು. ಇಪ್ಪತ್ತು ವರುಷ ಪ್ರಕಟವಾದ ಸುಕುಮಾರದ ಎಲ್ಲ ಸಂಚಿಕೆಗಳು ಇಂದು ಲಭ್ಯವಿಲ್ಲ. ಬೆಳಗಾವಿ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿ ಕೆಲವು ಸಂಪುಟಗಳಲ್ಲಿ ಇನ್ನು ಕೆಲವು ಅಪೂರ್ಣ ಸಂಪುಟಗಳಲ್ಲಿ ಲಭ್ಯವಿವೆ.

ಬೆಳಗಾವಿಯ ರುದ್ರಾಕ್ಷಿಮಠಾಧ್ಯಕ್ಷರಾದ ಶ್ರೀ ಸಿದ್ಧರಾಮ ಸ್ವಾಮಿಗಳು 2001-2004ರವರೆಗೆ ಶಿವಯೋಗಮಂದಿರ ಆಡಳಿತ ಮಂಡಳಿಯ ಉಪಾಧ್ಯಕ್ಷರಾಗಿದ್ದಾಗ 'ಸುಕುಮಾರ'ವನ್ನು ಪುನಃಶ್ಚೇತನಗೊಳಿಸಿ ಪ್ರಕಟಿಸಿದರು.

## ಶ್ರೀ ಸದಾಶಿವ ಮುದ್ರಣಾಲಯ

"ಶಿವಯೋಗಮಂದಿರದಲ್ಲಿ ಅಚ್ಚುಕೂಟವನ್ನು ಸ್ಥಾಪಿಸಿ ಅದರ ಮುಖಾಂತರ ಮಾಸಿಕ, ಸಾಪ್ತಾಹಿಕ ಪತ್ರಿಕೆಗಳನ್ನು ಪ್ರಕಟಿಸಿ ಧಾರ್ಮಿಕ ವಿಚಾರಗಳನ್ನು ಸುಲಭವಾಗಿ ಸಾಮಾನ್ಯ ಜನತೆಗೂ ಮುಟ್ಟಿಸುವ ಮತ್ತು ಪ್ರಕಟವಾಗದಿರುವ ಪ್ರಾಚೀನ ವೀರಶೈವ ಸಾಹಿತ್ಯವನ್ನು ಸಂಶೋಧಿಸಿ ಪ್ರಚುರ ಪಡಿಸುವುದು ಶಿವಯೋಗಮಂದಿರದ ಉದ್ದೇಶಗಳಲ್ಲಿ ಒಂದಾಗಿದೆ. ಆಗ ಶಿವಯೋಗಮಂದಿರದಲ್ಲಿ ಇನ್ನೂ ಕಟ್ಟಡಗಳಾಗಿರಲಿಲ್ಲ. ಸಾರಿಗೆಯ ಸೌಕರ್ಯವಿರಲಿಲ್ಲ. ಹೀಗಾಗಿ ಈ ಉದ್ದೇಶ ಇನ್ನೂ ಕೈಗೂಡಿರಲಿಲ್ಲ. ಆದರೆ ಪೂಜ್ಯಶ್ರೀಗಳು ಈ ಮಹೋದ್ದೇಶವನ್ನು ಗದಗ, ಧಾರವಾಡ, ಹಾವೇರಿ ನಗರಗಳಲ್ಲಿ ಮುದ್ರಣಾಲಯಗಳನ್ನು ಸ್ಥಾಪಿಸಿ ಕಾರ್ಯಗತಗೊಳಿಸಿದರು (ಬೆಳಗು 249)

ಹಾವೇರಿಯಲ್ಲಿ ಹುಕ್ಕೇರಿ ವಿರಕ್ತಮಠದ ಆವಾರದಲ್ಲಿ ಇದು 'ಶಿವಲಿಂಗ ವಿಜಯ' ಮುದ್ರಣಾಲಯವೆಂಬ ಹೆಸರಿನಲ್ಲಿ ಮೂಡಿ ಬಂತು. ಕೆಲವು ಚಿಕ್ಕಪುಟ್ಟ ಪುಸ್ತಕಗಳನ್ನು ಪ್ರಕಟಿಸುವುದರೊಂದಿಗೆ ಶಿರಾಳಕೊಪ್ಪದ ಶ್ರೀ ಚೆನ್ನಮಲ್ಲಿಕಾರ್ಜುನರು 'ಸದ್ಧರ್ಮ ದೀಪಿಕೆ' ಮಾಸಪತ್ರಿಕೆಯನ್ನು ಇದರಲ್ಲಿಯೇ ಮುದ್ರಿಸಿ ಪ್ರಚುರಪಡಿಸಹತ್ತಿದರು. ಆದರೆ ಕೆಲವು ವರುಷಗಳ ನಂತರ ಮೈಸೂರಿಗೆ ಹೋಗಿ ನೆಲೆಸಿದರು. ಜೊತೆಗೆ 'ಸದ್ಧರ್ಮ ದೀಪಿಕೆ'ಯನ್ನು ಕರೆದೊಯ್ದರು. ಆಗ ಮುದ್ರಣಾಲಯ ಕೆಲಸವಿಲ್ಲದೆ ಅನಾಥವಾಯಿತು.

ಮುನಃ ನವಿಲುಗುಂದ ಶ್ರೀ ಬಸವಲಿಂಗ ಮಹಾಸ್ವಾಮಿಗಳವರ ನಿರ್ದೇಶನದಂತೆ ಶಿವಯೋಗ ಮಂದಿರಕ್ಕೆ ಸ್ಥಳಾಂತರವಾಯಿತು. ಸದಾಶಿವ ಮುದ್ರಣಾಲಯ ಎಂದು ನಾಮಾಂತರ ಹೊಂದಿತು.

## ಸಂಗೀತ ಶಾಲೆ

ಭಾಷೆ, ಬಣ್ಣ, ಜಾತಿ, ದೇಶಗಳ ಗಡಿಗಳನ್ನು ದಾಟಿ ಮಾನವರೆಲ್ಲರಿಗೆ ಮನಾನಂದವನ್ನು ನೀಡಬಲ್ಲ ಶಕ್ತಿ ಸಂಗೀತಕ್ಕಿದೆ. ಭಾಷಣ, ಕೀರ್ತನ, ಪುರಾಣ ಪ್ರವಚನಗಳಿಗಿಂತ ಸಂಗೀತವನ್ನು ಜನ ಹೆಚ್ಚಾಗಿ ಮೆಚ್ಚುತ್ತಾರೆ. ಶ್ರೀಕುಮಾರಸ್ವಾಮಿಗಳು ಗಾನವಿಶಾರದ ಶ್ರೀ ಪಂಚಾಕ್ಷರಿ ಗವಾಯಿಗಳನ್ನು ಸಾಕಿ ಸಲುಹಿದ್ದರು. 1914ರಲ್ಲಿ ಬಸವಜಯಂತಿ ಶುಭದಿನದಂದು ರೋಣ ತಾಲೂಕಿನ ನಿಡಗುಂದಿಕೊಪ್ಪದ ಶಿವಯೋಗಮಂದಿರ ಶಾಖಾಮಠದಲ್ಲಿ 8–10 ವಿದ್ಯಾರ್ಥಿಗಳಿಗಾಗಿ ಸಂಗೀತ ಶಾಲೆಯೊಂದನ್ನು ತೆರೆದರು. ಅದಕ್ಕೆ ಶ್ರೀ ಪಂಚಾಕ್ಷರ ಗವಾಯಿಗಳನ್ನು ಮುಖ್ಯಸ್ಥರನ್ನಾಗಿ ನೇಮಿಸಿದರು.

ಶಿವಯೋಗಮಂದಿರದಲ್ಲಿ ತರಬೇತಿ ಪಡೆಯುತ್ತಿದ್ದ ಸಾಧಕರಿಗೆ ಸಂಗೀತ ಜ್ಞಾನ ಮಾಡಿಕೊಡುವುದರಿಂದ ಅವರ ಭಾವೀಜೀವನದಲ್ಲಿ ಅದು ಉಪಯುಕ್ತವಾಗುವದೆಂದು ಶ್ರೀಗಳು ಭಾವಿಸಿದ್ದರು. ನಿಡಗುಂದಿ ಕೊಪ್ಪದಲ್ಲಿದ್ದ ಶ್ರೀ ಪಂಚಾಕ್ಷರ ಗವಾಯಿಗಳನ್ನು ಕರೆಯಿಸಿಕೊಂಡರು. ಸಂಗೀತ ಶಾಲೆಯನ್ನು ಪ್ರಾರಂಭಿಸಿ ಮುಖ್ಯಸ್ಥರನ್ನಾಗಿ ನೇಮಿಸಿದರು. ಕೆಲವೇ ವರುಷಗಳಲ್ಲಿ ಸಂಗೀತಶಾಲೆ ಪ್ರಸಿದ್ಧಿ ಪಡೆಯಿತು. 50ಕ್ಕೂ ಹೆಚ್ಚು ವಿದ್ಯಾರ್ಥಿಗಳು ಸಂಗೀತ ಕಲಿಯಲು ಬಂದರು.

ಶ್ರೀ ಪಂಚಾಕ್ಷರಿ ಗವಾಯಿಗಳು ಹುಟ್ಟುಕುರುಡರು. ಅವರ ಶಿಷ್ಯತ್ವ ವಹಿಸಿದವರಲ್ಲಿ ದೃಷ್ಟಿಹೀನರಿಗೆ ಹೆಚ್ಚಿನ ಗಮನ ಕೊಡುತ್ತಿದ್ದರು. ಸಂಗೀತ ವಿದ್ಯೆಯಿಂದ ಅಂಧಮಕ್ಕಳು ಜೀವನ ನಿರ್ವಹಣೆ ಮಾಡಿಕೊಳ್ಳುವುದರ ಜೊತೆಗೆ ಸಮಾಜ ಸೇವೆಯನ್ನೂ ಮಾಡಿಕೊಳ್ಳುವರೆಂಬ ಉದ್ದೇಶದಿಂದ ಸ್ವಾಮಿಗಳು ಸಂಗೀತ ಶಾಲೆಯನ್ನು ಪ್ರಾರಂಭಿಸಿದ್ದರು. ಶಾಲೆಯಲ್ಲಿ ಸಾವಿರಾರು ವಿಕಲಾಂಗರು ಸಂಗೀತವನ್ನು ಕಲಿತು. ಬಾಳಿನಲ್ಲಿ ಬೆಳಕು ಕಾಣುವಂತಾಯಿತು.

1939ನೆಯ ವರುಷಕ್ಕೆ ಸಂಗೀತಶಾಲೆಗೆ 25 ವರುಷ ತುಂಬಿದವು. ಬೆಳ್ಳಿಹಬ್ಬವನ್ನು ಆಕರ್ಷಕವಾಗಿ ಆಚರಿಸಲಾಯಿತು. ಡಾ॥ ಫ.ಗು.ಹಳಕಟ್ಟಿಯವರು ಸಂಗೀತಶಾಲೆಯ ದೀರ್ಘಕಾಲದ ಸೇವೆಯನ್ನು ಬಾಯಿತುಂಬ ಹೊಗಳಿದರು.

ಕಾರಣಾಂತರಗಳಿಂದ ಸಂಗೀತ ಶಾಲೆಯು ಗದಗಿಗೆ ಸ್ಥಳಾಂತರಗೊಂಡಿತು. ಶ್ರೀಗವಾಯಿಗಳು ಅಲ್ಲಿ ವೀರೇಶ್ವರ ಪುಣ್ಯಾಶ್ರಮವನ್ನು ನಿರ್ಮಿಸಿಕೊಂಡು ಲಿಂಗಾನುಷ್ಠಾನ ಮಾಡುತ್ತ ವಿದ್ಯಾರ್ಥಿಗಳಿಗೆ ಸಂಗೀತ ಕಲಿಸುತ್ತ 13–7–1944 ರಂದು ಲಿಂಗೈಕ್ಯರಾದರು. ಅವರ ಪಟ್ಟದ ಶಿಷ್ಯರಾದ ವಿದ್ವಾನ್ ಪುಟ್ಟರಾಜ ಗವಾಯಿಗಳು ಆಶ್ರಮವನ್ನು ಅಭಿವೃದ್ಧಿ ಪಡಿಸುತ್ತ ಭಾರತದಲ್ಲಿಯೇ ಶ್ರೇಷ್ಠ ತರಗತಿಯ ಸಂಗೀತ ಶಾಲೆಯನ್ನಾಗಿ ಅದನ್ನು ಪರಿವರ್ತಿಸಿದ್ದಾರೆ. ಆದರೆ ಶಿವಯೋಗಮಂದಿರದಲ್ಲಿ ಸಂಗೀತ ಅಭ್ಯಾಸಕ್ಕೆ ಇಂದು ಸೌಲಭ್ಯಗಳಿಲ್ಲ.

## ಶಿವಯೋಗಮಂದಿರದ ಶಾಖೆಗಳು

ಶ್ರೀಕುಮಾರ ಸ್ವಾಮಿಗಳು ತಾವು ಜೀವಿಸಿರುವಾಗಲೇ ನಿಡಗುಂದಿಕೊಪ್ಪ, ರಾಮಗಡ್ಡಿ, ಕಪನಳ್ಳಿ, ಹಿರೇಹಾಳ, ಬದಾಮಿ ಈ ಊರುಗಳಲ್ಲಿ ಮಂದಿರದ ಶಾಖೆಗಳನ್ನು ತೆರೆದರು. ಒಕ್ಕಲುತನದಲ್ಲಿ ಸುಧಾರಣೆ, ಗೋಸಂರಕ್ಷಣೆಯ ಕ್ರಮ, ಹಣ್ಣಿನ ತೋಟ ಬೆಳೆಸುವುದು ಇತ್ಯಾದಿಗಳ ಮಾಹಿತಿಯನ್ನು ಗ್ರಾಮೀಣ ಜನರಲ್ಲಿ ಪ್ರಚಾರ ಮಾಡುವ ಉದ್ದೇಶ ಅವರದಾಗಿತ್ತು. ಪುರಾಣ ಪ್ರವಚನ, ಶಿವಾನುಭವ ಗೋಷ್ಠಿಗಳ ಮುಖಾಂತರ ಜನ ಸಾಮಾನ್ಯರಲ್ಲಿ ನೈತಿಕ ಮೌಲ್ಯಗಳು ಹೆಚ್ಚುವಂತೆ ಮಾಡಿದರು. ಶಾಖಾ ಮಂದಿರಗಳು ಶ್ರೀ ಕುಮಾರ ಸ್ವಾಮಿಗಳ ಕರ್ತೃತ್ವ ಶಕ್ತಿಗೆ ಸಾಕ್ಷಿಯಾಗಿವೆ. ಆದರೆ ಇಂದು ಇಲ್ಲಿ ಶ್ರೀಗಳು ಹಾಕಿಕೊಟ್ಟ ಮಾರ್ಗಾನುಯಾಯಿಗಳ ಕೊರತೆ ಎದ್ದು ಕಾಣುತ್ತಿದೆ.

■■

# ಶಿವಯೋಗಮಂದಿರ

• ಡಾ. ಶಿವಾನಂದ ಮೂಲಿಮನಿ

ಕನ್ನಡ ನಾಡಿನ ಪುರುಷರಲ್ಲೊಬ್ಬರಾದ ಹಾನಗಲ್ಲ ಕುಮಾರ ಸ್ವಾಮಿಗಳ ಸತ್‌ಸಂಕಲ್ಪದ ಸಾಕಾರರೂಪ ಶಿವಯೋಗಮಂದಿರ. ಮಹಾಮಹಿಮರೂ ಪರಮತಪಸ್ವಿಗಳೂ ಆದ ಚಿತ್ತರಗಿ ಮಹಾಂತ ಶಿವಯೋಗಿಗಳು ತೋರಿದ ಮಲಪ್ರಭಾ ನದಿಯ ದಂಡೆಯ ಮೇಲಿನ ನಿಸರ್ಗರಮ್ಯ ಪ್ರಶಾಂತ ಸ್ಥಳ ಶಿವಯೋಗಮಂದಿರ. ನಾಡಿನ ಸಮಸ್ತ ಹರ-ಗುರು-ಚರಮೂರ್ತಿಗಳ ಆಶೀರ್ವಾದ ಬೆಂಬಲ ಮತ್ತು ಮಾರ್ಗದರ್ಶನದಲ್ಲಿ ರೂಪಗೊಂಡ ಮಹಾಸಂಸ್ಥೆ ಶಿವಯೋಗಮಂದಿರ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಲಿಂಗಾಯತ ಸಮಾಜವನ್ನು ಮುತ್ತಿದ ಗಾಢಾಂಧಕಾರವನ್ನು ಹೊಡೆದೊಡಿಸಲು ಉದಯಿಸಿ ಬಂದ ತರುಣ ಭಾಸ್ಕರ ಶಿವಯೋಗ ಮಂದಿರ. ಗುರು ವಿರಕ್ತ ವಟುಗಳಿಗೆ ಯೋಗ-ನೈತಿಕ-ಧಾರ್ಮಿಕ ಶಿಕ್ಷಣವನ್ನಿತ್ತು ತನ್ಮೂಲಕ ತಪಸ್ತೇಜಸ್ಸಿನಿಂದ ಕೂಡಿದ; ಸದ್ಗುಣ-ಸದಾಚಾರ ಸಂಪನ್ನ, ಸಮಾಜ ಸೇವಾಸಕ್ತ ಜ್ಞಾನವಂತ ಆದರ್ಶ ಧರ್ಮಗುರುಗಳ ತರಬೇತಿ ಕೇಂದ್ರ ಶಿವಯೋಗಮಂದಿರ. ಶಿವಾನುಭವ ಪ್ರಸಾರ ಹಾಗು ಪ್ರಚಾರದ ಅರಿವಿನ ಮನೆ ಶಿವಯೋಗಮಂದಿರ. ಬಸವಾದಿ ಶಿವಶರಣರ ಪವಿತ್ರ ಪರಂಪರೆಯನ್ನು ಸಂರಕ್ಷಿಸಿ ಪ್ರಕಟಿಸುತ್ತಿರುವ ಸರಸ್ವತಿ ಸದನ ಶಿವಯೋಗಮಂದಿರ. ಅವಜ್ಞೆಗೊಳಗಾದ ಸಂಗೀತಕ್ಕೆ ಜೀವತುಂಬಿದ ಕಲಾಕ್ಷೇತ್ರ ಶಿವಯೋಗಮಂದಿರ. ಪ್ರಾಚೀನ ವಿದ್ಯಾಸಂಸ್ಥೆಗಳಾದ ತಕ್ಷಶಿಲೆ, ನಳಂದಾ, ವಿಕ್ರಮಶಿಲೆಗಳ ಮಾದರಿಯಲ್ಲಿ ಅಡಿಯಿಡುತ್ತಿರುವ ಅಪರೂಪದ ಸಂಸ್ಥೆ ಶಿವಯೋಗಮಂದಿರ. ನೀತಿವಂತ, ನ್ಯಾಯವಂತ, ಧರ್ಮವಂತ, ಬುದ್ಧಿವಂತ ಗುರುವರ್ಗವನ್ನು ಸೃಷ್ಟಿಮಾಡಿ, ಗುರುವಿರಕ್ತರ ಕಲಹಕ್ಕೆ ಕೊನೆ ಹಾಡಿ ಸಮಾಜದಲ್ಲಿ ಐಕ್ಯತೆಯನ್ನು ನಿರ್ಮಿಸಲು ನಾಂದಿ ಹಾಡಿದ ಅಪರೂಪದ ಸಂಸ್ಥೆ ಶಿವಯೋಗಮಂದಿರ.

**ಶ್ರೀ ವಿಜಯ ಮಹಾಂತೇಶ್ವರ ಗ್ರಂಥಾಲಯ :**

ಧರ್ಮರಕ್ಷಣೆಯ ಜೊತೆಗೆ ನಮ್ಮ ಘನಸಂಸ್ಕೃತಿಯ ಸಂರಕ್ಷಣೆಯ ಹೊಣೆಯನ್ನು ಶಿವಯೋಗಮಂದಿರ ಹೊತ್ತುಕೊಂಡಿತು. ಧರ್ಮಾಭಿವೃದ್ಧಿ ಹಾಗು ಸಂಸ್ಕೃತಿಯ ವಿಕಾಸಕ್ಕೆ ಉದ್ಗ್ರಂಥಗಳು ತುಂಬ ಪ್ರಯೋಜನಕಾರಿಯೆಂದರಿತ 'ಶಿವಯೋಗಿಗಳು ಗ್ರಂಥ ಸಂಗ್ರಹಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ಕೈಕೊಂಡರು. ಮನೆ-ಮಠಗಳ ಮಾಳಿಗೆಗಳನ್ನೇರಿ ಹುಳು-ಹುಪ್ಪಡಿಗಳ ಆಹಾರವಾಗಿ ಬಿದ್ದ ಪ್ರಾಚೀನ ಗ್ರಂಥಗಳನ್ನು ಕೋರಿ ಕಾಗದ-ಹಸ್ತಪ್ರತಿಗಳನ್ನು ತಾಡವೋಲೆಗಳನ್ನು ಪತ್ತೆ ಹಚ್ಚಿ ಸಂಗ್ರಹಿಸಿದರು. ಶ್ರೀಗಳ ಈ ಪವಿತ್ರಕಾರ್ಯಕ್ಕೆ ಸಮಾಜವೂ ಕೈಜೋಡಿಸಿತು. ಧರ್ಮ-ಸಂಸ್ಕೃತಿಗಳಿಗೆ ಸಂಬಂಧಿಸಿದ ಅಮೂಲ್ಯ ಸಾಹಿತ್ಯರಾಶಿ ಕೂಡಿಬಿತ್ತು. ತ್ಯಾಗವೀರ ಲಿಂಗರಾಜರೂ, ವಾರದ ಮಲ್ಲಪ್ಪನವರು ತಮ್ಮ ಗೃಹಗ್ರಂಥಾಲಯಗಳನ್ನು ಉದಾರವಾಗಿ ದಾನವಿತ್ತರು. ಮೈಸೂರು ಪ್ರಾಚ್ಯಸಂಶೋಧನೆ ಶಾಖೆ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಗಳು ತಮ್ಮ ಪ್ರಕಟನೆಗಳನ್ನು ಉಚಿತವಾಗಿ ದಯಪಾಲಿಸಿದವು. ಹೀಗಾಗಿ ನಾಲ್ಕು ಸಾವಿರಕ್ಕೂ ಮಿಕ್ಕಿದ ಗ್ರಂಥಗಳೂ, ಸಾವಿರಕ್ಕೂ ಹೆಚ್ಚಾದ ಓಲೆ ಗರಿಯ ಗ್ರಂಥರಾಶಿ ಸಂಗ್ರಹಗೊಂಡು 'ಶ್ರೀ ವಿಜಯ ಮಹಾಂತೇಶ ಗ್ರಂಥಾಲಯ'ವೆಂಬ ಅಭಿದಾನವನ್ನು ಹೊತ್ತು ನಿಂತಿತು. ಪುಣೆಯ ಭಂಡಾರಕರ ಹಸ್ತಪ್ರತಿ ಸಂಶೋಧನಾ ಸಂಸ್ಥೆಯ ನೆನಪು ತರುವಂತೆ ರೂಪಗೊಂಡಿತು. ಸಂಶೋಧಕರ, ಸಾಹಿತ್ಯಾಸಕ್ತರ ನಿತ್ಯಯಾತ್ರಾ ಸ್ಥಳವಾಯಿತು.

ಸ್ವಾತಂತ್ರ್ಯಾನಂತರ ಈ ಮಹಾನ್ ಗ್ರಂಥಾಲಯಕ್ಕೆ ಗ್ರಹಣ ಹಿಡಿಯಿತು. ಗ್ರಂಥಾಲಯ ಅವ್ಯವಸ್ಥೆಯ ಆಗರವಾಯಿತು. ಸುಮಾರು ಸಾವಿರ ಗ್ರಂಥಗಳು ಕಣ್ಮರೆಯಾದವು. ಇದ್ದ ಗ್ರಂಥಗಳು ಜೀರ್ಣಗೊಂಡಿದ್ದವು. ಓದಲು ನಿರುಪಯುಕ್ತವೆನಿಸಿದವು. ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಶ್ರೀಮ.ನಿ.ಪ್ರ ಸಿದ್ಧರಾಮ ಮಹಾಸ್ವಾಮಿಗಳು ವಿಶಿಷ್ಟ ಮಂಡಳಿಯ ಅಧ್ಯಕ್ಷರಾಗಿದ್ದಾಗ ಪ್ರಸಿದ್ಧ ಗ್ರಂಥಾಲಯ ವಿಜ್ಞಾನಿ ಡಾ. ಎಸ್.ಆರ್.ಗುಂಜಾಳ ಅವರ ಸಹಾಯ-ಸಹಕಾರದಿಂದ ವೈಜ್ಞಾನಿಕವಾಗಿ ಸಂಯೋಜಿಸಿ, ರಟ್ಟು-ಕಟ್ಟು ಹಾಕಿಸಿ ವರ್ಗೀಕರಿಸಿ, ಕಾರ್ಡಕೆಟಲಾಗ್, ಬೆರಳಚ್ಚಿನ ಕೆಟಲಾಗ ಸಿದ್ಧಪಡಿಸಿ, ಹೊಸ ಬಗೆಯ ಕಬ್ಬಿಣ ಕಪಾಟುಗಳನ್ನು ಖರೀದಿಸಿ ಎಲ್ಲ ಸಲಕರಣೆಗಳೊಂದಿಗೆ

ಶಿವಯೋಗಮಂದಿರಕ್ಕೆ ತಲುಪಿಸಲಾಯಿತು. ಸುಮಾರು ಎರಡು ವರ್ಷಗಳ ನಿರಂತರ ಪ್ರಯತ್ನದಿಂದ ಶ್ರೀ ವಿಜಯಮಹಾಂತೇಶ ಗ್ರಂಥಾಲಯ ವೈಜ್ಞಾನಿಕವಾಗಿ ರೂಪಗೊಂಡಿತು.

**ಸುಕುಮಾರ ಪತ್ರಿಕೆ :**

ಅಜ್ಞಾನ, ಬಡತನ, ಮೂಢನಂಬಿಕೆ, ಸಂಕುಚಿತ ಪ್ರವೃತ್ತಿ, ಒಣ ಆತ್ಮ ಪ್ರತ್ಯಯಗಳಿಂದ ಲಿಂಗಾಯತ ಸಮಾಜ ಅಧೋಗತಿಗಿಳಿದಿತ್ತು. ಹೊಡೆದಾಟ ಬಡಿದಾಟಗಳಿಂದ ಕೋರ್ಟು ಕಚೇರಿಗಳನ್ನು ಸುತ್ತಿ ಸುತ್ತಿ ನಿತ್ರಾಣವಾಗಿತ್ತು. ಗುರುವರ್ಗವೂ ಇದಕ್ಕೆ ಹೊರತಾಗಿರಲಿಲ್ಲ. ಸಮಾಜಕ್ಕೆ ಮಾರ್ಗದರ್ಶನ ಮಾಡುವವರೇ ವಿರಳರಾಗಿದ್ದಾಗ ಶ್ರೀ ಕುಮಾರ ಸ್ವಾಮಿಗಳು ಅವತಾರ ಪುರುಷರಾಗಿ ಅವತರಿಸಿದರು. ನಾನಾವಿಧವಾಗಿ ಸಮಾಜವನ್ನು ತಿದ್ದುವ ಹೊಸ ಯೋಜನೆಗಳನ್ನು ಸಿದ್ಧಪಡಿಸಿದರು. ಅಂಥವುಗಳಲ್ಲಿ ಸುಕುಮಾರ ಪತ್ರಿಕೆಯ ಪ್ರಕಟಣೆಯೂ ಒಂದು.

೧೯೪೪ರಲ್ಲಿ ಮೂರುಸಾವಿರಮಠದ ಲಿಂ. ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳ ಪ್ರೇರಣೆಯಂತೆ ಶಿವಯೋಗ ಮಂದಿರದ ಮುಖ ಪತ್ರಿಕೆಯಾಗಿ ಒಂದು ಮಾಸಪತ್ರಿಕೆಯನ್ನು ಪ್ರಕಟಿಸುವ ನಿರ್ಧಾರ ಕೈಕೊಳ್ಳಲಾಯಿತು. ಪತ್ರಿಕೆಯ ಸಮಸ್ತ ಜವಾಬ್ದಾರಿಯನ್ನು ಶ್ರೀ ಜಿ. ಎಂ. ಉಮಾಪತಿಶಾಸ್ತ್ರಿಗಳಿಗೆ ಒಪ್ಪಿಸಲಾಯಿತು. ಪತ್ರಿಕೆಗೆ ಸುಕುಮಾರ ಎಂಬ ಸುಂದರ ಹೆಸರನ್ನು ನಾಮಕರಣ ಮಡಲಾಯಿತು. ಸುಕುಮಾರ ಪತ್ರಿಕೆಯ ಪ್ರಾರಂಭೋತ್ಸವವನ್ನು ಹಾನಗಲ್ಲ ಸದಾಶಿವ ಮಹಾಶಿವಯೋಗಿಗಳು ನೆರವೇರಿಸಿದರು.

ಸುಕುಮಾರ ಪ್ರೌಢ ಬರವಣಿಗೆಗೆ ಪ್ರಸಿದ್ಧವಾದ ಪತ್ರಿಕೆ. ನಮ್ಮ ನಾಡಿನ ಕಲೆ ಸಾಹಿತ್ಯ ಸಂಸ್ಕೃತಿಗಳ ಉತ್ಕರ್ಷಕ್ಕೆ ದುಡಿದ ಪತ್ರಿಕೆ. ಗ್ರಾಮೀಣ ಬದುಕನ್ನು ಎತ್ತಿ ಹಿಡಿದ ಪತ್ರಿಕೆ. ಪುರಾತನ ಪ್ರೌಢ ಕೃತಿಗಳಾದ 'ಹಮ್ಮೀರಕಾವ್ಯ', 'ಪಾರಮಾರ್ಥ ಪ್ರಕಾಶಿಕೆ' 'ಲಿಂಗಧಾರಣ ಚಂದ್ರಿಕೆ'ಗಳಂಥ ಕೃತಿಗಳಲ್ಲದೆ ಜಚನಿಯವರ ಮಣಿಮುಕುಟದಂಥ ಕೃತಿಯನ್ನೂ ಪ್ರಕಟಿಸಿದ ಖ್ಯಾತಿ ಅದರದು. ಶ್ರೀ ಉಮಾಪತಿ ಶಾಸ್ತ್ರಿಗಳು ಪ್ರಾಧ್ಯಾಪಕರಾಗಿ ಹೋದನಂತರ ಶ್ರೀ ಎನ್. ಎಸ್. ಪಾಟೀಲ ಅವರು ಪತ್ರಿಕೆಯ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಕೆಲವು ಕಾಲದಿಂದ ನಿಂತುಹೋಗಿದ್ದ ಪತ್ರಿಕೆಗೆ ಮತ್ತೆ ಜೀವ ತುಂಬಿದವರು ಶ್ರೀ ನಾಗನೂರು ಸಿದ್ಧರಾಮ ಶ್ರೀಗಳು. ವಿಶೇಷ ಕಾಳಜಿ ವಹಿಸಿ ಪತ್ರಿಕೆ ನಿರಂತರವಾಗಿ ನಡೆಯುವಂತೆ ಯೋಜನೆಗಳನ್ನು ಸಿದ್ಧಪಡಿಸಿದ್ದಾರೆ. ಡಾ. ಮಲ್ಲಾಪೂರ, ಡಾ. ಬಿ.ಆರ್.ಹಿರೇಮಠ ಮತ್ತು ಪ್ರೊ. ಗುಂಜೆಟ್ಟಿ ಅವರ ಸಂಪಾದಕತ್ವದಲ್ಲಿ ಪತ್ರಿಕೆ ವೈವಿಧ್ಯಮಯವಾಗಿ ಆಕರ್ಷಕವಾಗಿ ಪ್ರೌಢವಾಗಿ ಪ್ರಕಟಗೊಳ್ಳುತ್ತಿದೆ.

ಇಂಥ ಪವಿತ್ರ ಪರಿಸರದ ಶಿವಯೋಗಮಂದಿರ ನಮ್ಮೆಲ್ಲರ ಬದುಕಿಗೆ ನವಚೈತನ್ಯ ತರಲಿ. ನಾಡಿನ ಧಾರ್ಮಿಕ-ಸಾಂಸ್ಕೃತಿಕ ಬದುಕಿಗೆ ಜೀವ ತುಂಬಲಿ.

■■

# ಶಿವಯೋಗಮಂದಿರ ನಿರೀಕ್ಷಣೆ

• ಶ್ರೀ ನೀಲಕಂಠ ಸ್ವಾಮಿಗಳು ಚಿಕ್ಕೋಡಿ

ಬದಾಮಿಯಿಂದ ೭ ಮೈಲಿನ ಅಂತರದಲ್ಲಿ ಶಿವಯೋಗಮಂದಿರವು ಮಲಪ್ರಭೆಯ ಎಡದಂಡೆಯಲ್ಲಿ ಪುಣ್ಯಭೂಮಿಯಾಗಿ ತೋರುತ್ತಿರುವದು. ಪೂಜ್ಯ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಈ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ನೂರಾರು ಎಕರೆ ಭೂಮಿ ಸರಕಾರದಿಂದಲೂ ಇತರ ದಾತೃಗಳಿಂದಲೂ ಸಂಸ್ಥೆಗೆ ದಾನವಾಗಿ ಬಂದಿದೆ. ವಿಶಾಲ ನಿರ್ಜನಾರಣ್ಯವಿಂದು ಪ್ರಶಾಂತ ಮಂಗಲಮಯ ಭೂಕೈಲಾಸವಾಗಿ ಪರಿಣಮಿಸಿದೆ. ಸಮಾಜ ನೌಕೆಯನ್ನು ನಡೆಯಿಸುವ ಸಮರ್ಥ ಧರ್ಮಗುರುಗಳ ಜನ್ಮಭೂಮಿಯೆಂದು ಸುಪ್ರಸಿದ್ಧವಾಗಿದೆ.

ನಾನಾ ದಿಗ್ದೇಶಗಳಿಂದ ಅತಿಥಿ–ಅಭ್ಯಾಗತರು ಶಿವಯೋಗಮಂದಿರವನ್ನು ನಿರೀಕ್ಷಿಸಲು ಕುತೂಹಲದಿಂದ ಆಗಮಿಸುತ್ತಾರೆ. ಇಲ್ಲಿ ನಡೆಯುತ್ತಿರುವ ವಿವಿಧ ಚಟುವಟಿಕೆಗಳನ್ನು ಕಂಡು ಮನವಾರೆ ಹಾಡಿ ಹರಸುತ್ತಿರುವರು.

ಗೋರಕ್ಷಣೆ ಶಾಲೆಯತ್ತ ಗಮನಿಸಿದರೆ ಸುಮಾರು ೨೦೦ ಆಕಳುಗಳು ಇರುವವು. ಒಕ್ಕಲುತನವಿದ್ದು ಅವುಗಳ ಉಪಯೋಗ ಬಹುವಿಧವಾಗಿ ಆಗುತ್ತಿರುವದು. ಇಲ್ಲಿ ಶುದ್ಧ ವಿಭೂತಿಗಳನ್ನು ಮಾಡುವ ಕಾರ್ಯಾಲಯವು ಇದೆ. ಅದರ ಮುಖಾಂತರ ನಾಡಿನಲ್ಲಿ ಶಾಸ್ತ್ರೋಕ್ತ ವಿಭೂತಿಗಟ್ಟಿಗಳೂ ಪ್ರಚಾರದಲ್ಲಿ ಬಂದಿವೆ. ಪಂಚಸೂತ್ರಕ್ಕೆ ಸರಿಯಾದ ಲಿಂಗಗಳನ್ನು ಇಲ್ಲಿ ತಯಾರಿಸುತ್ತಾರೆ. ಈ ತೆರನಾಗಿ ಸಾತ್ವಿಕ ಕಲೆಗಳಿಗೆ ಉತ್ತೇಜನವನ್ನು ಈ ಸಂಸ್ಥೆಯು ಕೊಡುತ್ತಿರುವದು ತುಂಬಾ ಸ್ತುತ್ಯವಾದುದು.

ಶೈಕ್ಷಣಿಕ ದೃಷ್ಟಿಯಿಂದಲೂ ಈ ಸಂಸ್ಥೆಯು ಮುಂದುವರಿಯುತ್ತಿದೆ. ಇಲ್ಲಿ ರೇವಣಸಿದ್ಧೇಶ್ವರ ವಾಚನಾಲಯವೂ ಇದೆ. ಅದರೊಂದಿಗೆ ಒಂದು ದೊಡ್ಡ ಗ್ರಂಥಾಲಯವೂ ಇದೆ. ಅದರಲ್ಲಿ ಸಂಸ್ಕೃತ, ಕನ್ನಡ, ಹಿಂದಿ, ಇಂಗ್ಲೀಷ ಭಾಷೆಯ ಪ್ರೌಢಸಾಹಿತ್ಯ ಗ್ರಂಥಗಳ ಅಪೂರ್ವ ಮತ್ತು ಅಮೂಲ್ಯ ಸಂಗ್ರಹವೂ ಇದೆ. ಅಲ್ಲಿರುವ ಸಾವಿರಾರು ತಾಡವೋಲೆ ಮತ್ತು ಕೈಬರಹದ ಗ್ರಂಥ ಭಾಂಡಾರವು ಕರ್ನಾಟಕದಲ್ಲಿಯೇ ಅದ್ವಿತೀಯವಾಗಿದೆ. ಅವುಗಳನ್ನು ಪರಿಶೋಧಿಸಿ ಅಚ್ಚುಗೊಳಿಸಲು 'ಸುಕುಮಾರ'ವೆಂಬ ಮಾಸ ಪತ್ರಿಕೆಯು ಪ್ರಕಟವಾಗುತ್ತಿದೆ. ಅದು ನಾಡಿನ ಪ್ರಗತಿಪರ ಪತ್ರಿಕೆಯಾಗಿ ಪ್ರಚಾರ ಹೊಂದುತ್ತಿದೆ. "ಸುಕುಮಾರ" ಮಾಸಪತ್ರಿಕೆ ಮತ್ತು ಗ್ರಂಥಮಾಲೆಯ ಪ್ರಕಟನೆಗಾಗಿ ಉದಾರಹೃದಯರಾದ ಮಹಾಸ್ವಾಮಿಗಳವರೂ ಮತ್ತು ಭಕ್ತಾದಿಗಳೂ ಅನೇಕಮುಖವಾಗಿ ಸಹಾಯ ಸಲ್ಲಿಸಿದ್ದಾರೆ. ಗ್ರಂಥಸಂಶೋಧನಾಕಾರ್ಯವು ಚಿರಸ್ಥಾಯಿಯಾಗಿ ನಡೆಯುವಂತೆ ಒಂದು ಭಾವೀ ಯೋಜನೆಯು ಕ್ಷಿಪ್ರದಲ್ಲಿಯೇ ಕಾರ್ಯಗತವಾಗಲಿರುವದೆಂದು ತಿಳಿಯುತ್ತದೆ.

ದರ್ಶನಾರ್ಥವಾಗಿ ಬಂದ ಭಕ್ತಾದಿಗಳಿಗೆ ದಾಸೋಹಮಠವಿದೆ. ಅಲ್ಲಿ ಅರ್ಚನ ಮತ್ತು ಅರ್ಪಿತಕ್ಕೆ ಅನುಕೂಲತೆಯಿದೆ. ಸಂಸ್ಥೆಯ ಅನುಕೂಲತೆಗಾಗಿ ಸರಕಾರದವರು ಒಂದು ಬ್ರಾಂಚ ಪೋಷ್ಟ ಆಫೀಸನ್ನು ಚಿರಸ್ಥಾಯಿಯಾಗಿ ಮಾಡಿದ್ದಾರೆ. ಅಲ್ಲಿ ಮುಖ್ಯವಾಗಿ ವಟುಗಳು ಶಿವಯೋಗಿಗಳು ಧಾರ್ಮಿಕ ಶಿಕ್ಷಣವನ್ನು ಹೊಂದುತ್ತಲಿರುವರು. ಸಾಧಕರು ಪ್ರತಿನಿತ್ಯವೂ ಮುಂಜಾನೆ ಯೋಗಾಸನಗಳ ಸಾಧನೆಯನ್ನು ಮಾಡುತ್ತಾರೆ. ಯೋಗದಲ್ಲಿ ತಜ್ಞತೆಯನ್ನು ಪಡೆಯುತ್ತಾರೆ. ಪ್ರತಿನಿತ್ಯದ ಕಾರ್ಯಕ್ರಮದಲ್ಲಿ ಅದಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. ತರಿಕಾಲದಲ್ಲಿಯೂ ಲಿಂಗಾರ್ಚನೆ, ಪುರಾಣ, ಪ್ರವಚನ, ಭಾಷಣ, ಸಂಗೀತಕಲೆ ಮುಂತಾದ ಸಮಾಜ ಸುಧಾರಣೆಯ ಶಿಕ್ಷಣವು ಕೊಡಲಾಗುತ್ತಿದೆ. ಕನ್ನಡ, ಸಂಸ್ಕೃತ, ಹಿಂದಿ ಮತ್ತು ಆಂಗ್ಲ ಭಾಷೆಯ ಶಿಕ್ಷಣವೂ ಕೊಡಲ್ಪಡುತ್ತದೆ. ಮಂದಿರದಲ್ಲಿಯೇ ಶಿಕ್ಷಣ ಪಡೆದ ಸ್ವಾಮಿಗಳು ಮತ್ತು ಶಾಸ್ತ್ರಿಗಳು ಶಿಕ್ಷಕರಾಗಿ, ಪ್ರಾಧ್ಯಾಪಕರಾಗಿ ದುಡಿಯುತ್ತಾರೆ. ಈಗಾಗಲೇ ಇಲ್ಲಿಂದ ಶಿಕ್ಷಣ ಪಡೆದ ಶಿವಯೋಗಿಗಳು ಕರ್ನಾಟಕ, ಮಹಾರಾಷ್ಟ್ರ, ಹೈದರಾಬಾದ ಮತ್ತು ಮೈಸೂರು ಪ್ರಾಂತಗಳಲ್ಲಿಯ ಸುಪ್ರಸಿದ್ಧ ಮಠಗಳ ಅಧಿಪತಿಗಳಾಗಿ ಸಮಾಜ ಕಾರ್ಯ ದುರಂಧರರಾಗಿದ್ದಾರೆ. ಪ್ರಾಥಮಿಕ ಮಾಧ್ಯಮಿಕ ಶಾಲೆಗಳನ್ನು ಕಾಲೇಜುಗಳನ್ನು ಅಲ್ಲದೆ ಫ್ರೀ ಬೋರ್ಡಿಂಗಗಳನ್ನೂ ದಾಸೋಹ ಮಂದಿರಗಳನ್ನೂ ಅನುಭವಮಂಟಪಗಳನ್ನು ಮಾಡಿಯೂ ಮಾಡುತ್ತಲೂ ಸಮಾಜದಲ್ಲಿ ಒಂದು ದೊಡ್ಡ ಕ್ರಾಂತಿಯನ್ನೇ ಮಾಡಿದ್ದಾರೆ. ಸ್ವಯಂಸೇವಕರಾಗಿ ಸಮಾಜಸುಧಾರಣೆಯ ಮುಖದಿಂದ ರಾಷ್ಟ್ರೋದ್ಧಾರ ಕಾರ್ಯದಲ್ಲಿ ಹೇಗೆ ನೆರವಾಗುತ್ತಾರೆಂಬುದು ಚನ್ನಾಗಿ ನಿರ್ವಿಕಾರ ಮನಸ್ಸಿನಿಂದ ವಿಚಾರಿಸಿದರೆ ಹೊಳೆಯದಿರದು.

ಧರ್ಮ-ನೀತಿಗಳ ಜೀವಾಳಗಳನ್ನಿಟ್ಟುಕೊಂಡು ಕೊನೆಯ ರಾಜಕಾರಣವನ್ನು ಯಾವ ರೀತಿಯಿಂದ ನಡೆಸುತ್ತಾರೆಂಬುದು ವಿಚಕ್ಷಣಮತಿಗಳಿಗೆ ತಿಳಿಯದಿರದು. ಇಂದು ರಾಷ್ಟ್ರೀಯ ಕಾರ್ಯಗಳು ಧರ್ಮದಿಂದಲೇ ನಡೆಯಬೇಕಾಗಿವೆ. ಧರ್ಮವಿಲ್ಲದಿದ್ದರೆ ಮೃತದೇಹದಂತೆ ನಾಡು ನಿರ್ವೀರ್ಯವಾಗುವಲ್ಲಿ ಯಾವ ಸಂದೇಹವೂ ಇಲ್ಲ.

ಮಠಾಧಿಪತಿಗಳು ಶಿಕ್ಷಣದ ಸತ್ರವನ್ನು ಪ್ರಾರಂಭಮಾಡದಿದ್ದರೆ ಸಮಾಜವು ಇಷ್ಟೊಂದು ಉನ್ನತಾವಸ್ಥೆಗೆ ಬರುತ್ತಿರಲಿಲ್ಲ. ಈ ಎಲ್ಲ ಮುಂದಿನ ಹೊಣೆಗಾರಿಕೆಯನ್ನರಿತು ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರು ಶಿವಯೋಗಮಂದಿರವನ್ನು ಸ್ಥಾಪಿಸಿ ಸಮಾಜಕ್ಕೆ ಹೇಳತೀರದಷ್ಟು ಉಪಕಾರ ಮಾಡಿದ್ದಾರೆ.

ಇಂಥ ಪವಿತ್ರ ಸಂಸ್ಥೆಗೆ ಸಹಾಯ ಸಹಕಾರ ಮತ್ತು ಸಹಾನುಭೂತಿಗಳನ್ನು ನೀಡುವುದು ಸಕಲರ ಆದ್ಯಕರ್ತವ್ಯವಾಗಿದೆ. ನಿಮ್ಮ ಇರುವನ್ನು ಅರಿವನ್ನು ತಂದು ಕೊಟ್ಟ ಸಂಸ್ಥೆಯ ಬಗ್ಗೆ ಆದರ ಅನುತಾಪಗಳು ಬೇಡವೆ ?

ಶಿವಯೋಗಮಂದಿರವು ಇಂದು ವಿಶ್ವವಿದ್ಯಾಲಯವಾಗಬೇಕಾಗಿದೆ. ಕರ್ನಾಟಕದ ಕತ್ತಲೆಯು ಬಯಲಾಗಿ ಪ್ರಚಂಡ ಪ್ರಕಾಶಮಯ ರವಿ ಶಿವಯೋಗಿ ಪುಂಗವರು ಉದಯಿಸಬೇಕಾಗಿದೆ. ಜ್ಞಾನಭಾಂಡಾರದ ಸೂರೆಯಾಗಲಿ. ಸಮಾಜಗಳು ವಿಕಾಸ ಹೊಂದಲಿ, ರಾಷ್ಟ್ರೋದ್ಧಾರವಾಗಲಿ, ಅಖಿಲರಿಗೂ ಸುಖವಾಗಲಿ ಇದಕ್ಕಾಗಿಯೆ ಶಿವಯೋಗಮಂದಿರದ ನಿರೀಕ್ಷಣೆಯನ್ನು ಮಾಡಿರಿ.

ಜಾತೀಯತೆಯ ಭಾವನಾಪ್ರೇರಿತರಾಗಿ ನೋಡಕೂಡದು. ಜಾತ್ಯಾತೀತ ತತ್ತ್ವವನ್ನವಲಂಬಿಸಿದವರಿಗೂ ಸಹ ಜಾತಿಯನ್ನು ಬಿಟ್ಟರೆ ಗತಿಯಿಲ್ಲ. ಜಾತಿ ಮತ ಪಂಥಗಳ ಬುರುಕೆಗೆ ಯಾರೂ ಹೆದರಬೇಕಾಗಿಲ್ಲ. ಆದರೂ ಜಾತ್ಯಾಂಧರಾಗಬಾರದು. ವಿಶ್ವವ್ಯಾಪಿ ತತ್ತ್ವಗಳು ಎಲ್ಲಿದ್ದರೇನು? ಅವೆಲ್ಲವೂ ಸ್ವಾಗತಾರ್ಹವೆಂದು ಭಾವಿಸಿ ಒಳಗಣ್ಣತೆರೆದು ನೋಡಬೇಕೆಂದು ಬೇಡಿಕೊಳ್ಳುತ್ತೇನೆ.

■■

# ವಟುವತ್ಸಲ ಗುರುದೇವ

• ಶ್ರೀ ಶಿವಲಿಂಗ ಸ್ವಾಮಿಗಳು, ಹಾವೇರಿ

ಸರ್ವಾಂಗ ಸುಂದರವಾದ ಸಮಾಜಸೌಧವನ್ನು ಕಟ್ಟಲು ಮೊದಲು ಅದರ ತಳಹದಿಯಂತಿರುವ ಗುರುವರ್ಗವನ್ನು ಸುಧಾರಿಸಬೇಕೆಂಬ ಉದಾತ್ತವಾದ ಉದ್ದೇಶವನ್ನಿಟ್ಟುಕೊಂಡು ಶ್ರೀಗಳವರು ಶ್ರೀ ಶಿವಯೋಗ ಮಂದಿರ ಸಂಸ್ಥೆಯ ಸ್ಥಾಪನೆ ಮಾಡಿದರು; ಬದಾಮಿಯ ನಿಬಿಡಾರಣ್ಯದ ಮಧ್ಯದಲ್ಲಿ, ಜುಳು ಜುಳು ಹರಿಯುವ ಮಲಪ್ರಭೆಯ ತೀರದಲ್ಲಿ, ನಾಲ್ಕೂ ನಿಟ್ಟಿಗೆ ಪರ್ವತ ಶ್ರೇಣಿಗಳಿರುವ ಪ್ರಶಾಂತ ಸ್ಥಾನದಲ್ಲಿ ಯೋಗಮಂದಿರವನ್ನು ಕಟ್ಟಿದರು; ಆಗ ಎಂತಹ ಎಡರು ತೊಡರುಗಳು ಬಂದರೂ ಅವುಗಳನ್ನು ಧೈರ್ಯದಿಂದ ಎದುರಿಸಿ, ತಮ್ಮ ಕಾರ್ಯದಲ್ಲಿ ಪೂರ್ಣ ಯಶಸ್ವಿಯಾದರು. ಮುಂದೆ ಅದೊಂದು ಆಧುನಿಕ ಋಷ್ಯಾಶ್ರಮವಾಗಿ ಪರಿಣಮಿಸಿತು; ಆದರ್ಶ ಗುರುಕುಲವಾಗಿ ಪ್ರಗತಿಯನ್ನು ಸಾಧಿಸಿತು. ಈ ಪ್ರಶಾಂತ ಶಿವಯೋಗಾಶ್ರಮದಲ್ಲಿ ಶ್ರೀಗಳು ನೂರಾರು ಉತ್ತಮ ಬಾಲಕರನ್ನು ತಂದಿಟ್ಟರು. ಆ ಬಾಲಕರೆ ಶ್ರೀಗಳವರ ಪರಿಭಾಷೆಯಲ್ಲಿ ವಟುಗಳು. ಐದು ವರ್ಷಗಳಿಂದ ಎಂಟು ವರ್ಷಗಳ ಒಳಗಿನ ಎಳೆಯ ಕುಮಾರರ ಬಳಗ ಮಂದಿರದಲ್ಲಿ 'ವಟುವೃಂದ'ವಾಗಿ ಬೆಳೆಯಿತು. ಶ್ರೀಗಳವರ ಆದರ್ಶ ಯೋಗಮಂದಿರದ ಶಿಕ್ಷಣಕ್ರಮದ ಮೊದಲನೆಯ ವರ್ಗದ ವಿದ್ಯಾರ್ಥಿಗಳಿವರು. ತಂದೆ-ತಾಯಿಗಳನ್ನು, ಬಂಧು-ಬಳಗವೆಲ್ಲವನ್ನೂ ಬಿಟ್ಟು ಬಂದ ಆ ತಬ್ಬಲಿ ಬಾಲಕರನ್ನು ಕುಲಪತಿಗಳಾದ ಶ್ರೀಗಳು ಹೆತ್ತ ತಂದೆಗಿಂತಲೂ ಹೆಚ್ಚಾಗಿ ಪ್ರೀತಿಸಿ ಸಾಕಿ ಸಲಹುತ್ತಿದ್ದರು. ಅವರ ಆಹಾರ-ವಿಹಾರ, ಉಡಿಗೆ-ತೊಡಿಗೆ ಮೊದಲಾದ ಎಲ್ಲ ಬಗೆಗೂ ಶ್ರೀಗಳವರು ತುಂಬಾ ಗಮನ ಕೊಡುತ್ತಿದ್ದರು; ನಿತ್ಯ ಜೀವನದ ಪ್ರತಿಯೊಂದು ಮಾರ್ಪಾಡಿನಲ್ಲಿ ತಮ್ಮದೆ ಆದ ಒಂದು ಹೊಸ ಪರಂಪರೆಯನ್ನು ಸ್ಥಾಪಿಸಿ ವಟುಗಳ ನಡೆ-ನುಡಿಗಳನ್ನು ತಿದ್ದುತ್ತಿದ್ದರು. ಮಂದಿರದ ವಟುಗಳಿಗೆ ಅವರೆ ತಂದೆ ತಾಯಿ ಬಂಧು ಬಳಗ.

'ಸುಸಂಸ್ಕೃತರಾದ ನಾಗರಿಕರೆ ರಾಷ್ಟ್ರದ ನಿಜವಾದ ಸಂಪತ್ತು' ಎಂದು ರಸ್ಕಿನ್ ಹೇಳಿರುವಂತೆ ಶ್ರೀಗಳವರು ಆತ್ಮಬಲವನ್ನು ಸಂಪಾದಿಸಿದ ತ್ಯಾಗಿ ಪರೋಪಕಾರಿ ಗುರು-ವಿರಕ್ತ ವರ್ಗವೇ ಸಮಾಜದ ಸಾರ-ಸತ್ವವೆಂದು ಬಗೆದಿದ್ದರು. ಮಾನವ ತನ್ನ ಆತ್ಮಶಕ್ತಿಯನ್ನು ಕಳೆದುಕೊಂಡು ಇಡಿಯ ಜಗತ್ತಿನ ಒಡೆತನವನ್ನೇ ಪಡೆದರೆ ಬಂದುದೇನು? "For what is a man profited, if he shall gain the whole world, and lose his own soul?"ಎಂದು ಹೇಳುವ ಕ್ರೈಸ್ತನ ವಾಣಿಯನ್ನು ಶ್ರೀಗಳವರ ನಡೆಯಲ್ಲಿ ಕಾಣಬಹುದಿತ್ತು.

ಮಾನವನ ಸಂಸ್ಕೃತಿಯು ಕಾಯಿಕ-ವಾಚಿಕ-ಮಾನಸಿಕವಾಗಿ ಬೆಳೆಯಬೇಕು ಬಲಿಯಬೇಕು. ಆ ಬೆಳವಣಿಗೆ ಬಾಲ್ಯದಿಂದ ಮೊದಲಾಗುತ್ತದೆ. ಮಾನವ ಜೀವನ ಶಿಕ್ಷಣದ ಮೊದಲು ಮೆಟ್ಟಲು ಬಾಲ್ಯ. ಮಾನವ ದೇವನ ಅವತಾರ-ಅಂಶನೆಂಬುದಕ್ಕೆ ನಿರ್ಮಲ ಬಾಲ ಭಾವನೆ ಸಾಕ್ಷಿಯಾಗಿದೆ. ಚಿಕ್ಕಂದಿನಲ್ಲಿ ಮಾನವನ ಮನಸ್ಸು ನಿರ್ವಿಕಾರವಾಗಿರುತ್ತದೆ; ನಿರ್ಮಲವಾಗಿರುತ್ತದೆ. ಆದರೆ ಅವನು ಹೊರ ಜಗತ್ತಿನ ಕೃತ್ರಿಮ ಮತ್ತು ದೂಷಿತ ವಾತಾವರಣದಲ್ಲಿ ಬೆಳೆದಂತೆ ತನ್ನ ನಿರ್ಮಲತೆಯನ್ನು ಕಳೆದುಕೊಳ್ಳುತ್ತಾನೆ. ಕ್ರೈಸ್ತ ಮೊದಲಾದ ಮಹಾತ್ಮರು ಬಾಲಕರನ್ನು ದೇವರ ಮಕ್ಕಳೆಂದು ಮುದ್ದಿಸಿದ್ದಾರೆ.

ಬಾಲ್ಯ ಜೀವನವು ಬಹು ಮಹತ್ವಪೂರ್ಣವಾದುದು. 'ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ' ಎಂಬ ನಾಣ್ಣುಡಿಯನ್ನು ಲಕ್ಷಿಸಿ ಸಣ್ಣ ಮಕ್ಕಳಿಗೆ ಯೋಗ್ಯ ಶಿಕ್ಷಣವನ್ನು ಕೊಡಬೇಕು. ಹದವಾದ ಭೂಮಿಯಲ್ಲಿ ಬಿತ್ತಿದ ಬೀಜವು ಮುಂದೆ ಚೆನ್ನಾಗಿ ಬೆಳೆದು ಒಳ್ಳೆಯ ಫಲಗಳನ್ನು ಕೊಡುವಂತೆ, ಬಾಲ್ಯದಲ್ಲಿ ದೊರೆತ ಶಿಕ್ಷಣದಿಂದ ಮುಂದೆ ಅವರೆ ನವನಾಗರಿಕರಾಗಿ ಸುಂದರ ಸಮಾಜವನ್ನು ಕಟ್ಟಲು ಅರ್ಹರಾಗುವರು. ಇಂದು ತಮ್ಮ ತೊದಲು ನುಡಿಗಳಿಂದ ತಂದೆ-ತಾಯಿಗಳನ್ನು ಆನಂದಪಡಿಸುವ ಚಿಕ್ಕಮಕ್ಕಳೇ ನಾಳೆ ನಾಡಿನ ನಾಯಕರಾಗಿ ರಾಷ್ಟ್ರದ ನಿರ್ಮಾಪಕರಾಗಿ ರೂಪುಗೊಳ್ಳುವರು. 'The child is father of the Man'

ಎಂಬ ಆಂಗ್ಲ ಕವಿ ವರ್ಡ್ಸ್‌ವರ್ತನ ಮಾತು ಅರ್ಥಪೂರ್ಣವಾಗಿದೆ. 'ಮಗುವು ಮಾನವನ ತಂದೆ' ಎನ್ನುವಲ್ಲಿ ಮಾನವನ ಬಾಲ್ಯ ಜೀವನದ ಮಹತಿ ವ್ಯಕ್ತವಾಗಿದೆ.

ಚಿಕ್ಕಮಕ್ಕಳ ಶಿಕ್ಷಣವು ತಾಯಿಯ ತೊಡೆಯ ಮೇಲಿಂದ ಮೊದಲಾಗುತ್ತದೆ. ತಂದೆ-ತಾಯಿಗಳ ಸಂಸ್ಕೃತಿಯ ಪ್ರಭಾವದಲ್ಲಿ ಮಕ್ಕಳು ಬೆಳೆಯುತ್ತವೆ. ಮಕ್ಕಳ ಜೀವನ ಸಹಜ ಸುಂದರ. ಪ್ರಕೃತಿಮಾತೆ ಮಗುವಿನ ಮೊದಲನೆಯ ಗುರು. 'ಇದು ಒಳ್ಳೆಯದು, ಇದು ಕೆಟ್ಟದ್ದು' ಎಂಬುದನ್ನು ಅವರಿಗೆ ಪ್ರಕೃತಿಯೆ ಸಹಜವಾಗಿ ಕಲಿಸುತ್ತದೆ. ಆ ಜ್ಞಾನವನ್ನು ಅವರ ಕುಸುಮ ಕೋಮಲವಾದ ಮೆದುಳಿನಲ್ಲಿ ಅರಳಿಸುವ ಮಹತ್ವದ ಕಾರ್ಯವು ಶಿಕ್ಷಕನದಾಗಿದೆ. ಅದನ್ನು ಶಿಕ್ಷಕನು ತುಂಬಾ ಎಚ್ಚರಿಕೆಯಿಂದ ಮಾಡಬೇಕಾಗುತ್ತದೆ.

ಸಾಮಾನ್ಯವಾಗಿ ಚಿಕ್ಕಮಕ್ಕಳಲ್ಲಿ ಕುತೂಹಲ ಹೆಚ್ಚು: ನೋಡಿದ ವಸ್ತುವಿನ ಪರಿಚಯವಾಗದ ಹೊರತು ಅವರಿಗೆ ಸಮಾಧಾನವೆನಿಸುವದಿಲ್ಲ. ಅವರ ಕಣ್ಣೆದುರು ಹೊಸ ವಸ್ತುವಾಗಲಿ, ವಾಹನವಾಗಲಿ ಬಂದರೆ ಅದನ್ನು ಅರಿತುಕೊಳ್ಳುವ ಮಟ್ಟಿ ನೋಡುವ ಕುತೂಹಲ ಹೆಚ್ಚಿನದು. ಅವರ ಪ್ರಶ್ನೆಗಳ ಸುರಿಮಳೆಗೆ ಸಮರ್ಪಕವಾದ ಉತ್ತರ ಕೊಡುವ ಜಾಣ್ಮೆ ಶಿಕ್ಷಕನದಾಗಿರಬೇಕು. ಪ್ರಶ್ನೆಯಲ್ಲಿ ತಿಳಿದುಕೊಳ್ಳುವ ಇಚ್ಛೆ ಅಡಕವಾಗಿರುತ್ತದೆ. ಆ ಇಚ್ಛೆಯೇ ಅರುವಿನ ಮಹಾಮನೆಯ ಮೊದಲ ಬಾಗಿಲು. ಜ್ಞಾನಪಿಪಾಸೆ ಮಾನವನ ಹುಟ್ಟುಗುಣ. ಆ ಗುಣ ಮಗುವಿನಲ್ಲಿ ಸಹಜವಾಗಿ ಪ್ರಕಟವಾಗುತ್ತಿದೆ. ಮಗು ಮಾತನಾಡಲು ಕಲಿತ ಕೂಡಲೇ 'ಅದೇನು?' ಎಂದು ಪ್ರಪಂಚದ ಪರಿಚಯಕ್ಕೆ ಹಾತೊರೆಯುತ್ತದೆ. ಮಗುವಿನ ಆ ಅರಿವಿನ ಹಸಿವನ್ನು ನಾವು ತಡೆಯದೆ ಅದರ ಸಂತೃಪ್ತಿಗೆ ಸತ್ವಪೂರ್ಣವಾದ ಅರುವಿನ ಆಹಾರವನ್ನು ಒದಗಿಸಿಕೊಡಬೇಕು. ಅದು ನುರಿತ ಶಿಕ್ಷಕನ ಕರ್ತವ್ಯ. ಮಕ್ಕಳ ಸಹಜ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಕೊಟ್ಟರೆ ಅವರ ಜ್ಞಾನಭಾಂಡಾರ ಬೆಳೆಯುತ್ತದೆ. ಅವರ ಮಾತುಗಳನ್ನು ಅಲಕ್ಷಿಸಿ ಸಿಡಿಮಿಡಿಗೊಂಡರೆ ಬಳ್ಳಿಯ ಚಿಗಿಯುವ ಕುಡಿಯನ್ನೆ ಮುರಿದಂತಾಗುತ್ತದೆ: ಅವರ ಬುದ್ಧಿ ಶಕ್ತಿ ಕುಂದುತ್ತದೆ. ಆದುದರಿಂದ ಬಾಲಕರ ಮನದ ಒಲವು ಯಾವ ಕಡೆಗಿದೆ- ಎಂಬುದನ್ನು ಶಿಕ್ಷಕರು ಮೊದಲು ಗುರುತಿಸಿ, ಆ ದಿಶೆಯಲ್ಲಿ ಅವರನ್ನು ಮುಂದೊಯ್ಯಬೇಕು.

ಇದೆಲ್ಲವನ್ನೂ ಚೆನ್ನಾಗಿ ಅರಿತವರೂ ನುರಿತವರೂ ಆದ ಪರಮಪೂಜ್ಯ ಶ್ರೀಗಳವರು ತಮ್ಮ ವಟುವರ್ಗಕ್ಕೆ ಯೋಗ್ಯ ಶಿಕ್ಷಣವನ್ನು ಕೊಡುವ ವಿಧಾನಗಳನ್ನು ಕಂಡುಕೊಂಡಿದ್ದರು. ಅವರವರ ಅಭಿರುಚಿಗಳನ್ನು ಮೊದಲು ಅರಿತುಕೊಳ್ಳುತ್ತಿದ್ದರು: ಆ ಮೇಲೆ ಅದಕ್ಕನುಗುಣವಾಗಿ ಅವರನ್ನು ಪ್ರಗತಿಪಥದತ್ತ ಒಯ್ಯುತ್ತಿದ್ದರು: ಅಂತೆಯೆ ಅವರು ಯೋಜಿಸಿದ ನೈತಿಕ, ಧಾರ್ಮಿಕ ಹಾಗೂ ಸಾಮಾಜಿಕ ಶಿಕ್ಷಣವು ಶೀಘ್ರವಾಗಿ ಪರಿಣಾಮಕಾರಿಯಾಗಿದ್ದಿತು. ಶ್ರೀಗಳವರ ಜೀವನ ಶಿಕ್ಷಕ ವೃತ್ತಿಯಿಂದಲೇ ಮುಂದುವರೆದುದು. 'ಶಿಕ್ಷಕ ಕಾಯಕ' ಅವರ ಪೂರ್ವಾಶ್ರಮದ ವಂಶ ಪರಂಪರೆಯ ಪವಿತ್ರ ವೃತ್ತಿಯಾಗಿದ್ದಿತು. ಅವರು ಸಾಲಿಯ ಮಠದ ಜಂಗಮರು. ಅವರ ಅಜ್ಜಂದಿರು ಹೆಸರಾದ ಓದುಮಠದ ಗುರುಗಳಾಗಿದ್ದರು. ಧಾರವಾಡಕ್ಕೆ ಕಾಲುನಡಿಗೆಯಿಂದ ಹೋಗಿ ಮುಲಕಿಯ ಪರೀಕ್ಷೆಯನ್ನು ಕಟ್ಟಿ ಬಂದ ಮೇಲೆ ತಾಯಿಯ ತವರೂರಾದ ಲಿಂಗದಹಳ್ಳಿಯಲ್ಲಿ ದಯಾಳು 'ಹಾಲಯ್ಯ'ನವರು ಒಂದು ಓದುಮಠವನ್ನು ಪ್ರಾರಂಭಿಸಿದ್ದರು: ಬಾಲಕರಿಗೆ ಅಚ್ಚುಮೆಚ್ಚಿನ ಶಿಕ್ಷಕರಾಗಿದ್ದರು. ಮಂದಿರದ ವಟುಗಳಿಗೆ ಕೊಡುವ ಶ್ರೀಗಳವರ ಶಿಕ್ಷಣದ ರೀತಿ-ನೀತಿಗಳೆ ಬೇರೆ, ಅದರ ರೂಪುರೇಷೆಗಳೆ ಬೇರೆ.

ಪೂಜ್ಯ ಶ್ರೀಗಳವರ ಪಾದಸನ್ನಿಧಿಯಲ್ಲಿಯೆ ಬಾಲ್ಯ ಜೀವನವನ್ನು ಕಳೆಯುವ ಭಾಗ್ಯ ನನ್ನದಾಗಿದ್ದಿತು. ಅವರು ನನಗೂ ನನ್ನ ಒಡನಾಡಿಗಳಿಗೂ ನುಡಿಗಲಿಸಿದರು; ನಡೆಗಲಿಸಿದರು. ಉಡುವದರಲ್ಲಿ ತೊಡುವದರಲ್ಲಿ, ಊಟ-ಉಪಚಾರಗಳಲ್ಲಿ, ಸರಸ-ಸಂಭಾಷಣೆಗಳಲ್ಲಿ ತಮ್ಮದೇ ಆದ ಒಂದು ಪದ್ಧತಿಯನ್ನು ರೂಢಿಯಲ್ಲಿ ತಂದರು. ಚಿಕ್ಕವರಾದ ನಮ್ಮೆಲ್ಲರನ್ನು ಮೇಲಿನ ಮಟ್ಟದಲ್ಲಿಟ್ಟು ನಮ್ಮ ಜೀವನವನ್ನು ಮೇಲಿನ ಮಟ್ಟಕ್ಕೆ ಒಯ್ಯಬೇಕೆಂದು ಹಗಲಿರುಳೂ ಪ್ರಯತ್ನಿಸುತ್ತಿದ್ದರು. ನಮಗೆ ಬೇನೆಬೇಸರಿಕೆಗಳು ಬಂದಾಗ ಸ್ವತಃ ತಮ್ಮ ಕೈಯಿಂದ ಉಪಚರಿಸುತ್ತ ಮೈದಡವಿ, ಸಮಾಧಾನಪಡಿಸುತ್ತಿದ್ದರು. ತಾಯಿ ಹಕ್ಕಿ ತನ್ನ ಪುಟ್ಟ ಮರಿಗಳಿಗೆ ಪ್ರೇಮಾತಿಶಯದಿಂದ ಗುಟುಕು ಕೊಡುವ ಹಾಗೆ ಶ್ರೀಗಳವರು ಭಕ್ತರು ತಂದುಕೊಟ್ಟ ಬಗೆ ಬಗೆಯ ಹಣ್ಣುಹಂಪಲಗಳನ್ನು ಸುಲಿದು ವಾತ್ಸಲ್ಯದಿಂದ ನಮ್ಮ ಬಾಯಲ್ಲಿ ಇಡುತ್ತಿದ್ದುದನ್ನು ನೆನೆದಾಗ ಮೈ ನವಿರೇಳುವದು. ಆ ಅನಿಮಿತ್ತ ಪ್ರೇಮ, ಆ ಮಂದಹಾಸದಿಂದ ಕೂಡಿದ ಮೃದು ಮಧುರವಾದ ಮಾತುಗಳು, ಆ ಅಭಯ ವಚನಗಳು-ಅದೆಲ್ಲವನ್ನು ಸ್ಮರಿಸಿಕೊಂಡು 'ತೇ ಹಿ ನೋ ದಿವಸಾ ಗತಾಃ' ಆ ದಿನಗಳೆಲ್ಲ ಕಳೆದು ಹೋದವೆಂದು ನಿಟ್ಟುಸಿರು ಬಿಟ್ಟು ಕಂಬನಿಗರೆಯುವಂತಾಗುತ್ತದೆ.

ಮುಂಜಾನೆ ಯೋಗಾಸನಗಳನ್ನು ತಾವೇ ಹಾಕಿಸಿ, ಎಳೆಯ ಮಕ್ಕಳ ಮೈಮಣಿತವನ್ನು ಕಂಡು ಸಂತಸಪಟ್ಟ ಮೇಲೆ ಹಸುವಿನ ನೊರೆಹಾಲನ್ನು ಕುಡಿಯಲು ಕೊಡುವರು; ಆಗಾಗ ಗೋಧಿಯನ್ನು ಹುರಿದು, ಅರಳಿಟ್ಟು ಮಾಡಿಸಿ ತುಪ್ಪ-ಸಕ್ಕರೆ ಕೂಡಿಸಿ ಹಿತ

ಮಿತವಾದ ಉಂಡೆಗಳನ್ನು ಕೊಡುವರು. ಹಣ್ಣು, ಜೇನುತುಪ್ಪ, ಕಲ್ಲುಸಕ್ಕರೆ – ದ್ರಾಕ್ಷಿಗಳಿಗಂತೂ ಬಡತನವೇ ಇರುತ್ತಿರಲಿಲ್ಲ. ನಾವೆಲ್ಲ ಶ್ರೀಗಳವರ ನೇಹದ ನೆರಳಿನಲ್ಲಿ ನಕ್ಕು ನಲಿಯುತ್ತಿದ್ದೆವು.

ಕೆಲವು ಭಕ್ತರು ವಟುಗಳ ಈ ಐಸಿರಿಯನ್ನು ಕಂಡು 'ಪ್ರಾಪಂಚಿಕರಂತೆ ತಾವು ಈ ವಟುಗಳಿಗೆ ಇಷ್ಟೊಂದು ತಿಂಡಿ ತಿನಸುಗಳನ್ನು ಕೊಡುವದೇಕೆ?' ಎಂದು ಕೇಳಿದವರೂ ಉಂಟು. ಆಗ ಶ್ರೀಗಳವರು ನಕ್ಕು – "ಐದು ಆರು ವಯಸ್ಸಿನ ಎಳೆಯ ಮಕ್ಕಳನ್ನು ಅವರ ತಾಯಂದಿರಿಂದ ಅಗಲಿಸಿ ತಂದಿರುವೆವು. ಅವರೀಗ ನಕ್ಕು ನಲಿಯುವ ಕಾಲ. ಈ ಅಡವಿಯಲ್ಲಿ ನಾವು ಅವರಿಗೆ ಸಾಕಷ್ಟು ಅನುಕೂಲತೆಯನ್ನು ಕಲ್ಪಿಸದಿದ್ದರೆ ಅವು ತಮ್ಮ ತಾಯ ಮಮತೆಯನ್ನು ಮರೆಯುವದು ಹೇಗೆ? ಮಕ್ಕಳ ಸಹಜ ಬೆಳವಣಿಗೆಯಾಗಲು ಅವರಿಗೆ ನಾವು ತಾಯಿಯ ಕರುಳ ಮಮತೆಯನ್ನೂ ತಂದೆಯ ಚಿಂತನೆಯನ್ನೂ ಮಾಡಲೇಬೇಕಾಗಿದೆ" ಎಂದು ಸೌಮ್ಯವಾಗಿ ಉತ್ತರಿಸುತ್ತಿದ್ದರು. ಎಳೆಯ ಮಕ್ಕಳ ಬಾಳೆಂಬ ಸಸಿಗೆ ತಾಯಿ ಮಮತೆಯ ನೀರೆರೆದು ಬೆಳೆಸುತ್ತಾಳೆ; ತಂದೆ ಯೋಗಕ್ಷೇಮದ ಬೇಲಿಯನ್ನಿಕ್ಕಿ ಕಾವಲಿರುತ್ತಾನೆ. ನಮ್ಮ ಪಾಲಿಗೆ ಶ್ರೀಗಳವರು ತಂದೆ–ತಾಯಿಯಾಗಿದ್ದರು; ಅವರು ನಮ್ಮ ಸರ್ವಸ್ವವಾಗಿದ್ದರು. ಮಂದಿರದಲ್ಲಿದ್ದು ಆ ಮೇಲೆಯೂ ನಾವೆಂದೂ ನಮ್ಮ ಪೂರ್ವಾಶ್ರಮದ ಜನನಿ–ಜನಕರನ್ನು ನೆನೆದವರಲ್ಲ. ನಮಗೆ ಓರಿಗೆಯ ಸಾಧಕರೆ ವಟುಗಳೆ ಅಣ್ಣ ತಮ್ಮಂದಿರಾಗಿದ್ದರು. ಈಗಲೂ ಮಂದಿರದಲ್ಲಿ ಆ ಭಾವನೆ ಉಳಿದಿದೆ. ನೀವು ಬೇಕಾದರೆ, ಬಿಳಿಯ ಕಿವಿಟೊಪ್ಪಿಗೆ ಕಪನಿಯನ್ನು ಹಾಕಿಕೊಂಡು ನಿಶ್ಚಿಂತರಾಗಿ ತಮ್ಮ ನಿರ್ಮಳ ಬಾಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿರುವ ಮಂದಿರದ ಮಕ್ಕಳನ್ನು ವಟುಗಳನ್ನು ವಿಚಾರಿಸಿ ನೋಡಿರಿ. ನಿಮ್ಮ ಊರು ಯಾವುದೆಂದು ಕೇಳಿದರೆ, ಅವರಿಂದ ನಿಮಗೆ ಶಿವಯೋಗಮಂದಿರವೆಂದು ಉತ್ತರ ಬರುವದು. ಅಲ್ಲಿ ಚಿಕ್ಕ ಚಿಕ್ಕ ವಟುಗಳೂ ತಂದೆ ಕುಮಾರ ಸ್ವಾಮಿಯೆಂದು, ತಾಯಿ ಚಿಚ್ಛಕ್ತಿಯೆಂದು ಹೇಳಿ ನಿಮ್ಮ ಕುತೂಹಲವನ್ನು ಕೆರಳಿಸುವರು.

ಆ ರಸನಿಮಿಷಗಳಲ್ಲಿ ಒಂದೆರಡು ಇಲ್ಲಿ ಸ್ಮರಣೆಗೆ ಬರುತ್ತಿವೆ. ಅದರಿಂದ, ಆ ಮಹಾನುಭಾವರು ವಟುಗಳೊಡನೆ ಬೆರೆತು ಅವರ ಜೀವನವನ್ನು ಹೇಗೆ ಉನ್ನತ ಮಟ್ಟಕ್ಕೆ ಒಯ್ಯುತ್ತಿದ್ದರೆಂಬುದು ಮನವರಿಕೆಯಾಗದಿರದು.

ಒಂದು ದಿನ ಮಧ್ಯಾಹ್ನ ಮೂರು ಗಂಟೆಯ ಸಮಯವಾಗಿದ್ದಿರಬಹುದು. ಶಿವಯೋಗಮಂದಿರದ ಕಲ್ಲುಮಠದ ಪ್ರಾಂಗಣದಲ್ಲಿ ನಾನು ನನ್ನ ಓರಿಗೆಯ ವಟುಗಳೊಡನೆ ಗೋಲಿಯಾಟದಲ್ಲಿ ತಲ್ಲೀನನಾಗಿದ್ದೆ. ಅವರೇ ಅಂದು ತಂದುಕೊಟ್ಟ ಬಣ್ಣ–ಬಣ್ಣದ ಚೀನಿ ಮಣ್ಣಿನ–ಗಾಜಿನ ಗೋಲಿಗಳು ನಮ್ಮೆಲ್ಲರ ಮನವನ್ನು ಸೆರೆ ಹಿಡಿದಿದ್ದವು. ಆಟವೇ ಆಟ. ನಾವೇ ನಾವು. ಬಿಡುವಿನ ದಿನವಿತ್ತು. ಮಠದ ಮುಂದಿರುವ ಬನ್ನಿ ಮರದ ಮರೆಯಲ್ಲಿ ನಿಂತು ನಮ್ಮ ಆನಂದದ ಆಟ ಕೂಗಾಟಗಳನ್ನು ನೋಡಿ ಮನದಲ್ಲಿಯೇ ನಲಿಯುತ್ತಿದ್ದ ಶ್ರೀಗಳವರು ಒಮ್ಮೆಲೆ ಧಾವಿಸಿ ಬಂದು ನನ್ನ ಕೈಯೊಳಗಿನ ಗೋಲಿಯನ್ನು ಕಸಿದುಕೊಂಡರು. ಅದರಿಂದ ನಾನು ಮೊದಲು ಹೊಡೆಯ ಬಯಸಿದ ಗೋಲಿಗೆ ಸರಿಯಾಗಿ ಗುರಿಯಿಟ್ಟು ಹೊಡೆದು– "ಇಕೋ, ಹೀಗೆ ಗುರಿ ತಪ್ಪದೆ ಹೊಡೆಯುವದನ್ನು ಕಲಿ. ಇದರಿಂದ ಬಹಳ ಒಳ್ಳೆಯದಾಗುವದು" ಎಂದು ಹೇಳಿದರು.

ಮರುದಿನ ಮಧ್ಯಾಹ್ನ ಊಟವಾದ ನಂತರ, ಪ್ರತಿದಿವಸದ ಪದ್ಧತಿಯಂತೆ ನನ್ನನ್ನು ತಮ್ಮ ಬಳಿಗೆ ಕರೆದು, ತಮ್ಮ ನೀಳವಾದ ಬಲಗೈ ಬೆರಳುಗಳಿಂದ, ನನ್ನ ತುಂಬಿದ ಹೊಟ್ಟೆಯನ್ನು ಕೆಣಕುತ್ತ – "ಈ ದಿನ ಒಂದು ಚಪಾತಿ ಹೆಚ್ಚಿಗೆ ಇದ್ದಂತೆ ಕಾಣುವದು." ಎಂದರು. ಅವರ ಆ ಊಹೆ ನಿಜವಾಗಿಯೇ ಇದ್ದಿತು. ಆಗ ಈ ರೀತಿ ಹೇಳಿದರು: "ಯಾವಾಗಲೂ ಊಟದಲ್ಲಿ ಮಿತವಾಗಿರಬೇಕು. ಅತಿಯಾಗಿ ಊಟ ಮಾಡುವದು ಒಂದು ಬಗೆಯ ಕಳ್ಳತನವೆನಿಸುವದು. ಶಿವನು ಕೊಟ್ಟ ಪ್ರಸಾದವನ್ನು ಎಂದೂ ಕೆಡಿಸಬಾರದು." ಆಗ ನನ್ನ ಬಾಲಬುದ್ಧಿಗೆ ಶ್ರೀಗಳವರ ಬೋಧೆಯಿಂದ ಬಹಳ ಊಟಮಾಡಿದರೆ ಅಜೀರ್ಣವಾಗುವದೆಂದಿಷ್ಟೆ ಹೊಳೆದಿದ್ದಿತು. ಆ ಮೇಲೆ ಗುರಿ ತಪ್ಪದೆ ಗೋಲಿ ಹೊಡೆಯುವದರಿಂದ ಏನು ಒಳ್ಳೆಯದಾಗುವದೆಂದು ಕೇಳಿದೆ. ಆಗ ಅವರು ಅಪ್ಪಣೆಮಾಡಿದುದಿಂತು: ಗುರಿಯಿಟ್ಟು ಹೊಡೆಯುವದರಿಂದ ದೃಷ್ಟಿ ಒಂದೇ ಕಡೆಗೆ ನಿಲ್ಲುವದು. ಇದು ಯೋಗ ಸಾಧನೆಗೆ ಅತ್ಯವಶ್ಯವಾದುದು. ಗೋಲಿಯನ್ನು ಎದುರಿಟ್ಟು ನೋಡುವಂತೆ, ಅಂಗೈಯೊಳಗಣ ಲಿಂಗವನ್ನು ದಿಟ್ಟಿಸಿ ನೋಡುತ್ತ ನೋಡುತ್ತ, ದೃಷ್ಟಿಯನ್ನು ಅನಿಮಿಷವಾಗಿ ನಿಲ್ಲಿಸಬೇಕು. ಇದು ಮನದ ಚಂಚಲತೆಯನ್ನು ಕಳೆಯುವ ಪರಮೋಪಾಯವಾಗಿದೆ "ಆಲಿ ನಿಂದೊಡೆ ಸುಳಿದು ಸೂಸುವ' ಎಂಬ ಪ್ರಭುಲಿಂಗಲೀಲೆಯ ಪದ್ಯವನ್ನು ಉದಾಹರಿಸಿ, ಅದರ ಅರ್ಥವನ್ನು ಬಿಡಿ ಬಿಡಿಯಾಗಿ ಹೇಳಿದರು. ಆಗ ಅವರ ಮಾತು ನನಗೆ ಪೂರ್ಣ ಅರ್ಥವಾಗಲಿಲ್ಲ. ಆದರೆ ಆ ಮಾತಿನ ಮೌಲ್ಯವೆಷ್ಟು, ಮಹತ್ವವೆಷ್ಟು ಎಂಬುದು ಈಗ ನನಗೆ ಅರ್ಥವಾಗತೊಡಗಿದೆ.

ಶ್ರೀಗಳವರು ನಮ್ಮ ಅಕ್ಷರಾಭ್ಯಾಸದ ವಿಷಯದಲ್ಲೂ ಹೆಚ್ಚು ಗಮನ ಕೊಡುತ್ತಿದ್ದರು: ಪ್ರೇಮಮಯವಾದ ವಾತಾವರಣದಲ್ಲಿ ಪಳಗಿಸಿ ನಮ್ಮಲ್ಲಿ ಓದು ಬರೆಹದತ್ತ ಅಭಿರುಚಿಯನ್ನು ಹುಟ್ಟಿಸುವ ಶಿಕ್ಷಣ ಪದ್ಧತಿಯೊಂದನ್ನು ಕಂಡು ಹಿಡಿದಿದ್ದರು. ಅಂದಿನ ಶಾಲೆಗಳಲ್ಲಿಯ ಶಿಕ್ಷಣ ಮಕ್ಕಳಿಗೆ ಯಮ ಶಿಕ್ಷೆಯಾಗಿ ಪರಿಣಮಿಸಿದ್ದಿತು. ಸಾಲೆಯೆಂದರೆ ಬಾಲಕರು ಹೆದರುವ ಕಾಲವದು. ಶ್ರೀಗಳವರು ನಮಗೆ ಕೊಡುತ್ತಿದ್ದ ಶಿಕ್ಷಣದ ಪದ್ಧತಿಯು ಇಂದಿನ ಶಿಕ್ಷಣ ಶಾಸ್ತ್ರಕ್ಕೆ ಅನುರೂಪವಾಗಿದ್ದಿತು. ಅವರು ಮುದ್ದಾದ ಕನ್ನಡ ಅಕ್ಷರಗಳನ್ನು ಪಾಟಿಯ ಮೇಲೆ ತಾವೇ ಹಾಕಿಕೊಟ್ಟು ನಮ್ಮಿಂದ ತೀಡಿಸುತ್ತಿದ್ದರು. ಲಿಂ. ಶಿವಬಸಪ್ಪ ಮಾಗಿ ಮಾಸ್ತರರಿಗೆ ಶ್ರೀಗಳವರೆ ಮಾಂಟೇಸರಿ ಪದ್ಧತಿಯಲ್ಲಿ ಮಕ್ಕಳ ಮನದೊಲುವಿನಂತೆ ಆಟಪಾಟಗಳಿಂದ ಶಿಕ್ಷಣ ಕೊಡುವ ಬಗೆಯನ್ನು ಕಲಿಸಿದ್ದರು. ಮಾಸ್ತರರು ನಮಗೆ ಅಕ್ಷರಗಳನ್ನು ನೇರವಾಗಿ ಪಾಟಿಯ ಮೇಲೆ ಬರೆಯಿಸಿ ತೀಡ ಹಚ್ಚುತ್ತಿರಲಿಲ್ಲ. ಮೊದಲು ಮರದ ಪಡಿಯಚ್ಚುಗಳಲ್ಲಿ ಸಕ್ಕರೆಯ ಅಕ್ಷರಗಳನ್ನು ತಯಾರಿಸಿ ಅವುಗಳ ಪರಿಚಯವನ್ನು ನಮಗೆ ಮಾಡಿ ಕೊಡುತ್ತಿದ್ದರು: ಅಕ್ಷರಗಳನ್ನು ಗುರುತಿಸಿದವರಿಗೆ ಅವನ್ನು ತಿನ್ನಲು ಕೊಡುತ್ತಿದ್ದರು. ಹೀಗೆ ನಮ್ಮ ಮನಸ್ಸಿನಲ್ಲಿ ಅಕ್ಷರಗಳು ಅಚ್ಚೊತ್ತಿದಂತೆ ಉಳಿಯುತ್ತಿದ್ದವು. ನಾವು ಬೇಗ ಬೇಗ ಅಕ್ಷರಗಳನ್ನು ಓದಲೂ ಬರೆಯಲೂ ಕಲಿತೆವು. ಇಂತಿದ್ದಿತು ಶ್ರೀಗಳವರ ಶಿಕ್ಷಣ ಕೌಶಲ, ವಟುವಾತ್ಸಲ್ಯ.

■■

# ಶಿವಯೋಗಮಂದಿರ ಶಿವಯೋಗ ಶ್ರೀನಿಕೇತನ

• ಪೂಜ್ಯಶ್ರೀ ಶಿವಾನಂದ ಮಹಾಸ್ವಾಮಿಗಳು, ಸಿದ್ಧೇಶ್ವರಮಠ, ಹಂದಿಗುಂದ-ಆಡಿ

ದಿವ್ಯ ಸಿರಿತನ ತಪದ ಹೊಸತನ
ಚಿಮ್ಮುತಿದೆ ಅದು ಚಿರಂತನ
ಶ್ರೀ ಶಿವಯೋಗಮಂದಿರ ಶ್ರೀನಿಕೇತನದಿಂ
ಸರ್ವಚೇತನ ಸಾಂತ್ವನ (ನಿಹಾರಿಕೆ)

ಪೂಜ್ಯ ಹಾನಗಲ್ಲ ಕುಮಾರ ಶಿವಯೋಗಿಗಳ ಕಲ್ಪನೆಯ ಸಾಕಾರದ ಸಾಕ್ಷಾತ್ಕಾರ, ಧರೆಯ ಮೇಲಿನ ಪಾವನಸ್ವರ್ಗ ಶ್ರೀ ಶಿವಯೋಗ ಮಂದಿರದ ಸುಂದರ ನಿಸರ್ಗ, ವೇದಕಾಲೀನ ಋಷಿಮುನಿಗಳ ಆಶ್ರಮದ ಬದುಕಿನ ಶೈಲಿಯನು ನೆನಪಿಸುವ ಪುರಾತನ ಸೊಬಗಿನ ಬೆಳಗು ಭಾವತನ್ಮಯಗೊಳಿಸುವ ಬೆಡಗು. ಒಂದೆಡೆ ಜಲಶ್ರೀ, ಇನ್ನೊಂದಡೆ ವನಶ್ರೀ. ಇಂತಹ ಸೌಂದರ್ಯ ಸಮೂಹವೇ ಶಿವೇನ ಸಹಯೋಗ, ಶಿವಯೋಗ, ಮಹಾಯೋಗ. ಮಲಪ್ರಭೆಯ ಜಲಧಾರೆಯ ಮೊರೆತ, ಹಕ್ಕಿ ಸಂಕುಲದ ಕಲರವದ ಧ್ವನಿತ ವಚನ-ಮಂತ್ರಘೋಷದೊಂದಿಗೆ ಮೇಳೈಸಿದ ಆ ಸೊಬಗು ಎಂಥವರನ್ನು ಮೈಮರೆಸಿ ಲೌಕಿಕದಿಂದ ಅಲೌಕಿದತ್ತ ಕರೆದೊಯ್ಯುತ್ತದೆ. ಪಾವನ ಪರಿಸರದಲ್ಲಿ ಹಾಗೆ ಸುಮ್ಮನೆ ಒಂದು ಕ್ಷಣ ಕುಳಿತರೆ ಸಾಕು ಧ್ಯಾನ ಸಿದ್ಧಿಸುತ್ತದೆ. ಸಮಾಧಿ ಸಾಧ್ಯವಾಗುತ್ತದೆ ಕೈವಲ್ಯ ಕೈ ಸಾರುತ್ತದೆ.

ಲಿಂಗಾಯತರಿಗೆ ಪರಿಶುದ್ಧ ಅಷ್ಟಾವರಣಗಳನ್ನು ಒಂದೇ ಕಡೆಗೆ ದೊರಕಿಸಿಕೊಡುವ ಪಾವನ ಸನ್ನಿಧಾನ, ಈ ನಾಡಿನ ಏಕೈಕ ತಾಣ ಅದುವೇ ಶಿವಯೋಗಮಂದಿರ. ನಮ್ಮ ನಿಮ್ಮೆಲ್ಲರ ಹೆಮ್ಮೆ, ಕಣ್ಣಾರೆ ನೋಡು ಬಾ ಒಮ್ಮೆ, ಥಳಕು ಬೆಳಕಿನ ಕಣ್ಣು ಕೋರೈಸುವ ಮಿಂಚಲ್ಲ, ಮಂದಿರದ ನೂರು ವರುಷದ ಸಾಧನೆ ನಿರಂತರ ಬೆಳಗುವ ನಂದಾದೀಪ. ಸದ್ದು-ಗದ್ದಲವಿಲ್ಲದ ನಿರಾಡಂಬರದ ಸಮಾಜಪೂಜೆ ಸಾವಿರಾರು ಮಠಾಧಿಪತಿಗಳು ಇಲ್ಲಿ ತರಬೇತಿ ಪಡೆದು ಸಮಾಜೋ-ಧಾರ್ಮಿಕ ಸಾಂಸ್ಕೃತಿಕ, ಸಾಹಿತ್ಯಿಕ-ಶೈಕ್ಷಣಿಕ ಸೇವಾನಿರತವಾಗಿರುವುದು ಸಾರ್ಥಕತೆಯ ಸಾಧನೆ.

ಚಿಕ್ಕಮಕ್ಕಳ ಚೊಕ್ಕಮನದಲ್ಲಿ ಅನುಭಾವ ಎರಕಹೊಯ್ದು ಮಹಾಜಂಗಮರನ್ನಾಗಿ ರೂಪಿಸುವ ಪರಿ ಬೆರಗುಗೊಳಿಸುವಂತಹದು. ವಟುಸಾಧಕನ ಪ್ರತಿದಿನದ ನಡೆ-ನುಡಿಗೆ ಆಚಾರವೆಂಬ ಕಟ್ಟೆಯ ಕಟ್ಟಿ ಸುವಿಚಾರದ ನೀರನೆರೆದು ಅರಿವು-ಆಚಾರ-ಅನುಭಾವಗಳ ಸಮೀಕರಣಗೊಳಿಸಿ, ಸಾಧಕನಾದವನು ಪ್ರತಿದಿನ ತಪ್ಪದೇ ಅರ್ಚನೆ-ಅರ್ಪಣ-ಅನುಭಾವಗಳನ್ನು ನಡೆಸುತ್ತ ಆಚಾರ ಸಂಹಿತೆಗೆ ಒಳಪಟ್ಟು ತಾತ್ವಿಕ ವಿಚಾರ, ಪರಿಶುದ್ಧ ವಿಹಾರ, ಸಾತ್ವಿಕ ಆಹಾರ ಸೇವಿಸುತ್ತಿರಬೇಕು. ಇದು ಅಂದಿನಿಂದ ಇಂದಿನವರೆಗೂ ಮುಂದುವರೆದ ದಿನಚರಿ.

ಉಪ್ಪಿಲ್ಲ ಖಾರಿಲ್ಲ ಹುಳಿಯಿಲ್ಲ ಊಟದಲಿ
ಕಿನಿಸಿಲ್ಲ ಕೊಂಕಿಲ್ಲ ನೋಟದಲಿ
ಒಪ್ಪಿಲ್ಲ ಮಾಟದಲಿ ಬೆಡಗಿಲ್ಲ ವೇಷದಲಿ
ಯೋಗಿಗಳ ಶಿವಯೋಗ ಮಂದಿರದಲಿ (ಜ.ಚ.ನಿ)

ಯೋಗದಿಂದ ಶಿವಯೋಗದ ಕಡೆಗೆ ಮಾನವತೆಯಿಂದ ಶರಣತ್ವದ ಕಡೆಗೆ ಕತ್ತಲೆಯಿಂದ ಬೆಳಕಿನೆಡೆಗೆ ನಡೆಯುವ ಮಹಾಪಥಿಕನಾಗಿ ಸಮಾಜಸೇವೆಗೆ ಸನ್ನದ್ಧನಾಗಬೇಕು. ರಕ್ತಸಂಬಂಧಿಯಾಗದೆ, ತತ್ವಸಂಬಂಧಿಯಾಗಿ ಈ ನಾಡು ಮನೆಯಾಗಿ ಸಮಾಜವೇ ತನ್ನ ಬಂಧು-ಬಳಗ ಎಂಬ ಮಹೋನ್ನತ ಉದ್ದೇಶದೊಂದಿಗೆ ತಾನು ಸಮಾಜದ ಸೇವಕ ಎಂಬ ಕಿಂಕರತೆಯೊಂದಿಗೆ ದುಡಿಯುವ ಹಂಬಲ ಮೂಡಿಸುವುದೇ ಸಂಸ್ಥೆಯ ಮೂಲ ಸದಾಶಯ.

ಗೊಡ್ಡು ಪರಂಪರೆಗಳ ಹಳೆತನವಲ್ಲ ಹಾಗೆಯೇ ಶುಷ್ಕ ವಿಚಾರಗಳ ಹೊಸತನವಲ್ಲ, ಆಚಾರ ವಿಚಾರಗಳ ವಿಚಾರ ಪೂರಿತ ಅನುಭಾವದ ಪರಿಪೂರ್ಣತೆಯ ಕೂಡಲ ಸಂಗಮ. ಡಿ.ವಿ.ಜಿ.ಯವರ ಮಾತಿನಂತೆ-

ಹಳೇಬೇರು ಹೊಸ ಚಿಗುರು
ಕೂಡಿರಲು ಮರಸೊಬಗು
ಹೊಸಯುಕ್ತಿ, ಹಳೆಯತತ್ವಗಳ

ಭವ್ಯ ಸಂಗಮ ಇದುವೇ ಕೂಡಲಸಂಗಮ ಎಂಬ ಮಾತು ಪ್ರತಿಯೊಬ್ಬರ ಅನುಭವಕ್ಕೆ ಬಂದಿರಲಿಕ್ಕೆ ಸಾಕು.

ಗ್ರಂಥಾಲಯ-ವಾಚನಾಲಯ ತಾಡೋಲೆಪತ್ರಗಳ ಸಂಗ್ರಹ, ಮುದ್ರಣಾಲಯ, ಲಿಂಗ-ವಿಭೂತಿ ನಿರ್ಮಾಣಕೇಂದ್ರ ಯೋಗಶಾಲೆ-ಗೋಶಾಲೆ ಮುಂತಾದವುಗಳನ್ನು ಸ್ಥಾಪಿಸಿ ನೂರು ವರ್ಷದ ಆವಶ್ಯಕತೆಯನ್ನು ಗುರುತಿಸಿರುವುದು. ಲಿಂ. ಹಾನಗಲ್ಲ ಕುಮಾರ ಶಿವಯೋಗಿಗಳ ದೂರದೃಷ್ಟಿಯ ಫಲವೆನ್ನಬಹುದಾಗಿದೆ. ಇಂದು ವಿಜ್ಞಾನಯುಗದಲ್ಲಿ ಇಂದಿನ ಹೊಸ ಆವಿಷ್ಕಾರಗಳ ಉಪಯುಕ್ತತೆ ಹಾಗೂ ಅದರ ಬಳಕೆ ಮುಂತಾದ ವಿಷಯ ಕುರಿತು ಚಿಂತಿಸಬೇಕಾಗಿದೆ. ಒಳಪಂಗಡಗಳ ನಿರ್ಮೂಲನೆ ಸರ್ವಧರ್ಮ ಸಹೋದರತೆ ಮುಂತಾದ ಹೊಸತನ ಹಾಗು ಹೊಸಚಿಂತನೆಗಳ ಕುರಿತು ಸಂಸ್ಥೆಯು ಚಿಂತಿಸಬೇಕಿದೆ. ಅದಕ್ಕೆ ತೆರೆದುಕೊಳ್ಳಬೇಕಿದೆ.

ಶಿವಯೋಗಮಂದಿರದ ಪಕ್ಕದ ಗ್ರಾಮವಾದ ಚೊಳಚಗುಡ್ಡದವರಾದ ಶ್ರೀ ದುಂಡಪ್ಪಣ್ಣ ವಾಲಿಯವರು, ನಮ್ಮ ಊರಿಗೆ ನೌಕರಿಯಲ್ಲಿ ವರ್ಗವಾಗಿ ಬಂದಿದ್ದವರು. ನಮ್ಮ ಮಠ, ಮಠದ ಮರಿ ಎಂದು ಹೆಸರಿಟ್ಟ ನಾನು ಇನ್ನೂ ಅಂಗಿ-ಚಡ್ಡಿಯಲ್ಲಿ ೬ನೇ ತರಗತಿಯಲ್ಲಿ ಜಿಗಿದಾಡುತ್ತಿದ್ದ ನನ್ನನ್ನು ನೋಡಿ ಹೀಗಾದರೆ ವ್ಯವಸ್ಥೆ ಸರಿಯಾಗಲಿಕ್ಕಿಲ್ಲ ಎಂದುಕೊಂಡು ಊರಿನ ಪ್ರಮುಖರಲ್ಲಿ ಸಮಾಲೋಚಿಸಿ ನನ್ನನ್ನು ಶ್ರೀ ಮದ್ವೀರಶೈವ ಶಿವಯೋಗಮಂದಿರಕ್ಕೆ ಅಧ್ಯಯನಕ್ಕೆ ಕಳುಹಿಸಬೇಕೆಂದು ಎಲ್ಲರಿಗೂ ಪ್ರೇರಣೆ ನೀಡಿದರು. ಕೊನೆಗೆ ಶಿವರಾತ್ರಿಯಂದು ಶಿವಯೋಗಮಂದಿರಕ್ಕೆ ಹೋಗುವುದೆಂದು ತೀರ್ಮಾನವಾಯಿತು. ಆಗ ನನ್ನ ಗೆಳೆಯರು ಹಾಗು ಬಂಧು-ಬಳಗದವರು 'ನೀ ಮೊದಲ ಉಡಾಳ, ಶಿವಯೋಗಮಂದಿರಕ್ಕೆ ಹೋಗಿ ನೀ ಏನ ಓದತಿ? ನೀ ಎಂದ ಸ್ವಾಮಿ ಆಗತಿ' ಎಂದು ಗೇಲಿಮಾಡುತ್ತ ಮೂಗು ಮುರಿದರು.

ಆದರೆ ಅವರ ಯಾವ ಮಾತನ್ನು ನಾನು ತಪ್ಪಾಗಿ ತಿಳಿಯಲಿಲ್ಲ. ಅವರು ಅಂದ ಹಾಗೆ ನಾನು ಜಾಣನಾಗಿರಲಿಲ್ಲ. ಅಲ್ಲದೆ ಅತಿಯಾದ ಹುಡುಗಾಟಿಕೆಯ ಸ್ವಭಾವ ನನ್ನದಾಗಿತ್ತು. ಒಂದು ದಿನ ಶಿವಯೋಗಮಂದಿರಕ್ಕೆ ಹೊರಟು ನಿಂತೆ. ಮಹಾಲಿಂಗಪುರದ ಜಾತ್ರೆಗೆ ಹೋದದ್ದನ್ನು ಹೊರತುಪಡಿಸಿ ಬೇರೆ ಎಲ್ಲಿಯೂ ಹೋದ ನೆನಪಿಲ್ಲದ ನಾನು ತುಂಬಾ ಖುಷಿಯಿಂದ ತಯಾರಾಗಿದ್ದೆ. ಬದಾಮಿ ವರೆಗೆ ಬಸ್ಸಿಗೆ ಹೋಗಿ, ಅಲ್ಲಿಂದ ಚೊಳಚಗುಡ್ಡದವರೆಗೆ ಟಾಂಗಾದಲ್ಲಿ ಕುಳಿತು ಹೊರಟಾಗ ನನಗೋ ಇಂದ್ರನ ಐರಾವತವನ್ನೇ ಏರಿದ ಸಂಭ್ರಮ. ಅಂದು ಅಲ್ಲಿಯೇ ವಾಸ್ತವ್ಯ ಮಾಡಿ ಮೊದಲ ಬಾರಿಗೆ ಶಿವಯೋಗಮಂದಿರವನ್ನು ನೋಡಿದಾಗ ಪ್ರಶಾಂತ ಸುಂದರ ಪುಣ್ಯತಾಣ ನನ್ನ ಮೇಲೆ ಗಾಢಪ್ರಭಾವವನ್ನುಂಟು ಮಾಡಿತು. ಭಯ-ಆಶ್ಚರ್ಯಗಳು ಒಮ್ಮೆಲೆ ಉಂಟಾದವು. ಅಧ್ಯಯನ ಮಾಡುತ್ತಿರುವ ವಟು-ಸಾಧಕರು ಅವರ ವೇಷ-ಭೂಷಣ ನನ್ನಲ್ಲಿ ಕುತೂಹಲ ಮೂಡಿಸಿದುದಲ್ಲದೆ ನಾನೂ ಯಾವಾಗ ಹಾಗಾದೇನೋ ಎಂಬ ಅವಸರ ನನ್ನಲ್ಲಿ ಮೂಡಿತು. ಗುರುಗಳಾದ ಲಿಂ. ಹಾನಗಲ್ಲ ಸದಾಶಿವ ಅಜ್ಜಾವರನ್ನು ನೋಡಿದಾಗ ಏನೋ ಒಂದು ರೀತಿಯ ಧನ್ಯತೆಯ ತನ್ಮಯತೆ ಮೂಡಿತು. ಒಟ್ಟಾರೆ ಸುಮಾರು ೧೨ರ ಬಾಲವಯದ ನನಗೆ ಎಲ್ಲವೂ ಅಯೋಮಯವೆನಿಸತೊಡಗಿತು.

ಸಂಸ್ಥೆಯ ಅಂದಿನ ಅಧ್ಯಕ್ಷರಾಗಿದ್ದ ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಡಾ. ಶಿವಬಸವ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆದ ವಿಶ್ವಸ್ಥ ಮಂಡಳಿಯ ಸಭೆಯಲ್ಲಿ ನನಗೆ ಪ್ರವೇಶಾವಕಾಶ ದೊರೆತ ಸುದ್ದಿಯ ಕೇಳಿ ನನಗೆ ಸಂತಸವಾಯಿತಾದರೂ ಮರುಕ್ಷಣದಲ್ಲಿ ಒಳಗೊಳಗೆ ಭಯ ಶುರುವಾಗಿ ಎದೆ ಹೊಡೆದುಕೊಳ್ಳತೊಡಗಿತು. ನಾನು ಮರಳಿ ಊರಿಗೆ ಹೋಗಿ ಬಟ್ಟೆ ಬರೆ ತರುವ ನಮ್ಮ ಪೂರ್ವನಿರ್ಧಾರಿತ ಯೋಜನೆ ರದ್ದಾಗಿ ಅಲ್ಲಿಯೇ ಉಳಿಯಬೇಕೆಂಬ ತೀರ್ಮಾನ ಮತ್ತಷ್ಟು ಚಿಂತೆಗೀಡು ಮಾಡಿತು. ಹೊಸ ಪರಿಸರ ಅಲ್ಲಿಯ ದಿನಚರಿ ನದಿಯ ತಣ್ಣೀರಸ್ನಾನ ಕಠಿಣವಾದ ಸಂಸ್ಕೃತಭಾಷೆಯ ಅಧ್ಯಯನ, ಯೋಗಾಸನ ಮುಂತಾದವುಗಳು ನನ್ನಂಥ ಅಲ್ಪನಿಗೆ ಸಾಧ್ಯವೇ? ಎಂಬ ಅಳುಕಿನಿಂದಾಗಿ ಹಿಂಜರಿತ ಶುರುವಾಯಿತು. ಕ್ಷಣ ಹೊತ್ತು ಊರನ್ನು ಹಾಗೂ ಮನೆಯನ್ನು ನೆನೆದು ಕಣ್ಣೀರು ತಂದೆನಾದರೂ ಮರುಕ್ಷಣದಲ್ಲಿ ಸಾವರಿಸಿಕೊಂಡೆ. ನನ್ನನ್ನು ಗಮನಿಸಿದ ಹಿರಿಯರಾದ ದುಂಡಪ್ಪಣ್ಣ ವಾಲಿಯವರು ಅಲ್ಲಿರುವ ನನಗಿಂತ ಚಿಕ್ಕವರಾಗಿದ್ದ ವಟುಗಳನ್ನು ತೋರಿಸಿ ಅವರೆಲ್ಲ ಇರುವಾಗ ನಿನಗೇಕೆ ಆಗದು ಹಾಗೆಲ್ಲ ಮಾಡದೆ ಜಾಣನಾಗಬೇಕು ಎಂದು ಸಮಾಧಾನದ ಮಾತುಗಳನ್ನಾಡಿ ಗುರುಗಳಿಗೆ ಭೇಟಿ ಮಾಡಿಸಿ ಊರಿಗೆ ಹೋದರು. ನಾನು ವಟು-ಸಾಧಕವೃಂದ ಸೇರಿದ ಮೊದಲಲಿ ಯಾರ ಹೆಸರು ಯಾರ ಮುಖ ನೆನಪಿಡಲು ಸಾಧ್ಯವಾಗದೆ ಯಾರನ್ನೋ ಯಾರದೊ ಹೆಸರಿನಿಂದ ಕರೆಯುತ್ತಿದ್ದೆ. ಸಾಧಕ ವೃಂದದಲ್ಲಿದ್ದೆನಾದರೂ ಎಲ್ಲವನ್ನೂ ಕಳೆದು ಕೊಂಡ ಅನಾಥನಂತಾಗಿದ್ದೆ. ಕ್ರಮೇಣ ಎಲ್ಲರ ಪರಿಚಯ ಹಾಗೂ ಹೆಚ್ಚಿದ ಗೆಳೆತನದ ಆತ್ಮೀಯ ಭಾವ ಎಲ್ಲವನ್ನೂ ಮರೆಯಿಸಿ ಇಡೀಯಾಗಿ ಅಲ್ಲಿಯೇ ತೊಡಗಿಕೊಳ್ಳುವಂತೆ ಮಾಡಿತು.

ನಾನು ಕಲಿತ ಪಾಡುಗಳನ್ನು ರಾಗವಾಗಿ ಹಾಡುವುದು, ಬಸವಾದಿ ಶರಣರ ವಚನಗಳು, ಮೈಲಾರ ಬಸವಲಿಂಗ ಶರಣರ ತ್ರಿವಿಧಿ, ಮಾಯಿದೇವ ಪ್ರಭುಗಳ ಶತಕತ್ರಯ, ನಿಜಗುಣ, ಸರ್ಪಭೂಷಣ ಶಿವಯೋಗಿ ಪದ್ಯಗಳನ್ನು ಕಂಠಪಾಠ ಮಾಡುವುದು, ಕಠಿಣವಾದ ಯೋಗಾಸನಗಳನ್ನು ಲೀಲಾಜಾಲವಾಗಿ ಹಾಕುವುದು, ಕಬ್ಬಿಣದ ಕಡಲೆಯೆನಿಸಿದ ಸಂಸ್ಕೃತ ಭಾಷೆಯನ್ನು ಸುಲಿದ ಬಾಳೆಯ ಹಣ್ಣಿನಂತೆ ಕರಗತ ಮಾಡಿಕೊಳ್ಳತೊಡಗಿದೆ: ಕೆಲವೇ ತಿಂಗಳುಗಳಲ್ಲಿ ಕುಮಾರ ಶಿವಯೋಗಿಗಳ ಕರಸಂಜಾತರು ಲಿಂ. ಸದಾಶಿವ ಗುರುಗಳು ಅವರು ಕಳಚಿಕೊಂಡ ಗುರು ಕುಮಾರರ ನೆರಳು. ಶಿವಯೋಗಮಂದಿರದ ಸಾಧಕರಿಗೆಲ್ಲ ತಾಯಿಯ ಕರುಳು. ಅಂತಹ ಪೂಜ್ಯ ಸದಾಶಿವ ಅಜ್ಜಾವರ ಅಚ್ಚುಮೆಚ್ಚಿನ ಶಿಷ್ಯನಾದೆ. ಎಲ್ಲರಿಂದಲೂ ಜಾಣನೆನಿಸಿಕೊಂಡೆ. ಕಾಡುಕಲ್ಲಿನಂತಿದ್ದ ನನ್ನನ್ನು ಸುಂದರಮೂರ್ತಿಯನ್ನಾಗಿ ಮಾಡಿದ ಮಹಾಶಿಲ್ಪಿ, ನನ್ನ ಬಾಳಿನ ಏಕೈಕ ಆಶಾಕಿರಣ ಲಿಂ. ಸದಾಶಿವ ಅಜ್ಜಾವರ ಕೃಪೆಯೇ ಅಂತದ್ದು, ಅವರಿಗೆ ಭಕ್ತರು, ತಂದು ಕೊಟ್ಟ ಹಣ್ಣು-ಹಂಪಲ ಹಾಗು ಸಿಹಿತಿನಿಸುಗಳನ್ನು ಎಳೆಯರಾಗಿದ್ದ ನಮಗೆಲ್ಲ ಉಣಿಸಿ ಸಂತಸ ಪಡುತ್ತಿದ್ದ ನಮ್ಮೆಲ್ಲರ ಪಾಲಿನ ಗುರುತಾಯಿ. ಅವರ ವಾತ್ಸಲ್ಯ ಇಂದಿಗೂ ನೆನಪಾದರೆ ಹೃದಯ ತುಂಬಿ ಬಂದು ಕಣ್ಣೀರು ಹೊರಸೂಸುತ್ತವೆ. ಈ ಸಾಲುಗಳನ್ನು ಬರೆಯುವಾಗ ನೀರು ತುಂಬಿದ ಕಣ್ಣುಗಳು ಮಂಜಾಗಿದ್ದವು. ಲೇಖನಿ ಮುಂದೆ ಸಾಗದಾಯಿತು. ನಾನು ಇಂದಿಗೂ ಹಲವು ಬಾರಿ ಯೋಚಿಸುತ್ತೇನೆ. ಮನೆ ಮಠ ಬಿಟ್ಟು ಬಂದ ನಮ್ಮಂಥ ಎಳೆಯ ಮಕ್ಕಳನ್ನು ಕಾಡಿನಲ್ಲಿ ಜೋಪಾನ ಮಾಡಿ ಸಲುಹಿದ ಮಹಾತಾಯಿ ಲಿಂ. ಸದಾಶಿವ ಗುರುಗಳ ತಾಯಿಮಮತೆ ಹೇಳಲಾಸಲ್ಲ. ಕುಮಾರ ಸಂಭವ, ರಘುವಂಶ, ಕಾಳಿದಾಸನ ಅಭಿಜ್ಞಾನ ಶಾಕುಂತಲ ಮುಂತಾದ ಮಹಾಕಾವ್ಯಗಳನ್ನು ನಮಗೆಲ್ಲ ಕಲಿಸುತ್ತಿದ್ದ ಕ್ರಮ, ಸಿದ್ಧಾಂತ ಕೌಮುದಿಯಂಥ ವ್ಯಾಕರಣಗಳನ್ನು ಸರಳ ಸಹಜ ಮನನ ಮಾಡಿಕೊಡುತ್ತಿದ್ದ ರೀತಿ ಅನನ್ಯವಾದುದು. ಪ್ರತಿಹೆಜ್ಜೆಗೂ ಮಾರ್ಗದರ್ಶನ. ಒಳ್ಳೆಯ ಓದಿಗೆ ಪ್ರೇರಣೆ. ಬಹುಮುಖ ಪ್ರಗತಿಗೆ ಒಟ್ಟಾರೆ ನನ್ನ ಸರ್ವಾಂಗೀಣ ಸಾಧನೆಗೆ ಸಂಪೂರ್ಣ ಒತ್ತಾಸೆಯಾಗಿ ನಿಂತವರು, ಇಂದಿಗೂ ನನ್ನ ಕೈಹಿಡಿದು ಮುನ್ನಡೆಸುತ್ತಿರುವ ಕಾರುಣ್ಯಮೂರ್ತಿ ಅವರೇ; ಅವರೊಬ್ಬರೇ. ನಾನಂತೂ ಹಾನಗಲ್ಲ ಕುಮಾರೇಶನನ್ನು ಲಿಂ. ಸದಾಶಿವ ಗುರುವಿನಲ್ಲಿ ಕಂಡಿದ್ದೆ. ನನ್ನ ಅನುಭವಕ್ಕೆ ಬಂದಿರುವಂತೆ-

ಎತ್ತರದ ದೇಹ
ಬಂಗಾರ ಮೈ ಬಣ್ಣ
ಲಿಂಗ ತೇಜದ ನೇತ್ರ
ನೋವು ಕಳೆವ ನಗುಮೊಗ (ನಿಹಾರಿಕೆ)

ಈ ಮಂದಿರದ ಪುಣ್ಯ ಪರಿಸರದಲ್ಲಿ ಹಾಗೆ ಸುಮ್ಮನೆ ತಿರುಗಾಡಿಕೊಂಡಿದ್ದರೂ ಸಹ ಅಂತಹ ವ್ಯಕ್ತಿ ಸಮಾಜದಲ್ಲಿ ಗೌರವಾದರ ಮಾನ-ಸಮ್ಮಾನಗಳನ್ನು ಪಡೆಯಬಲ್ಲ. ಯಾವುದೇ ಸಂಸ್ಥೆಯ ಬದುಕಿನಲ್ಲಿ ನೂರು ವರ್ಷದ ಅವಧಿ ಸಣ್ಣದೇನಲ್ಲ. ಅಂದು ಕುಮಾರ ಶಿವಯೋಗಿಗಳ ಲಿಂಗಹಸ್ತದಿಂದ ರೂಪಿತಗೊಂಡ ಶ್ರೀ ಶಿವಯೋಗಮಂದಿರದಲ್ಲಿ ಭಾವವನ್ನು ತಿಳಿಗೊಳಿಸುವ ಪಾವನ ತೀರ್ಥವಿದೆ. ಮಹಾಗುರುವಿನ ಶ್ರೀಪಾದ ಸಾನಿಧ್ಯವಿದೆ. ಗುರುಕುಮಾರೇಶ ಕುಸಿಯುವ ಮಂದಿರ ಕಟ್ಟಲಿಲ್ಲ, ಸಮಾಜದ ಮನಗಳನ್ನು ಬೆಸೆಯುವ ಜಂಗಮ ಪರಂಪರೆ ಕಟ್ಟಿದರು, ಜಂಗಮಿಸುವ .ಲಿಂಗಾಯತ ವಿಶ್ವವಿದ್ಯಾಲಯ ಕಟ್ಟಿದರು. ಗುರು-ಲಿಂಗ-ಜಂಗಮರ ಕಲ್ಯಾಣ ಕಟ್ಟಿದರು. ಕೇವಲ ಸಮಾಜವೆಂಬ ಮಂತ್ರಪಠಿಸಿ ಅದರ ಉದ್ಧಾರಕ್ಕಾಗಿ ನಿರ್ಮಾಣವಾದ ಈ ಸಂಸ್ಥೆ ಸದ್ದು-ಗದ್ದಲಗಳಿಲ್ಲದೆ ಹೂ ಅರಳಿದಂತೆ ಅರಳಿ ಈ ನಾಡಬೆಳಗಿದ ಸಂಸ್ಥೆಯ ನೂರರ ಹಬ್ಬದಲ್ಲಿ ಹರುಷ ಹಂಚಿಕೊಳ್ಳೋಣ, ಅನುಭಾವದ ಮಲಾಪಹಾರಿಯಲ್ಲಿ ಮಿಂದು ಮಡಿಯಾಗೋಣ. ಸಮಾಜದ ಏಕತೆ ಹಾಗೂ ಲೇಸಿಗಾಗಿ ದುಡಿಯೋಣ. ಬನ್ನಿ! ಶರಣು ಬನ್ನಿ!!

■■

# ಪಂಚಾಕ್ಷರಿ ಗವಯಿಗಳು

• ಶಿರೀಷ ಜೋಶಿ, ಬೆಳಗಾವಿ

ಕಾಡಶೆಟ್ಟಿಹಳ್ಳಿ ಹಾವೇರಿ ಜಿಲ್ಲೆಯಲ್ಲಿರುವ ಚಿಕ್ಕ ಹಳ್ಳಿ. ಈ ಊರಿನ ಬಡ ದಂಪತಿಗಳು ಗುರುಪಾದಯ್ಯ- ನೀಲಮ್ಮನವರು. ಇವರಿಗೆ ಜನಿಸಿದ ಮಗು(2ನೆಯ ಫೆಬ್ರುವರಿ, 1892) ಹುಟ್ಟಿನಿಂದಲೆ ಕುರುಡು! ಇವರಿಗೆ ಜನಿಸಿದ ಮೊದಲ ಮಗ ಗುರುಬಸವಯ್ಯನಿಗೂ ಹುಟ್ಟುಕುರುಡು! ದಂಪತಿಗಳಿಗೆ ಎರಡನೆಯ ಮಗನೂ ಕುರುಡಾಗಿರುವುದು ತೀವ್ರ ನಿರಾಸೆಯನ್ನು ತಂದಿತು. ಮಗುವಿಗೆ ಗದಿಗೆಯ್ಯನೆಂದು ಹೆಸರಿಟ್ಟರು. ಮಗುವಿಗೆ ಬಾಲ್ಯದಿಂದಲೇ ಸಂಗೀತವೆಂದರೆ ಪ್ರಾಣ. ಎಲ್ಲರ ಅನುಕಂಪವನ್ನು ಉಂಡು ಬೆಳೆಯುತ್ತಿದ್ದ ಗದಿಗೆಯ್ಯ ಸಂಗೀತದಲ್ಲಿ ತನ್ನ ಪ್ರಾಣವನ್ನೇ ಇಟ್ಟುಕೊಂಡವನು. ಗುರುಬಸವಯ್ಯ ಹಾಗೂ ಗದಿಗೆಯ್ಯ ಒಟ್ಟಿಗೆ ಹಾಡುತ್ತಿದ್ದರೆ ಅದನ್ನು ಕೇಳಿ ಊರ ಜನ ಸಂತೋಷ ಪಡುತ್ತಿದ್ದರು.

ಇದೇ ಸುಮಾರಿಗೆ ಹಾನಗಲ್ಲ ಕುಮಾರಸ್ವಾಮಿಗಳು ಊರೂರಿಗೆ ಸಂಚರಿಸಿ ವೀರಶೈವ ಧರ್ಮದ ಪ್ರಚಾರ ಕಾರ್ಯ ಹಾಗೂ ಜನರಲ್ಲಿ ಸಾಮಾಜಿಕ ಜಾಗೃತಿಯನ್ನುಂಟು ಮಾಡುವ ಕಾರ್ಯದಲ್ಲಿ ನಿರತರಾಗಿದ್ದರು. ಅವರು ಕಾಡಶೆಟ್ಟಿಹಳ್ಳಿಗೆ ಹಕ್ಕಲ ಬಸವೇಶ್ವರ ಜಾತ್ರೆಗೆ ಬಿಜಯಂಗೈಯಲಿರುವ ಸುದ್ದಿ ಪ್ರಾಪ್ತವಾಯಿತು. ಹಳ್ಳಿ ಜಾತ್ರೆಯ ನಿರೀಕ್ಷೆಯಲ್ಲಿ ಸಡಗರದಿಂದ ತುಂಬಿತ್ತು. ಸ್ವಾಮಿಗಳ ಆಗಮನದ ವಾರ್ತೆ ಆ ಸಡಗರವನ್ನು ಇಮ್ಮಡಿಸಿತು. ಊರು ತನ್ನಷ್ಟಕ್ಕೆ ತಾನೇ ಶೃಂಗಾರಗೊಂಡಿತು. ಸ್ವಾಮಿಗಳು ದಯಮಾಡಿಸಿದರು. ಅವರ ಸ್ವಾಗತಕ್ಕೆ ಏರ್ಪಡಿಸಲಾದ ಕಾರ್ಯಕ್ರಮದಲ್ಲಿ ಗುರುಬಸವಯ್ಯ ಹಾಗೂ ಗದಿಗೆಯ್ಯ ಉತ್ತಮವಾಗಿ ಹಾಡಿ ಸ್ವಾಮಿಗಳ ಮನಸೆಳೆದರು!

ಬಾಲಕರೀರ್ವರ ಸಂಗೀತಾಸಕ್ತಿಯನ್ನು, ಕಂಠಸಿರಿಯನ್ನು, ಭಾವಪರವಶತೆಯನ್ನು ಗಮನಿಸಿದ ಶ್ರೀಗಳು ಮಕ್ಕಳ ಬಗೆಗೆ ವಿಚಾರಿಸಿ ವಿಷಯವನ್ನರಿತರು. ತಂದೆ ತಾಯಿಗಳನ್ನು ಕರೆಸಿ ಹೇಳಿದರು-

'ಈ ಮಕ್ಕಳನ್ನು ನಮಗೆ ಕೊಡಿ. ಅವರ ಭವಿಷ್ಯವನ್ನು ನಾವು ರೂಪಿಸುತ್ತೇವೆ'

ಹೆತ್ತ ಕರುಳು ಚುರ್ರೆಂದಿತು. ಗುರುಪಾದಯ್ಯನವರು ಧೈರ್ಯದಿಂದ ಮಕ್ಕಳನ್ನು ಶ್ರೀಗಳ ಉಡಿಯಲ್ಲಿ ಹಾಕುವ ನಿರ್ಧಾರ ಕೈಕೊಂಡರು. ಈಗಾಗಲೇ ಗುರುಬಸವಯ್ಯನಿಗೆ ಬಾಲ್ಯ ವಿವಾಹವಾಗಿರುವುದನ್ನು ಅರಿತ ಶ್ರೀಗಳು ಅವನನ್ನು ತಿರುಗಿ ಕಳುಹಿಸುವುದಾಗಿ ಹೇಳಿ ಮಕ್ಕಳನ್ನು ಶಿವಯೋಗಮಂದಿರಕ್ಕೆ ಕರೆದೊಯ್ದರು.

ಹಾನಗಲ್ಲಿನ ಶಿವಯೋಗ ಮಂದಿರದ ಕಟ್ಟುನಿಟ್ಟಿನ ಜೀವನಕ್ಕೆ ಹೊಂದಿಕೊಳ್ಳುವುದು ಬಾಲಕರೀರ್ವರಿಗೂ ಮೊದಮೊದಲು ತೊಂದರೆದಾಯಕವೆನಿಸಿತು. ಮಂದಿರದ ತ್ರಿಕಾಲ ಪೂಜಾ ಸಮಯದಲ್ಲಿ ಸಂಗೀತ ಸೇವೆ ಸಲ್ಲಿಸುವ ಭಾಗ್ಯ ಇಬ್ಬರಿಗೂ ದೊರಕಿತು.

ಕುಮಾರ ಸ್ವಾಮಿಗಳ ಉದ್ದೇಶ ಬೇರೆಯೇ ಆಗಿತ್ತು. ಇಬ್ಬರೂ ಸಹೋದರರು ಒಳ್ಳೆಯ ಶರೀರವನ್ನು ಹೊಂದಿದ ಪ್ರಯುಕ್ತ ಅವರು ಸಂಗೀತಗಾರರಾಗಿ ರೂಪುಗೊಳ್ಳಬೇಕೆಂದು ಅಪೇಕ್ಷಿಸಿದರು. ಇದೇ ಸಮಯಕ್ಕೆ ತಂಜಾವೂರಿನಲ್ಲಿ ಸಂಗೀತ ಕಲಿತ ಗವಯಿಗಳೊಬ್ಬರು ಅಕಸ್ಮಾತ್ತಾಗಿ ಹಾನಗಲ್ಲಿಗೆ ಆಗಮಿಸಿದರು. ತಂಜಾವೂರಿನ ಗವಯಿಗಳು ಒಳ್ಳೆಯ ಸಂಗೀತಗಾರರಾಗಿದ್ದಂತೆ ಉತ್ತಮ ಶಿಕ್ಷಕರೂ ಆಗಿದ್ದರು. ಅವರು ಬಾಲಕದ್ವಯರಿಗೆ ಕರ್ನಾಟಕಿ ಸಂಗೀತವನ್ನು ಹೇಳಿಕೊಡಲಾರಂಭಿಸಿದರು.

ಪಂಚಾಕ್ಷರಿ ಗವಯಿಗಳು ಕಲಿಯುವ ಸಮಯದಲ್ಲಿ ಉತ್ತರಕರ್ನಾಟಕವೂ ಕರ್ನಾಟಕಿ ಸಂಗೀತದ ಕಂಪನ್ನೇ ಹೊಂದಿತ್ತು. ಇಲ್ಲಿ ಹಿಂದುಸ್ತಾನಿ ಸಂಗೀತ ಅದೇ ತಾನೆ ಕಾಲಿಡುತ್ತಿದ್ದರಿಂದ ಮತ್ತು ಆ ಕಾಲಕ್ಕೆ ಅದರ ವ್ಯಾಪ್ತಿ ಕೇವಲ ಧಾರವಾಡ, ಹುಬ್ಬಳ್ಳಿ ಹಾಗೂ ಬೆಳಗಾವಿಗಳಿಗೆ ಸೀಮಿತವಾದ್ದರಿಂದ ಹಾನಗಲ್‌ಗಳಂಥ ಊರುಗಳಲ್ಲಿ ಹಿಂದುಸ್ತಾನಿ ಸಂಗೀತ ಇನ್ನೂ ಪ್ರವೇಶ ಮಾಡಿರಲಿಲ್ಲ! ನಲ್ವಡಿ ಕೃಷ್ಣರಾಜ ಒಡೆಯರರಿಗೆ ಹಿಂದುಸ್ತಾನಿ ಸಂಗೀತದಲ್ಲಿ ಆಸಕ್ತಿಯಿದ್ದ ಕಾರಣವಾಗಿ ಉತ್ತರ ಭಾರತದಿಂದ ಅಥವಾ ಪುಣೆ ಮುಂಬಯಿಗಳಿಂದ ಮೈಸೂರಿಗೆ ಹೋಗುತ್ತಿದ್ದ ಗವಯಿಗಳು ಹುಬ್ಬಳ್ಳಿ ಧಾರವಾಡ ಬೆಳಗಾವಿಗಳಲ್ಲಿ ಕೆಲವು ಕಾಲ ತಂಗಿ, ಇಲ್ಲಿ ತಮ್ಮ ಕಚೇರಿಗಳನ್ನು ನೀಡಿ ಮುಂದೆ ಸಾಗುತ್ತಿದ್ದರು. ಹೀಗಾಗಿ ಈ ಭಾಗದ ಜನರಿಗೆ ಹಿಂದುಸ್ತಾನಿ ಸಂಗೀತ ಪ್ರಿಯವಾಗತೊಡಗಿತು. ಪಿತ್ರೆ ವಕೀಲರಂಥ ಕೆಲವು

ಉತ್ಸಾಹಿ ಯುವಕರು ಕಲಿಯಲು ಸನ್ನದ್ಧರಾದರು. ಹೀಗೆ ಹಿಂದುಸ್ತಾನಿ ಸಂಗೀತ ಉತ್ತರಕರ್ನಾಟಕದಲ್ಲಿ ಪ್ರವೇಶ ಪಡೆಯಿತು. ನಂತರ ಅನೇಕ ವಿದ್ವಾಂಸರು, ಗವಯಿಗಳು ಈ ಭಾಗದಲ್ಲಿ ಹಿಂದುಸ್ತಾನಿ ಸಂಗೀತ ಬೆಳೆಯಲು ಕಾರಣರಾದರು. ನತ್ಥನ್‌ಖಾನ, ಭಾಸ್ಕರಬುವಾ ಬಖಲೆ, ಉಸ್ತಾದ ಅಬ್ದುಲ್ ಕರೀಂಖಾನ, ಸಿತಾರಿಯಾ ರೆಹಮತ್‌ಖಾನ್ ಮೊದಲಾದವರು ಈ ಕಾರ್ಯವನ್ನು ಸಮರ್ಥವಾಗಿ ಮಾಡಿದರು. ಮುಂದೆ ಸವಾಯಿಗಂಧರ್ವರಂಥ ಅನೇಕ ಪ್ರಭೃತಿಗಳು ಅದನ್ನು ಬೆಳೆಸಿದರು.

ಆ ಕಾಲದಲ್ಲಿ ಕೆಲವು ಸಂಸ್ಥೆಗಳೂ ಉತ್ತರಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತ ನೆಲೆಗೊಳ್ಳಲು ಕಾರಣವೆನಿಸಿದವು. ಉತ್ತರ ಕರ್ನಾಟಕದಲ್ಲಿ ಸಂಚರಿಸುತ್ತಿದ್ದ ಮರಾಠಿ ನಾಟಕ ಕಂಪನಿಗಳು, ಇಲ್ಲಿಯೇ ಹುಟ್ಟಿ ಬೆಳೆದ ಕನ್ನಡ ನಾಟಕ ಕಂಪನಿಗಳು ತಮ್ಮ ರಂಗಗೀತೆಗಳ ಮುಖಾಂತರ ಇಲ್ಲಿನ ಜನರಲ್ಲಿ ಹಿಂದುಸ್ತಾನಿ ಸಂಗೀತದ ಅಭಿರುಚಿಯನ್ನೂ ಆಸಕ್ತಿಯನ್ನೂ ಬೆಳೆಸಿದುವು. ಪಂ.ಭಾಸ್ಕರ್‌ಬುವಾ ಬಖಲೆಯವರಿಗೆ ಎಂಟು ವರ್ಷಗಳ ಕಾಲ ಆಶ್ರಯ ನೀಡಿದ ಧಾರವಾಡದ ಟ್ರೇನಿಂಗ್ ಕಾಲೇಜು ಹಾಗೂ ಭೂಗಂಧರ್ವ ರೆಹಮತ್ ಖಾನರಿಗೆ ಮತ್ತು ಕಬೀರದಾಸರಿಗೆ ಆಶ್ರಯ ನೀಡಿದ ಸಿದ್ಧಾರೂಢ ಶ್ರೀಮಠಗಳೂ ಹಿಂದುಸ್ತಾನಿ ಸಂಗೀತ ಇಲ್ಲಿ ಬೆಳೆಯಲು ಕಾರಣವೆನಿಸಿವೆ.

ಪಂಚಾಕ್ಷರಿಗವಯಿಗಳು ಕಲಿಯುವ ಸಮಯದಲ್ಲಿ ಹಿಂದುಸ್ತಾನಿ ಸಂಗೀತ ಹಾನಗಲ್ಲನ್ನು ಪ್ರವೇಶಿಸಿರಲಿಲ್ಲವಾಗಿ ಮತ್ತು ಅದನ್ನು ಕಲಿಸುವವರು ದುರ್ಮಿಳರಾದ್ದರಿಂದ ಅವರು ತಂಜಾವೂರಿನ ಗವಯಿಗಳಲ್ಲಿ ಕರ್ನಾಟಕಿ ಸಂಗೀತವನ್ನು ಕಲಿಯುವುದು ಅನಿವಾರ್ಯವಾಗಿತ್ತು. ಅವರು ಬಾಲಕರಿಗೆ ಮೊದಲು ಶೃತಿ ಪರಿಚಯವನ್ನು ಮಾಡಿಕೊಟ್ಟರು. ಸ್ವರ ಲಯಗಳ ಬಗೆಗೆ ತಿಳಿಸಿದರು. ಕರ್ನಾಟಕಿ ಸಂಗೀತವು ತಾಲ ಪ್ರಧಾನವಾದ್ದರಿಂದ ತಾಲ ಜ್ಞಾನ ಅತ್ಯಂತ ಮಹತ್ವದ ಸಂಗತಿಯಾಗಿದೆ. ತಾಲ ಬದ್ಧವಾಗಿ ಹಾಡುವುದು ಅಲ್ಲಿ ಅತ್ಯಂತ ಮುಖ್ಯವಾಗುತ್ತದೆ. ಮಕ್ಕಳಿಬ್ಬರೂ ತೊಡೆ ತಟ್ಟಿಕೊಂಡು ಚಪ್ಪಾಳೆ ತಟ್ಟಿಕೊಂಡು ತಾಲ ಬದ್ಧವಾಗಿ ಹಾಡುವುದನ್ನು ಮೊದಲು ಕಲಿತರು. ನಂತರ ಪ್ರಾರಂಭವಾದದ್ದು ಜಂಟಿ ಸ್ವರಗಳನ್ನು ಹೇಳುವುದು. ಅವುಗಳನ್ನು ತಾಲಬದ್ಧವಾಗಿ ಪ್ರಸ್ತುತ ಪಡಿಸುವುದನ್ನು ರೂಢಿಸಿಕೊಂಡರು. ಈಗಲೂ ಜಂಟಿ ಸ್ವರಗಳನ್ನು ಹೇಳುವುದು ಅತ್ಯಂತ ಕಠಿಣವೆಂದೇ ಭಾವಿಸಲಾಗುತ್ತದೆ. ಅಂಥದನ್ನು ಬಾಲಕರಿಬ್ಬರೂ ಸುಲಭವಾಗಿ ಕಲಿತರು. ಸ್ವರ, ಸಂಗತಿ,

ಜಟಿಲ ತಾಳ, ಲಯಗಳ ಗತಿ, ಗಮನಗಳನ್ನು ಆತ್ಮಸಾತ್ ಮಾಡಿಕೊಂಡರು. ತಂಜಾವೂರಿನ ಗವಯಿಗಳು ಗದಿಗೆಯ್ಯ ಹಾಗೂ ಗುರುಬಸವಯ್ಯನವರಿಗೆ ಕರ್ನಾಟಕಿ ಸಂಗೀತದ ಭದ್ರ ಬುನಾದಿಯನ್ನು ಹಾಕಿದರು. ಅವರ ಕಲಿಕೆ ಎಷ್ಟು ಕ್ಷಿಪ್ರವಾಗಿತ್ತೆಂದರೆ ಒಂದೆರಡು ವರ್ಷಗಳಲ್ಲಿ ಕಲಿಯಬೇಕಾದುದನ್ನು ಕೇವಲ ಆರು ತಿಂಗಳಲ್ಲಿ ಮುಗಿಸಿದರು. ಮುಂದೆ ಕೆಲವು ದಿನಗಳ ತರುವಾಯ ಅನಿವಾರ್ಯ ಕಾರಣಗಳಿಂದ ತಂಜಾವೂರಿನ ಗವಯಿಗಳು ಮರಳಿದರು. ಇವರ ಪ್ರಗತಿಯನ್ನು ಗಮನಿಸುತ್ತಿದ್ದ ಹಾನಗಲ್ ಕುಮಾರಸ್ವಾಮಿಗಳಿಗೆ ಸಂತೃಪ್ತಿಯಾಗಿತ್ತು. ಬಾಲಕರ ಸಂಗೀತ ಶಿಕ್ಷಣ ಮುಂದುವರಿಯಬೇಕೆಂದು ಅವರು ಅಪೇಕ್ಷಿಸಿದರು.

ಹೊಸಪೇಟೆಯಲ್ಲಿ ಒಬ್ಬ ಗವಯಿ ಇರುವುದು ಕುಮಾರಸ್ವಾಮಿಗಳಿಗೆ ತಿಳಿಯಿತು. ಹೊಸಪೇಟೆಯ ಗವಯಿ ಭೀಮರಾಯರನ್ನು ಹಾನಗಲ್ಲಿಗೆ ಬರಮಾಡಿಕೊಂಡು ಅವರಿಗೆ ಎಲ್ಲ ವ್ಯವಸ್ಥೆಯನ್ನು ಕಲ್ಪಿಸಿ ಮಕ್ಕಳಿಗೆ ಸಂಗೀತ ಕಲಿಸುವಂತೆ ಸೂಚಿಸಿದರು. ಬಾಲಕರಿಬ್ಬರ ಸಂಗೀತ ಶಿಕ್ಷಣ ಮತ್ತೆ ಮುಂದಡಿಯಿಟ್ಟಿತು. ಭೀಮರಾಯರು ಮಕ್ಕಳ ಪ್ರತಿಭೆಯನ್ನು ಕಂಡು ಸಂತಸ ಪಟ್ಟರು. ಆತ್ಮೀಯತೆಯಿಂದ ಅವರಿಗೆ ಸಂಗೀತವನ್ನು ಹೇಳಿಕೊಡಲು ಉಪಕ್ರಮಿಸಿದರು. ಆದರೆ, ಇವರಿಗೂ ಬಹುಕಾಲ ಕಲಿಸುವ ಯೋಗವಿರಲಿಲ್ಲ. ಹಾನಗಲ್ಲಿನ ಹವೆಯು ಆಗಿ ಬರದ ಕಾರಣದಿಂದ ಭೀಮರಾಯರು ಹೊಸಪೇಟೆಗೆ ಮರಳಿದರು.

ಶಿರಾಳಕೊಪ್ಪದಲ್ಲಿ ಗದಿಗೆಯ್ಯನೆಂಬ ಸಂಗೀತಗಾರರಿದ್ದ ವಾರ್ತೆ ತಿಳಿಯುತ್ತಲೇ ಅಲ್ಲಿಗೆ ಧಾವಿಸಿದ ಕುಮಾರಸ್ವಾಮಿಗಳು ಮಕ್ಕಳಿಗೆ ಸಂಗೀತ ಹೇಳಿಕೊಡಲು ಅವರನ್ನು ಒಪ್ಪಿಸಿದರು. ಮಕ್ಕಳಿಬ್ಬರೂ ಶಿರಾಳಕೊಪ್ಪದಲ್ಲಿಯೇ ಉಳಿಯಲು ವಸತಿಯ ಹಾಗೂ ಊಟದ ವ್ಯವಸ್ಥೆ ಮಾಡಿದರು. ಗದಿಗೆಯ್ಯನವರು ಮಕ್ಕಳಿಗೆ ಎಂಟು ವರ್ಷಗಳ ಕಾಲ ಸಂಗೀತವನ್ನು ಕಲಿಸಿದರು. ತಮ್ಮಲ್ಲಿದ್ದ ವಿದ್ಯೆಯನ್ನೆಲ್ಲ ಮಕ್ಕಳಿಗೆ ನಿರ್ವಂಚನೆಯಿಂದ ಧಾರೆ ಎರೆದರು. ಎಂಟು ವರ್ಷಗಳ ಅವಧಿಯಲ್ಲಿ ಮಕ್ಕಳಿಬ್ಬರೂ ಸಾಕಷ್ಟು ಸಾಧನೆಯನ್ನು ಮಾಡಿದರು. ಸ್ವತಂತ್ರವಾಗಿ ಕಚೇರಿಗಳನ್ನು ಮಾಡುವಷ್ಟು ಸಂಗೀತವನ್ನು ಸಿದ್ಧಿಸಿಕೊಂಡರು.

ಗದಿಗೆಯ್ಯನವರು ಪ್ರಾಮಾಣಿಕವಾಗಿ ಒಂದು ಅಭಿಪ್ರಾಯವನ್ನು ಕುಮಾರಸ್ವಾಮಿಗಳ ಮುಂದಿಟ್ಟರು. ಅವರೆಂದರು, 'ಬುದ್ಧಿ, ನಾನು ಕಲಿಸುವುದೆಲ್ಲವೂ ಮುಗಿದಿದೆ. ಮಕ್ಕಳ ಬುದ್ಧಿ ಎಂದಿಗೂ ತುಂಬಲಾರದ ಇಂಗು ಭೂಮಿ. ನಾನು ಹಾಕಿದ್ದೆಲ್ಲವನ್ನೂ ಸಂಪೂರ್ಣವಾಗಿ ಸ್ವೀಕರಿಸಿದ್ದಾರೆ. ಅವರ ಜ್ಞಾನ ತೃಷೆ ಹಿಂಗಲಾರದು. ಅವರನ್ನು ಹೆಚ್ಚಿನ ಅಧ್ಯಯನಕ್ಕಾಗಿ ಮೈಸೂರಿಗೆ ಕಳಿಸುವುದು ವಾಸಿ. ನಾನು ಮಕ್ಕಳನ್ನು ಮರಳಿ ತಮ್ಮ ಸಾನಿಧ್ಯಕ್ಕೆ ಒಪ್ಪಿಸುತ್ತಿದ್ದೇನೆ' ಕುಮಾರಸ್ವಾಮಿಗಳು ಮಕ್ಕಳನ್ನು ಮೈಸೂರಿಗೆ ಕಳಿಸುವಲ್ಲಿ ಕೆಲವು ಕಾಲಾವಕಾಶ ಬೇಕಾಗುತ್ತದೆ ಎಂದು ಯೋಚಿಸಿ ಅವರನ್ನು ನೆಲವಿಗಿಹಳ್ಳಿಗೆ ಕಳುಹಿದರು. ಅಲ್ಲಿ ಕಾಲರಾ ಬೇನೆಗೆ ತುತ್ತಾದ ಗುರುಬಸವಯ್ಯ ಕೊನೆಯುಸಿರೆಳೆದರು. ಇದರಿಂದ ಗದಿಗಯ್ಯನಿಗೆ ಬಹು ದುಃಖವಾಯಿತು. ಶ್ರೀಗಳು ಬಂದು ಸಾಂತ್ವನವನ್ನು ಹೇಳಿದರು.

ಮುಂದೆ ಕೆಲವೇ ದಿನಗಳಲ್ಲಿ ಗದಿಗೆಯ್ಯನನ್ನು ಮೈಸೂರಿಗೆ ಉನ್ನತ ಸಂಗೀತ ಶಿಕ್ಷಣಕ್ಕಾಗಿ ಕಳುಹಿಸುವ ಏರ್ಪಾಟು ಮಾಡಿದರು. ಮೈಸೂರಿನಲ್ಲಿ ಗದಿಗಯ್ಯನ ಜೀವನ ಸುಖದ ಸುಪ್ಪತ್ತಿಗೆಯೇನೂ ಆಗಿರಲಿಲ್ಲ. ಶ್ರೀ ಮ.ನಿ.ಪ್ರ. ಗೌರಿಶಂಕರ ಸ್ವಾಮಿಗಳಲ್ಲಿ ಉಳಿದುಕೊಂಡು ಸಂಗೀತ ಕಲಿಯುತ್ತಿದ್ದರೂ ಅವರಿಗೆ ಭಾರವಾಗದೆಂಬ ಕಾರಣದಿಂದ ತಂಬೂರಿ ಸಾಥಿ ಮಾಡಿ, ಭಜನೆಗಳನ್ನು ಹಾಡಿ, ಕೀರ್ತನೆಗಳನ್ನು ಹೇಳಿ ಚರಿತಾರ್ಥದ ವ್ಯವಸ್ಥೆ ಮಾಡಿಕೊಂಡರು.

ಶ್ರೀ.ಮ.ನಿ.ಪ್ರ.ಗೌರಿಶಂಕರ ಸ್ವಾಮಿಗಳು ಗದಿಗೆಯ್ಯನ ವ್ಯಕ್ತಿತ್ವದಿಂದ ತುಂಬ ಪ್ರಭಾವಿತರಾದರು. ಆತನ ನಡೆ, ನುಡಿ, ಚಿತ್ತಾಕರ್ಷಕ ವ್ಯಕ್ತಿತ್ವ, ಮನೋಭೂಮಿಕೆ, ಸಾತ್ವಿಕತೆ ಇವೆಲ್ಲವೂ ಅವರ ಮೇಲೆ ಪ್ರಭಾವ ಬೀರಿದವು. ಅವನ ಮೇಲೆ ಇನ್ನಿಲ್ಲದ ವಾತ್ಸಲ್ಯ ಮೂಡಿತು. ಸಂಗೀತದಲ್ಲಿ ಸಿದ್ಧಿ ಪಡೆಯಲು ಬಂದಿರುವ ಈತನಿಗೆ ಗದಿಗೆಯ್ಯನೆಂಬ ಅಭಿಧಾನ ಸಲ್ಲದು, ಶಿವನು ಸಂಗೀತ ಪ್ರಿಯನಾದ್ದರಿಂದ ಶಿವನ ಹೆಸರೇ ಇವನಿಗೆ ಯೋಗ್ಯವೆಂದು ಭಾವಿಸಿ 'ಪಂಚಾಕ್ಷರಿ' ಎಂದು ಕರೆದರು. ಮೊದಲ ಸಲ ಗದಿಗೆಯ್ಯನನ್ನು ಹಾಗೆ ಕರೆದಾಗ ಅವನಿಗೂ ಅರ್ಥವಾಗಲಿಲ್ಲ. ನಂತರ, ಶ್ರೀಗಳೇ ತಿಳಿಸಿ ಹೇಳಿದಾಗ ಆತ ಆನಂದಗೊಂಡ. ಅಂದಿನಿಂದ ಗದಿಗಯ್ಯ ಎಂಬುದು ಮರೆಯಾಗಿ 'ಪಂಚಾಕ್ಷರಿ' ಎಂಬುದು ಹೆಸರಾಯಿತು.

ಹೊಟ್ಟೆಯ ಹಸಿವು ಪಂಚಾಕ್ಷರಿಯನ್ನು ಅಷ್ಟಾಗಿ ಬಾಧಿಸುತ್ತಿರಲಿಲ್ಲ. ಆದರೆ ಸಂಗೀತದ ಹಸಿವು ಮಾತ್ರ ತಡೆಯಲಾರದಂತಿತ್ತು. ಪಂಚಾಕ್ಷರಿಯ ವ್ಯಕ್ತಿತ್ವದಿಂದ, ಹಾಡುಗಾರಿಕೆಯಿಂದ ಪ್ರಭಾವಿತರಾದ ಬಿಡಾರಂ ಕೃಷ್ಣಪ್ಪನವರು ಸಂಗೀತ ಕಲಿಸಲು ಒಪ್ಪಿಕೊಂಡರು. ಕೆಲವು ಕಾಲ ಅವರಲ್ಲಿ ಸಂಗೀತದ ಅಧ್ಯಯನ ನಡೆಯಿತಾದರೂ ಅವರಿಗೆ ಬಂದ ಕೌಟುಂಬಿಕ ತೊಂದರೆಗಳಿಂದಾಗಿ ಪಿಟೀಲು ವೆಂಕಟರಮಣಯ್ಯನವರಲ್ಲಿ ಪಂಚಾಕ್ಷರಿಯ ಸಂಗೀತದ ತಾಲೀಮು ಮುಂದುವರಿಯಿತು. ಸ್ವತಃ ಬಿಡಾರಂ ಕೃಷ್ಣಪ್ಪನವರು ಮುಂದೆ ನಿಂತು ಪಂಚಾಕ್ಷರಿಗೆ ಎಲ್ಲ ವ್ಯವಸ್ಥೆಗಳನ್ನು ಮಾಡಿದರು. ವೆಂಕಟರಮಣಯ್ಯನವರು ಅತ್ಯಂತ ಮುತುವರ್ಜಿಯಿಂದ ಸಂಗೀತ ಶಿಕ್ಷಣ ನೀಡಿದರು. ವೆಂಕಟರಮಣಯ್ಯನವರಲ್ಲಿ ಕಲಿಯಲಾರಂಭಿಸಿದ ನಂತರ ಪಂಚಾಕ್ಷರಿಗೆ ಕರ್ನಾಟಕ ಸಂಗೀತದ ಉನ್ನತ ಮಟ್ಟದ ಜ್ಞಾನವು ಪ್ರಾಪ್ತಿಯಾಯಿತು. ಪಂಚಾಕ್ಷರಿ ಶ್ರಮ ವಹಿಸಿ ಕಲಿತನು. ಮೈಸೂರಿನಲ್ಲಿದ್ದ ನಾಲ್ಕು ವರ್ಷಗಳ ಕಾಲ ತಪಸ್ಸಿನಂತೆ ಕಳೆದು ಸಂಗೀತದಲ್ಲಿ ಸ್ವತಃ ಉನ್ನತ ಮಟ್ಟವನ್ನು ತಲುಪಿದ್ದು ಸಾಮಾನ್ಯ ಸಾಧನೆಯೇನಲ್ಲ!

ಈ ನಾಲ್ಕು ವರ್ಷಗಳು ಪಂಚಾಕ್ಷರಿಯ ಜೀವನದಲ್ಲಿ ಸಂಗೀತದ ಸಾಧನೆಯ ದೃಷ್ಟಿಯಿಂದ ಅತ್ಯಂತ ಮಹತ್ವದ ಕಾಲ ಘಟ್ಟ. ಈ ಕಾಲಾವಧಿಯಲ್ಲಿ ಗುರುವಿನ ಮುಖದಿಂದ ನೇರವಾಗಿ ಸಂಗೀತವನ್ನು ಕಲಿತದ್ದು ಒಂದು ಭಾಗ. ಇನ್ನೊಂದು ಮಹತ್ವದ ಭಾಗವೆಂದರೆ, ಮೈಸೂರಿನಲ್ಲಿ ಇರುವಷ್ಟು ಕಾಲವೂ ಉನ್ನತ ಮಟ್ಟದ ಅನೇಕ ಕಲಾವಿದರ ಸಂಗೀತವನ್ನು ಕೇಳುವ ಸದವಕಾಶ ಪಂಚಾಕ್ಷರಿಗೆ ಲಭ್ಯವಾಯಿತು. ಇದರಿಂದಾಗಿ ಅವನ ಸಂಗೀತಕ್ಕೆ ಒಂದು ಹೊಸ ಆಯಾಮ, ಮೆರಗು ಬಂದಿತು. ಕರ್ನಾಟಕಿ ಸಂಗೀತದ ಅನೇಕ ಮಹತ್ವದ ಸೂಕ್ಷ್ಮ ಸಂಗತಿಗಳು ಹೊಳೆದುದು ಇದೇ ಅವಧಿಯಲ್ಲಿ. ವಿವಿಧ ಕಲಾವಿದರಿಂದ ಅನೇಕ ಮಹತ್ವದ ಕೀರ್ತನೆಗಳನ್ನು ಸಂಗ್ರಹಿಸಿದ್ದಲ್ಲದೇ ಹಾಡುಗಾರಿಕೆಯ ಮರ್ಮವನ್ನು ತಿಳಿಯಲು ಸಾಧ್ಯವಾಯಿತು.

ಮೈಸೂರಿನಲ್ಲಿರುವಾಗ ಅನೇಕ ಕಡೆಗಳಲ್ಲಿ ಸಂಗೀತ ಕಚೇರಿಗಳನ್ನು ಮಾಡುವ ಅವಕಾಶ ಪಂಚಾಕ್ಷರಿಗೆ ಲಭಿಸಿತು. ಹೀಗೆ ಅವಕಾಶ ದೊರೆತ ಎಲ್ಲ ಸಂದರ್ಭಗಳಲ್ಲೂ ತಾನೊಬ್ಬ ಪ್ರಬುದ್ಧ ಕಲಾವಿದನೆಂಬುದನ್ನು ಸಾಬೀತುಪಡಿಸಿದ. ಮೈಸೂರಿನ ಜನತೆ ಪಂಚಾಕ್ಷರಿಯನ್ನು ಸಂಗೀತದ 'ಘನ ವಿದ್ವಾಂಸ'ನೆಂದು ಮನ್ನಿಸಿತು. ವಿದ್ಯಾರ್ಥಿಯಾಗಿ ಮೈಸೂರು ನಗರಕ್ಕೆ ಕಾಲಿಟ್ಟ ಗದಿಗಯ್ಯ ಪಂಚಾಕ್ಷರಿ ಎನಿಸಿಕೊಂಡು, ವಿದ್ವಾಂಸನಾಗಿ ರೂಪುಗೊಂಡ!

ಉಸ್ತಾದ ವಹೀದಖಾನರು ಕಿರಾಣಾ ಘರಾಣೆಯವರು. ಉಸ್ತಾದ ಅಬ್ದುಲ್ ಕರೀಂಖಾನರ ನಂತರ ಮೇರುಖಂಡದ ಗಾಯಕರು ಎಂದು ಹೆಸರುವಾಸಿಯಾದವರು. ಇವರ ಶಿಷ್ಯ ಉಸ್ತಾದ ಅಮೀರಖಾನರು ಸಹ ಅದೇ ಖ್ಯಾತಿಯನ್ನು ಪಡೆದರು. ಇವರ ಶಿಷ್ಯರಲ್ಲಿ ಹೀರಾಬಾಯಿ ಬಡೋದೇಕರ್, ಶ್ರೀಮತಿ ಬೇಗಂ ಅಖ್ತರಿ, ಮುನ್ನೀಬಾಯಿ, ಹಾಗೂ ಪಂ.ಬಸವರಾಜ ರಾಜಗುರು ಪ್ರಸಿದ್ಧರಾಗಿದ್ದಾರೆ. ಇಂಥ ಶ್ರೇಷ್ಠ ತರಗತಿಯ ಗವಯಿಯನ್ನು ಹುಡುಕಿ ಹಾನಗಲ್ ಕುಮಾರಸ್ವಾಮಿಗಳು ಶಿವಯೋಗಮಂದಿರಕ್ಕೆ ಬರಮಾಡಿಕೊಂಡರು. ಅವರಿಗೆ ಎಲ್ಲ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಕುಮಾರಸ್ವಾಮಿಗಳು ಉಸ್ತಾದ ವಹೀದಖಾನರು ಸದಾಕಾಲ ಹರ್ಷಚಿತ್ತರಾಗಿರುವಂತೆ ನಿಗಾ ವಹಿಸಿದರು.ಅವರಿಗೆ ಬೇಕಾದ ಎಲ್ಲ ಅನುಕೂಲತೆಗಳನ್ನೂ ಒದಗಿಸಿದರು. ಅವರಿಗೆ ಪ್ರತಿತಿಂಗಳೂ ನೂರೈವತ್ತು ರೂಪಾಯಿಗಳ ಸಂಬಳ ನಿಗದಿಯಾಯಿತು.

ಒಂದು ಶುಭದಿನ ಉಸ್ತಾದ ವಹೀದಖಾನರು ಪಂಚಾಕ್ಷರಿಗವಯಿಗಳಿಗೆ ಸಂಗೀತದ ತಾಲೀಂನ್ನು ಪ್ರಾರಂಭಿಸಿದರು. ಈಗಾಗಲೇ ಹಿಂದುಸ್ತಾನಿ ಸಂಗೀತದಲ್ಲಿ ಸ್ವಪ್ರಯತ್ನದಿಂದ ಒಂದಿಷ್ಟು ಕೃಷಿ ಮಾಡಿಕೊಂಡಿದ್ದ ಪಂಚಾಕ್ಷರಿಗವಯಿಗಳಿಗೆ ಕಲಿಸುವಲ್ಲಿ ವಹೀದಖಾನರಿಗೆ ಯಾವ ತೊಂದರೆಯೂ ಆಗಲಿಲ್ಲ. ಪಂಚಾಕ್ಷರಿಗವಯಿಗಳು ಸೂಕ್ಷ್ಮ ಗ್ರಾಹಿಗಳು. ಗುರುವಿನ ಮುಖೇನ ಪ್ರಾಪ್ತವಾದ ಸಂಗೀತದ

ಸುಧಾರಸವನ್ನು ಆನಂದದಿಂದ ಸ್ವೀಕರಿಸಿದರು. ನಾಲ್ಕುವರುಷಗಳ ಅವಿರತ ತಾಲೀಮಿನಲ್ಲಿ ಅವರೊಬ್ಬ ಪ್ರಬುದ್ಧ ಹಿಂದುಸ್ತಾನಿ ಗಾಯಕರಾಗಿ ರೂಪುಗೊಂಡರು.

ಇಷ್ಟೆಲ್ಲ ಉನ್ನತಿಗೇರಿದ್ದರೂ ಪಂಚಾಕ್ಷರಿಗವಯಿಗಳಿಗೆ ಮಾತ್ರ ಹಿಂದುಸ್ತಾನಿ ಸಂಗೀತದಲ್ಲಿ ತಾವು ಸಾಧಿಸಬೇಕಾದುದು ಇನ್ನೂ ಇದೆ ಎಂದೇ ಅನ್ನಿಸತೊಡಗಿತು. ಹೀಗಾಗಿ ಕೆಲವು ಕಾಲ ಬೆಳಗಾವಿಗೆ ಆಗಮಿಸಿದರು. ಬೆಳಗಾವಿ ಆಗ ಸಂಗೀತಗಾರರಿಂದ ತುಂಬಿ ತುಳುಕುತ್ತಿತ್ತು. ರಾಷ್ಟ್ರಮಟ್ಟದಲ್ಲಿ ಹೆಸರುವಾಸಿಯಾದ ಅನೇಕ ಸಂಗೀತಗಾರರು ಇಲ್ಲಿ ನೆಲೆಸಿದ್ದರು. ಸವಾಯಿಗಂಧರ್ವರ ಶಿಷ್ಯ ಕಾಗಲಕರಬುವಾ, ಗಾಯಕರಾದ ಉಮಾಮಹೇಶ್ವರಬುವಾ, ಉತ್ತೂರಕರಬುವಾ, ಬಾಬೂರಾವ ರಾಣೆ, ಹಾರ್ಮೋನಿಯಂ ಶಿಕ್ಷಕರಾದ ರಾಜವಾಡೆಬುವಾ, ಗೋವಿಂದರಾವ ಗಾಯಕವಾಡ, ವಿಟ್ಠಲರಾವ ಕೋರಗಾಂವಕರ ಮೊದಲಾದವರಿದ್ದರು. ಶಿವರಾಮಬುವಾ ವಝೆ ಎಂಬ ಅಪ್ರತಿಮ ಗಾಯಕ ಕೂಡ ಆಗ ಬೆಳಗಾವಿಯಲ್ಲಿಯೇ ನೆಲೆಸಿದ್ದರು. ಇವರೆಲ್ಲರಿಗೂ ಕಳಶಪ್ರಾಯರಾಗಿ ರಾಮಕೃಷ್ಣಬುವಾ ವಝೆ ಬೆಳಗಾವಿಯಲ್ಲಿದ್ದರು. ಇಂಥ ನಗರಕ್ಕೆ ಪಂಚಾಕ್ಷರಿ ಗವಯಿಗಳು ಕಲಿಯಲು ಬರುವ ವ್ಯವಸ್ಥೆ ಆಯಿತು. ನಾಗನೂರು ಶಿವಬಸವಸ್ವಾಮಿಗಳ ಶ್ರೀಮಠದಲ್ಲಿ ಪಂಚಾಕ್ಷರಿಗವಯಿಗಳ ವಾಸ್ತವ್ಯದ ವ್ಯವಸ್ಥೆಯಾಯಿತು. ಗ್ವಾಲಿಯರ್ ಘರಾಣೆಯ ಅಧ್ವರ್ಯು ಎನಿಸಿದ ಪಂ.ರಾಮಕೃಷ್ಣಬುವಾ ವಝೆಯವರಲ್ಲಿ ಹಾಗೂ ಪ್ರೌಢ ದರ್ಜೆಯ ಗಾಯಕರೆನಿಸಿದ ಬಾಬೂರಾವ ರಾಣೆಯವರಲ್ಲಿ ಪಂಚಾಕ್ಷರಿಗವಯಿಗಳು ಕೆಲವು ಕಾಲ ಸಂಗೀತಾಧ್ಯಯನ ಮಾಡಿದರು.

ಪಂಚಾಕ್ಷರಿಗವಯಿಗಳ ಜೀವನವೇ ಸಂಗೀತ ಕಲಿಯುವುದಕ್ಕಾಗಿ ಮೀಸಲಾಯಿತು. ಒಂದು ಜನ್ಮದಲ್ಲಿ ಯಾರೂ ಪೂರ್ತಿಯಾಗಿ ಸಂಗೀತ ಕಲಿಯುವುದು ಸಾಧ್ಯವಿಲ್ಲವೆಂದು ಅವರು ಧೃಢವಾಗಿ ನಂಬಿದ್ದರು. ಈ ಜನ್ಮದಲ್ಲಿ ಎಷ್ಟು ಕಲಿಯಲು ಸಾಧ್ಯವೋ ಅಷ್ಟನ್ನೂ ಪೂರ್ತಿ ಕಲಿತು ಬಿಡಬೇಕೆಂಬ ನಿರ್ಧಾರಕ್ಕೆ ಅವರು ಬಂದಂತಿತ್ತು. ಹೀಗಾಗಿ ಅವರು ಸುರೇಶಬಾಬು ಮಾನೆಯವರಲ್ಲಿಯೂ ಸಂಗೀತ ಕಲಿತರು. ಇದಿಷ್ಟೇ ಸಾಲದೆಂಬಂತೆ ವಾದನಗಳ ಕಡೆಗೂ ವಾಲಿದರು. ಬಳ್ಳಾರಿ ರಾಘವಾಚಾರ್ಯರಲ್ಲಿ ಪಿಟೀಲು ನುಡಿಸುವದನ್ನು ಕಲಿತರು.

ವಾದನವನ್ನು ಕಲಿಯಲು ಪಂಚಾಕ್ಷರಿಗವಯಿಗಳಿಗೆ ಸೂಚಿಸಿದವರು ಹಾನಗಲ್ಲ ಕುಮಾರಸ್ವಾಮಿಗಳೇ! ಒಮ್ಮೆ ಅವರು ಹೇಳಿದರು– 'ನೀನು ಈಗಾಗಲೇ ಉಭಯಗಾನ ವಿಶಾರದನೆನಿಸಿರುವೆ. ಇವುಗಳ ಜೊತೆಗೆ ವಾದನದಲ್ಲಿಯೂ ಒಂದಿಷ್ಟು ಸಾಧಿಸು.' ಅಂದಿನಿಂದ ಅವರು ವಾದನಕಲೆಯತ್ತಲೂ ತಮ್ಮ ಗಮನವನ್ನು ಕೇಂದ್ರೀಕರಿಸಿದರು.ಪಿಟೀಲು, ಹಾರ್ಮೋನಿಯಂ, ತಬಲಾ ನುಡಿಸುವುದನ್ನು ಕರಗತ ಮಾಡಿಕೊಳ್ಳಲು ಪ್ರಯತ್ನಿಸತೊಡಗಿದರು. ತಬಲಾ ಕಲಿಯುವ ಬಗೆಗೆ ಅವರಿಗೆ ಅಪಾರವಾದ ಆಸಕ್ತಿಯಿತ್ತು. ಆದರೆ ತಬಲಾವಾದನವನ್ನು ಕಲಿಸುವ ಗುರು ದೊರೆಯಬೇಕಲ್ಲ! ಆಗ ಬೆಳಗಾವಿಯಲ್ಲಿ ಶಹಾಪೂರ ಮಲ್ಲೇಶಪ್ಪನೆಂಬುವವರು ಶ್ರೇಷ್ಠ ತಬಲಾವಾದಕರೆಂದು ಹೆಸರುವಾಸಿಯಾಗಿದ್ದರು. ತಮ್ಮ ದಿನನಿತ್ಯದ ಸಂಗೀತ ಪಾಠ ನಡೆಯುವಾಗ ಗವಯಿಗಳ ಶಿಷ್ಯರಲ್ಲಿ ಒಬ್ಬರಾದ ಶ್ರೀ ಶಿವಯ್ಯನವರು ತಬಲಾ ಸಾಥಿ ನೀಡುತ್ತಿದ್ದರು. ಗವಯಿಗಳು ಅವರನ್ನೇ ಬೆಳಗಾವಿಗೆ ಕಳುಹಿಸಿ ಶಹಾಪುರದ ಮಲ್ಲೇಶಪ್ಪನವರಲ್ಲಿ ತಬಲಾವಾದನ ಕಲಿಯುವಂತೆ ಕಳುಹಿಸಿದರು. ಜೇಕಿನಕಟ್ಟೆಯ ಶಿವಯ್ಯನವರು ವ್ಯವಸ್ಥಿತವಾಗಿ ತಬಲಾ ಕಲಿತುಬಂದ ನಂತರ ಪಂಚಾಕ್ಷರಿಗವಯಿಗಳು ಅವನನ್ನೇ ತಮ್ಮ ಗುರುವೆಂದು ಭಾವಿಸಿ ತಬಲಾವಾದನವನ್ನು ಅಧ್ಯಯನ ಮಾಡಿದರು. ತಮ್ಮ ಶಿಷ್ಯನನ್ನೇ ಗುರುವೆಂದು ಭಾವಿಸುವ ಹೃದಯವಂತಿಕೆ ಸಂಗೀತಗಾರರಲ್ಲಿ ಕಂಡು ಬರುವುದು ವಿರಳವೇ ಸರಿ!

ಪಂಚಾಕ್ಷರಿಗಳು ತಮ್ಮ ತಬಲಾವಾದನದಲ್ಲಿಯೂ ವಿಶಿಷ್ಟತೆಯನ್ನು ಮೆರೆಯುತ್ತಿದ್ದರು. ಎಲ್ಲರೂ ಬಲಗೈಯಿಂದ ತಬಲಾ ನುಡಿಸಿದರೆ, ಇವರು ಎಡಗೈಯಿಂದ ನುಡಿಸುತ್ತಿದ್ದರು. ಬಲಗೈ ಡಗ್ಗಾ ನುಡಿಸುತ್ತಿತ್ತು. ಸಾಮಾನ್ಯವಾಗಿ ಬಲಗೈಯನ್ನು ಸಂಗೀತಗಾರರು ಜತನವಾಗಿರಿಸಿ ಕೊಳ್ಳುತ್ತಾರೆ. ಆ ಕೈ ತಂಬೂರಿ ಮೀಟಲು, ಹಾರ್ಮೋನಿಯಂನ ಸ್ವರಗಳನ್ನು ನುಡಿಸಲು, ಪಿಟೀಲಿನ ಕಮಾನು ತೀಡಲು ಪ್ರಯೋಜನ ಕಾರಿಯಾಗುತ್ತದೆ. ಆದರೆ, ತಬಲಾವಾದನದಲ್ಲಿಯೂ ಬಲಗೈಯನ್ನೇ ಪ್ರಧಾನವಾಗಿ ಬಳಸಿದರೆ, ತಬಲಾವಾದನದಲ್ಲಿ ಹೆಚ್ಚಿನ ಮಾತ್ರೆಗಳು ತಬಲಾದ ಮೇಲೆಯೇ ನುಡಿಸಲ್ಪಡುವುದರಿಂದ ಅದಕ್ಕೇ ಹೆಚ್ಚಿನ ಒತ್ತಡ ಬೀಳುತ್ತದೆ. ಹೀಗಾಗಿ ಪಂಚಾಕ್ಷರಿಗವಯಿಗಳು ಎಡಗೈಯಿಂದ ತಬಲಾ ನುಡಿಸುವುದನ್ನು ರೂಢಿಸಿಕೊಂಡರು. ಪಂಚಾಕ್ಷರಿಗವಯಿಗಳ ಸಾಧನೆ ಎಂಥದೆಂದರೆ, ಅವರು ಕೆಲವೇ ದಿನಗಳಲ್ಲಿ ತಬಲಾ, ಪಿಟೀಲು, ಹಾರ್ಮೋನಿಯಂ, ಪಖಾವಜ್, ಸಾರಂಗಿ, ದಿಲ್‌ರುಬಾ, ಕೊಳಲು, ಶಹನಾಯಿವಾದನಗಳನ್ನು ನುಡಿಸುವಲ್ಲಿ ನಿಷ್ಣಾತರೆನಿಸಿದರು.

ಆಗ ಪಂಚಾಕ್ಷರಿ ಗವಯಿಗಳಿಗೆ ಸುಮಾರು ಐವತ್ತು ಜನ ಶಿಷ್ಯರಿದ್ದರು. ಅವರಲ್ಲಿ ಕೆಲವರು ಸಂಸಾರಿಯಾಗುವ ತಯಾರಿಯಲ್ಲಿದ್ದವರು ಮತ್ತು ಇನ್ನು ಕೆಲವರು ಆಗಲೇ ಸಂಸಾರಿಯಾದವರು. ಶಿವಯೋಗಮಂದಿರವು ವೀರಶೈವ ಮಠಾಧೀಶರಾಗುವವರಿಗೆ ಯೋಗ್ಯ ಶಿಕ್ಷಣ ನೀಡುವ ಕೇಂದ್ರವಾದ್ದರಿಂದ ಅಲ್ಲಿ ಸಂಸಾರಸ್ಥರಿಗೆ ತಂಗಲು ಅವಕಾಶವಿರಲಿಲ್ಲ.

ಅಲ್ಲದೆ ಶಿವಯೋಗಮಂದಿರದಲ್ಲಿದ್ದು ಪಂಚಾಕ್ಷರಿಗವಯಿಗಳು ಸಂಗೀತಪಾಠ ಮಾಡುವುದು ಕೆಲವರಿಗೆ ಸರಿ ಬರಲಿಲ್ಲ. ಕೆಲವರು ಹಾನಗಲ್ಲ ಕುಮಾರಸ್ವಾಮಿಗಳವರೆಗೂ ದೂರನ್ನು ಒಯ್ದರು. ಈ ಸಂಗತಿ ಅವರನ್ನು ಚಿಂತೆಗೀಡುಮಾಡಿತು. ಇದುವರೆಗೂ

ಮಗನಂತೆ ಜೋಪಾನ ಮಾಡಿದ ಪಂಚಾಕ್ಷರಿಯನ್ನು ಇದ್ದಕ್ಕಿದ್ದ ಹಾಗೆ ಶಿವಯೋಗಮಂದಿರದಿಂದ ಹೊರಗೆ ಕಳಿಸುವುದು ಮಾನಸಿಕವಾಗಿ ಸಹಿಸಲಸಾಧ್ಯವಾದ ವಿಷಯವಾಗಿತ್ತು. ಆದರೆ, ಶಿವಯೋಗಮಂದಿರದ ವಟುಗಳು ನೀಡಿದ ದೂರಿನಲ್ಲಿಯೂ ತಥ್ಯವಿತ್ತು. ಇದು ಹಾನಗಲ್ಲ ಕುಮಾರಸ್ವಾಮಿಗಳಿಗೆ ಧರ್ಮಸಂಕಟದ ವಿಷಯವಾಗಿತ್ತು. ಕೊನೆಗೆ ಅವರು ಪಂಚಾಕ್ಷರಿಗವಯಿಗಳನ್ನು ಹಾರೈಸಿ ಬೀಳ್ಕೊಡುವ ನಿರ್ಧಾರಕ್ಕೆ ಬಂದರು. ಒಂದು ದಿನ ಪಂಚಾಕ್ಷರಿಗವಯಿಗಳನ್ನು ಕರೆದು ಹೇಳಿದರು–

'ಪಂಚಾಕ್ಷರಿ, ನೀನು ಕೇವಲ ಕೆಲವರಿಗೆ ಸೀಮಿತವಾಗಬಾರದು. ನಿನ್ನ ಸಂಗೀತ ಲೋಕಾರ್ಪಣವಾಗಬೇಕು. ನೀನು ಸಮಾಜದ ಮಗನಾದ್ದರಿಂದ ಸಮಸ್ತ ಸಮಾಜಕ್ಕೂ ನಿನ್ನ ಸಂಗೀತ ಸಲ್ಲತಕ್ಕದ್ದು. ಆದ್ದರಿಂದ ನೀನು ನಿನ್ನ ಶಿಷ್ಯರೊಂದಿಗೆ ಸಂಗೀತ ಯಾತ್ರೆಯನ್ನು ಪ್ರಾರಂಭಿಸು. ಯಾವುದಕ್ಕೂ ಧೃತಿಗೆಡುವ ಕಾರಣವಿಲ್ಲ. ನಿನ್ನ ಬೆಂಬಲಕ್ಕೆ ನಾವಿದ್ದೇವೆ.'

ಓರ್ವ ಅಂಧ ಕಲಾವಿದ, ಜಗತ್ತನ್ನೇ ನೋಡದೆ, ಕುಮಾರಸ್ವಾಮಿಗಳ ಅಕ್ಕರೆಯಲ್ಲಿ ಬೆಳೆದ ಕೂಸು, ಇದ್ದಕ್ಕಿದ್ದ ಹಾಗೆ ಸಮಾಜದ ದಾರುಣ ಹೊಡೆತಕ್ಕೆ ತೆರೆದುಕೊಳ್ಳುವುದು ಕಲ್ಪಿಸಿಕೊಳ್ಳಲಾರದ ಸಂಗತಿಯಾಗಿತ್ತು. ಶಿವಯೋಗಮಂದಿರದಲ್ಲಿಯೇ ಉಳಿಸಿಕೊಳ್ಳುವಂತೆ ಗುರುಗಳನ್ನ ಪರಿಪರಿಯಾಗಿ ವಿನಂತಿಸಿಕೊಂಡರೂ ಪ್ರಯೋಜನವಾಗಲಿಲ್ಲ. ಆದರೆ, ಅದು ಅನಿವಾರ್ಯವೂ ಆಗಿತ್ತು. ಪಂಚಾಕ್ಷರಿಗವಯಿಗಳು ಕುಮಾರಸ್ವಾಮಿಗಳ ಆಶೀರ್ವಾದದ ಅಕ್ಷಯನಿಧಿಯೊಂದಿಗೆ ತಮ್ಮ ಶಿಷ್ಯರನ್ನು ಕಟ್ಟಿಕೊಂಡು ಶಿವಯೋಗಮಂದಿರದಿಂದ ಹೊರಬಿದ್ದರು.

ಹಾನಗಲ್ ಕುಮಾರಸ್ವಾಮಿಗಳು ಪಂಚಾಕ್ಷರಿ ಗವಯಿಯನ್ನು ಬೀಳ್ಕೊಡುವಾಗ ಮಾರ್ಗದರ್ಶನ ಪರವಾದ ಕೆಲವು ಮಾತುಗಳನ್ನು ಹೇಳಿದರು. ಸಂಗೀತವನ್ನು ಸಮಾಜ ಸೇವೆಯ ಮಂತ್ರವನ್ನಾಗಿ ಉಪಯೋಗಿಸುವಂತೆಯೂ, ಸರ್ವಧರ್ಮದ ವಿದ್ಯಾರ್ಥಿಗಳಿಗೆ ಅದರಲ್ಲೂ ಅಂಧ ಮತ್ತು ವಿಕಲಾಂಗ ಮಕ್ಕಳಿಗೆ ಅಕ್ಕರತೆಯಿಂದ ಸಂಗೀತವನ್ನು ಕಲಿಸುವಂತೆಯೂ ಉಪದೇಶಿಸಿದರು. ಸಮಾಜಕಲ್ಯಾಣಕ್ಕಾಗಿ ಆಯೋಜಿಸಲ್ಪಟ್ಟ ಕಾರ್ಯಕ್ರಮಗಳಿಗೆ ಹಣ ಕೇಳದಿರುವಂತೆ ಸೂಚಿಸಿದರು. 'ಇಷ್ಟೇ ಹಣವನ್ನು ಕೊಡಬೇಕೆಂದು ಕರಾರು ಹಾಕಬೇಡ, ನಿನಗೆ ಹಣದ ಅಡಚಣೆಯಿದ್ದಾಗ ನನ್ನನ್ನು ನೆನಪಿಸಿಕೋ. ನಿನ್ನ ಸದ್ಭಕ್ತರ ನೆರವಿನಿಂದ, ಅವರ ಸಹಾಯ ಸಹಕಾರದಿಂದ ಸಂಗೀತ ಶಾಲೆಯನ್ನು ನಡೆಸು' ಕುಮಾರಸ್ವಾಮಿಗಳ ಈ ಮಾತಿಗೆ ಪಂಚಾಕ್ಷರಿಗವಯಿಗಳು ಪ್ರತಿಯಾಗಿ ಏನನ್ನೂ ಹೇಳದೇ, ಅವರ ಅಪ್ಪಣೆಯನ್ನು ಶಿರಸಾವಹಿಸಿ ಪಾಲಿಸುವುದಾಗಿ ವಚನವಿತ್ತರು. ಮತ್ತು ತಾವಿತ್ತ ವಚನದಂತೆ ನಡೆದುಕೊಂಡರು.

ಪಂಚಾಕ್ಷರಿ ಗವಯಿಗಳು ಮೊದಲಿನಿಂದಲೂ ರಂಗಭೂಮಿಯೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡವರು. ನಾಟಕಗಳ ಬಗೆಗೆ ವಿಶೇಷ ಪ್ರೀತಿಯಿದ್ದವರು. ನಾಟಕಗಳ ಮೂಲಕವೇ ಹಿಂದುಸ್ತಾನಿ ಸಂಗೀತದ ಒಳತಿರುಳನ್ನ ಅರಿಯಲು ಪ್ರಯತ್ನಿಸಿದವರು. ಲಿಂಗದಳ್ಳಿಯಲ್ಲಿ ಗವಯಿಗಳ ಸಂಗೀತಶಾಲೆ ಬೀಡು ಬಿಟ್ಟಾಗ ನಾಟಕ ಕಂಪನಿಯೊಂದನ್ನು ಪ್ರಾರಂಭಿಸುವ ವಿಚಾರ ಸುಳಿಯಿತು. ಲಿಂಗದಳ್ಳಿಯ ಭಕ್ತರು, ಕಲಾಪ್ರೇಮಿಗಳು, ಎಲ್ಲ ಬಗೆಯ ಸಹಾಯವನ್ನೂ ನೀಡಲು ಸಿದ್ಧರಾದರು. ಇದಕ್ಕೆ ಹಾನಗಲ್ಲ ಕುಮಾರಸ್ವಾಮಿಗಳ ಕೃಪಾಶೀರ್ವಾದವೂ ದೊರೆಯಿತು. ಹೀಗೆ ಪಂಚಾಕ್ಷರಿಗವಯಿಗಳ ನೇತೃತ್ವದಲ್ಲಿ 'ಶ್ರೀ ಮಳೇಮಲ್ಲೇಶ್ವರ ಸಂಗೀತ ನಾಟಕ ಮಂಡಳಿ' ಉದಯಿಸಿತು.

ಪ್ರಾರಂಭದಲ್ಲಿ ನಾಟಕ ಕಂಪನಿಗೆ ಒಳ್ಳೆಯ ಉತ್ತೇಜನ ದೊರೆಯಿತು. ಆಗಿನ ನಾಟಕಗಳಲ್ಲಿ ಸಂಗೀತಕ್ಕೆ ಒಳ್ಳೆಯ ಮಹತ್ವವಿದ್ದುದ ರಿಂದ, ಗವಯಿಗಳ ಕಂಪನಿಯಲ್ಲಿ ಒಳ್ಳೆಯ ಸಂಗೀತಗಾರರಿದ್ದುದರಿಂದ ನಾಟಕಗಳು ಆರ್ಥಿಕವಾಗಿಯೂ ಯಶಸ್ವಿಯಾದುವು. ಗವಯಿಗಳ ಕಂಪನಿಯು ಡಾ.ಪುಟ್ಟರಾಜ ಗವಯಿಗಳು ರಚಿಸಿದ ನಾಟಕಗಳನ್ನೇ ಹೆಚ್ಚಾಗಿ ಆಡುತ್ತಿತ್ತು. ಗವಯಿಗಳ ಕಂಪನಿಯು ಆಧ್ಯಾತ್ಮಿಕ ಮಹತ್ವವುಳ್ಳ ನಾಟಕಗಳೆಡೆಗೆ ಹೆಚ್ಚಿನ ಮಹತ್ವ ನೀಡಿತು. ಗವಯಿಗಳ ಕಂಪನಿಯಲ್ಲಿ ಸ್ತ್ರೀಯರಿಗೆ ಅವಕಾಶವಿರಲಿಲ್ಲ. ಸ್ತ್ರೀ ಪಾತ್ರಗಳನ್ನು ಪುರುಷರೇ ಅಭಿನಯಿಸುತ್ತಿದ್ದರು. ಕಂಪನಿಗೆ ಪ್ರಾರಂಭದಲ್ಲಿ ಒಳ್ಳೆಯ ಆದಾಯ ಪ್ರಾಪ್ತವಾದರೂ ಕುರವತ್ತಿ ಕ್ಯಾಂಪಿನಲ್ಲಿರುವಾಗ ಪರಿಕರಗಳನ್ನು ಒತ್ತೆಯಿಡುವ ಪ್ರಸಂಗ ಬಂತು. ಬೇರೆ ಕಂಪನಿಗಳು ಭರ್ಜರಿ ಸೆಟ್ಟುಗಳೊಂದಿಗೆ ನಾಟಕಗಳನ್ನು ಪ್ರದರ್ಶಿಸುತ್ತಿರುವಾಗ ಅವುಗಳೆಡೆಗೆ ಜನತೆ ಆಕರ್ಷಿತವಾಗುವುದು ಸಾಮಾನ್ಯವಾಗಿತ್ತು. ಗವಯಿಗಳ ಕಂಪನಿಯಲ್ಲಿ ಅಭಿನಯ ಹಾಗೂ ಸಂಗೀತವೇ ಪ್ರಧಾನವಾದ ಕಾರಣದಿಂದ ಭರ್ಜರಿ ಸೆಟ್ಟುಗಳಿಗೆ ಮಹತ್ವವಿರಲಿಲ್ಲ. ಕಂಪನಿಗಾದ ನಷ್ಟವನ್ನು ಗವಯಿಗಳು ಸಂಗೀತ ಕಚೇರಿಗಳಲ್ಲಿ ಹಾಡಿ ತುಂಬಿಕೊಟ್ಟರು. ಒತ್ತೆಯಿಟ್ಟ ಪರಿಕರಗಳನ್ನು ಬಿಡಿಸಿಕೊಂಡರು. ಅಲ್ಲಿಂದ ಮುಂದೆ ಅವರು ನಾಟಕದ ಉಸಾಬರಿ ಸಾಕೆಂದು ಬಿಟ್ಟುಬಿಟ್ಟರು. ಮತ್ತೆ ತಮ್ಮ ಸಾಧನೆಯನ್ನು ಸಂಗೀತದಲ್ಲಿಯೇ ಕೇಂದ್ರೀಕರಿಸಿದರು.

ನರಗುಂದದ ನಾಗರಿಕರು ಗವಯಿಗಳಿಗೆ ಮತ್ತೊಮ್ಮೆ ನಾಟಕ ಕಂಪನಿಯನ್ನು ಸ್ಥಾಪಿಸುವಂತೆ ಒತ್ತಾಯಿಸತೊಡಗಿದರು. ಗವಯಿಗಳಿಗೆ ನಾಟಕ ಕಂಪನಿ ಸ್ಥಾಪಿಸುವ ಮನಸ್ಸು ಎಳ್ಳಷ್ಟೂ ಇರಲಿಲ್ಲ. ಆದರೆ, ನರಗುಂದದ ಜನರ ಒತ್ತಾಯಕ್ಕೆ ಅವರು ಮಣಿಯಲೇಬೇಕಾಯಿತು. ಈ ಕಂಪನಿಯ ಸ್ಥಾಪನೆಯಲ್ಲಿ ನರಗುಂದದ ನಾಗಭೂಷಣ ಶ್ರೀಗಳು ಮಹತ್ತರ ಪಾತ್ರವನ್ನು ವಹಿಸಿದರು. ಕಂಪನಿಯ ಮೊದಲ ನಾಟಕವಾಗಿ ಪುಟ್ಟರಾಜ ಗವಯಿಗಳು ಬರೆದ 'ಶ್ರೀ ಸಿದ್ಧರಾಮೇಶ್ವರ' ನಾಟಕವನ್ನು 1940ರ ವಿಜಯ ದಶಮಿಯಂದು ಪ್ರಯೋಗಿಸಲಾಯಿತು. ಪಂಚಾಕ್ಷರಿಗವಯಿಗಳ ಕಂಪನಿಯಲ್ಲಿ ಗದಿಗೆಯ್ಯ ಬೀಳಗಿ, ಬಸವರಾಜ ರಾಜಗುರು, ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ, ದೊಡ್ಡಬಸವಾರ್ಯ

ಆರಿಬೆಂಚಿ, ಚೆನ್ನಬಸವಯ್ಯ ನರೇಗಲ್ ಮೊದಲಾದವರು ತಮ್ಮ ಸಮರ್ಥ ಅಭಿನಯ ಹಾಗೂ ಸುಮಧುರ ಸಂಗೀತದಿಂದ ನಾಟಕದ ಯಶಸ್ಸಿಗೆ ಕಾರಣರಾದರು. ಸ್ವತಃ ಪಂಚಾಕ್ಷರಿಗವಯಿಗಳು ತಬಲಾ ಹಾಗೂ ಪುಟ್ಟರಾಜ ಗವಯಿಗಳು ಹಾರ್ಮೋನಿಯಂ ನುಡಿಸಿ ಹೆಚ್ಚಿನ ಮೆರಗು ತುಂಬುತ್ತಿದ್ದರು. ನಾಟಕ ಎಷ್ಟು ಸೊಗಸಾಗಿತ್ತೆಂದರೆ, ಜನ ಮತ್ತೆ ಮತ್ತೆ ನಾಟಕ ನೋಡಿದರು. ನಾಟಕ ಕಂಪನಿಯಿಂದಾಗಿ ಗವಯಿಗಳು ಋಣ ಮುಕ್ತರಾದರು.

ಪಂಚಾಕ್ಷರಿ ಗವಯಿಗಳ ವಿದ್ವತ್ತನ್ನು ಮನ್ನಿಸಿ ಅನೇಕರು ಅವರಿಗೆ ಬಿರುದುಗಳನ್ನು ನೀಡಿ ಗೌರವಿಸಿದ್ದಾರೆ. 'ಉಭಯಗಾನ ವಿಶಾರದ' ಎಂಬುದು ಅವರ ಜನಪ್ರಿಯ ಬಿರುದು. ಈ ಬಿರುದನ್ನು ಹಾನಗಲ್ ಕುಮಾರಸ್ವಾಮಿಗಳೇ ಪಂಚಾಕ್ಷರಿ ಗವಯಿಗಳಿಗೆ ಕರುಣಿಸಿದರು. ಈ ಬಿರುದನ್ನು ದಯಪಾಲಿಸಿದ್ದರ ಹಿಂದೆ ಒಂದು ಕತೆಯಿದೆ. ಕೆಲವರು ಗವಯಿಗಳ ವಿಷಯದಲ್ಲಿ ವಿನಾಕಾರಣ ಮಾತ್ಸರ್ಯವನ್ನು ತಾಳಿದ್ದರು. ಅವರಿಗೆ ದೊರೆಯುತ್ತಿದ್ದ ಮನ್ನಣೆ, ಗೌರವಗಳನ್ನು ಕಂಡು ಸಹಿಸದ ಕೆಲವರು ಇಲ್ಲಸಲ್ಲದ ಟೀಕೆಗಳನ್ನು ಪ್ರಾರಂಭಿಸಿದರು. ಇದನ್ನು ತೊಡೆಯುವುದಕ್ಕಾಗಿ ಹಾನಗಲ್ ಕುಮಾರಸ್ವಾಮಿಗಳು 1915ರಲ್ಲಿ ಒಂದು ಸಂಗೀತ 'ವಿದ್ವದ್ಗೋಷ್ಠಿ'ಯನ್ನು ಕರೆದರು. ಇದಕ್ಕಾಗಿ ನಾಡಿನ ಶ್ರೇಷ್ಠ ಸಂಗೀತಗಾರರೆಲ್ಲ ಆಮಂತ್ರಿತರಾದರು. ಮೂರುದಿನಗಳ ಕಾಲ ನಡೆದ ಈ ಗೋಷ್ಠಿಯಲ್ಲಿ ಸಂಗೀತದ ಅತ್ಯಂತ ಜಟಿಲ ವಿಷಯಗಳನ್ನು ಚರ್ಚಿಸಲಾಯಿತು. ಎಲ್ಲದಕ್ಕೂ ಗವಯಿಗಳು ಸಮರ್ಥ ಉತ್ತರಗಳನ್ನು ದಯಪಾಲಿಸಿದರು. ಗೋಷ್ಠಿಯ ಕೊನೆಗೆ ಗವಯಿಗಳು ಸಂಗೀತದ ಅತ್ಯಂತ ಕ್ಲಿಷ್ಟಕರ ರಾಗಗಳನ್ನು, ಸ್ವರಮಾಲಿಕೆಗಳನ್ನು ಮೂರುದಿನವೂ ಪ್ರಸ್ತುತ ಪಡಿಸಿದರು. ಗೋಷ್ಠಿಯ ಕೊನೆಗೆ ಎಲ್ಲರೂ ಗವಯಿಗಳ ಪಾಂಡಿತ್ಯವನ್ನು ಹೊಗಳಿದರು. ಮತ್ಸರ ಪಟ್ಟು ಅಪಪ್ರಚಾರ ಮಾಡುತ್ತಿದ್ದವರಿಗೆ ಮುಖಭಂಗವಾಯಿತು. ಇದೇ ಸಂದರ್ಭದಲ್ಲಿ ಅವರಿಗೆ 'ಉಭಯಗಾನ ವಿಶಾರದ' ಎಂಬ ಬಿರುದನ್ನು ದಯಪಾಲಿಸಲಾಯಿತು. 'ಸಂಗೀತ ರತ್ನ', 'ಸಂಗೀತ ಸಾಮ್ರಾಟ', 'ಗಾನಯೋಗಿ' ಭೂ ಗಂಧರ್ವಚಂದ್ರ' ಮೊದಲಾದ ಬಿರುದುಗಳಿಂದ ಗವಯಿಗಳು ಅಲಂಕೃತರಾದರು.

1929ರಲ್ಲಿ ವಿಜಾಪುರದ ಸಿದ್ದೇಶ್ವರ ಸಂಸ್ಥೆಯು ಗವಯಿಗಳಿಗೆ 'ಗಾನಕಲಾನಿಧಿ' ಎಂಬ ಬಿರುದನ್ನಿತ್ತು ಗೌರವಿಸಿತು. 1935ರಲ್ಲಿ ರಂಭಾಪುರಿ ಪೀಠಾಧೀಶ್ವರ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯರು 'ಸಂಗೀತ ಸಾಗರ' ಎಂಬ ಬಿರುದನ್ನಿತ್ತು ಗೌರವಿಸಿದರು. 1938ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಅಖಿಲಭಾರತ ವೀರಶೈವ ಮಹಾಸಮ್ಮೇಳನದಲ್ಲಿ 'ಗಾಯನಾಚಾರ್ಯ' ಎಂಬ ಬಿರುದನ್ನಿತ್ತು ಗೌರವಿಸಲಾಯಿತು. 1939ರಲ್ಲಿ ಹೊಂಬಳದ ಜ್ಞಾನವರ್ಧಕ ವಾಚನಾಲಯ ಮಂಡಳಿಯು ಗವಯಿಗಳಿಗೆ 'ಸಂಗೀತ ಸುಧಾನಿಧಿ' ಎಂಬ ಬಿರುದನ್ನಿತ್ತು ಗೌರವಿಸಿತು.

ಹೀಗೆ ಅನೇಕ ಮಾನಸಮ್ಮಾನಗಳನ್ನು ಪಡೆದ ಗವಯಿಗಳು ಸಂಗೀತ ಸಾಧನೆ ಮತ್ತು ಬೋಧನೆಗಳಿಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರು. ಸಂಗೀತ ಅವರ ಜೀವನದ ಉಸಿರಾಗಿತ್ತು. ಈ ಪ್ರಸಂಗವನ್ನು ಗಮನಿಸಿ.

ಗವಯಿಗಳಿಗೆ ನೆಚ್ಚಿನ ಕೆಲವು ವಸ್ತುಗಳಿದ್ದವು. ಅವುಗಳಲ್ಲಿ ದೊಡ್ಡ ಗಾತ್ರದ ತಾಮ್ರದ ತಂಬಿಗೆಯೂ ಒಂದು. ಅವರು ಸಂಚಾರ ದಲ್ಲಿದ್ದಾಗಲೂ ಕೂಡ ಅದವರ ಜೊತೆ ಇರಲೇ ಬೇಕಿತ್ತು. ಒಮ್ಮೆ ಯಾರದೋ ಅಚಾತುರ್ಯದಿಂದ ಈ ತಂಬಿಗೆ ಕಳೆದು ಹೋಯಿತು. ಗವಯಿಗಳು ತೀರ ಹಳಹಳಿಸಿದರು. ಅನೇಕ ವರ್ಷಗಳಿಂದ ಜೊತೆಗಿದ್ದ ತಂಬಿಗೆ ಇಲ್ಲವಾದುದು ಗವಯಿಗಳ ಮನಸ್ಸಿಗೆ ತೀವ್ರ ಬೇಸರವನ್ನುಂಟು ಮಾಡಿತು. ಗುರುಗಳ ಈ ಅವಸ್ಥೆಯನ್ನು ಕಂಡು ಶಿಷ್ಯರು ವಾರಪೂರ್ತಿ ಅದಕ್ಕಾಗಿ ಹುಡುಕಾಟ ನಡೆಸಿದರು. ತಂಬಿಗೆ ಪತ್ತೆಯಾಗಲಿಲ್ಲ. ಆದರೂ ಮನದ ಮೂಲೆಯೊಂದರಲ್ಲಿ ಅದಿಲ್ಲವೆಂಬ ಭಾವ ಮನೆಮಾಡಿಕೊಂಡೇ ಇತ್ತು.

ಕೆಲವು ದಿನಗಳ ತರುವಾಯ ಒಮ್ಮೆ ಗುರುಗಳು ತಮ್ಮ ಸಂಚಾರವನ್ನು ಮುಗಿಸಿಕೊಂಡು ಬರುವಾಗ ಇದ್ದಕ್ಕಿದ್ದ ಹಾಗೆ ಒಂದು ನಾದ ಅವರನ್ನು ತಡೆದು ನಿಲ್ಲಿಸಿತು. ಮತ್ತೊಮ್ಮೆ ಗಮನವಿಟ್ಟು ಆ ನಾದವನ್ನು ಆಲಿಸಿದರು. ಹೌದು! ಅದು ತಮ್ಮ ತಂಬಿಗೆಯ ನಾದವೇ! ಸಂಶಯವಿಲ್ಲ!! ಕೂಡಲೇ ಶಿಷ್ಯರನ್ನು ಕರೆದು ಅದನ್ನು ತರುವಂತೆ ಹೇಳಿದರು. ಮನೆಯೊಂದರಲ್ಲಿ ಅಳುತ್ತಿದ್ದ ಮಗುವನ್ನು ರಮಿಸಲು ಓರ್ವ ಅಜ್ಜಿ ಗವಯಿಗಳ ತಂಬಿಗೆಯನ್ನು ಬಾರಿಸಿ ಆಟವಾಡಿಸುತ್ತಿದ್ದಳು. ಶಿಷ್ಯರು ಆ ತಂಬಿಗೆಯ ವಿಚಾರ ಹೇಳಲು ಅಜ್ಜಿ ಗವಯಿಗಳಲ್ಲಿಗೆ ಬಂದು ತಂಬಿಗೆಯನ್ನು ಒಪ್ಪಿಸಿ ಕ್ಷಮೆಯಾಚಿಸಿದಳು.

ಗವಯಿಗಳ ನಾದಗ್ರಹಣ ಶಕ್ತಿ ಇಷ್ಟೊಂದು ಸೂಕ್ಷ್ಮವಾಗಿತ್ತು.

ಸಂಗೀತವನ್ನೇ ಅವರು ಬದುಕಿದರು. ಬದುಕಿನ ಕೊನೆಯಕ್ಷಣದವರೆಗೂ ಸಂಗೀತಕ್ಕಾಗಿ ಅವರ ಜೀವನ ತುಡಿಯುತ್ತಲೇ ಇತ್ತು. 1944ರಲ್ಲಿ ಮೃತ್ಯುಂಜಯ ಶ್ರೀಗಳ ಅಪ್ಪಣೆಯ ಮೇರೆಗೆ ಧಾರವಾಡ ಮುರುಘಾಮಠದಲ್ಲಿ ಶ್ರಾವಣ ಮಾಸದ ಸಂಗೀತ ಸೇವೆಯನ್ನು ಸಲ್ಲಿಸಿದರು. ಅಂದು ಮಿಯಾ ಮಲ್ಹಾರ ರಾಗದಲ್ಲಿ 'ಕರೀಮ ನಾಮ ತೇರೋ' ಬಡಾಖ್ಯಾಲ್ ಬಂದಿಶ್‌ನ್ನು ಹಾಗೂ 'ಉಮಡಘುಮಡ ಘನ ಗರಜೆ' ಬಂದಿಶ್‌ದಲ್ಲಿ ಛೋಟಾಖ್ಯಾಲ್‌ನ್ನು ಹಾಡಿದರು. ಅಲ್ಲಿಂದ ಬರುವಾಗ ಶ್ರೀಗಳಲ್ಲಿ ಅವರು ವಿನಂತಿಸಿ ಕೊಂಡರು 'ಈ

ಜೀವನದಲ್ಲಿ ಇಷ್ಟು ಸಾಕು. ನನ್ನನ್ನು ತಮ್ಮ ಪಾದಗಳಲ್ಲಿ ಕರೆದುಕೊಳ್ಳಿ' ಶ್ರೀಗಳು ಅವರ ಈ ಬೇಡಿಕೆಯಿಂದ ಗಂಭೀರರಾದರು ಮತ್ತು ಹೇಳಿದರು

'ಗವಯಿಗಳೇ, ಕುಮಾರೇಶನ ಕರೆ ಇನ್ನೂ ಬಂದಿಲ್ಲ. ನೀವಿನ್ನೂ ಬಾಳಿ, ಸಂಗೀತವನ್ನು ಬೆಳಗಬೇಕಾದವರು'

ಬಹುಶಃ ಅದೇ ಅವರ ಕೊನೆಯ ಸಂಗೀತ ಕಚೇರಿ.

ಗದುಗಿಗೆ ಬರುತ್ತಲೇ ನಾಟಕ ಕಂಪನಿಯೊಂದಿಗಿದ್ದ ಪುಟ್ಟರಾಜ ಗವಯಿಗಳನ್ನು ಕರೆಸಿದರು. ಅವರು ಬರುವುದರೊಳಗಾಗಿ ಮೃತ್ಯುಪತ್ರ ಸಿದ್ಧವಾಗಿತ್ತು. ವೀರೇಶ್ವರ ಪುಣ್ಯಾಶ್ರಮವನ್ನು ಪುಟ್ಟರಾಜ ಗವಯಿಗಳ ಹೆಸರಿಗೆ ವರ್ಗಾಯಿಸಿಯಾಗಿತ್ತು. ಎಲ್ಲವನ್ನೂ ಅವರಿಗೆ ತಿಳಿಸಿ ಹೇಳಿದರು.

ಗವಯಿಗಳು ತಮಗಿರುವ ಅನಾರೋಗ್ಯದಿಂದ ಹೊರಬರುವುದು ಸಾಧ್ಯವಿಲ್ಲವೆಂದು ನಿರ್ಧರಿಸಿದ್ದರು. ಡಾ.ಮುಲ್ಕಿಯವರು ಶಸ್ತ್ರ ಚಿಕಿತ್ಸೆಯಾದರೆ ಗವಯಿಗಳು ಬದುಕುವರೆಂದರು. ಆದರೆ ಗವಯಿಗಳು ಅದಕ್ಕೆ ಸುತಾರಾಂ ಒಪ್ಪಲಿಲ್ಲ. ತಮ್ಮ ಅವತಾರವನ್ನು ಸಮಾಪ್ತಿ ಮಾಡುವ ಸಂಕಲ್ಪ ಮಾಡಿಯಾಗಿತ್ತು. 1944, ಜೂನ್ 14ನೆಯ ದಿನ. ಪಂಚಾಕ್ಷರಿ ಗವಯಿಗಳು ಕುಮಾರೇಶ್ವರನಲ್ಲಿ ಲೀನವಾದರು. ಅವರ ಗಂಧರ್ವಗಾನ ಈಗಲೂ ವೀರೇಶ್ವರ ಪುಣ್ಯಾಶ್ರಮದಲ್ಲಿ ಕೇಳಿ ಬರುತ್ತಲೇ ಇದೆ!

■■

# ಪೂಜ್ಯ ಶಿವಬಸವ ಶ್ರೀಗಳವರ ಚರಿತಾಮೃತ

• ಲಿಂ. ಕುಮಾರ ಸ್ವಾಮಿಗಳು, ಕಲ್ಮಠ ಸವದತ್ತಿ-ಬಿದರಿ

ನಮ್ಮೀ ಭಾರತಭೂಮಿಯಲ್ಲಿ ಅನೇಕ ಸಾಧು-ಸತ್ಪುರುಷರು, ಮಹಾಯೋಗಿಗಳು ಜನಿಸಿ ಜನಜೀವನವನ್ನು ಪಾವನಗೊಳಿಸಿರುವುದು ಸರ್ವವೇದ್ಯವಾದ ವಿಷಯ. ಕನ್ನಡನಾಡಂತೂ ಶತಮಾನಗಳಿಂದ ಬಹುಜನ ಯೋಗಿಗಳಿಗೆ, ತ್ಯಾಗಿಗಳಿಗೆ, ವೀರರಿಗೆ ಕಲೆಗಾರರಿಗೆ ತವರುಮನೆಯಾಗಿದೆ. ಅವರೆಲ್ಲರು ಕಾಲಕಾಲಕ್ಕೆ ಅವತರಿಸಿ ಜನಮನದ ಮಾಲಿನ್ಯವನ್ನು ಕಳೆದು ಹೊಸ ಕಳೆಯನ್ನು ಶಿವಮಯ ಚೈತನ್ಯವನ್ನು ತುಂಬಿದ ಮಹಾಕಾರ್ಯವೆಸಗಿದ್ದಾರೆ. ಅಂತಹರಲ್ಲಿ ಬಸವಾದಿ ಪ್ರಮಥರು ಚಿರಸ್ಮರಣೀಯರು. ಹನ್ನೆರಡನೆಯ ಶತಮಾನದಲ್ಲಿ ಬಸವ, ಚೆನ್ನಬಸವ, ಪ್ರಭುದೇವ, ಅಕ್ಕಮಹಾದೇವಿ, ಸಿದ್ಧರಾಮ ಮೊದಲಾದ ಜಗದ್ವಿಭೂತಿಗಳು ಉದಯಿಸಿ ಜನತೆಗೆ ವಚನಾಮೃತ ಸವಿಯನುಣಿಸಿದರು, ಜಗವನುದ್ಧರಿಸಿದರು. ಹದಿನಾಲ್ಕನೆಯ ಶತಮಾನದಲ್ಲಿ ನೂರೊಂದು ವಿರಕ್ತರು ಧರ್ಮಜಾಗೃತಿಯನ್ನುಂಟು ಮಾಡಿದರು. ಹದಿನಾರನೆಯ ಶತಮಾನದಲ್ಲಿ ಎಡೆಯೂರ ಶ್ರೀ ತೋಂಟದ ಸಿದ್ಧಲಿಂಗಯತಿವರೇಣ್ಯರು ಅವರ ಶಿಷ್ಯಕೋಟಿಯೂ ಅನೇಕ ಬಗೆಯಾಗಿ ಧರ್ಮ-ಸಾಹಿತ್ಯಗಳನ್ನು ಬೆಳಗಿಸಿದ ಮಹತ್ಕಾರ್ಯ ಮಾಡಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿಯೂ ಬಿದರಿಯ ಶ್ರೀ ಕುಮಾರ ಶಿವಯೋಗಿಗಳು, ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು, ಬೀಳೂರ ಶ್ರೀಗುರುಬಸವ ಮಹಾಸ್ವಾಮಿಗಳು ಮೊದಲಾದ ಪೂಜ್ಯರು ತಮ್ಮ ತಪಃಸಾಮರ್ಥ್ಯದಿಂದ ಅನೇಕ ಬಗೆಯ ಲೋಕಹಿತದ ಮಹಾಕಾರ್ಯಗಳನ್ನು ಮಾಡಿರುವರು. ಸೊಲ್ಲಾಪುರದ ಶ್ರೀ ವೀರೇಶ್ವರ ಶಿವಶರಣರೂ, ಸಿರಸಂಗಿಯ ಶ್ರೀ ಲಿಂಗರಾಜರಂಥ ಉದಾರಿ ದಾನಿಗಳೂ ಆಗಿ ಹೋಗಿದ್ದಾರೆ. ಪೂಜ್ಯ ಶಿವಯೋಗಿಗಳ ಮಾಲಿಕೆಯಲ್ಲಿ ಹಾವೇರಿಯ ಹುಕ್ಕೇರಿ ಮಠದ ಲಿಂ. ಶ್ರೀ ಶಿವಬಸವ ಮಹಾಸ್ವಾಮಿಗಳವರು ತಪೋನಿಷ್ಠರೂ, ವೈರಾಗ್ಯಸಂಪನ್ನರೂ, ಕರುಣಾಳುಗಳೂ ಆಗಿದ್ದು ಜಗದ್ವಂದ್ಯರಾಗಿದ್ದಾರೆ. ಅವರು ಶಿವಯೋಗವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಮಹಾಶಿವಯೋಗಿಗಳಾದರು. ಅಷ್ಟೇ ಅಲ್ಲದೆ, ಶಿವಯೋಗದ ರಹಸ್ಯವನ್ನು ಸಾಧಕರಿಗೆ ಅರುಹಲು ಶಿವಯೋಗಮಂದಿರದಂಥ ಅಧ್ಯಾತ್ಮ ಸಂಸ್ಥೆಯ ಸಂಸ್ಥಾಪಕರಲ್ಲೊಬ್ಬರಾಗಿದ್ದರು. ಆ ಮಹಾಸಂಸ್ಥೆಯ ಅಂಗವಾಗಿ ಉದಯಿಸಿದ ಅನೇಕ ಶಾಖಾಮಂದಿರಗಳು ಹಾವೇರಿ ಶ್ರೀಗಳವರ ತಪಃಸಾಮರ್ಥ್ಯದ ಹೆಗ್ಗುರುತಾಗಿವೆ. ಅವರಲ್ಲಿದ್ದ ಸಮಾಜ ಕಲ್ಯಾಣ ಭಾವನೆ, ಅದಕಾಗಿ ಅವರು ತೋರಿದ ವಿರತಿ, ವ್ಯಕ್ತಿಯ ಉದ್ಧಾರಕ್ಕಾಗಿಯೇ ಇದ್ದ ಅವರ ಕೃಪಾಬಲ, ಭಕ್ತವೃಂದದ ಮೇಲೆ ಅವರಿಟ್ಟ ಪ್ರೀತಿ ಮೊದಲಾದವು ಚಿರಸ್ಮರಣೀಯವಾದವು. ಸಾಧಕವೃತ್ತಿಯಲ್ಲಿ ಎಂಟು-ಹತ್ತು ವರ್ಷ ಪೂಜ್ಯರ ಸೇವೆಯನ್ನು ಮಾಡುವ ಭಾಗ್ಯ ನನಗೆ ಲಭಿಸಿತ್ತು. ಪೂಜ್ಯರ ವಿಷಯವಾಗಿ ಕೆಲವು ಚರಿತ್ರಾತ್ಮಕ ಅನುಭವಗಳನ್ನು ಇಲ್ಲಿ ವಿವರಿಸುವೆ.

**ಜನನ :**

ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನಲ್ಲಿ ಸಪ್ತಸಾಗರವೆಂಬ ಗ್ರಾಮ. ಅಲ್ಲಿಯ ಹಿರಿಯಮಠದ ಶಿವಗಂಗಮ್ಮ ಗಿರಿಮಲ್ಲಯ್ಯನವರೆಂಬ ಮಾಹೇಶ್ವರ ದಂಪತಿಗಳ ಪವಿತ್ರ ಉದರಾಂಬುಧಿಯಲ್ಲಿ 'ಶಿವಬಸವ' ಎಂಬ ಶಿಶುರತ್ನ ಕ್ರಿ.ಶ. ೧೮೭೪ ಆನಂದನಾಮ ಸಂವತ್ಸರ, ಮಾಘ ಬ. ೧೪ ಶುಕ್ರವಾರ ಶಿವರಾತ್ರಿಯಂದು ಅಶ್ವಿನೀ ನಕ್ಷತ್ರ ಬೆಳಗುಜಾವದ ೪ ಗಂಟೆಗೆ ಉದಯಿಸಿತು. ಶಿವಪೂಜಾ ಪ್ರೇಮಿ ಶಿವಗಂಗವ್ವ ತಾಯಿಗೆ ಮೊದಲೇ ತಪಸ್ವಿ ಶಿವಯೋಗಿಯೊಬ್ಬರು ಜನಿಸುವ ಶಿಶು ಸಾಮಾನ್ಯ ಮಾನವನಾಗದೆ 'ಪರಮವಿರಾಗಿ ಲೋಕೋದ್ಧಾರಿ ಶಿವಯೋಗಿ' ಎಂದು ಭವಿಷ್ಯ ನುಡಿದಿದ್ದರಂತೆ. ಮಹಾತಾಯಿ ಈ ಲೋಕೋತ್ತರ ಶಿಶುವನ್ನು ಹೆಚ್ಚಿನ ಮಮತೆ ಮತ್ತು ಭಕ್ತಿಯಿಂದ ಸಲುಹಿದಳು. ಶಿವಬಸವೇಶನ ಬಾಲಲೀಲೆಗಳನ್ನು ಕಂಡು ಸಪ್ತಸಾಗರದ ಸಮಸ್ತ ಜನರೂ ಅಚ್ಚರಿ ಪಡುತ್ತಿದ್ದರು.

**ಬಾಲ್ಯ :**

ಐದು ವರ್ಷದ ಶಿವಬಸವೇಶನು ಕನ್ನಡ ಓದುಮಠದಲ್ಲಿ ಪ್ರವೇಶ ಪಡೆದನು. ಬಾಲಕ ಶಿವಬಸವೇಶನ ಬುದ್ಧಿ, ಜ್ಞಾಪಕಶಕ್ತಿಯನ್ನು ಗುರುಗಳು ಕಂಡು ಮೆಚ್ಚಿದರು. ಉಳಿದ ಬಾಲಕರಂತೆ ಅವನಿಗೆ ಸಲ್ಲದ ಆಟನೋಟಗಳಲ್ಲಿ ಆಸಕ್ತಿಯಿರಲಿಲ್ಲ. ಓದಿನಲ್ಲಿ ಮುಂದುವರಿದಂತೆ ಶಿವಬಸವೇಶನು ಶಾರೀರಿಕ ಚಟುವಟಿಕೆಗಳಲ್ಲಿಯೂ ಮೇಲಾಗಿದ್ದನು. ಸುಂದರವಾದ ಮೈಕಟ್ಟು ಗಟ್ಟಿಮುಟ್ಟಾದ ಆಳು. ಕುಸ್ತಿಯಾಡುವುದೆಂದರೆ

ಶಿವಬಸವೇಶನಿಗೆ ಬಲು ಹಿಗ್ಗು. ತನಗಿಂತಲೂ ಮಿಗಿಲಾದ ಹುಡುಗರನ್ನು ಸ್ಪರ್ಧೆಯಲ್ಲಿ ಸೋಲಿಸದೆ ಬಿಡುತ್ತಿರಲಿಲ್ಲ. ಎಲ್ಲ ಸರಿಕರಲ್ಲಿ ಪ್ರೀತಿಯಿಂದ ವರ್ತಿಸುವದು ಶಿವಬಸವೇಶನ ಗುರುಗಳಿಗೆ ಬಹಳ ಸಂತೋಷವನ್ನುಂಟು ಮಾಡಿತ್ತು. ವಿದ್ಯೆ, ಬುದ್ಧಿ, ಸದ್ಗುಣಗಳಿಂದ ಶೋಭಿಸುವ ಮಗುವನ್ನು ಕಂಡು ತಂದೆತಾಯಿಗಳಿಗೆ ಸಂತೋಷವಾಯಿತು, ಗ್ರಾಮಸ್ಥರಿಗೆ ಹೆಮ್ಮೆಯೆನಿಸಿತು. ಶಿವಬಸವೇಶ ಎಲ್ಲರ ಕಣ್ಮಣಿಯಾಗಿದ್ದ.

**ಶಿಕ್ಷಣ**

ಶಿವಬಸವೇಶ ಕುಲಕೋಟಿಯನ್ನು ಉದ್ಧರಿಸಲು ಅವತರಿಸಿದ ಮಹಾಪುರುಷನೆಂದು ಭಕ್ತರೆಲ್ಲ ಬಗೆದಿದ್ದರು. ಬಾಲ್ಯದಲ್ಲಿಯೇ ಅವನ ವಿಲಕ್ಷಣ ಲೀಲೆಗಳನ್ನು ಕಂಡು ಜನ ಅವನನ್ನು ಸಾಮಾನ್ಯ ಬಾಲಕನೆಂದು ಎಣಿಸಿರಲಿಲ್ಲ.

ಒಂದು ದಿನ ಪರಮ ಶಿವಯೋಗಿಗಳಾದ ಅಥಣಿಯ ಶೆಟ್ಟರಮಠದ ಶ್ರೀ ಮರುಳಸಿದ್ಧ ಮಹಾಸ್ವಾಮಿಗಳವರು ಸಪ್ತಸಾಗರಕ್ಕೆ ದಯಮಾಡಿಸಿದರು. ಹಿರಿಯಮಠದಲ್ಲಿ ಶಿವಲಿಂಗಾರ್ಚನೆಗೆ ಗಿರಿಮಲ್ಲಯ್ಯನವರು ಎಲ್ಲವನ್ನು ಅಣಿ ಮಾಡಿದ್ದರು. ಅರ್ಚನೆ-ಅರ್ಪಿತ-ಅನುಭವಗಳನ್ನು ಮುಗಿಸಿ ಭಕ್ತರ ಕ್ಷೇಮವನ್ನು ವಿಚಾರಿಸುತ್ತಿರುವಾಗ ಮುಗ್ಧ ಬಾಲ ಶಿವಬಸವೇಶನ ಮೇಲೆ ಪೂಜ್ಯರ ದೃಷ್ಟಿ ಹರಿಯಿತು. ಅವನ ಮುದ್ದಾದ ಮಾತುಗಳು, ವಿನೀತ ನಡೆ ಶ್ರೀಗಳವರ ಮನವನ್ನು ಸೆಳೆದವು. ಆ ಬಾಲಕನಲ್ಲಿ ಶಿವಯೋಗಿಯಾಗುವ ಲಕ್ಷಣಗಳನ್ನು ದಿವ್ಯದೃಷ್ಟಿಯಿಂದ ತಿಳಿದ ಶ್ರೀಗಳವರು ಭಕ್ತರನ್ನು ತಂದೆ-ತಾಯಿಗಳನ್ನು ಒಪ್ಪಿಸಿ ಶಿವಬಸವೇಶನನ್ನು ಕರೆದುಕೊಂಡು ಅಥಣಿಗೆ ದಯಮಾಡಿಸಿದರು.

ಶ್ರೀ ಮರುಳಸಿದ್ಧ ಶಿವಯೋಗಿಗಳೇ ಶಿವಬಸವೇಶನ ತಂದೆ-ತಾಯಿಯಾದರು. ಶಿವಬಸವೇಶನು ಗುರುವಿನ ಕೃಪಾಶ್ರಯದಲ್ಲಿ ಬೆಳೆಯಹತ್ತಿದ. ಗುರುಕುವರ ಶಿವಬಸವೇಶ ಕನ್ನಡ ಪ್ರಾಥಮಿಕ ಶಿಕ್ಷಣ ಪಡೆಯಹತ್ತಿದ. ಹತ್ತನೆಯ ವರ್ಷದಲ್ಲಿ ಶ್ರೀಗಳವರು ಅಡಹಳ್ಳಿಯ ಹಿರಿಯಮಠದ ಗುರುಗಳಿಂದ ವಿಧಿಪ್ರಕಾರ ಲಿಂಗದೀಕ್ಷೆಯನ್ನು ಕೊಡಿಸಿದರು. ಬಿಳಿಯ ಟೊಪ್ಪಿಗೆ ಕಪನಿಗಳನ್ನು ಧರಿಸಿ ಶಿವಬಸವಾರ್ಯ ಗುರುವಿಗೆ ತಕ್ಕ ಶಿಷ್ಯನಾಗುವ ರೀತಿ-ನೀತಿಗಳನ್ನು ಕಲಿಯಹತ್ತಿದ. ತಪ್ಪದೆ ಶುಚಿಯಾಗಿ ಲಿಂಗಪೂಜೆಯನ್ನು ಮಾಡಿಕೊಳ್ಳುವುದು, ವಿನಯದಿಂದ ವರ್ತಿಸುವುದು, ಜೀವಿಗಳಲ್ಲಿ ದಯೆ ತೋರುವುದು, ಸತ್ಯ-ಕ್ಷಮೆ-ದಯೆಗುಣಗಳನ್ನು ಒಂದೊಂದನ್ನಾಗಿಯೇ ಗುರೂಪದಿಷ್ಟ ರೀತಿಯಲ್ಲಿ ಸಾಧಿಸುವುದು-ಹೀಗೆ ಶಿವಬಸವಾರ್ಯನ ಸಾಧನೆಯ ಮಾರ್ಗವಾಯಿತು.

ಶಿವಬಸವಾರ್ಯರಿಗೆ ದೈವದತ್ತವಾದ ಮಂಜುಳ ಕಂಠವಿತ್ತು. ಶಿವಪೂಜೆಯ ಕಾಲದಲ್ಲಿ, ಪ್ರತಿನಿತ್ಯ ಮುಂಜಾನೆ ಏಳುವಾಗಲೂ ಮಲಗುವಾಗಲೂ ಮಂಜುಳವಾಗಿ ನಿಜಗುಣ-ಸರ್ಪಭೂಷಣ-ಘನಮಠಾರ್ಯರ ಅನುಭವದ ಹಾಡುಗಳನ್ನು ಹಾಡುವುದು ಶಿವಬಸವಾರ್ಯರ ನೇಮವಾಗಿತ್ತು. ಮಠದಲ್ಲಿ ಇನ್ನು ಅನೇಕ ಶಿಷ್ಯರು, ವಟುಗಳು ಇದ್ದರು. ಅವರೆಲ್ಲರಲ್ಲಿ ಶಿವಬಸವಾರ್ಯರು ಹಿರಿಯ ಮಣಿಯಂತೆ ಬೆಳಗುತ್ತಿದ್ದರು; ಶ್ರೀಗಳವರ ನೆಚ್ಚಿನ ಗುರುಕರಜಾತರಾಗಿದ್ದರು.

ಶ್ರೀಗಳವರ ಅಪ್ಪಣೆಯಂತೆ ಶಿವಬಸವದೇವರು ಕೆಲವು ವರ್ಷ, ಮಿರಜಿಯಲ್ಲಿದ್ದು ಸಂಗೀತಶಾಸ್ತ್ರವನ್ನು ಕಲಿತರು; ಪ್ರೌಢವಿದ್ಯೆಯ ವ್ಯಾಸಂಗಕ್ಕಾಗಿ ಬಳ್ಳಾರಿಯಲ್ಲಿಯ ಸಕ್ಕರಿ ಕರಡೆಪ್ಪ ಮಹಾಶಿವಶರಣರ ಸಂಸ್ಕೃತ ಪಾಠಶಾಲೆಗೆ ಬಂದರು; ಅಲ್ಲಿ ಕನ್ನಡ-ಸಂಸ್ಕೃತ ಕಾವ್ಯಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ೧೯೦೦ರಲ್ಲಿ ಸಂಸ್ಕೃತದಲ್ಲಿ ಹೆಚ್ಚಿನ ವಿದ್ವತ್ತನ್ನು ಸಂಪಾದಿಸಲು ಕಾಶಿಗೆ ದಯಮಾಡಿಸಿದರು. ಭಕ್ತರು ತಮಗೆ ಕಳಿಸುತ್ತಿದ್ದ ಹಣದಲ್ಲಿ ಮಿತವಾಗಿ ಇದ್ದು, ಉಳಿದುದನ್ನು ಬಡವಿದ್ಯಾರ್ಥಿಗಳಿಗೆ ಕೊಟ್ಟು ಶಿವಬಸವದೇವರು ಕಾಶಿಯಲ್ಲಿ ಆದರ್ಶ 'ಶಾಸ್ತ್ರಿ'ಗಳೆಂದು (ಕನ್ನಡ ನಾಡಿನಿಂದ ಕಾಶಿಗೆ ಸಂಸ್ಕೃತ ಶಾಸ್ತ್ರಾಭ್ಯಾಸ ಮಾಡಲು ಹೋದ ಮಠಾಧಿಪತಿ ವಿದ್ಯಾರ್ಥಿಗಳನ್ನು ಅಲ್ಲಿಯ ಜನರು 'ಶಾಸ್ತ್ರಿ'ಗಳೆಂದು ಕರೆಯುವುದು ವಾಡಿಕೆ) ಹೆಸರಾಗಿದ್ದರು. ಶ್ರೀ ಶಿವಬಸವದೇವರು ಆರು ವರ್ಷಗಳವರೆಗೆ ಕಾಶಿಯಲ್ಲಿದ್ದು ವ್ಯಾಕರಣ-ಅಲಂಕಾರ ಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ದೇಶಕ್ಕೆ ಮರಳಿದರು.

ಶ್ರೀಮರುಳಸಿದ್ಧ ಶಿವಯೋಗಿಗಳು ತಮ್ಮ ನೆಚ್ಚಿನ ಶಿಷ್ಯನ ಬರುವನ್ನೆ ನಿರೀಕ್ಷಿಸಿದ್ದರು. ಅವರಿಗೆ ಆಗಲೆ ಮುಪ್ಪು ಆವರಿಸಿತ್ತು. ಶಾರೀರಿಕ ಬಲ ಉಡುಗಿತ್ತು. ಆಗ ಅವರ ಅನುಗ್ರಹವನ್ನು ಪಡೆದ ಬಿದರಿಯ ಶ್ರೀ ಕುಮಾರ ಮಹಾಸ್ವಾಮಿಗಳವರು ಅಥಣಿಗೆ ದಯಮಾಡಿಸಿದರು: ಗುರುವರ್ಯರ ಅನುಜ್ಞೆಯಂತೆ ಶಿವಬಸವ ದೇವರಿಗೆ ಅನುಗ್ರಹ-ಅಧಿಕಾರಗಳನ್ನು ಕೊಡುವ ಹೊಣೆಯನ್ನು ಹೊತ್ತರು. ಶ್ರೀ ಮರುಳಸಿದ್ಧ ಶಿವಯೋಗಿಗಳು ಲಿಂಗೈಕ್ಯವಾದರು. ಗುರುವಿನ ಕೃಪೆಗೆ ಪಾತ್ರರಾದ ಉಭಯ ಗುರುಕರಜಾತರೂ ಬಹುವಾಗಿ ಪರಿತಪಿಸಿದರು. ಗುರುವಿನ ಉಪದೇಶವನ್ನು ನೆನೆದು ಮುಂದಿನ ಸಾಧನೆಗೆ ಸನ್ನದ್ಧರಾದರು. ಬಿದರಿ ಶ್ರೀಗಳವರು ಬಹುವಾಗಿ ಸಂತಯಿಸಿ ಶಿವಬಸವದೇವರ ದುಃಖವನ್ನು ಕಳೆದರು; ಕೆಲವು ಕಾಲ ಅಥಣಿಯಲ್ಲಿಯೇ ವಾಸವಾಗಿದ್ದರು. ನಂತರ ಶಿವಬಸವ ದೇವರು ಬಿದರಿ ಶ್ರೀಗಳವರ ಸೇವೆಯಲ್ಲಿಯೇ ನಿಂತರು. ಗುರುವಿನ ಸೇವೆಯನ್ನು ಮನಮುಟ್ಟಿ ಮಾಡುತ್ತ ಬಿಡುವಿನ ವೇಳೆಯಲ್ಲಿ ಲಿಂಗಾಯತ ಸಿದ್ಧಾಂತ ಮತ್ತು ಶಿವಾನುಭವಶಾಸ್ತ್ರವನ್ನು ಗುರುಮುಖವಾಗಿ ತಿಳಿದು ಆಚರಿಸಹತ್ತಿದರು.

ಬಿದರಿ ಶ್ರೀ ಕುಮಾರ ಮಹಾಸ್ವಾಮಿಗಳು ಸವದತ್ತಿ ಗ್ರಾಮದ ತಮ್ಮ ಮಠದಲ್ಲಿ ಭೀಮಕವಿಯ 'ಬಸವಪುರಾಣ'ವನ್ನು ಪ್ರಾರಂಭಿಸಬೇಕೆಂದು ವಿಚಾರ ಮಾಡಿದರು. ಅದಕ್ಕೆ ಭಕ್ತರೆಲ್ಲ ಒಪ್ಪಿದರು; ಶ್ರೀಮಠದಲ್ಲಿ ವಿಶಾಲವಾದ ಮಂಟಪವನ್ನು ನಿರ್ಮಿಸಿದರು. ಪುರಾಣವನ್ನು ಶ್ರೀ ಶಿವಬಸವದೇವರೇ ಹೇಳಬೇಕೆಂದು ಶ್ರೀಗಳವರ ಅಪ್ಪಣೆಯಾಗಿತ್ತು. ಕಾರ್ತಿಕ ಮಾಸದ ಶುದ್ಧ ಪ್ರತಿಪದೆಯಿಂದ ಪುರಾಣವು ಪ್ರಾರಂಭವಾಗಿ ಅಖಂಡ ಆರು ತಿಂಗಳು ನಡೆಯಿತು. ಶ್ರೀ ಶಿವಬಸವದೇವರ ಸಂಸ್ಕೃತ-ಕನ್ನಡ ಸಾಹಿತ್ಯಗಳ ಆಳವಾದ ಅಭ್ಯಾಸ, ಲಿಂಗಾಯತ ಸಿದ್ಧಾಂತಗಳ ಮನನ, ಸಂಗೀತದ ಮೇಳ ಎಲ್ಲವೂ ಅವರ ಪುರಾಣ ಹೇಳುವ ಕಲೆಗೆ ಬಹು ಮೆರಗನ್ನು ತಂದುಕೊಟ್ಟಿದ್ದವು. ಭಕ್ತರ ಆನಂದಕ್ಕೆ ಮೇರೆ ಇರಲಿಲ್ಲ. ಶ್ರೀಗಳವರೂ ಪುರಾಣ ಸಮಾಪ್ತಿಯ ಕಾಲಕ್ಕೆ ಶಿವಬಸವದೇವರಿಗೆ ಅನುಗ್ರಹವನ್ನು ಮಾಡಿ ನಿರಂಜನ ಚರಪಟ್ಟಾಧಿಕಾರವನ್ನು ಕೊಟ್ಟು ಲಿಂಗಾಂಗ ಸಾಮರಸ್ಯ ರಹಸ್ಯವನ್ನು ಸಕೀಲವಾಗಿ ಅರುಹಿದರು. ಶ್ರೀ ಶಿವಬಸವದೇವರು ಗುರುದೇವನ ಕರುಣೆಯಿಂದ ಗುರುಸ್ವರೂಪವೇ ಆದರು; ನಿರಂಜನ ಪ್ರಣವಸ್ವರೂಪಿಗಳಾದರು- ಶ್ರೀ ಶಿವಬಸವ ಸ್ವಾಮಿಗಳೆಂದು ಸಂಪೂಜ್ಯರಾದರು. ಯೋಗ್ಯ ಗುರುಗಳಿಗೆ ಯೋಗ್ಯಶಿಷ್ಯರು. ಕುಂದಣಕ್ಕೆ ಸುಗಂಧವಿಟ್ಟಂತೆ ಅಪೂರ್ವ ಕಳೆ ಬಂದಿತು.

ಶ್ರೀ ಶಿವಬಸವ ಸ್ವಾಮಿಗಳವರ ವೀರ ವಿರತಿ, ಶಿವಲಿಂಗ ಪೂಜಾನುರಕ್ತಿ, ಭಕ್ತಾನುಗ್ರಹಶಕ್ತಿ, ಮೊದಲಾದ ಸಾತ್ವಿಕ ಗುಣಗಳನ್ನು ಕಂಡು ಶ್ರೀಕುಮಾರ ಮಹಾಸ್ವಾಮಿಗಳು ಮೆಚ್ಚಿದರು. ತಮ್ಮ ಗುರುಗಳಿಗೆ ಯೋಗ್ಯತಾ ಸಂಪನ್ನರಾದ ಉತ್ತಮ ಶಿಷ್ಯರೆಂದು ಬಗೆದು ಶ್ರೀ ಶಿವಬಸವ ಸ್ವಾಮಿಗಳವರನ್ನು ಪೂಜ್ಯ ಗುರುಗಳ ಅಪ್ಪಣೆ ಪಡೆದು ಹಾನಗಲ್ಲ ಪ್ರಾಂತಕ್ಕೆ ಕರೆದುಕೊಂಡು ಬಂದರು. ಶ್ರೀ ಶಿವಬಸವ ಮಹಾಸ್ವಾಮಿಗಳವರ ಉಪದೇಶಾಮೃತವನ್ನು ಸವಿದು ಭಕ್ತರು ಸಂತಸಗೊಂಡರು.

ಹಾವೇರಿಯಲ್ಲಿ ಹುಕ್ಕೇರಿ ವಿರಕ್ತಮಠವು ಬಹುಪ್ರಸಿದ್ಧವಾದ ವಿರಕ್ತಪೀಠ. ಅದಕ್ಕೆ ಬಹುವರ್ಷಗಳಿಂದ ಯೋಗ್ಯ ಅಧಿಕಾರಿಗಳಿರಲಿಲ್ಲ. ಶ್ರೀಮಠದ ಭಕ್ತರು ಬಹಳ ಚಿಂತೆಯಲ್ಲಿದ್ದರು. ಶ್ರೀಗಳವರ ಸಾತ್ವಿಕವೃತ್ತಿ ಮತ್ತು ಲಿಂಗಪೂಜಾನಿಷ್ಠೆಯ ಕೀರ್ತಿವಾರ್ತೆಯನ್ನು ಕೇಳಿದ ಹಾವೇರಿಯ ಸದ್ಭಕ್ತರೆಲ್ಲ ಹಾನಗಲ್ಲ ಶ್ರೀಗಳವರಲ್ಲಿ ವಿನಯದಿಂದ ಬಿನ್ನಯಿಸಿಕೊಂಡರು. ಭಕ್ತರ ಆಗ್ರಹಕ್ಕೆ ಮೆಚ್ಚಿ ಹಾನಗಲ್ಲ ಶ್ರೀಗಳವರು ಯಕ್ಕುಂಡಿಯ ಶ್ರೀ ಮುರುಘೇಂದ್ರ ಮಹಾಸ್ವಾಮಿಗಳವರನ್ನು ಕರೆಯಿಸಿ ಅವರ ಸನ್ನಿಧಿಯಲ್ಲಿ ಹಾವೇರಿ ಹುಕ್ಕೇರಿಮಠದ ನಿರಂಜನ ಚರಪಟ್ಟಾಧಿಕಾರ ಮಹೋತ್ಸವವನ್ನು ೧೯೦೫ರಲ್ಲಿ ಬಹು ವಿಜೃಂಭಣೆಯಿಂದ ನೆರವೇರಿಸಿದರು; 'ಧರ್ಮೋತ್ತೇಜಕ ಸಭೆ'ಯನ್ನು ಈ ಪ್ರಸಂಗದಲ್ಲಿ ಏರ್ಪಡಿಸಿ ಅದರ ಮುಖಾಂತರ ನೀತಿ ಮತ್ತು ಧರ್ಮಗಳ ಉಪದೇಶವು ಭಕ್ತರಿಗೆ ದೊರಕುವಂತೆ ಮಾಡಿದರು. ಶ್ರೀ ಶಿವಬಸವ ಸ್ವಾಮಿಗಳು ಅಧಿಕಾರದ ಉತ್ಸವದಲ್ಲಿ ಭಕ್ತರಿಂದ ಬಂದ ಕಾಣಿಕೆಯನ್ನು ಮಠದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಲು ವಿನಿಯೋಗಿಸಿದರು; ತಮ್ಮ ನೂತನ ಗುರುಗಳ ಉದಾರ ಹೃದಯವನ್ನು ಸಮಾಜ ಸೇವಾಭಾವವನ್ನು ಕಂಡು ಹಾವೇರಿಯ ಭಕ್ತರು ಬಹು ಹಿಗ್ಗಿದರು.

ಹಾನಗಲ್ಲ ಮತ್ತು ಹಾವೇರಿಯ ಉಭಯ ಶ್ರೀಗಳವರು ಒಂದು ಹೃದಯ, ಎರಡು ಶರೀರವಾಗಿದ್ದು, ಉಭಯ ಶ್ರೀಗಳವರು ಒಂದುಗೂಡಿ ಅನೇಕ ಸಮಾಜ ಕಾರ್ಯಗಳನ್ನು ನೆರವೇರಿಸಿದರು. ಈ ಕಾರ್ಯಗಳಲ್ಲಿ ಹಾವೇರಿಯ ಶ್ರೀಗಳವರು ಹಾನಗಲ್ಲ ಶ್ರೀಗಳವರಿಗೆ ಬಲಭುಜವಾಗಿದ್ದರು. ಈ ಮಹಾಕಾರ್ಯಗಳಲ್ಲಿ ೧೯೦೯ರಲ್ಲಿ ಶಿವಯೋಗಮಂದಿರ ಸಂಸ್ಥೆಯ ಸ್ಥಾಪನೆಯು ಬಹುಮುಖ್ಯವಾದುದು. ಅದೇ ಸ್ಥಾಪಿತವಾಗಿದ್ದ ಶಿವಯೋಗಮಂದಿರವೆಂಬ 'ಶಿಶು'ವಿಗೆ ಹಾನಗಲ್ಲ ಶ್ರೀಗಳವರು ತಂದೆಯಾಗಿದ್ದರೆ ಹಾವೇರಿಯ ಶ್ರೀಗಳವರು ತಾಯಿಯಂತಿದ್ದರು. ಅವರೀರ್ವರ ಸತ್‌ಪ್ರಯತ್ನಗಳ ಪರಿಣಾಮವಾಗಿ ಆ ಸಂಸ್ಥೆಯು ಮಹೋದ್ದೇಶಗಳ ಸಾಧನೆಗಾಗಿ ವಿಶಾಲವಾಗಿ ಬೆಳೆಯಿತು.

ಕ್ರಿ.ಶ. ೧೯೧೧ರಲ್ಲಿ ಪರಮಪೂಜ್ಯ ಬಿದರಿಯ ಶ್ರೀ ಕುಮಾರ ಮಹಾಸ್ವಾಮಿಗಳವರು ಮುಪ್ಪಿನ ತಮ್ಮ ಅನಾರೋಗ್ಯವನ್ನು ಕಂಡು ತಮ್ಮ ಪ್ರಿಯ ಶಿಷ್ಯರಾದ ಉಭಯ ಶ್ರೀಗಳವರನ್ನು ಕರೆಯಿಸಿದರು. ಛಿನ್ನವಾಗುತ್ತಿರುವ ಸಮಾಜದ ಉದ್ಧಾರಕ್ಕಾಗಿ ಇನ್ನು ಹೆಚ್ಚು ಪ್ರಯತ್ನಿಸುವಂತೆ ಅನುಗ್ರಹಿಸಿ ತಮ್ಮ ತರುವಾಯ ಮಠಕ್ಕೆ ಅಪ್ಪಯ್ಯದೇವರನ್ನು ಅಧಿಕಾರಿಗಳನ್ನಾಗಿ ಮಾಡುವಂತೆ ಅಪ್ಪಣೆ ಕೊಡಿಸಿ ಪುಷ್ಯ ಶು. ೫ ರಂದು ಲಿಂಗೈಕ್ಯರಾದರು. ಉಭಯ ಶ್ರೀಗಳವರು ಗುರುವರ್ಯರನ್ನು ಅಗಲಿ ಬಹುವಾಗಿ ನೊಂದುಕೊಂಡರು; ಆದರೆ ಅವರ ಧ್ಯೇಯಮೂರ್ತಿಯನ್ನು ತಮ್ಮ ಹೃದಯಮಂದಿರದಲ್ಲಿರಿಸಿಕೊಂಡು ಧೈರ್ಯ ತಂದುಕೊಂಡರು. ಅವರ ಉಪದೇಶಗಳನ್ನು ಕಾರ್ಯ ರೂಪದಲ್ಲಿ ತರಲು ಪ್ರಯತ್ನಿಸಿದರು. ಉಭಯ ಶ್ರೀಗಳವರು ನಾಡಿನ ತುಂಬೆಲ್ಲ ಸಂಚರಿಸಿ ಭಕ್ತರಲ್ಲಿ ಅರುವಿನ ಬೆಳಗನ್ನು ಮೂಡಿಸಿದರು; ಮಂದಿರದ ಅಭಿವೃದ್ಧಿಗಾಗಿ ಧನವನ್ನು ಶೇಖರಿಸಿದರು; ಅಲ್ಲಲ್ಲಿ ಶಾಖಾಮಂದಿರಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ಧಾರ್ಮಿಕ ವಿಚಾರಗಳ ಪ್ರಚಾರವನ್ನು ಮಾಡಿದರು; ಶತಮಾನಗಳಿಂದ ಸಮಾಜದಲ್ಲಿ ಕವಿದ ಮೌಢ್ಯದ ಮಬ್ಬನ್ನು ಕರಗಿಸಲು ಜ್ಞಾನದ ತಿಳಿಬೆಳಗು ಮೂಡುವಂತಾಯಿತು. ೧೯೩೦ರಲ್ಲಿ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳವರು ಲಿಂಗೈಕ್ಯರಾದ ಮೇಲೆ ಶಿವಯೋಗಮಂದಿರದ ಭಾರವೆಲ್ಲ ಶ್ರೀಗಳವರ ಮೇಲೆ ಬಿದ್ದಿತು. ಹಾನಗಲ್ಲ ಶ್ರೀಗಳವರ ಇಚ್ಛೆಯಂತೆ ಅವರೇ ಆ ಸಂಸ್ಥೆಯ ಆಜೀವ ಅಧ್ಯಕ್ಷರಾಗಿದ್ದು ಬಿಕ್ಕಟ್ಟಿನ ಪ್ರಸಂಗಗಳಲ್ಲಿಯೂ ಸಂಸ್ಥೆಗೆ ಯಾವ ಕೊರತೆಯೂ ಬಾರದಂತೆ ನಡೆಯಿಸಿಕೊಂಡು ಬಂದರು.

ಶ್ರೀಗಳವರು ಭಕ್ತರ ಮನೋಭಿಷ್ಟಗಳನ್ನು ಪೂರೈಸುತ್ತ ಅಲ್ಲಲ್ಲಿ ಪ್ರಶಾಂತವಾದ ಸ್ಥಾನಗಳಲ್ಲಿ ಅನುಷ್ಠಾನ ಮಾಡಿ ಅನೇಕ ಶಾಖಾ ಶಿವಯೋಗಮಂದಿರಗಳು ತಾವಾಗಿಯೇ ಬೆಳೆದು ಬರುವಂತೆ ಅನುಗ್ರಹಿಸಿದರು; ಆ ಮಠಾಶ್ರಮಗಳಲ್ಲಿ ಅನೇಕರು ಶಿವಯೋಗ ಸಾಧನೆ ಮಾಡಿ ಸಿದ್ಧಿಪಡೆದರು; ತಮ್ಮ ಕೊನೆಯುಸಿರಿರುವರೆಗೂ ಅವರು ಭಕ್ತರ ಹಿತಕ್ಕಾಗಿ, ಶಿವಯೋಗಮಂದಿರದ ಶ್ರೇಯಸ್ಸಿಗಾಗಿ ಹೆಣಗಿದರು. ಲಿಂಗಪೂಜೆಯೇ ಅಧ್ಯಾತ್ಮಸಾಧನೆಯೇ ಜೀವನದ ಸಾರಸರ್ವಸ್ವವೆಂದು ಜನರಿಗೆ ತೋರಿದ ಮಹಾಮಹಿಮರವರು. ಶ್ರೀಗಳವರು ತಮ್ಮ ೮೯ನೆಯ ವಯೋಮಾನದಲ್ಲಿ ಶಾ. ಶಕ. ೧೮೬೮ರ ಪುಷ್ಯ ಶು. ೧೧ ರಂದು ಹಾವೇರಿಯ ಹುಕ್ಕೇರಿಮಠದಲ್ಲಿ ಉರಿಯೊಳಗ್ಗೆದ ಕರ್ಪೂರದಂತೆ ಲಿಂಗದೊಳೈಕ್ಯವಾದರು. ಅವರ ಮಹಾಜೀವನದ ಕೆಲವು ಅಂಶಗಳನ್ನು ಮುಂದೆ ಕೊಡಲು ಪ್ರಯತ್ನಿಸಿದೆ.

**ಲಿಂಗಪೂಜಾನಿಷ್ಠೆ :**

ಶ್ರೀಗಳವರಿಗೆ ಲಿಂಗಪೂಜೆಯೆಂದರೆ ಮಹದಾನಂದ, ಬಿಲ್ವಪತ್ರಿ ಪುಷ್ಪಗಳ ಬನ, ನದಿ–ಜರಿಗಳ ಸೊಂಪಾದ ತಾಣಗಳನ್ನು ಕಂಡು ಶ್ರೀಗಳವರ ಅನುಷ್ಠಾನ ಮಾಡುವ ಲವಲವಿಕೆ ಹೆಚ್ಚುತ್ತಿತ್ತು. ಅಲ್ಲಿಯೇ ಒಂದು ಪರ್ಣಕುಟಿಯನ್ನು ಕಟ್ಟಿ ಶಿವಯೋಗಾನಂದದಲ್ಲಿ ತಲ್ಲೀನರಾಗಿ ಬಿಡುವರು. ಎಂತಹ ರೋಗ ಬಂದರೂ ಜಾಡ್ಯ ಬಂದರೂ ಅವರು ಲಿಂಗಪೂಜೆಯನ್ನು ಬಿಡುತ್ತಿರಲಿಲ್ಲ. ಅವರು ಪೂಜೆಯಲ್ಲಿ ಅಂಗೈಯೊಳಗಣ ಲಿಂಗಯ್ಯನನ್ನು ನೆಟ್ಟ ದೃಷ್ಟಿಯಿಂದ ನೋಡುತ್ತ ಗಂಟೆಗಟ್ಟಲೆ ನಿಶ್ಚಲವಾಗಿ ಬಿಡುತ್ತಿದ್ದರು. ದೃಷ್ಟಿಯೋಗದಲ್ಲಿ ಅವರು ಸಿದ್ಧಿಯನ್ನು ಪಡೆದಿದ್ದರು. ಶಿವಯೋಗ ಸಿದ್ಧಿಗೆ ದೃಷ್ಟಿಯೋಗ ತಳಹದಿಯೆಂದು ಅವರು ಮಂದಿರದ ಸಾಧಕರಿಗೆ ಪದೇ ಪದೇ ಅಪ್ಪಣೆಕೊಡಿಸುತ್ತಿದ್ದರು. ಎಲ್ಲಿಯಾದರೂ ಪ್ರಯಾಣ ಮಾಡುವಾಗ ಮಾರ್ಗದಲ್ಲಿ ಜಲಪತ್ರಿ–ಪುಷ್ಪಗಳಿಂದ ಸಮೃದ್ಧವಾದ ನಿಸರ್ಗವನ್ನು ಕಂಡರೆ ಸಾಕು, ಅಲ್ಲಿಯೇ ಉಳಿದು ಶಿವಾರ್ಚನೆಯನ್ನು ಮನದುಂಬಿ ಮುಗಿಸಿ ಮುಂದೆ ಪ್ರಯಾಣ ಬೆಳೆಸುವದು ಶ್ರೀಗಳವರ ಸ್ವಭಾವವಾಗಿದ್ದಿತು. ಒಂದು ಸಲ ಶಿವಯೋಗಮಂದಿರದಲ್ಲಿ ಬೆಳಗು ಮುಂಜಾನೆ ಮಹಾಕೂಟದ ಕಡೆ ಸಂಚಾರ ಹೊರಟಾಗ, ಅಲ್ಲಿಯ ಪ್ರಶಾಂತ ಸ್ಥಾನವನ್ನು ಕಂಡು ಶಿವಾರ್ಚನೆಯನ್ನು ಮಾಡಬೇಕೆಂದು ಬಯಸಿದರು; ಅಂದವಾದ ಸುಗಂಧಮಯ ಪುಷ್ಪಗಳು, ಕೋಮಲವಾದ ಬಿಲ್ವದಳಗಳು, ಜುಳುಜುಳು ಹರಿಯುವ ನಿರ್ಮಲ ಜಲಧಾರೆ–ಮತ್ತೇನು ಬೇಕು ಶಿವನಿಗೆ? ಸ್ನಾನ ಮಾಡಿ ಅಲ್ಲಿಯೇ ಒಂದು ಮರದಡಿ ಶಿವಪೂಜೆಯನ್ನು ಮನದಣಿ ಮಾಡಿದರು. ಅಷ್ಟರಲ್ಲಿ ಅವರ ಲಿಂಗನಿಷ್ಠೆಯಿಂದ ಬಂದ ಶಿವಪ್ರಸಾದವನ್ನು ಸೇವಿಸಿ ಮಂದಿರಕ್ಕೆ ದಯಮಾಡಿಸಿದರು. ಅವರ ಲಿಂಗಪೂಜೆಯ ಪ್ರಭಾವದಿಂದಲೇ ಕಪನಳ್ಳಿಯ ಶಿವಯೋಗಾಶ್ರಮ, ಕೊಪ್ಪದ ಶಾಖಾ ಶಿವಯೋಗಮಂದಿರ, ಹಿರೇಹಾಳ–ಬದಾಮಿಯ ಶಾಖಾಮಂದಿರಗಳು, ತೊದಲಬಗಿ ಹಳ್ಳದ ದಂಡೆಯ ಆಶ್ರಮ ಮೊದಲಾದವು ಶಿವಯೋಗಿಯಿರ್ದ ಕ್ಷೇತ್ರಗಳಾಗಿ ಭಕ್ತರನ್ನು ಆಕರ್ಷಿಸಿವೆ.

ಶಿವಲಿಂಗ ಪೂಜೆಯು ಭವರೋಗಕ್ಕೆ ಸಿದ್ಧೌಷಧಿಯೆಂದು ಶ್ರೀಗಳವರು ಅಪ್ಪಣೆ ಕೊಡಿಸುತ್ತಿದ್ದರು. ಅನುವು ಆಪತ್ತುಗಳಿಂದ ಬಳಲಿ ಬಂದ ಭಕ್ತರಿಗೆ 'ಲಿಂಗಪೂಜೆ ಮಾಡಿರಪ್ಪ ನಿಮ್ಮ ಕಷ್ಟ ಪರಿಹಾರವಾಗುವುದು' ಎಂದು ಕೃಪಾದೃಷ್ಟಿ ಬೀರಿ ಸಂತೈಸುತ್ತಿದ್ದರು.

'ಕರದೊಳ್ ತಾಳ್ದಸ ನಿಜೇಷ್ಟಲಿಂಗದೆ ಮನಂ ಪಂಚಾಕ್ಷರಂ ವಕ್ತ್ರದೊಳ್
ಕೊರಲೊಳ್ ತಳ್ತ ಶಿವಾಕ್ಷ ಮಾಲೆ ಭಸಿತಾಲೇಪಂ ಲಲಾಟಾಗ್ರದೊಳ್।
ಗುರುಪಾದಾಂಬುಜಸೇವೆ ಕಾಯದೊಳೊಡಂಬಟ್ಟಿರ್ಪ ಭಕ್ತಂಗದಾರ್
ಸರಿ ನೀನಾತನಧೀನನಪ್ಪೆ ಸತತಂ ಶ್ರೀಶೈಲಜಾವಲ್ಲಭಾ'॥

ಎಂದು ಶಿವಕವಿಯೊಬ್ಬರು ಹೇಳಿದಂತೆ ಲಿಂಗನಿಷ್ಠೆಯಿಂದಾಗಿ ಶ್ರೀಗಳವರಿಗೆ ಎಂದೂ ಯಾವುದೂ ಕೊರತೆಯಾಗಿ ನಿಲ್ಲಲಿಲ್ಲ. ಮಹಾನುಭಾವಿ ಶ್ರೀ ಮಗ್ಗೆಯ ಮಾಯಿದೇವರು ಶತಕತ್ರಯದಲ್ಲಿ

ಲಿಂಗದೊಳಿಟ್ಟ ದೃಷ್ಟಿ ನಿಜದೃಷ್ಟಿಯೊಳಿಟ್ಟಮನಂ ಮನಸ್ಸಿನೊ
ಳ್ಲಿಂಗದೆ ನಿಂದ ಭಾವಮದರೊಳ್ನೆಲೆಗೊಂಡ ಶಿವಾತ್ಮಲಿಂಗವಾ
ಲಿಂಗದೊಳಿರ್ದು ನಿತ್ಯಸುಖಿಯಾಗಿ ವಿರಾಜಿಸುವಂಗೆ ಬಾಹ್ಯ ಕ
ರ್ಮಂಗಳವೇತಕಯ್ಯ ಪರಮಪ್ರಭುವೇ ಮಹದೈಪುರೀಶ್ವರಾ

ಎಂದು ಹೇಳಿರುವಂತೆ ಶ್ರೀಗಳವರು ಅಂಗವೇ ಲಿಂಗವಾಗಿರುವ ಚಿರಪರಿಣಾಮಿಯ ನಿಬ್ಬೆರಗಿನ ಸ್ಥಿತಿಯನ್ನು ತನ್ಮಯತೆಯನ್ನು ಪಡೆದು ಅನುಪಮ ಸುಖಿಗಳಾಗಿರುತ್ತಿದ್ದರು.

ಮನದ ಮುಂದಿರುವ ಹೊನ್ನು–ಹೆಣ್ಣು–ಮಣ್ಣುಗಳ ಆಶೆಯೆಂಬ ಮಾಯೆಯನ್ನು ಗೆಲಿದ ಮಹಾತ್ಮರು ಎಲ್ಲಿಯೋ ಒಬ್ಬಿಬ್ಬರು. ಅಂತಹರಲ್ಲಿ ಶ್ರೀಗಳವರೂ ಒಬ್ಬರು. ಅವರೊಬ್ಬ 'ಸಮಲೋಷ್ಟಾಶ್ಮಕಾಂಚನ'ರಾದ ಸ್ಥಿತಪ್ರಜ್ಞರು, ವೀರವಿರಾಗಿಗಳು. ಪ್ರತಿನಿತ್ಯ ಸಾವಿರಾರು

ಜನ ಶ್ರೀಗಳವರ ದರ್ಶನಕ್ಕೆ ಬಂದು ಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಶ್ರೀಗಳವರು ಅವನ್ನೆಂದೂ ಗಣನೆಗೆ ತಂದವರಲ್ಲ. ಹಣವನ್ನು ಎಂದೂ ಮುಟ್ಟಿ ಎಣಿಕೆ ಮಾಡಿದವರಲ್ಲ; ಕಷ್ಟದಲ್ಲಿದ್ದ ಭಕ್ತನಿಗೆ, ಬಡ ವಿದ್ಯಾರ್ಥಿಗೆ ಆ ಕಾಣಿಕೆ ಮೀಸಲು; ಬೇಡಿದವರಿಗೆ ಶ್ರೀಗಳವರು ಬೊಗಸೆ ತುಂಬ ಕೊಟ್ಟು ಕಳುಹುವರು. ಬೇಕೆಂದು ಅವರೆಂದೂ ಕೂಡಿಟ್ಟವರಲ್ಲ. ತಂದಿಕ್ಕುವ ಶಿವನೇ ಅವರ ಮನೋಮಂದಿರದಲ್ಲಿ ವಾಸವಾಗಿರುವಾಗ, ಇಂದು ನಾಳೆಗೆಂದು ಅವರೇಕೆ ಚಿಂತಿಸಬೇಕು? ನಿಸ್ಪೃಹತೆಯೇ ಶ್ರೀಗಳವರ ರೂಪದಲ್ಲಿ ಮೈದಾಳಿ ಬಂದಂತಿತ್ತು. ಹೊನ್ನು-ಹೆಣ್ಣು-ಮಣ್ಣುಗಳ ರೂಪದಲ್ಲಿ ಮಾಯೆಗೆ ನಿಜೇಷ್ಟಲಿಂಗದಲ್ಲಿ ನೆಟ್ಟ ಅವರ ದೃಷ್ಟಿಯನ್ನು ಸೆಳೆಯುವುದು ಸಾಧ್ಯವಾಗದೆ ಹೋಯಿತು. ಇಂದ್ರಿಯ ನಿಗ್ರಹದಿಂದಾಗಿ ಅವರ ಮನ ನಿಶ್ಚಲವಾಗಿತ್ತು. ದೃಢವಾದ ಅವರ ಮನವನ್ನು ಕಲಕುವ ಶಕ್ತಿ ಯಾವ ಪ್ರಾಪಂಚಿಕ ಆಕರ್ಷಣೆಯಲ್ಲಿಯೂ ಇರಲಿಲ್ಲ. ಅವರೆಂದೂ ಹೆಣ್ಣುಮಕ್ಕಳ ಪಾಕವನ್ನು ಸಾಧಕರ ಮಾರ್ಗದರ್ಶನಕ್ಕಾಗಿ, ಮುಟ್ಟಿದವರಲ್ಲ. ಕಾಮಿನಿ ಕಾಂಚನಗಳನ್ನು ಅವರೆಂದೂ ತನುವಿನಿಂದ ಸೋಂಕಲಿಲ್ಲ, ಮನದಲ್ಲಿ ನೆನೆಯಲಿಲ್ಲ.

ಹೆಣ್ಣನ್ನು ಹೊನ್ನನ್ನು। ಹಣ್ಣಾದ ಮರಗಳನು।
ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ
ಅಣ್ಣಗಳು ಯಾರು ಸರ್ವಜ್ಞ॥

ಎಂದು ಸರ್ವಜ್ಞಕವಿಯು ಹೇಳಿದಂತೆ ಎಲ್ಲರೂ ಮಾತಿನಲ್ಲಿ ಶುಚಿ-ವೀರ-ಸಾಧುಗಳು; ನಿಜವಾಗಿಯೂ ಕಾಮಿನಿಯನ್ನು ಗೆಲಿದ ವಿರಾಗಿಗಳು ಬಹಳ ಅಪರೂಪ. ಆದರೆ ಶ್ರೀಗಳವರು ಹೆಣ್ಣನ್ನು ಪ್ರತ್ಯಕ್ಷ ದೇವತೆ, ತಾಯಿಯೆಂಬ ಪವಿತ್ರ ಭಾವನೆಯನ್ನು ತಳೆದ ಮಹಾನುಭಾವಿಗಳಾಗಿದ್ದರು.

ಮಣ್ಣನ್ನು ಅವರು ಕೈಯಿಂದ ಮುಟ್ಟಿದವರಲ್ಲ. ಯಾವ ಆಸ್ತಿ-ಪಾಸ್ತಿಗಳಿಗೂ ಮನಸ್ಸು ಮಾಡಿದವರಲ್ಲ; ಅವರೆಲ್ಲಿಯೂ ಬಹಳ ದಿನವಿರುತ್ತಿರಲಿಲ್ಲ. ಭಕ್ತರನ್ನು ಉದ್ಧರಿಸುತ್ತ ಸಂಚರಿಸುವುದೇ ಲೇಸೆಂದು ಅವರು ಬಗೆದಿದ್ದರು. ಜಂಗಮರೂಪದಲ್ಲಿ ಪರಶಿವನು ಸಾಕಾರನಾಗಿ ಅತಿಥಿರೂಪದಲ್ಲಿ ಸಂಚರಿಸುವನೆಂದು ಹೇಳುವರು. ಅಂತಹ ನಿರಾಭಾರ ಜಂಗಮತ್ವವನ್ನು ಶ್ರೀಗಳವರು ಪಡೆದಿದ್ದರು. ಸರ್ವಜನ ಸಂಪೂಜ್ಯರಾಗಿದ್ದರು. ಮಠವನ್ನು ಹಿಡಿದು ಕುಳಿತವರಲ್ಲ. ಸ್ವಂತ ಮಠದ ಏಳ್ಗೆಗಾಗಿಯಲ್ಲ, ಸಮಾಜವೆಂಬ ಸದೃಢವಾದ ಮಹಾಮಠವನ್ನು ಕಟ್ಟಲು ಹೆಣಗಿದರು. ಹಾವೇರಿಯ ನೂತನ ಮಠವನ್ನು ಭಿಕ್ಷೆ ಬೇಡಿ ದುಡ್ಡು ತಂದು ಕಟ್ಟಿಸಲಿಲ್ಲ. ಅದನ್ನು ಶಿವನೇ ಭಕ್ತರ ರೂಪದಲ್ಲಿ ಬಂದು ಕಟ್ಟಿರಬೇಕು.

ಜಿತಕಾಮಾ ಜಿತಕ್ರೋಧಾ ಮೋಹಗ್ರಂಥಿವಿಭೇದಿನಃ
ಸಮಲೋಷ್ಟಾಶ್ಮಕನಕಾಃ ಸಾಧವಃ ಶಿವಯೋಗಿನಃ॥
ಸಮಾಃ ಶತ್ರೌ ಚ ಮಿತ್ರೇ ಚ ಸಾಕ್ಷಾತ್ಕೃತಶಿವಾತ್ಮಕಾಃ।
ನಿಸ್ಪೃಹಾ ನಿರಹಂಕಾರಾ ವರ್ತಂತೇ ಶಿವಯೋಗಿನಃ॥

ಎಂದು 'ಸಿದ್ಧಾಂತ ಶಿಖಾಮಣಿ'ಯಲ್ಲಿ ಹೇಳಿರುವ ನಿರಾಭಾರಿ ಜಂಗಮದ ಲಕ್ಷಣಗಳೆಲ್ಲ ಶ್ರೀಗಳವರ ವೀರವಿರಕ್ತಿಯ ದಿವ್ಯ ಜೀವನದಲ್ಲಿ ಅನ್ವಯಿಸುತ್ತಿದ್ದವು.

ಕಷ್ಟದಲ್ಲಿ ಬಿದ್ದ ಪ್ರತಿಯೊಂದು ಪ್ರಾಣಿಯಲ್ಲಿ ಶ್ರೀಗಳವರು ದಯಾರ್ದ್ರ ಭಾವನೆಯುಳ್ಳವರಾಗಿದ್ದರು. ಮೌನಿಯೂ ಭೂತ ದಯಾಯುಕ್ತನೂ ಆದ ನಿರಾಭಾರನೇ ನಿಜ ಜಂಗಮನೆಂಬ ವಚನೋಕ್ತಿಗೆ ಶ್ರೀಗಳವರ ದಯಾಳು ಭಾವ ಸರಿದೂಗುವಂತಿತ್ತು. ಬಡವರಿಗೆ ಆರ್ತರಿಗೆ ಕೈಲಾದ ಮಟ್ಟಿಗೆ ಸಹಾಯ ನೀಡುವುದು ಶ್ರೀಗಳವರ ಸ್ವಭಾವವಾಗಿದ್ದಿತು. ಶ್ರೀಗಳವರ ಉದಾರತೆಯಿಂದ ಕೃತಾರ್ಥರಾದ ಶಾಸ್ತ್ರಿಗಳೆಷ್ಟೋ? ಭಕ್ತರೆಷ್ಟೋ? ದೀನ-ದರಿದ್ರರೆಷ್ಟು ಜನರೋ?

ನಾನು ಹಾವೇರಿಯಲ್ಲಿ ಶ್ರೀಗಳವರ ಸೇವೆಯಲ್ಲಿದ್ದಾಗ ನಡೆದ ಪ್ರಸಂಗ. ಪ್ರಾತಃಕಾಲ ಶ್ರೀಗಳವರು ಬಹಿರ್ದೇಶಕ್ಕೆ ದಯಮಾಡಿಸಿದ್ದರು. ಚಳಿಗಾಲ. ಮೈ ಕೊರೆಯುವ ಶೀತಗಾಳಿ ಬೀಸುತ್ತಿತ್ತು. ಒಬ್ಬ ಬಡರೋಗಿ ಮೈಯಲ್ಲಿ ಹೊದಿಕೆಯಿಲ್ಲದೆ ಗದಗದ ನಡುಗುತ್ತಿದ್ದ. ಶ್ರೀಗಳವರು ಅವನಿಗೆ ತಮ್ಮ ಖಾದಿಯ ಶಾಲನ್ನೆ ಹೊದೆಯಲು ದಯಪಾಲಿಸಿ ಅವನ ಶುಶ್ರೂಷೆಯ ಅನುಕೂಲತೆಯನ್ನು ಭಕ್ತರ ಮುಖಾಂತರ ಕಲ್ಪಿಸಿದರು.

ಒಂದು ದಿನ ಶ್ರೀಗಳವರ ಶಿವಯೋಗಮಂದಿರದ ಭಿಕ್ಷೆಗಾಗಿ ಗುಳೇದಗುಡ್ಡಕ್ಕೆ ದಯಮಾಡಿಸಿದ್ದರು. ಒಬ್ಬ ಬಡ ಜಂಗಮ ಬಂದು ತನ್ನ ಮಗನ ಲಗ್ನಕ್ಕೆ ಎರಡು ನೂರು ರೂಪಾಯಿಗಳು ಬೇಕಾಗಿವೆಯೆಂದು ಬಹು ಅಂಗಲಾಚಿ ಬೇಡಿಕೊಂಡ. ಆಗ ಶ್ರೀಗಳವರು ಕಾರಕೂನನನ್ನು ಕರೆದು ಜಂಗಮನ ಇಚ್ಛೆಯನ್ನು ಪೂರೈಸುವಂತೆ ಅಪ್ಪಣೆ ಮಾಡಿದರು. ಕಾರಕೂನನು ಎದುರಿನಲ್ಲಿ 'ಹೂಂ' ಎಂದು ಜಂಗಮನಿಗೆ ಸಹಾಯ ಮಾಡಲಿಲ್ಲ. ಅದು ಶ್ರೀಗಳವರಿಗೆ ತಿಳಿಯಿತು. ಕಾರಕೂನನನ್ನು ಕರೆಯಿಸಿ ತಪ್ಪಿದುದಕ್ಕೆ ಮತ್ತೆ ಐವತ್ತು ಹೆಚ್ಚಿಗೆ

ರೂಪಾಯಿಗಳನ್ನು ಕೊಡಿಸಿ 'ಶಿವನದನ್ನು ಶಿವನಿಗೆ ಕೊಡಲು ಸಂಕೋಚವೇಕೆ?' ಎಂದು ಅಪ್ಪಣೆ ಮಾಡಿದರು. ಆರ್ತರ ಕೊರಗಿನಲ್ಲಿ ಶಿವನ ಕರೆಯನ್ನು ಕೇಳುತ್ತಿದ್ದ ಮಹಾತ್ಮರವರು. ಎಷ್ಟೋ ಜನ ಭಕ್ತರು ವ್ಯಾಪಾರ ಉದ್ಯೋಗಗಳನ್ನು ಮಾಡಲು ಶ್ರೀಗಳವರಿಂದ ಸಾವಿರಾರು ರೂಪಾಯಿಗಳ ನೆರವನ್ನು ಪಡೆದ ನೂರಾರು ಉದಾಹರಣೆಗಳಿವೆ. ಕೊಟ್ಟದನ್ನು ತಿರುಗಿ ಕೇಳುವದು ಶ್ರೀಗಳವರ ಸ್ವಭಾವವಾಗಿರಲಿಲ್ಲ. ಕೆಲವರು ಮರಳಿ ಕೊಟ್ಟವರುಂಟು. ಆದರೆ, ಕೊಡದವರೇ ಬಹಳ. ಶ್ರೀಗಳವರು ಆ ಬಗೆಗೆ ಕನಸುಮನಸಿನಲ್ಲಿಯೂ ಯೋಚಿಸಿದವರಲ್ಲ.

ಶ್ರೀಗಳವರು ಶಿವಯೋಗಮಂದಿರದ ಸ್ಥಾಪನೆಯ ಕಾಲದಲ್ಲಿ ಸಂಸ್ಥೆಯ ಆಕಳು-ದನು-ಕರುಗಳನ್ನು ತಾವೇ ಸ್ವತಃ ಮೇಯಿಸಿ ಜೋಪಾನ ಮಾಡಿದ್ದು ಅವರ ಪ್ರಾಣಿ ದಯಾಪರತೆಯ ಕುರುಹಾಗಿದೆ. 'ದಯೆಯೇ ಧರ್ಮದ ಮೂಲವಯ್ಯ' ಎಂಬ ಬಸವಣ್ಣನವರು ಹೇಳಿದ ತತ್ವದ ಮರ್ಮವನ್ನು ಅರಿತು ಶ್ರೀಗಳವರು ಆದರ್ಶ ದಯಾಳುವಾಗಿ ಬಾಳಿ ಬೆಳಗಿದರು.

**ಬ್ರಹ್ಮಚರ್ಯ :**

ಶ್ರೀಗಳವರು ಚಿಕ್ಕಂದಿನಿಂದಲೂ ಗುರುಶುಶ್ರೂಷೆಯಲ್ಲಿ ಕಾಲಕಳೆಯುತ್ತ ಆಜನ್ಮ ಬ್ರಹ್ಮಚರ್ಯ ಪಾಲಿಸುತ್ತ ಬಂದರು. ಬ್ರಹ್ಮಚರ್ಯದ ಕಳೆಯು ಮುಖದಲ್ಲಿ ಹೊರಸೂಸುತ್ತಿತ್ತು. ಸಾತ್ವಿಕ ವೃತ್ತಿಯಿಂದ ಆಹಾರಾದಿಗಳಲ್ಲಿ ಸಂಯಮ ಪಾಲಿಸಿ ಬ್ರಹ್ಮಚರ್ಯವನ್ನು ಸಾಧಿಸಿ ಸಿದ್ಧಿ ಪಡೆದವರು. 'ಆಹಾರ ಶುದ್ಧೌ ಸತ್ವಶುದ್ಧಿಃ' ಆಹಾರ ಶುದ್ಧಿಯು ಸಾಧಿಸಿದರೆ ಬ್ರಹ್ಮತತ್ವವು ತಾನೇ ನೆಲೆಗೊಳ್ಳುವುದು. ಶ್ರೀಗಳವರು ಅಂತರಂಗದಲ್ಲಿ ಬಹಿರಂಗದಲ್ಲಿಯೂ ಬ್ರಹ್ಮಚರ್ಯವನ್ನು ಆಚರಿಸಿದವರು. ಮನವೇ ಬಂಧ ಮೋಕ್ಷಗಳಿಗೆ ಕಾರಣ. ಅಂತೆಯೇ 'ಜಿತಂ ಜಗತ್ ಕೇನ? ಮನೋ ಹಿ ಯೇನ' ಮನವನ್ನು ನಿಗ್ರಹಿಸಿದವನೇ ಜಗತ್ತನ್ನು ಗೆಲ್ಲುವನೆಂದು ಹೇಳಿದೆ. ಮನಸ್ಸು ಬಹು ಚಂಚಲವಾದುದು; ವಿಕಾರವನ್ನುಂಟು ಮಾಡುವುದು, ಬಲವುಳ್ಳದು; ಬಿರುಗಾಳಿಯನ್ನು ಹಿಡಿದು ನಿಲ್ಲಿಸುವಂತೆ ಮನೋನಿಗ್ರಹ ಬಹು ಕಠಿಣವಾದುದು ದುಷ್ಕರವಾದುದೆಂದು ಅರ್ಜುನನು ಕೇಳಿದ ಮಾತಿಗೆ ಭಗವಂತನು 'ಚಂಚಲವಾದ ಮನಸ್ಸನ್ನು ಅಭ್ಯಾಸದಿಂದಲೂ ವೈರಾಗ್ಯದಿಂದಲೂ ನಿಗ್ರಹಿಸಲು ಸಾಧ್ಯವಿದೆ. ಮನೋನಿಗ್ರಹವನ್ನು ಸಾಧಿಸದವನಿಗೆ ಯೋಗವು ಸಿದ್ಧಿಸದು' ಎಂದು ಹೇಳುವ ಮಾತು ನಿಜಕ್ಕೂ ಬಹುತಾತ್ವಿಕವಾಗಿದೆ.

ಸಾರಥಿಯು ರಥದ ಕುದುರೆಗಳನ್ನು ತನ್ನ ವಶದಲ್ಲಿಟ್ಟುಕೊಂಡಿರುವಂತೆ, ತಿಳಿದವನು ವಿಷಯಗಳತ್ತ ಹರಿಯುವ ಇಂದ್ರಿಯಗಳನ್ನು ನಿಗ್ರಹಿಸಲು ಪ್ರಯತ್ನಿಸಬೇಕು; ಇಂದ್ರಿಯಗಳನ್ನೆಲ್ಲ ತನ್ನ ವಶದಲ್ಲಿಟ್ಟುಕೊಂಡು, ಮನವನ್ನು ನಿಗ್ರಹಿಸಿ, ಕಾಯಕ್ಲೇಶವಿಲ್ಲದೆ, ಈ ಮನೋಯೋಗದಿಂದ ಎಲ್ಲ ಧ್ಯೇಯಗಳನ್ನು ಸಾಧಿಸಬೇಕು. ಅಂತೆಯೇ ವಿಷಯಗಳಲ್ಲಿ ಹರಿದಾಡುವ ಮನವನ್ನು ಶ್ರೀಗಳು ಲಿಂಗದಲ್ಲಿ ಲೀನವಾಗಿರಿಸಿದರು, ಇಂದ್ರಿಗಳನ್ನೆಲ್ಲ ಅಂತರ್ಮುಖವಾಗಿರಿಸಿದರು. ಮಹಾಕವಿ ಚಾಮರಸನು ಹೇಳಿದಂತೆ ಅವರು 'ಕರಣದಲ್ಲಿ ಕಾಳಗ' ಮಾಡಿ ವಿಜಯಶಾಲಿಗಳಾದ ಅಧ್ಯಾತ್ಮವೀರರು. ಶ್ರೀಗಳವರು ಶಿವಯೋಗ ಸಾಧನೆಯಿಂದ ಕರಣಗಳನ್ನೆಲ್ಲ ಲಿಂಗಕಿರಣಗಳನ್ನಾಗಿ ಮಾರ್ಪಡಿಸಿದರು, 'ಸರ್ವಾಂಗ ಲಿಂಗಮಯ ಶಿವಯೋಗಿ'ಯಾದರು. ಮೂಗಿನಿಂದ ಗಂಧವನ್ನು ಆಚಾರಲಿಂಗ ಮುಖವಾಗಿ, ನಾಲಿಗೆಯಿಂದ ರುಚಿಯನ್ನು ಗುರುಲಿಂಗ ಮುಖವಾಗಿ, ಕಣ್ಣಿನಿಂದ ರೂಪವನ್ನು ಶಿವಲಿಂಗ ಮುಖವಾಗಿ, ಕಿವಿಯಿಂದ ಶಬ್ದವನ್ನು ಪ್ರಸಾದಲಿಂಗ ಮುಖವಾಗಿ, ಚರ್ಮದಿಂದ ಸ್ಪರ್ಶವನ್ನು ಜಂಗಮಲಿಂಗ ಮುಖವಾಗಿ-ಹೀಗೆ ಶ್ರೀಗಳವರ ಸರ್ವಾಂಗಗಳಲ್ಲಿ ಲಿಂಗಮುಖವಾಗಿಯೇ ನಿಜತೃಪ್ತಿಯನ್ನು ಪಡೆದವರು. ಶ್ರೀಗಳವರ ಇಂದ್ರಿಯಗಳೆಲ್ಲ ಯಾವಾಗಲೂ ಬ್ರಹ್ಮದಲ್ಲಿ ಮಹಾಲಿಂಗದಲ್ಲಿ ಚರಿಸುತ್ತಿದ್ದುದರಿಂದ ಅವರಾಚರಿಸಿದ ಬ್ರಹ್ಮಚರ್ಯ ಸಾಧಕರಿಗೆ ಪರಮಾದರ್ಶವಾಗಿದ್ದಿತು.

**ತಪೋಜೀವನ :**

ಮಾಡಲಿಲ್ಲವೆ ತಪವ ಮಾಡಲಿಲ್ಲವೆ
ಕೂಡೆ ಸುಗುಣದೊಡನೆ ತಿಳಿದು ನೋಡಿ ತ್ರಿವಿಧ ಕರಣದಲ್ಲಿ ||ಪ||

ಗುರುಭಜನೆ ಸುಕರ್ಮವೃತ್ತಿ
ಹರನ ಪೂಜೆ ಶರಣ ಸೇವೆ
ಪರಮ ಸಾತ್ವಿಕಂಗಳೆಂಟು ನೆರೆದು ನೆಲಸಿ ತನುವಿನಲ್ಲಿ ||೧||

ವಿನಯವನ್ನಹಿತವತರ್ಕ
ವನಪಶಬ್ದವಚಲಿತಾರ್ಥ
ವನಘಮಂತ್ರವಾಗಮಂಗಳಿನಿತುವಿಡಿದು ವಚನದಲ್ಲಿ ||೨||

ಶಮೆ ವಿವೇಕವಾತ್ಮವಿದ್ಯೆ
ದಮೆ ದಯಾವಿರಕ್ತಿಯೋಗ
ವಮಲರೂಪು ಶಂಭುಲಿಂಗವಮರ್ದು ತೋರಿ ಸುಮನದಲ್ಲಿ ||೩||

ಎಂದು ನಿಜಗುಣ ಶಿವಯೋಗಿಗಳು ಅಪ್ಪಣೆ ಕೊಡಿಸಿದಂತೆ ಶ್ರೀಗಳವರು ಪ್ರತಿನಿತ್ಯ ಪ್ರಾತಃಕಾಲ ಎದ್ದು ಗುರುಸ್ತೋತ್ರವನ್ನು ಮಧುರ ಕಂಠದಿಂದ ಭಕ್ತಿಭಾವದಿಂದ ಹಾಡುತ್ತಿದ್ದರು; ಗುರುಸೇವೆ ಮೊದಲಾದ ಸಾತ್ವಿಕಾಚರಣೆಯಲ್ಲಿ ನಿಷ್ಠೆಯುಳ್ಳವರು; ಲಿಂಗಪೂಜೆಯನ್ನು ಜೀವನದ ಮುಖ್ಯ ಧ್ಯೇಯವನ್ನಾಗಿಟ್ಟುಕೊಂಡವರು; ಅಥಣಿಯ ಶ್ರೀ ಮರುಳಸಿದ್ಧ ಶಿವಯೋಗಿಗಳು ಮತ್ತು ಬಿದರಿಯ ಶ್ರೀ ಕುಮಾರ ಶಿವಯೋಗಿಗಳಂತಹ ಮಹಾತ್ಮರ ಸೇವೆಯನ್ನು ಭಕ್ತಿಪೂರ್ವಕವಾಗಿ ಮಾಡಿ ತನು ತಪಸ್ಸನ್ನು ಸಾಧಿಸಿದರು; ವಿನಯಶೀಲರು ಮತ್ತು ಪರೋಪಕಾರಿಗಳೂ ಆಗಿದ್ದು ಯಾರ ಮನವನ್ನೂ ಬಿರುನುಡಿಗಳಿಂದ ನೋಯಿಸದೆ, ಷಡಕ್ಷರ ಮಂತ್ರಾನುರಾಗಿಗಳಾಗಿ, ಆದ್ಯರ ವಚನಗಳನ್ನು ಹೇಳುವಲ್ಲಿ ಕೇಳುವಲ್ಲಿ ಅನುರಕ್ತಿಯುಳ್ಳವರಾಗಿದ್ದು ವಾಚಿಕ ತಪವನ್ನು ಮಾಡಿದರು; ಅಂತರ್ಬಹಿರಿಂದ್ರಿಯ ನಿಗ್ರಹವನ್ನು ಸಾಧಿಸಿ, ಸ್ವಸ್ವರೂಪಜ್ಞಾನ-ದಯೆ-ಅಪರಿಗ್ರಹ-ಶಿವಯೋಗ ಮೊದಲಾದ ಸದ್ಗುಣಗಳನ್ನು ಪಡೆದು ಮಾನಸತಪವನ್ನು ಮಾಡಿದರು.

ಲಿಂಗದಲಿ ಮನವಾಗಿ । ಲಿಂಗದಲಿ ನೆನಹಾಗಿ
ಲಿಂಗದಲಿ ನೋಟ ನುಡಿಕೂಟವಾದವನು।
ಲಿಂಗವೇ ಅಕ್ಕು ಸರ್ವಜ್ಞ

ಎಂಬಂತೆ ಶ್ರೀಗಳವರು ಶಿವನಾಗಿಯೇ ಶಿವನನ್ನು ತ್ರಿವಿಧವಾಗಿ ಅರ್ಚಿಸಿ ಜೀವನ್ಮುಕ್ತರಾಗಿದ್ದರು. ಅವರ ಇಡಿಯ ಜೀವನವೇ ತಪೋಮಯವಾಗಿದ್ದಿತು.

### ಲಿಂಗಭೋಗೋಪಭೋಗ :

ಬಯಸಿ ಬಂದುದು ಅಂಗಭೋಗ, ಬಯಸದೇ ಬಂದುದು ಲಿಂಗಭೋಗವೆಂದು ಶರಣರು ಬೋಧಿಸಿರುವರು. ತದೇಕಭಾವದಿಂದ ಲಿಂಗಪೂಜೆಯಲ್ಲಿ ತಲ್ಲೀನರಾದ ಶ್ರೀಗಳವರಿಗೆ ಶಿವನು ಯಾವುದಕ್ಕೂ ಕೊರತೆಯನ್ನುಂಟು ಮಾಡಲಿಲ್ಲ. ಅವರು ಬಯಸದೇ ಲಿಂಗಾರ್ಪಿತಕ್ಕೆ ಬೇಕಾದ ವಸ್ತುಗಳು ಸಕಾಲಕ್ಕೆ ಒದಗುತ್ತಿದ್ದವು. ಶಿವನೇ ಯಾವುದೋ ನೆವದಿಂದ ಅವನ್ನು ಪೂರೈಸುವಂತಿತ್ತು. ಅಂತೆಯೇ ಭಗವದ್ಗೀತೆಯಲ್ಲಿ:

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ॥

ಎಂದು ಹೇಳಿದಂತೆ ಲಿಂಗಯ್ಯನೇ ಶ್ರೀಗಳವರ ಯೋಗಕ್ಷೇಮವನ್ನು ವಹಿಸಿಕೊಂಡಿದ್ದನು. ಶ್ರೀಗಳವರು ಮಾತ್ರ ನಿಷ್ಕಾಮರಾಗಿ ಶಿವಪೂಜೆಯಲ್ಲಿ ತನ್ಮಯರಾಗಿರುತ್ತಿದ್ದರು. ಅನಿರೀಕ್ಷಿತವಾಗಿ ಭಕ್ತರು ಬಗೆಬಗೆಯ ಪಡಿಪದಾರ್ಥಗಳನ್ನು ಶ್ರೀಗಳವರ ಪ್ರಸಾದ ವಿನಿಯೋಗಕ್ಕೆಂದು ತಂದು ನೀಡುವರು. ಶ್ರೀಗಳವರು ಹಣ್ಣಿನ ಹೊರತಾಗಿ ಲಿಂಗತೃಪ್ತಿಗೆ ಏನನ್ನೂ ಬಯಸುತ್ತಿರಲಿಲ್ಲ. ಒಂದು ದಿನ ಹಿರೇಹಾಳು ಎಂಬ ಗ್ರಾಮದ ಮುಕ್ಕಾಮಿನಲ್ಲಿ ಶಿವಪೂಜೆ ಮುಗಿದು ಅರ್ಪಿತದ ವೇಳೆಯಾಗಿತ್ತು. 'ಇಂದಿನ ಪ್ರಸಾದಕ್ಕೆ ಹಣ್ಣು ಇಲ್ಲವಾಯಿತಲ್ಲ' ಎಂದು ನಾನು ಯೋಚನೆಯಲ್ಲಿದ್ದೆ. ಶ್ರೀಗಳವರು ತಾವಾಗಿಯೇ ಅದನ್ನರಿತು 'ಅದಕೇಕೆ ಯೋಚನೆ? ತಂದಿಕ್ಕುವ ಶಿವಂಗೆ ಬಡತನವೆ?' ಎಂದು ಅಪ್ಪಣೆ ಮಾಡುವಷ್ಟರಲ್ಲಿ ಅನಿರೀಕ್ಷಿತವಾಗಿ ಬಾಗಿಲುಕೋಟೆಯಿಂದ ಮ್ಯಾನೇಜರ್ ಶ್ರೀ ಬಳ್ಳಾರಿ ಬಸಪ್ಪನವರು ಹಣ್ಣು-ಕಾಯಿಪಲ್ಲೆಯ ಬುಟ್ಟಿಯನ್ನು ತೆಗೆದುಕೊಂಡು ದರ್ಶನಕ್ಕೆ ಬಂದರು.

ಲಿಂಗವೇ ದರುಶನವು । ಲಿಂಗವೇ ಪರುಶನವು।
ಲಿಂಗ ಸಹ ಸರ್ವಸುಖಭೋಗವಾದವನು।
ಲಿಂಗ ಕಾಣಯ್ಯ ಸರ್ವಜ್ಞ॥

ಎಂಬ ಸರ್ವಜ್ಞಕವಿಯ ಮಾತು ಶ್ರೀಗಳವರ ಲಿಂಗಭೋಗೋಪಭೋಗಿ ದಿವ್ಯಜೀವನಕ್ಕೆ ಅನ್ವಯಿಸುತ್ತದೆ.

### ಶಿವಯೋಗಮಂದಿರದ ಅಭ್ಯುದಯ :

ಪರಮಪೂಜ್ಯ ಹಾನಗಲ್ಲ ಶ್ರೀ ಕುಮಾರ ಮಹಾಸ್ವಾಮಿಗಳು ಮತ್ತು ಹಾವೇರಿ ಶ್ರೀಗಳವರ ತಪಃಪ್ರಭಾವದ ಪರಿಣಾಮವಾಗಿ ಶ್ರೀ ಶಿವಯೋಗಮಂದಿರ ಸಂಸ್ಥೆಯ ಸ್ಥಾಪನೆಯಾಯಿತು. ಪ್ರಾರಂಭದಲ್ಲಿ ಏಳು ಜನ ಸಾಧಕರಿದ್ದರು. (೧. ವ್ಯಾಕರಣಾಳ ಸಿದ್ಧಲಿಂಗ ಪಟ್ಟಾಧ್ಯಕ್ಷರು; ೨. ಅಪ್ಪಯ್ಯದೇವರು; ೩. ಕಂಚಗಲ್ಲ ಬಿದರೆಯ ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು; ೪. ಮಹಾದೇವ ದೇಶಿಕರು (ಕುರುವತ್ತಿ ಶ್ರೀಗಳು); ೫. ಮಮದಾಪುರದ ಗುರುಸಿದ್ಧದೇವರು; ೬. ಬಸವಲಿಂಗದೇವರು, ನವಿಲುಗುಂದ ೭. ಶಿವಮೂರ್ತಿದೇವರು ಚರಂತಿಮಠ ಬಾಗಲಕೋಟ) ಹಾವೇರಿ ಶ್ರೀಗಳವರೇ ಇವರೆಲ್ಲರ ಯೋಗಕ್ಷೇಮವನ್ನು ವಹಿಸಿದ್ದರು. ನಿಬಿಡವಾದ ಕಾಡಿನಲ್ಲಿ ಕಲ್ಲು-ಮುಳ್ಳುಗಳನ್ನು ತೆಗೆದು ಪರ್ಣಕುಟೀರಗಳನ್ನು ನಿರ್ಮಿಸಿ ಸಾಧಕರಿಗೆ ಯಾವ ತೆರನಾದ ತೊಂದರೆಯೂ ಆಗದಂತೆ ನೋಡಿಕೊಳ್ಳುತ್ತಿದ್ದರು. ಹಾನಗಲ್ಲ ಶ್ರೀಗಳವರು ತಂದೆಯಂತೆ ನಾಡಿನ ಮೂಲೆಮೂಲೆಯಲ್ಲಿ ಸಂಚರಿಸಿ ಧರ್ಮಜಾಗೃತಿಯೊಂದಿಗೆ ಮಂದಿರಕ್ಕಾಗಿ ಭಿಕ್ಷೆಯನ್ನು ಮಾಡಿದರು.

ಹಾವೇರಿ ಶ್ರೀಗಳವರು ತಾಯಿಯಂತೆ ಪ್ರೀತಿಯಿಂದ ಮಂದಿರದ ವಟುಗಳನ್ನು ಸಾಧಕರನ್ನು ಸಲಹಿದರು; ಮೊದಮೊದಲು ಮಂದಿರದಲ್ಲಿ ಕಟ್ಟಡಗಳಿಗಾಗಿ ಗುಡ್ಡದಿಂದ ಕಲ್ಲು-ಕಟ್ಟಿಗೆಗಳನ್ನು ತಾವೇ ಸ್ವತಃ ಸಾಧಕರೊಂದಿಗೆ ಹೊತ್ತು ತಂದರು. ಗ್ರಂಥ ಸಂಗ್ರಹ, ಕೀರ್ತನಕಾರರು ಮತ್ತು ಗವಾಯಿಗಳ ಶಿಕ್ಷಣ ಮುಂತಾಗಿ ಎಲ್ಲ ವ್ಯವಸ್ಥೆಯನ್ನು ಮಾಡಿದರು; ತಂದೆ ತಾಯಂದಿರನ್ನು ಅಗಲಿದ ಚಿಕ್ಕ ಚಿಕ್ಕ ವಟುಗಳ ಮನವು ಮನೆಯತ್ತ ಹರಿಯದೆ, ಓದು ಬರೆಹ ಮತ್ತು ಯೋಗಸಾಧನೆಯಲ್ಲಿ ಹತ್ತುವಂತೆ ತಕ್ಕ ಏರ್ಪಾಟು ಮಾಡಿದರು. ಸಾಧಕರು ಹಿತ-ಮಿತ-ಸಾತ್ವಿಕಾಹಾರ, ವಿಹಾರದೊಂದಿಗೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿಯೆಂಬ ಅಷ್ಟಾಂಗಯೋಗದ ಸಾಧನೆಯೊಂದಿಗೆ ದೃಷ್ಟಿಯೋಗವನ್ನು ಸಾಧಿಸಿ ಶಿವಯೋಗದಲ್ಲಿ ಪರಿಣತರಾಗುವಂತೆ ಶ್ರೀಗಳವರು ಯೋಜಿಸಿದರು. ಶ್ರೀಗಳವರ ಪ್ರಯತ್ನಗಳಿಂದಾಗಿ ಮಂದಿರವು ಪ್ರಶಾಂತವಾದ ಆಶ್ರಮವಾಗಿ, ಆದರ್ಶ ಧಾರ್ಮಿಕ ವಿದ್ಯಾಕೇಂದ್ರವಾಗಿ ರೂಪುಗೊಂಡಿತು. ಶ್ರೀಗಳವರ ಕಾರ್ಯಕ್ಷಮತೆಯನ್ನು ಕಂಡೇ ಹಾನಗಲ್ಲ ಪೂಜ್ಯರು ಇವರನ್ನು ಆಜೀವ ಅಧ್ಯಕ್ಷರನ್ನಾಗಿ ಮಾಡಿದ್ದರು.೧ ಹಾನಗಲ್ಲ ಶ್ರೀಗಳವರು ಲಿಂಗೈಕ್ಯರಾದ ಮೇಲೆ ಶ್ರೀಗಳವರು ಸ್ವತಃ ಭಿಕ್ಷೆ ಮಾಡಿ ಶಿವಯೋಗಮಂದಿರದ ಸರ್ವತೋಮುಖ ಅಭಿವೃದ್ಧಿಯನ್ನು ಲಿಂಗೈಕ್ಯರಾಗುವವರೆಗೂ ಸಾಧಿಸಿದರು.

**ವಟುವಾತ್ಸಲ್ಯ :**

ಶ್ರೀಗಳವರದು ಮಾತೃಹೃದಯ. ಮಂದಿರದ ವಟುಗಳನ್ನು ಸಾಧಕರನ್ನು ಬಹುಪ್ರೀತಿಯಿಂದ ಸಾಕಿ ಸಲುಹಿದರು. ವಟುಗಳ ಸಾಧಕರ ಶಾರೀರಿಕ ಪೋಷಣೆಯೊಂದಿಗೆ ಅವರ ಬೌದ್ಧಿಕ ಮತ್ತು ಅಧ್ಯಾತ್ಮ ವಿಕಾಸಕ್ಕೂ ಅವರು ಕಾರಣರಾದರು. ತಪ್ಪಿದಾಗ ಒಮ್ಮೊಮ್ಮೆ ಸಿಟ್ಟು ಮಾಡಿದರೂ, ಅವರ ಸ್ವಭಾವ 'ಕುಸುಮಾದಪಿ ಮೃದು'ವಾಗಿತ್ತು. 'ಉಷ್ಣತ್ವಮಗ್ನ್ಯಾತಪ ಸಂಪ್ರಯೋಗಾತ್ ಶೈತ್ಯಂ ಹಿ ಯತ್ ಸಾ ಪ್ರಕೃತಿರ್ಜಲಸ್ಯ' ಎಂದು ಮಹಾಕವಿ ಕಾಳಿದಾಸನು ಹೇಳುವಂತೆ ಶ್ರೀಗಳವರ ಸ್ವಭಾವ, ಬೆಂಕಿ-ಬಿಸಿಲುಗಳ ಸಂಪರ್ಕದಿಂದ ನೀರು ಕೆಲವು ಕ್ಷಣ ಕಾದರೂ ಅದು ಆರಿ ತನ್ನ ಸಹಜ ಗುಣದಂತೆ ತಣ್ಣಗಾಗುವ ಹಾಗೆ ದಯಾರ್ದ್ರವಾಗಿದ್ದಿತು. ಸಾಧಕರಿಗೆ ತಮ್ಮ ಕಟು ಅನುಭವಗಳನ್ನು ವಿವರಿಸಿ, ಹೇಗೆ ಇಂದ್ರಿಯನಿಗ್ರಹವನ್ನು ಸಾಧಿಸಬೇಕು, ಶಿವಯೋಗಾನುಷ್ಠಾನವನ್ನು ಮಾಡಬೇಕೆನ್ನುವುದನ್ನು ಹೃದಯಕ್ಕೆ ತಾಕುವಂತೆ ಆತ್ಮೀಯತೆಯಿಂದ ತಿಳಿಸಿ ಹೇಳುತ್ತಿದ್ದರು. ಅದೆಷ್ಟೋ ಶಿವಯೋಗ ಸಾಧಕರು ಶ್ರೀಗಳವರಿಂದ ಸ್ಫೂರ್ತಿ ಪಡೆದು ಶಿವಯೋಗದ ಸಾಧನೆಯಲ್ಲಿ ತೊಡಗಿ ಸಿದ್ಧಿ ಪಡೆದರು.

**ಉಭಯ ಶ್ರೀಗಳವರ ಪರಸ್ಪರ ಪ್ರೇಮಭಾವ :**

ಶ್ರೀಗಳವರಲ್ಲಿ ಹಾನಗಲ್ಲ ಶ್ರೀಗಳವರ ಬಗೆಗೆ ಅಪಾರವಾದ ಪ್ರೀತಿ ವಿಶ್ವಾಸಗಳಿದ್ದವು. ಉಭಯ ಶ್ರೀಗಳವರು 'ಪರಸ್ಪರಂ ಭಾವಯಂತಃ' ಪರಮ ಶ್ರೇಯಸ್ಸನ್ನು ಪಡೆದವರು. ಹಾನಗಲ್ಲ ಶ್ರೀಗಳವರೂ ಹಾವೇರಿ ಶ್ರೀಗಳವರ ಇಚ್ಛೆಗೆ ತಪಸ್ಸಿಗೆ ಯಾವ ಆತಂಕವೂ ಬಾರದಂತೆ ವ್ಯವಹರಿಸುತ್ತಿದ್ದರು; ಯಾವ ಕಾರ್ಯಕ್ಕೂ ಹಾವೇರಿ ಶ್ರೀಗಳವರ ಅನುಮತಿಯಿಲ್ಲದೆ ಕೈಹಾಕುತ್ತಿರಲಿಲ್ಲ. ಉಭಯ ಶ್ರೀಗಳವರು ಶಿವಯೋಗಮಂದಿರ ಪುರುಷನ ಎರಡು ಕಣ್ಣುಗಳಂತೆ ಅಗಲದೆ ಇದ್ದು ಸಮಾಜದ ಆಗು-ಹೋಗುಗಳನ್ನು ನಿರುಕಿಸಿ ಉಪಾಯಗಳನ್ನು ಕಂಡು ಹಿಡಿದರು. ಸಾಧಕರ ಅಧಿಕಾರ-ಅನುಗ್ರಹ ಕಾರ್ಯಗಳನ್ನು ಹಾನಗಲ್ಲ ಶ್ರೀಗಳವರು ಹಾವೇರಿ ಶ್ರೀಗಳವರಿಗೇ ಒಪ್ಪಿಸಿ ಬಿಡುವರು. ನವಿಲುಗುಂದ ಶ್ರೀಗಳ ಮತ್ತು ಶ್ರೀ ಅಪ್ಪಯ್ಯ ಸ್ವಾಮಿಗಳ ಅನುಗ್ರಹ ಕಾರ್ಯ ಹಾವೇರಿ ಶ್ರೀಗಳವರಿಂದ ಹಾನಗಲ್ಲ ಶ್ರೀಗಳವರ ಪ್ರೇರಣೆಯಿಂದ ನೆರವೇರಿತು. ಹಾನಗಲ್ಲ ಶ್ರೀಗಳವರು ಅವಿರಾಮ ಸಮಾಜ ಸೇವೆಯನ್ನು ಮಾಡಿ ಬಳಲಿದ್ದರು. ಮುದೇನೂರಿನಿಂದ ಕಾಯಿಲೆಯಾಗಿ ಶ್ರೀಗಳವರು ಹಾವೇರಿಗೆ ದಯಮಾಡಿಸಿದರು. ಆಗ ಹಾವೇರಿ ಶ್ರೀಗಳವರು ಶ್ರೀಗಳವರ ಶುಶ್ರೂಷೆಯನ್ನು ಬಹುವಾಗಿ ನಿರ್ವಹಿಸಿದರು; ಸಮಾಜದ ಉದ್ಧಾರಕ ಮಹಾವಿಭೂತಿಯು ಇನ್ನು ಅರಕಳಿಯಾಗಿ ಉಳಿದ ಮಹತ್ಕಾರ್ಯಗಳ ಸಂಪೂರ್ತಿಗಾಗಿ ಉಳಿಯಬೇಕೆಂದು ಬಗೆದು ಶ್ರೀಗಳವರು ಸರ್ವಪ್ರಯತ್ನಗಳನ್ನು ಮಾಡಿದರು; ಎಲ್ಲ ಸಾತ್ವಿಕ ಔಷಧೋಪಚಾರಗಳನ್ನು ಮಾಡಿಸಿದರು. ಆದರೆ ಶ್ರೀಗಳವರ ಪ್ರಕೃತಿ ಗುಣಮುಖವಾಗಲಿಲ್ಲ. ಹಾನಗಲ್ಲ ಶ್ರೀಗಳವರಿಗೆ ತಮ್ಮ ದೇಹಾಲಸ್ಯದ ಯೋಚನೆಯಿರಲಿಲ್ಲ. ಸಮಾಜದ ಉದ್ಧಾರವಾಗುವ ಬಗೆಗೆ, ಸಮಾಜದಲ್ಲಿ ಪರಸ್ಪರ ತಿಳಿವಳಿಕೆ ಐಕ್ಯಭಾವ ಮೂಡಿ ಬರುವ ಬಗೆಗೆ ಬಹು ಯೋಚನೆಯಲ್ಲಿದ್ದರು; ಆಗ ಹಾವೇರಿ ಶ್ರೀಗಳವರು ಸಾಧ್ಯವಿದ್ದ ಮಟ್ಟಿಗೂ ಅವರ ಮಹಾಕಾರ್ಯಗಳನ್ನು ಕೈಗೂಡಿಸಲು ಪ್ರಯತ್ನಿಸುವುದಾಗಿಯೂ ಶಿವಯೋಗಮಂದಿರದ ಭಾರವನ್ನು ನಿರ್ವಹಿಸುವುದಾಗಿಯೂ ಭರವಸೆಯಿತ್ತು ಹಾನಗಲ್ಲ ಶ್ರೀಗಳವರ ಕೊನೆಯ ಇಚ್ಛೆಯಂತೆ ಅವರನ್ನು ಶಿವಯೋಗಮಂದಿರಕ್ಕೆ ಕಾರಿನಲ್ಲಿ ಕರೆತಂದರು; ಶ್ರೀಗಳವರ ಶೀಲಾಚರಣೆಗೆ ಸ್ವಲ್ಪವೂ ಚ್ಯುತಿ ಬಾರದಂತೆ ಅಂತ್ಯವಿಧಿಗಳನ್ನು ಮಾಡಿಸಿದರು; ಶ್ರೀಗಳವರು ಲಿಂಗೈಕ್ಯರಾದುದಕ್ಕೆ ಶರೀರರೂಪದಿಂದ ಅಗಲಿದುದಕ್ಕೆ ಸಮಾಧಿಯ ಗುದ್ದಲಿಯನ್ನು ಎತ್ತಿದಾಗ ನನ್ನ ಬಲಗೈ ಹೋಯಿತೆಂದು ಬಹುವಾಗಿ ಪರಿತಪಿಸಿದರು; ಆದರೂ ಧೈರ್ಯ ತಂದುಕೊಂಡು ಮಂದಿರದ ಅಭ್ಯುದಯವನ್ನು ತನ್ಮೂಲಕ ಸಮಾಜದ ಹಿತವನ್ನು ಮಾಡಿ ಶ್ರೀಗಳವರ ಧ್ಯೇಯಗಳನ್ನು ಸಾಧಿಸಲು ಪ್ರಯತ್ನಿಸಿದರು.

**ಗುರುನಿಷ್ಠೆ :**

ಶ್ರೀಗಳವರು ಅಥಣಿ ಶೆಟ್ಟರಮಠದಿಂದಲೇ ಉದ್ಧಾರವಾದೆನೆಂಬ ಪವಿತ್ರಭಾವನೆಯಿಂದ ಮರುಳಸಿದ್ಧ ಶಿವಯೋಗಿ ಗಳವರಲ್ಲಿ ಬಹುಭಕ್ತಿಯುಳ್ಳವರಾಗಿದ್ದರು. ಅದರಿಂದ ಆಗಾಗ ಅಥಣಿಗೆ ದಯಮಾಡಿಸಿ ಶ್ರೀ ಮರುಳಸಿದ್ಧೇಶ್ವರ ಗದ್ದುಗೆಯ ಒಳಗೆ ಹೋಗಿ ತಮ್ಮ ಮನದಳಲನ್ನು ಒಪ್ಪಿಸಿ ಬರುತ್ತಿದ್ದರು. ಒಮ್ಮೊಮ್ಮೆ ಅಲ್ಲಿಯೇ ಮನಬೆರಸಿ ಗುರುಸ್ತೋತ್ರ ಮಾಡುತ್ತ ಕುಳಿತುಬಿಡುವರು. ಆ ಮಠದ ಅಭಿವೃದ್ಧಿಯ ಬಗೆಗೆ ಬಹಳ ಆಸ್ಥೆ ವಹಿಸುತ್ತಿದ್ದರು. ಆ ಮಠದ ವಾತಾವರಣ, ನೀರು ಶ್ರೀಗಳವರ ಪ್ರಕೃತಿಗೆ ಅನುಕೂಲವಾಗಿದ್ದವು; ತಿಂಗಳುಗಟ್ಟಲೆ ಅಲ್ಲಿಯೇ ಪೂಜಾಲೋಲರಾಗಿ ಉಳಿದು ಬಿಡುವರು. ೧೯೪೬ರಲ್ಲಿ ಲಿಂಗೈಕ್ಯರಾಗುವ ಮುನ್ನ ಶೆಟ್ಟರಮಠದಲ್ಲಿ ತಮ್ಮ ಶಿಷ್ಯರಾದ ಮುಧೋಳದ ಶ್ರೀ ನಿ.ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರನ್ನು ಕರೆಯಿಸಿ, ಅವರಿಂದ ಆರು ತಿಂಗಳವರೆಗೆ 'ಪ್ರಭುಲಿಂಗಲೀಲೆ'ಯ ಪುರಾಣವನ್ನು ಹೇಳಿಸಿದರು.

ಅನುಗ್ರಹ ಗುರುಗಳಾದ ಬಿದರಿ ಕುಮಾರ ಶಿವಯೋಗಿಗಳವರಲ್ಲಿ ಶ್ರೀಗಳವರು ಅಪಾರ ಭಕ್ತಿ-ವಿಶ್ವಾಸಗಳನ್ನಿಟ್ಟಿದ್ದರು. ಗುರುಗಳು ಲಿಂಗೈಕ್ಯರಾದ ಮೇಲೆ ಪ್ರತಿವರ್ಷವೂ ತಪ್ಪದೆ ಬಿದರಿಗೆ ದಯಮಾಡಿಸಿ ಮಠದ ಆಗು-ಹೋಗುಗಳನ್ನೆಲ್ಲ ನೋಡುತ್ತಿದ್ದರು. ೧೯೨೧ರಲ್ಲಿ ಗುರುಗಳ ಕೃಪಾಪಾತ್ರರಾದ ಶ್ರೀ ಅಪ್ಪಯ್ಯದೇವರಿಗೆ ಅನುಗ್ರಹ ಅಧಿಕಾರಗಳನ್ನು ದಯಪಾಲಿಸಿದರು. ಒಡಕು-ಹೊಳೆ (ನವಿಲುತೀರ್ಥ)ಯಲ್ಲಿ ಅಪ್ಪಯ್ಯಸ್ವಾಮಿಗಳವರು ಅನುಷ್ಠಾನಕ್ಕೆ ಕುಳಿತಾಗ ಪದೇ ಪದೇ ಬಂದು ಅವರ ಶಿವಯೋಗಸಾಧನೆಯ ಬಗೆಗೆ ಮಾರ್ಗದರ್ಶನ ನೀಡುತ್ತಿದ್ದರು. ಆಕಾಲದಲ್ಲಿಯೇ ಅವರು ಲಿಂಗೈಕ್ಯರಾಗಲು ಅವರ ಸ್ಥಾನದಲ್ಲಿ ತಮ್ಮ ಸೇವೆಯನ್ನು ಬಹುವಾಗಿ ಮಾಡಿದ ನಮಗೆ (ಶ್ರೀ ಮಹಾಲಿಂಗದೇವರಿಗೆ) ೧೯೪೬ ರಲ್ಲಿ ಸವದತ್ತಿ ಬಿದರಿ ಮಠಗಳ ಉತ್ತರಾಧಿಕಾರವನ್ನು ವಹಿಸಿಕೊಟ್ಟು ಗುರುಪೀಠದ ಸತ್ಪರಂಪರೆಯನ್ನು ಉಳಿಸಿದರು.

**ಜಂಗಮ ಪ್ರೇಮ :**

ಲಿಂಗಾಯತ ಸಿದ್ಧಾಂತದಲ್ಲಿ ಜಂಗಮಕ್ಕೆ ಬಹು ಹೆಚ್ಚಿನ ಮಹತ್ವವಿದೆ. ಪರಶಿವನು ಗುರು-ಲಿಂಗ-ಜಂಗಮ ರೂಪದಲ್ಲಿ ಭಕ್ತನ ಭಕ್ತಿಯನ್ನು ಕೈಕೊಳ್ಳಲು ಸಾಕಾರನಾಗಿದ್ದಾನೆ. ವೀರಶೈವನಿಗೆ ಇವು ಮೂರು ಆರಾಧ್ಯ ದೇವತೆಗಳು. ವೀರಶೈವನು ಗುರುವಿನ ಸೇವೆಯನ್ನು ತನು ಮುಟ್ಟಿಮಾಡಬೇಕು, ಮನಮುಟ್ಟಿ ಲಿಂಗವನ್ನು ಪೂಜಿಸಬೇಕು. ಜಂಗಮಕ್ಕೆ ಧನವನ್ನು ಅರ್ಪಿಸಬೇಕು. ಹೀಗೆ ತ್ರಿಕರಣಪೂರ್ವಕವಾಗಿ ಗುರು-ಲಿಂಗ-ಜಂಗಮರ ಆರಾಧನೆಯನ್ನು ಮಾಡಬೇಕೆಂದು ಹೇಳಿದೆ. ಜಂಗಮಕ್ಕೆ ಬಹು ವ್ಯಾಪಕವಾದ ಅರ್ಥವಿದೆ. 'ಜಂ ಗಚ್ಛತೀತಿ ಜಂಗಮಃ' ಬ್ರಹ್ಮವನ್ನು ಹೊಂದುವವನು ಬ್ರಹ್ಮಜ್ಞಾನವನ್ನು ತಿಳಿಯುವವನೇ ಜಂಗಮನು. ಗುರುಶಿಷ್ಯರ ಇಷ್ಟಪ್ರಾಣಭಾವಗಳಲ್ಲಿ ತಾದಾತ್ಮ್ಯದಿಂದ ಕೂಡಿರುವ ಲಿಂಗದ ಮಹತ್ವವನ್ನು ತಿಳಿಯುವುದರಿಂದ ಜಗವೆಲ್ಲ ಶಿವಶಕ್ತಿರೂಪವಾದುದೆಂಬ ಅರಿವನ್ನು ಸ್ವಾನುಭಾವದಿಂದ ಪಡೆದಿರುವದರಿಂದ ಜಂಗಮನು ಅಧಿಕನು, ಶ್ರೇಷ್ಠ ಶಿವಜ್ಞಾನಿಯು. ತನ್ನ ಜ್ಞಾನಕ್ರಿಯಾಶಕ್ತಿಗಳಿಂದ, ಜಗತ್ತನ್ನು ಬೆಳಗತಕ್ಕ ಪರಶಿವನಿಂದ ತಾನು ಬೇರೆ ಅಲ್ಲವೆಂಬ ದೃಢವಾದ ನಂಬುಗೆಯಿಂದ ಸ್ವಸ್ವರೂಪವನ್ನು ತಿಳಿದುಕೊಂಡಿರುವವರು ಜಂಗಮರು; ಆಣವಾದಿ ಮಲತ್ರಯ ದೋಷವನ್ನು ತೊಳೆದು ನಿರ್ಮಲಾತ್ಮರಾಗಿ ಲಿಂಗಾಂಗ ಸಾಮರಸ್ಯರೂಪ ಶಿವಯೋಗದಿಂದ ಜಗವೆಲ್ಲವನ್ನು ಶಿವಮಯವೆಂದು ಭಾವಿಸಿ ಆಚರಿಸುವ ಶಿವಯೋಗಿಗಳೇ ಜಂಗಮರು; ಘೋರವಾದ ಸಂಸಾರವೆಂಬ ಕತ್ತಲೆಯನ್ನು ಕಳೆಯುವ ಶಿವಜ್ಞಾನವೆಂಬ ಬೆಳಗನ್ನು ಪಡೆದ ಜಂಗಮರು ಶಿವಯೋಗಿಗಳೇ ಆಗಿರುತ್ತಾರೆ. 'ಅಂತರಂಗದ ಸುಜ್ಞಾನವೇ ಜಂಗಮ' 'ಅಚೇತನ ಲಿಂಗಕ್ಕೆ ಚೈತನ್ಯ ಜಂಗಮ ಸಾಹಿತ್ಯ ನೋಡಾ' ಎಂದು ಚೆನ್ನಬಸವಣ್ಣನವರು ಹೇಳಿದ್ದಾರೆ. ಅಂತಹ ಜಂಗಮಮೂರ್ತಿಯಲ್ಲಿ ಶ್ರೀಗಳವರಿಗೆ ಅಪಾರವಾದ ಭಕ್ತಿ. ಪೂಜ್ಯರು ಜಂಗಮದಲ್ಲಿ 'ಹಿರಿಯ ಕಿರಿಯ' ಎಂಬ ಭೇದಭಾವನೆಯನ್ನು ಮಾಡದೆ, ವಯೋಮಾನದಲ್ಲಿ ಕಿರಿಯರಾದ ವಿರಕ್ತ ಜಂಗಮ ಮೂರ್ತಿಗಳನ್ನು ಸಹ ಗದ್ದುಗೆಯ ಮೇಲೆ ಕೂಡ್ರಿಸಿ ಭಕ್ತಿಯಿಂದ ಪಡೆದುಕೊಳ್ಳುತ್ತಿದ್ದರು. ಮೂರ್ತಿಗಳು ಸಂಕೋಚ ಮಾಡಿದರೆ 'ಎಂದು ನೀವು ಜಂಗಮತ್ವವನ್ನು ಪಡೆಯುವುದು? ನೀವು ಹಿರಿಯರು ಬನ್ನಿ ಪಾದ ಕೊಡಿ' ಎಂದು ಅವರಲ್ಲಿ ಚೈತನ್ಯವನ್ನು ತುಂಬುವರು. ಒಂದು ಸಲ ಶ್ರಾವಣಮಾಸದಲ್ಲಿ ಶಿವಯೋಗಮಂದಿರದಲ್ಲಿ ಬಿಡಾರವಿದ್ದಾಗ, ಲಕ್ಷ ಬಿಲ್ವಪತ್ರಗಳಿಂದ ಜಂಗಮಮೂರ್ತಿಯ ಪಾದಾರ್ಚನೆಯನ್ನು ಮಾಡಬೇಕೆಂದು ಇಚ್ಛಿಸಿದರು. ಶಿರ್ಸಿಯ ಬಣ್ಣದ ಮಠದ ಶ್ರೀ ನಿ.ಪ್ರ. ಗುರುಸಿದ್ಧ ಸ್ವಾಮಿಗಳವರನ್ನು ಸಿಂಗರಿಸಿ ಮಂಟಪದಲ್ಲಿ ಉಚ್ಚಾಸನದಲ್ಲಿ ಮುಹೂರ್ತ ಮಾಡಿಸಿ ಶ್ರೀಗಳವರೇ ಸ್ವತಃ ಸಹಸ್ರ ಶಿವನಾಮ ಪಠನದೊಂದಿಗೆ ಪಾದಪೂಜೆಯನ್ನು ಮಾಡಿ ಪಾದೋದಕ ಪ್ರಸಾದಗಳನ್ನು ಪಡೆದುಕೊಂಡರು. ಈ ಪ್ರಸಂಗದಲ್ಲಿ ಶ್ರೀಗಳವರು ನಮಗೆಲ್ಲ ಸಾಧಕರಿಗೆ ಚೆನ್ನಬಸವಣ್ಣನವರ ಈ ವಚನವನ್ನು ನೆನಪಿಗೆ ತಂದು ಕೊಟ್ಟದುಂಟು :

ಭೂತಪ್ರಾಣೆಯ ಕಳೆದು, ಲಿಂಗಪ್ರಾಣೆಯ ಮಾಡಿದ ಬಳಿಕ
ಶಿಷ್ಯನೇ ಜಂಗಮವಾಗಿ ಗುರುವಿನ ಮಠಕ್ಕೆ ನಡೆದು ಬಂದರೆ

ಗುರುವೆಂಬ ಹಮ್ಮಿಲ್ಲದೆ, ಪರಮಗುರುವೆಂದು
ಪಾದಾರ್ಚನೆಯಂ ಮಾಡುವುದು ಆಚಾರ.
ನಾಚಿ ಮಾಡದಿರ್ದಡೆ ನಾಯಕನರಕ
ಆ ಜಂಗಮ ಶಂಕೆಯಿಲ್ಲದೆ ಪಾದಾರ್ಚನೆಯ
ಮಾಡಿಸಿಕೊಂಬುವುದು ಕರ್ತವ್ಯ
ಶಂಕೆಗೊಂಡರೆ ಪಂಚಮಹಾಪಾತಕ.
ಹೀಗಲ್ಲದೆ ಗುರುವೆಂಬ ಹಮ್ಮು ಶಿಷ್ಯನೆಂಬ ಶಂಕೆಯುಳ್ಳನಕ್ಕರ
ರೌರವ ನರಕದಲ್ಲಿಪ್ಪುವ ಕೂಡಲಚೆನ್ನಸಂಗಮದೇವಯ್ಯ

ಶ್ರೀಗಳವರು ಜಂಗಮದ ವಿಷಯದಲ್ಲಿ ಯಾವ ಸಂಕುಚಿತ ಮನೋಭಾವನೆಯನ್ನು ಎಂದೂ ತಾಳಿದವರಲ್ಲ. ಒಮ್ಮೆ ಚಿತ್ರದುರ್ಗದ ಲಿಂ. ಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮಹಾಸ್ವಾಮಿಗಳವರನ್ನು ಹಾವೇರಿಯಲ್ಲಿ ತಮ್ಮ ಮಠಕ್ಕೆ ಉತ್ಸವದಿಂದ ಬಿಜಯಂಗೈಸಿಕೊಂಡು ಸ್ವತಃ ಪೂಜಿಸಿ ತೃಪ್ತಿಪಡಿಸಿದರು. ಶ್ರೀಗಳವರು ಸಮಯಭೇದವನ್ನು ಎಂದೂ ಗಣನೆಗೆ ತಂದವರಲ್ಲ.

ಒಮ್ಮೆ ಗದುಗಿನ ಆನಂದಾಶ್ರಮದಲ್ಲಿ ಶ್ರೀಗಳವರಿಗೆ ಜಾಡ್ಯವಾಗಿತ್ತು. ಆಗ ಅಲ್ಲಿಯೇ ಇದ್ದ ಅಮೀನಗಡ ಗಚ್ಚಿನಮಠದ ಪ್ರಭು ಸ್ವಾಮಿಗಳವರನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿ ಸ್ವತಃ ತಾವೇ ಪಾದಪೂಜೆ ಮಾಡಿ ಪಾದೋದಕ ಪ್ರಸಾದಗಳನ್ನು ಪಡೆದರು. ಅಮೀನಗಡದ ಶ್ರೀಗಳವರು ವಯದಲ್ಲಿ ಕಿರಿಯರಾದರೂ ಶ್ರೀಗಳವರು ಅದನ್ನು ಗಮನಿಸಲಿಲ್ಲ. 'ಪಾದೋದಕ ಪ್ರಸಾದ ಕೊಟ್ಟು ನನ್ನನ್ನು ಉದ್ಧರಿಸಿದೆಯಪ್ಪಾ' ಎಂದು ಶ್ರೀಗಳವರು ಅಮೀನಗಡದ ಶ್ರೀಗಳವರನ್ನು ಕುರಿತು ಆಡಿದಾಗ ನಮಗೆ ರೋಮಾಂಚನವೆನಿಸಿತು. ಪೂಜ್ಯರದು ಎಂತಹ ವಿಶಾಲಭಾವನೆ, ಎಂತಹ ಉಚ್ಚಮಟ್ಟದ ಸಮರಸಭಾವ! ಜಡೆಯ ಶ್ರೀಗಳವರನ್ನು ಅಂತ್ಯಕಾಲದವರೆಗೂ ಕ್ರಿಯಾಮೂರ್ತಿಗಳನ್ನಾಗಿ ಮಾಡಿಕೊಂಡಿದ್ದರು. ಜಂಗಮವೆಂದರೆ ಸಾಕ್ಷಾತ್ ಶಿವನೆಂದೇ ಭಾವಿಸುತ್ತಿದ್ದ ಮಹಿಮರವರು.

ಜಂಗಮರಿಗೇನಾದರೂ ವಿಪತ್ತು ಬಂದರೆ ಶ್ರೀಗಳವರು ಅದನ್ನು ನಿವಾರಿಸಲು ಪ್ರಯತ್ನಿಸುತ್ತಿದ್ದರು. ಸವದತ್ತಿಯ ಹೊಸಮಠದ ಲಿಂ. ಪಂಚಾಕ್ಷರಿ ಸ್ವಾಮಿಗಳು ಮಾಡಿದ ಸಾವುಕಾರ ಶಂಕರರಾಯರ ತೋಟದ ಲಾವಣಿ ಹಣದ ಬಗ್ಗೆ ರಾಯರು ಹೊಸಮಠದ ಹಾಲಭಾವಿ ತೋಟವನ್ನು ಲಿಲಾವಿನಲ್ಲಿ ತೆಗೆದುಕೊಂಡರು. ಮುಂದಿನ ಅಧಿಕಾರಿಗಳಾದ ಶ್ರೀ ಗಂಗಾಧರ ದೇವರು ತಮ್ಮ ಮಠದ ಆಸ್ತಿಯು ಈ ರೀತಿಯಾಗಿ ಕೈಬಿಟ್ಟು ಹೋದ ಸ್ಥಿತಿಯನ್ನು ಶ್ರೀಗಳವರಲ್ಲಿ ಬಿನ್ನಯಿಸಿಕೊಂಡರು. ಶ್ರೀಗಳವರು ಪದಕಿ ಸಾವುಕಾರರನ್ನು ಊರ ಮುಖಂಡರಾದ ಶ್ರೀ ಜಕಾತಿ ಬಸಪ್ಪನವರನ್ನೂ ಕರೆಯಿಸಿ ವಿಚಾರಿಸಿದರು. ಪದಕಿ ಸಾವುಕಾರರು ಮಠದ ತೋಟವನ್ನು ಉದಾರವಾಗಿ ಬಿಟ್ಟುಕೊಡುವುದಾಗಿ ಒಪ್ಪಿದರು. ಆದರೆ ಶ್ರೀಗಳವರು ಭಕ್ತರ ಹಾನಿಯು ಆಗಬಾರದು, ಮಠದ ಆಸ್ತಿಯೂ ಉಳಿಯಬೇಕು ಹೀಗೆ ಒಂದು ಉಪಾಯ ಮಾಡಿದರು. ಶ್ರೀ ಜಕಾತಿ ಬಸಪ್ಪನವರಿಗೆ ಹೇಳಿ ಕಲ್ಮಠದಿಂದ ಲಿಲಾವಿನ ಅರ್ಧ ಹಣ ಕೊಡಿಸಿ ಮಠದ ಆಸ್ತಿಯನ್ನು ಉಳಿಸಿಕೊಳ್ಳುವಂತೆ ಮಾಡಿದರು. ಯಾರಾದರೂ ಜಂಗಮರು ತಮ್ಮ ಆಶ್ರಮಕ್ಕೆ ತಕ್ಕಂತೆ ನಡೆಯದಿದ್ದರೆ ಅವರನ್ನು ಕರೆಯಿಸಿ ಒಳ್ಳೇ ಕನಿಕರದಿಂದ ಬುದ್ಧಿ ಹೇಳಿ ಸನ್ಮಾರ್ಗಕ್ಕೆ ತರುತ್ತಿದ್ದರು.

ಶ್ರೀಗಳವರು ಭಕ್ತರ ಮತ್ತು ಜಂಗಮರ ಮನವನ್ನು ನೋಯಿಸುತ್ತಿರಲಿಲ್ಲ. ಒಂದು ದಿನ ಸವದತ್ತಿಯ ಮುಕ್ಕಾಮಿನಲ್ಲಿ ಪೂಜೆಗಾಗಿ ಅರ್ಪಿತ ನಡೆದ ವೇಳೆಗೆ ಸರಿಯಾಗಿ ಗೊರವನಕೊಳ್ಳದ ಆಚಾರ ನಿಷ್ಠರಾದ ರಾಚಯ್ಯ ಮಾಸ್ತರರು ಭಕ್ತಿಯಿಂದ ಪಡಿಪದಾರ್ಥಗಳನ್ನು ಮಾಡಿಕೊಂಡು ನಾಲ್ಕು ಮೈಲು ನಡೆದು ಬಂದರು. ಶ್ರೀಗಳವರಿಗೆ ಸಾಷ್ಟಾಂಗವೆರಗಿ ನಿಂತರು. ಶ್ರೀಗಳವರು ತಂದ ಪ್ರಸಾದವನ್ನು ಎಡೆ ಮಾಡುವಂತೆ ಅಪ್ಪಣೆ ಮಾಡಿದರು. ಅವರು ತಂದ ಪ್ರಸಾದ ಲಿಂಗಕ್ಕೆ ನೈವೇದ್ಯವಾಗಿಲ್ಲವೆಂದ ಮೇಲೆ ಅದನ್ನು ಸ್ವೀಕರಿಸುವುದು ಹೇಗೆ ಎಂಬುದು ಅಲ್ಲಿಯೇ ಇದ್ದ ಪಂ. ಸೋಮನಾಥ ಶಾಸ್ತ್ರಿಗಳವರ ತರ್ಕವಾಗಿತ್ತು. ಶ್ರೀಗಳವರು ನಕ್ಕು 'ಶಾಸ್ತ್ರಿಗಳೆ, ಮಾಸ್ತರರು ಜಂಗಮತೃಪ್ತಿಯನ್ನು ಮಾಡಿಸಬೇಕೆಂದು ಸಂಕಲ್ಪ ಮಾಡಿದಾಗಲೇ ಅದು ಮಹಾಲಿಂಗಕ್ಕೆ ನೈವೇದ್ಯವಾದಂತೆ. ಬಿಸಿಲಿನಲ್ಲಿ ನಡೆದು ಬಂದ ಅವರ ಭಕ್ತಿಭಾವವನ್ನಾದರೂ ನೋಡಿರಿ. ಪಾಪ, ಜಂಗಮ ನೊಂದರೆ ಲಿಂಗಕ್ಕೆ ತೃಪ್ತಿಯಾಗುವುದೇ? ಸಮಯಕ್ಕೆ ಬಂದ ಭಕ್ತಿಯು ಶಿವನಿಗೆ ಸಲ್ಲುವುದು' ಎಂಬ ಅನುಭಾವದ ಸೊಲ್ಲನ್ನು ಕೇಳಿ ಶಾಸ್ತ್ರಿಗಳವರು ನಿರುತ್ತರವಾಗಿ ಬಿಟ್ಟರು.

## ಭಕ್ತ ವಾತ್ಸಲ್ಯ :

ಶ್ರೀಗಳವರ ದರ್ಶನಕ್ಕೆ ಅನೇಕ ಭಕ್ತರು ಬರುತ್ತಿದ್ದರು. ಬಂದವರ ಯೋಗಕ್ಷೇಮವನ್ನು ಕೇಳಿ ಅವರಿಗೆ ಬಂದಿರುವ ಕಷ್ಟಗಳ ಪರಿಹಾರವನ್ನು ಹೇಳುತ್ತಿದ್ದರು. ಅವರ ನುಡಿ, ಅವರ ಕರುಣಾಕಟಾಕ್ಷ, ಅವರ ಸ್ಪರ್ಶನ–ದರ್ಶನ ಮಾತ್ರದಿಂದಲೇ ಎಷ್ಟೋ ಜನರ ತಾಪತ್ರಯಗಳು ತೊಲಗುತ್ತಿದ್ದವು. ಯಾರಾದರೂ ಭಕ್ತರು ಆಕಸ್ಮಾತ್ತಾಗಿ ಬಹುದಿನಗಳ ಮೇಲೆ ಭೇಟಿಯಾದರೆ ಅವರ ಅಜ್ಜ–ಮುತ್ತಜ್ಜಂದಿರ

ಇಡಿಯ ಪರಿಚಯವನ್ನೇ ಹೇಳಿ ಬಿಡುವರು. ಕೇಡು ಬಗೆದವರಿಗೂ ಪ್ರೀತಿಯಿಂದ ಕರೆದು ಪ್ರಸಾದ ಕರುಣಿಸಿ ಕಳಿಸುವರು. 'ಉದಾರಚರಿತಾನಾಂ ತು ವಸುಧೈವ ಕುಟುಂಬಕಂ' ಎಂಬಂತೆ ಶ್ರೀಗಳವರು ಲೋಕೋತ್ತರ-ಚರಿತರು. ಅವರ ಹೃದಯ ಶುದ್ಧ ಹಾಲಿನಂತಹದು; ಅವರೊಬ್ಬ 'ಪತಿತ ಪಾವನ'ರಾದ ಮಹಾಸಂತರಾಗಿದ್ದರು.

**ಕಡೆಯ ನುಡಿ :**

ಒಟ್ಟಾರೆ, ಶ್ರೀಗಳವರು ಅಸಾಧಾರಣ ಶಕ್ತಿಯುಳ್ಳವರೂ ಪರಮವಿರಾಗಿಗಳೂ ಮಹಾವಿಭೂತಿಗಳೂ ಆಗಿದ್ದರು. ೧೯೩೭ ರಿಂದ ೧೯೪೫ರ ವರೆಗೆ ನನಗೆ ಪೂಜ್ಯರ ಸೇವೆಯನ್ನು ಮಾಡುವ ಭಾಗ್ಯ ದೊರಕಿತ್ತು. ಈ ಅವಧಿಯ ಸೇವೆಯಲ್ಲಿ ಅನೇಕ ಲೋಪದೋಷಗಳು ನನ್ನಿಂದ ಸಂಭವಿಸುವುದು ಸಹಜವಾಗಿತ್ತು. ಶ್ರೀಗಳವರು ತಪ್ಪಿಗೆ ಸಿಟ್ಟು ಮಾಡುವರು. ಒಂದೊಂದು ಸಲ ಕಪಾಳಮೋಜೆಯನ್ನು ಮಾಡಿದುದುಂಟು. ಮರುಕ್ಷಣದಲ್ಲಿಯೇ ಅವರ ಸಿಟ್ಟು ಇಳಿದು ಹೋಗುತ್ತಿತ್ತು. ಮಕ್ಕಳಂತೆ ಪ್ರೀತಿಯಿಂದ ಕರೆದು ಸಂತಯಿಸುವರು. ಅರವತ್ತು ಮೀರಿದ ವಯಸ್ಸು. ಆಗಾಗ ಶಾರೀರಿಕ ಬಾಧೆಗಳಿಂದಾಗಿ ಶ್ರೀಗಳವರ ಬಾಹ್ಯಕರ್ಮಗಳು ಅನಿಯತವಾಗುವವು. ಸೇವಕರಿಗೆ ಬೇಸರವನ್ನುಂಟು ಮಾಡುತ್ತಿದ್ದವು. ಆದರೆ ಅವರೆಂದೂ ಶಿವಪೂಜೆಯನ್ನು ಬಿಡಲಿಲ್ಲ. ಅವರು ಸ್ನಾನ ಮಾಡಿ ಲಿಂಗಪೂಜೆಗೆ ಕುಳಿತರೆ ತೀರಿತು. ಲೀಲಾಮಯವಾಗಿ ತನ್ಮಯರಾಗಿ ಭಾವಲಿಂಗಪೂಜೆಯ ಸಮಾಧಿಯಲ್ಲಿ ಗಂಟೆಗಟ್ಟಲೆ ಇದ್ದುಬಿಡುವರು. ಅವರ ಪೂಜಾನಂದವನ್ನು ಕಂಡ ಸೇವಕರೇ ಧನ್ಯರು. ೧೯೪೫ರಲ್ಲಿ ಪೂಜ್ಯರು ನನಗೆ ಸವದತ್ತಿ ಮಠದ ಅಧಿಕಾರವನ್ನು ದಯಪಾಲಿಸುತ್ತ 'ಇದು ಕಡಯ ಗುರುಸೇವೆ' ಎಂದು ಅಪ್ಪಣೆ ಕೊಡಿಸಿದರು. ಅಂತೆಯೇ ಅದೇ ವರ್ಷ ೧೯೪೬ರಲ್ಲಿ ಪುಷ್ಯ ಶು. ೧೦ ಸಾಯಂಕಾಲ ಹಾವೇರಿಯ ಮಠಕ್ಕೆ ತಾರು ಮಾಡಿಸಿ ನನ್ನನ್ನು ಕರೆಯಿಸಿದರು. ಪವಡಿಸಿದಲ್ಲಿ ಹತ್ತಿರ ಕರೆದು 'ಇನ್ನು ಲಿಂಗಯ್ಯನ ಅಪ್ಪಣೆಯಾಗಿದೆ. ನಿಮ್ಮನ್ನು ಗುರುವಿನ ಸ್ಥಾನಕ್ಕೆ ಮಾಡಿರುವೆವು. ಗುರುವಿನ ಮಹತ್ವವರಿತು ಗುರುಪೀಠದ ಗೌರವ ಉಳಿಸುವುದು ನಿಮ್ಮನ್ನು ಕೂಡಿದೆ' ಎಂದು ಅಪ್ಪಣೆ ಕೊಡಿಸಿದಾಗ ನನ್ನ ಹೃದಯ ತುಂಬಿ ಬಂದು ಕಣ್ಣಲಲಿ ಕೋಡಿಯಾಗಿ ಹರಿಯಹತ್ತಿತು. ನನ್ನಂತಹ ಅಲ್ಪನನ್ನು ಮೈದಡವಿ ಕೃಪೆ ಮಾಡಿ ಅನುಗ್ರಹಿಸಿದ ಕರುಣಾಳು ಗುರುವನ್ನು ಮರೆಯುವುದೆಂತು? ಕರುಣಾಕಟಾಕ್ಷದ ದಯಾಮೂರ್ತಿ ಇಂದಿಗೂ ನನ್ನ ಕಣ್ಣುಗಳ ಮುಂದೆ ಕಟ್ಟಿದಂತಿದೆ.

■■

---

೧. ಶ್ರೀಮನ್‌ನಿರಂಜನ ಹಾನಗಲ್ಲ ಕುಮಾರ ಮಹಾಸ್ವಾಮಿಗಳು ಶ್ರೀ ಮನ್ನಿರಂಜನ ಹಾವೇರಿ ಶಿವಬಸವ ಮಹಾಸ್ವಾಮಿಗಳವರ ಸಹಾಯದಿಂದ ಬಂದ ಭಿಕ್ಷ ಹಾಗೂ ಕಾಣಿಕಾ ರೂಪದಿಂದ ಕೂಡಿದ ಹಣದಿಂದ ಶಿವಯೋಗ ಹಾಗೂ ಶಿವಧರ್ಮದ ಪ್ರಸಾರವಾಗಬೇಕೆಂಬ ಉದಾತ್ತ ವಿಚಾರದಿಂದ ಈ ಸಂಸ್ಥೆಯನ್ನು ಸ್ಥಾಪಿಸಿರುತ್ತಾರೆ. ಅವರ ತಪಃಪ್ರಭಾವದಿಂದಲೂ ಅವರ ಮೇಲಿದ್ದ ದೃಢ ಭಕ್ತಿ ಮುಂತಾದವುಗಳಿಂದಲೂ ಈ ಸಂಸ್ಥೆಗಾಗಿ ಧಾರ್ಮಿಕ ಬುದ್ಧಿಯಿಂದ ಜನರು ಸಹಾಯ ಮಾಡಿರುತ್ತಾರೆ. ಈ ಸಂಸ್ಥೆಯ ಯಾವತ್ತು ಕಾರ್ಯಗಳು ಸುವ್ಯವಸ್ಥೆಯಿಂದಲೂ ಸುಸಂಘಟಿತ ರೀತಿಯಿಂದಲೂ ನಡೆಯಬೇಕೆಂಬ ವಿಚಾರದಿಂದ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಶ್ರೀ ಹಾವೇರಿ ಸ್ವಾಮಿಗಳವರ ಅನುಮತಿಯನ್ನು ಪಡೆದು ಒಂದು ಟ್ರಸ್ಟ್ ಕಮೀಟಿಯನ್ನು (ಬೋರ್ಡ ಆಫ್ ಟ್ರಸ್ಟೀಜ್) ನೇಮಿಸಿ ತಮ್ಮಲ್ಲಿದ್ದ ಯಾವತ್ತೂ ಹಕ್ಕು, ಅಧಿಕಾರಗಳನ್ನು ಸದರಿ ಬೋರ್ಡಿನ ಸ್ವಾಧೀನದಲ್ಲಿ ಕೊಟ್ಟ ಪ್ರಕಾರ ಆ ಬೋರ್ಡಿನ ಸ್ಥಾನದಲ್ಲಿದ್ದ ಈಗಿರುವ ಟ್ರಸ್ಟ ಕಮೀಟಿಯು ಈ ಸಂಸ್ಥೆಯ ಯಾವತ್ತೂ ವ್ಯವಸ್ಥೆಯನ್ನು ಮಾಡತಕ್ಕದ್ದು.

ಶ್ರೀ ಮನ್ನಿರಂಜನ ಹಾವೇರಿ ಶಿವಬಸವ ಮಹಾಸ್ವಾಮಿಗಳವರು ಟ್ರಸ್ಟ್ ಕಮೀಟಿಯ ಆಜೀವ ಅಧ್ಯಕ್ಷರಾಗಿರತಕ್ಕದ್ದು. ಅವರ ಪಶ್ಚಾತ್ ಅವರು ಈ ಸಂಸ್ಥೆಯ ಏಳಿಗೆಯ ಬಗ್ಗೆ ತ್ರಿಕರಣಪೂರ್ವಕವಾಗಿ ಪ್ರಯತ್ನಿಸತಕ್ಕ ಮತ್ತು ಆಶ್ರಮ ಧರ್ಮಕ್ಕನುಸಾರವಾಗಿ ನಡೆಯತಕ್ಕ ಧರ್ಮನಿಷ್ಠ ಹಾಗೂ ಆಚಾರ ಸಂಪನ್ನರಾದಂಥ ಶಿವಯೋಗಮಂದಿರದಲ್ಲಿ ಶಿಕ್ಷಣ ಪಡೆದು ಆಮರಣ ಶಿವಯೋಗಮಂದಿರದ ಸೇವೆ ಮಾಡತಕ್ಕಂಥವರಲ್ಲಿ ಯೋಗ್ಯರಾದ ಸ್ವಾಮಿಗಳನ್ನು ಅಧ್ಯಕ್ಷ ಸ್ಥಾನಕ್ಕೆ ಮೂರು ವರ್ಷಗಳ ವರೆಗೆ ನೇಮಿಸತಕ್ಕದ್ದು.' (ಶಿವಯೋಗಮಂದಿರ ಸಂಸ್ಥೆಯ ನಿಯಮಗಳು (೧೯೩೩)

# ಹಾಲಕೆರೆ ಶ್ರೀ ಅನ್ನದಾನ ಮಹಾಸ್ವಾಮಿಗಳು

• ಡಾ. ಬಿ. ಎ. ಶಿರೂರ

ಹನ್ನೆರಡನೆಯ ಶತಮಾನದ ಕಲ್ಯಾಣವೆಂಬ ಪಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು ಬಸವನೆಂಬ ಜ್ಯೋತಿಯ ಮುಟ್ಟಿಸಲು ಶಿವನ ಪ್ರಕಾಶವು ನಾಡಿನ ತುಂಬೆಲ್ಲ ತೊಳಗಿ ಬೆಳಗತೊಡಗಿತು. ಅದರ ಒಂದು ಮಹಾಬೆಳಗಿನ ರೂಪದ ಅಲ್ಲಮಪ್ರಭು ತನ್ನ ಮೂರುಸಾವಿರ ಶಿಷ್ಯರೊಂದಿಗೆ ಕರ್ನಾಟಕದ ತುಂಬ ಸಂಚರಿಸುತ್ತ ವಿಜಾಪುರ ಜಿಲ್ಲೆಯ ಚತ್ರಿಗಿ ಗ್ರಾಮಕ್ಕೆ ಬಂದು ಅಲ್ಲಿ ಕೆಲ ದಿನವಿದ್ದು ಭಕ್ತರನ್ನುದ್ಧರಿಸಿ ಹೊರಡಲು ಜನ ಆತನನ್ನು ಅಲ್ಲಿಯೆ ನಿಲ್ಲಲು ಒತ್ತಾಯಿಸಿದರು. ಆಗ ಆತ ತನ್ನ ಶಿಷ್ಯರಲ್ಲಿ ಒಬ್ಬನಾದ ಗುರು ಮಹಾಂತೇಶನಿಗೆ ಅಲ್ಲಿಯ ಚರಪಟ್ಟಾಧಿಕಾರವನ್ನಿತ್ತು ಅಲ್ಲಿಯ ಭಕ್ತರನ್ನುದ್ಧರಿಸುವಂತೆ ಹೇಳಿ ಮುಂದೆ ಹೋದನು. ಗುರುಮಹಾಂತೇಶ ಆ ಭಾಗದ ಧರ್ಮ ಜಾಗ್ರತಿಯ ಭಾರ ಹೊತ್ತು ಐದುನೂರು ವರುಷ ಬಾಳಿ, ತನ್ನ ಶಿಷ್ಯರಾದ ವಿಜಯ ಮಹಾಂತೇಶ, ಅನ್ನದಾನೀಶ, ಕೊಟ್ಟೂರೇಶರುಗಳಿಗೆ ಚರಪಟ್ಟಾಧಿಕಾರವನ್ನಿತ್ತು ಲೋಕೋದ್ಧಾರಕ್ಕಾಗಿ ಕಳಿಸಿಕೊಟ್ಟನು. ಇವರಲ್ಲಿ ಅನ್ನದಾನೀಶನು ಅತ್ತಿತ್ತ ಸಂಚರಿಸುತ್ತ ಕೊನೆಗೆ ಹಾಲಕೆರೆಗೆ ಬಂದು ನಿಂತನು. ಈತನೇ ಈ ಮಠದ ಮೂಲಪುರುಷನೆಂದೂ ಈತನಿಂದಲೆ ಈ ಮಠಕ್ಕೆ ''ಶ್ರೀ ಅನ್ನದಾನೀಶ್ವರ ಮಠ''ವೆಂಬ ಹೆಸರು ಬಂದಿತೆಂದೂ ಹೇಳಬಹುದು. ಈತನ ಕಾಲ ಸುಮಾರು ೧೬೫೦. ಹೀಗಾಗಿ ಈ ಮಠ ಚಿತ್ತರಗಿ ಪೀಠಪರಂಪರೆಗೆ ಸಂಬಂಧಿಸಿದುದು ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಸ್ವಾಮಿಗಳಿಗೆ ಹೇಳುವ ''ಚಿತ್ತರಗಿಯ ಶಿವಾನುಭವ ಚರ ಚಕ್ರವರ್ತಿ ಹಾಲಕೆರೆಯ ಶ್ರೀಮದನ್ನದಾನೀಶ್ವರ ಮಹಾಸ್ವಾಮಿ ಬಹುಪರಾಕ್'' ಎಂಬ ಪರಾಕೂ ಸಾಕ್ಷಿಯೊದಗಿಸುತ್ತದೆ.

ಆ ತರುವಾಯ ಈ ಪೀಠಪರಂಪರೆಯಲ್ಲಿ ಕರಿಸಿದ್ಧಸ್ವಾಮಿ, ಮುಪ್ಪಿನ ಬಸವಲಿಂಗ ಸ್ವಾಮಿ, ಅನ್ನದಾನ ಮಹಾಸ್ವಾಮಿ, ಕಿರಿಯ ಮುಪ್ಪಿನ ಬಸವಲಿಂಗಸ್ವಾಮಿ, ಹಿರಿಯ ಅನ್ನದಾನೀಶ್ವರ ಸ್ವಾಮಿ, ಗುರು ಅನ್ನದಾನೀಶ್ವರ ಸ್ವಾಮಿ, ಅನ್ನದಾನ ಸ್ವಾಮಿ(ಗಡ್ಡದ) ಗಳವರು ಆಗಿಹೋದರು. ಇವರ ತರುವಾಯ ಪೀಠಕ್ಕೆ ಬಂದವರು ಶ್ರೀಗುರು ಅನ್ನದಾನ ಮಹಾಸ್ವಾಮಿಗಳವರು. ಇವರು ಶಿವಪೂಜಾಲೋಲುಪರು, ಷಟ್ಸ್ಥಲ ಜ್ಞಾನಿಗಳು, ತಪೋನುಷ್ಠಾನಪ್ರಸನ್ನರು, ಬ್ರಹ್ಮಚರ್ಯ ಸಂಪನ್ನರು, ತ್ರಿವಿಧ ದಾಸೋಹ ಮೂರ್ತಿಗಳು, ವಿಖ್ಯಾತ ಶಿವಯೋಗ ಸಾಮ್ರಾಟರು. ಇವರು ಕಂಡುದೆಲ್ಲ ಪಾವನ, ಕೇಳಿತ್ತೆಲ್ಲ ಪರಮಬೋಧೆ, ಮುಟ್ಟಿತ್ತೆಲ್ಲ ಪರುಷದ ಸೋಂಕು, ಒಡನೆ ನುಡಿದವರೆಲ್ಲರೂ ಸದ್ಯೋನ್ಮುಕ್ತರು, ಮೆಟ್ಟಿದ ಧರೆಯೆಲ್ಲವೂ ಅವಿಮುಕ್ತಿ ಕ್ಷೇತ್ರ, ಸೋಂಕಿದ ಜಲವೆಲ್ಲವೂ ಪುಣ್ಯ ತೀರ್ಥಂಗಳು, ಶರಣೆಂದು ಭಕ್ತಿಯ ಮಾಡಿದವರೆಲ್ಲರೂ ಶಿವಸಾಯುಜ್ಯರು.

ರೋಣ ತಾಲೂಕಿನ ಇಟಗಿಯ ಹೊಸಮಠದ ಶಿವಪೂಜಾನಿಷ್ಠ ಮನೆತನದಲ್ಲಿ ಕ್ರಿ.ಶ. ೧೮೮೭ರಂದು ಪೂಜ್ಯ ಶ್ರೀಗಳವರ ಜನನ. ವೀರಯ್ಯ ನೀಲಮ್ಮನವರು ತಂದೆ ತಾಯಿಗಳು. ಶ್ರೀಗಳವರ ಪ್ರಾಥಮಿಕ ಶಿಕ್ಷಣ ಇಟಗಿಯಲ್ಲಿಯೆ ನಡೆಯಿತು. ಗಣಿತ ಮತ್ತು ಚಿತ್ರಕಲೆಗಳಲ್ಲಿಯ ಆಸಕ್ತಿ ಹುಟ್ಟಿನೊಂದಿಗೆ ಬೆಳೆದು ಬಂದಿದ್ದಿತು. ಆದರೆ ಮನೆಯ ಪರಿಸ್ಥಿತಿ ಇವರ ಶಾಲೆಯ ಅಭ್ಯಾಸಕ್ಕೆ ಹೆಚ್ಚಿನ ಆಸ್ಪದವನ್ನೊದಗಿಸಲಿಲ್ಲ ಇವರ ದಷ್ಟಪುಷ್ಟ ಶರೀರ ಒಕ್ಕಲುತನಕ್ಕೆ ಹೆಚ್ಚು ಒಗ್ಗುವಂತಿದ್ದಿತು. ಆದ್ದರಿಂದ ಒಕ್ಕಲುತನದಲ್ಲಿ ತೊಡಗಿದರು. ಒಮ್ಮೆ ಲಿಂಗೈಕ್ಯ ಶ್ರೀ ಅನ್ನದಾನ ಮಹಾಸ್ವಾಮಿಗಳು ''ಮರಿ''ಯನ್ನು ನಿರ್ಣಯಿಸಲು ಇಟಗಿಗೆ ಹೋದಾಗ ಮೊದಲು ನೇಮಿಸಿದ ಮುಪ್ಪಯ್ಯ ಸ್ವಾಮಿಗಳು ಲೌಕಿಕ ಜೀವನಕ್ಕೆ ಯೋಗ್ಯರೆಂದು ತಿಳಿದು, ಅವರನ್ನು ಬಿಟ್ಟು, ಅದೇತಾನೇ ಬಿಸಿಲಿನಲ್ಲಿ ರಂಟೆ ಹೊಡೆದುಬಂದು ಅದನ್ನು ಇಳುಹುತ್ತಿದ್ದ ಈತನನ್ನು ನೋಡಿ, ಉಳುವದರಲ್ಲಿ ಬಲ್ಲಿದನಾದ ಈತನೇ ಸಮಾಜವನ್ನು ಹಸನುಗೊಳಿಸಲು ಯೋಗ್ಯನೆಂದು ತಿಳಿದು ತಮ್ಮ ಮರಿಯನ್ನಾಗಿ ಆರಿಸಿಕೊಂಡರು. ಕ್ರಿ.ಶ. ೧೯೧೧ನೆಯ ವರ್ಷ ಶುಭ ಮುಹೂರ್ತದಲ್ಲಿ ಅಧಿಕಾರವನ್ನು ವಹಿಸಿಕೊಂಡರು. ಮುಂದೆ ಕೆಲಕಾಲ ಗತಿಸಿದ ನಂತರ ಸಂಪ್ರದಾಯಕ್ಕನುಗುಣವಾಗಿ ಸ್ಥಲ ಕೂಡಿಸುವ ಮಹತ್ವದ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮಕ್ಕೆ ರೋಣದ ಶ್ರೀ ಗುರುಪಾದ ಸ್ವಾಮಿಗಳು, ಮಲ್ಲನಕೆರೆಯ ಶ್ರೀ ಚೆನ್ನಬಸವ ಸ್ವಾಮಿಗಳು, ಕನಕಗಿರಿಯ ಶ್ರೀ ರುದ್ರಮುನಿ ಸ್ವಾಮಿಗಳು, ಹಾವೇರಿಯ ಹುಕ್ಕೇರಿಮಠದ ಶ್ರೀ ಶಿವಬಸವ ಸ್ವಾಮಿಗಳು, ಹಾನಗಲ್ಲ ವಿರಕ್ತಮಠದ ಶ್ರೀ ಸದಾಶಿವ ಸ್ವಾಮಿಗಳು ಇತರ ಹಲವಾರು ಹರಗುರುಚರಮೂರ್ತಿಗಳು ದಯಮಾಡಿಸಿದ್ದರು. ಅವರೆಲ್ಲರ ಸಾಕ್ಷಿಯಾಗಿ ಪೂಜ್ಯ ಶ್ರೀಗಳವರಿಗೆ ಪಟ್ಟಾಭಿಷೇಕವಾಯಿತು.

ಶ್ರೀಗಳವರು ದೊಡ್ಡ ಅಜ್ಜನವರ ಕೊನೆಯ ಎರಡು ವರ್ಷ ಸೇವೆಯನ್ನು ಮಾಡಿದರು. ಅದೇ ಸಮಯದಲ್ಲಿ ಆಶ್ರಮಕ್ಕೆ ತಕ್ಕ ಆಚಾರ ವಿಚಾರಗಳನ್ನೂ, ಪರಂಪರೆಯಿಂದ ಬಂದ ಮಠದ ರೀತಿ–ನೀತಿಗಳನ್ನೂ ತಿಳಿದುಕೊಂಡರು. ಅಲ್ಲದೆ ಶ್ರೀ ಬಸವಮರಿ ದೇವರಿಂದ ಶಬರಶಂಕರ ವಿಳಾಸ ಮೊದಲಾದ ಕನ್ನಡ ಕಾವ್ಯಗಳನ್ನೂ ಪುರಾಣಗಳನ್ನೂ ಅಭ್ಯಾಸ ಮಾಡಿದರು. ಹಯಶಾಸ್ತ್ರಪರಿಣಿತಿ ಶ್ರೀಗಳವರಲ್ಲಿ ಸ್ವಾಭಾವಿಕವಾಗಿಯೇ ಬಂದಿದ್ದಿತು. ಕುದುರೆಗಳನ್ನು ಪಳಗಿಸುವಲ್ಲಿ ಶ್ರೀಗಳವರು ತೋರುತ್ತಿದ್ದ ಪ್ರತಿಭೆ ಮುಂದೆ ಅವರ ಸಮಾಜದ ಮೇಲಿನ ಹಿಡಿತವನ್ನು ಸಾರುವಂತಿತ್ತು ಓದು–ಭಾಷಣಗಳೆಂಬ ಬಾಹ್ಯ ಆಕರ್ಷಣೆಗೆ ಗುರಿಯಾಗದೆ ವೀರವಿರಕ್ತಿಯನ್ನು ಪಡೆದು, ಗುರುವಿನ ಸೇವೆ ಮತ್ತು ಯೋಗಾನುಷ್ಠಾನ ಇವುಗಳತ್ತಲೆ ವಿಶೇಷ ಗಮನವಿತ್ತರು. ಮಠದ ಕಾರ್ಯಗಳನ್ನು ತತ್ಪರತೆಯಿಂದ ಮಾಡಹತ್ತಿದರು, ಪೀಠದ ಘನತೆಯನ್ನು ಹೆಚ್ಚಿಸಿದರು. ಹಾನಗಲ್ಲ ಕುಮಾರ ಸ್ವಾಮಿಗಳವರ ಕೃಪಾಛತ್ರದಲ್ಲಿ ತಮ್ಮ ಬಾಳಿನ ದಿವ್ಯ ಬೆಳಗನ್ನು ಕಂಡರು, ದಿವ್ಯ ಪುರುಷರಾದರು. ಕುಮಾರ ಸ್ವಾಮಿಗಳವರು ಇವರ ಸಮಾಜಸೇವಾತತ್ಪರತೆಯನ್ನೂ ಆದರ್ಶ ಜೀವನದ ಹಂಬಲವನ್ನು ಕಂಡು ಸಂತೋಷಿಸಿದರು, ಅನುಷ್ಠಾನ ಮಾಡುವ ವಿಧಾನವನ್ನು ಹೇಳಿಕೊಟ್ಟರು. ಅವರ ಇಚ್ಛೆಯಂತೆ ಕೋಡಿಕೊಪ್ಪದ ದೊಡ್ಡಜ್ಜನವರು ಅನುಷ್ಠಾನ ಮಾಡಿದ ಸದ್ಯದ ಮಂಟಪದ ಕೆಳಗಿರುವ ಗವಿಯಲ್ಲಿಯೇ ಮೂರು ವರ್ಷ ಮೌನವ್ರತವನ್ನು, ಸ್ವಯಂಪಾಕ ಅನುಷ್ಠಾನವನ್ನೂ ಮಾಡಿ ಸಿದ್ಧಿಯನ್ನು ಪಡೆದರು. ಹಾನಗಲ್ಲ ಕುಮಾರ ಸ್ವಾಮಿಗಳ ಸನ್ನಿಧಿಯಲ್ಲಿ ಅನುಷ್ಠಾನ ಸಮಾಪ್ತಿ ಬಹು ವಿಜೃಂಭಣೆಯಿಂದ ಜರುಗಿತು. ಇಲಕಲ್ ಮಹಾಂತ ಸ್ವಾಮಿಗಳು, ಕೋಡಿಕೊಪ್ಪದ ಹುಚ್ಚೀರಪ್ಪಜ್ಜನವರು ಶ್ರೀಗಳವರ ಮೇಲೆ ವಿಶೇಷ ಪ್ರಭಾವ ಬೀರಿದರು. ಶ್ರೀಗಳವರು ಅನುಷ್ಠಾನ ಮಾಡುತ್ತಿದ್ದಾಗ ಡ್ಯಾಂಪುರದ ಚೆನ್ನಯ್ಯ (ಚೆನ್ನಕವಿ)ನವರು ಯಾವುದೊ ಒಂದು ಆರೋಪಕ್ಕೆ ಸಿಕ್ಕಿ ಜೇಲಿಗೆ ಹೋಗಬೇಕಾದುದನ್ನು ತಪ್ಪಿಸಿಕೊಳ್ಳಲು ಶ್ರೀಮಠಕ್ಕೆ ಬಂದರು. ಅಜ್ಜನವರು ಅವರಿಗೆ ಆಶ್ರಯವಿತ್ತು, ಅವರಿಂದ ವಾರ್ಧಕ ಷಟ್ಪದಿಯಲ್ಲಿ "ಶ್ರೀಮದನ್ನದಾನೀಶ್ವರ ಮಹಾಪುರಾಣ"ವನ್ನು ಬರೆಯಿಸಿದರು. ಹೀಗೆ ಆಶ್ರಯ ಬೇಡಿ ಬಂದವರಿಗೂ ರಕ್ಷಣೆಯನ್ನೂದಗಿಸಿದುದಲ್ಲದೆ ಅವರ ಪ್ರತಿಭೆಗೆ ತಕ್ಕ ಪುರಸ್ಕಾರವನ್ನು ಕೊಡುವ ಗುಣವನ್ನು ಶ್ರೀಗಳವರು ತಮ್ಮ ತಾರುಣ್ಯಾವಸ್ಥೆಯಲ್ಲಿಯೆ ತೋರಿದರು.

ಹಾಲಕೆರೆಯ ಶ್ರೀಮಠದಲ್ಲಿ ನಡೆಯುತ್ತಿದ್ದ ಮುಖ್ಯ ಕಾರ್ಯವೆಂದರೆ ಮಹಾಸ್ವಾಮಿಗಳವರ ತ್ರಿಕಾಲ ಪೂಜೆ. ಅದೂಕೂಡ ಒಳಗಿನ ಗವಿಯಲ್ಲಿ ನಡೆಯುತ್ತಿತ್ತು, ಬೆಳಗಿನ ಮೂರುಗಂಟೆಯ ಹೊತ್ತಿಗೆ ಎದ್ದು ಹಾಸುಗೆಯಲ್ಲಿ ಸ್ವಲ್ಪ ಹೊತ್ತು ಧ್ಯಾನಸ್ಥರಾಗಿ ಕುಳಿತು ಆಮೇಲೆ ಚಪ್ಪಾಳೆ ಬಡಿದು ಸೇವಕರನ್ನೆಬ್ಬಿಸಿ, ಅಜ್ಜನ ದರ್ಶನಕ್ಕೆ ಕಲ್ಮಠಕ್ಕೆ ಬರುತ್ತಿದ್ದರು. ಅಜ್ಜನ ದರ್ಶನ ಪಡೆದು ಸಾಷ್ಟಾಂಗ ನಮಸ್ಕಾರ ಹಾಕಿ, ಕೆಲ ನಿಮಿಷಕ್ಕೆ ಅಲ್ಲಿ ಧ್ಯಾನಮುದ್ರೆಯಿಂದ ಕುಳಿತು, ಎದ್ದು ಮತ್ತೆ ನಮಸ್ಕರಿಸಿ, ಶ್ರೀಮಠಕ್ಕೆ ಬಂದು ಲಿಂಗಪೂಜೆಯಲ್ಲಿ ನಿರತರಾಗುತ್ತಿದ್ದರು. ಹೊರಗೆ ಸೇವಕ ಜಾಗಟೆ ಬಾರಿಸಲು ತೊಡಗುತ್ತಿದ್ದನು. ಆ ಜಾಗಟೆಯ ಸಪ್ಪಳ ಕೊಪ್ಪ ನಿಡಗುಂದಿ ಮೊದಲಾದ ಹಳ್ಳಿಗಳವರೆಗೆ ಕೇಳುತ್ತಿತ್ತು, ಬ್ರಾಹ್ಮಿ ಮುಹೂರ್ತದ ಆ ತಂಪೊತ್ತಿನಲ್ಲಿ ಕೇಳಿಬರುತ್ತಿದ್ದ ಆ ಧ್ವನಿಯಿಂದ ಜನರು ಪುಳುಕಿತಗಾತ್ರರಾಗುತ್ತಿದ್ದರು. ಸಹಜವಾಗಿಯೆ ಅವರಲ್ಲಿ ಭಕ್ತಿಭಾವ ಸ್ಫುರಿಸುತ್ತಿತ್ತು. ಇದು ಶ್ರೀಗಳವರ ಮುಂಜಾನೆಯ ಪೂಜೆಯಾದರೆ ಎರಡನೆಯ ಪೂಜೆ ಮಧ್ಯಾಹ್ನವೂ ಮೂರನೆಯ ಪೂಜೆ ರಾತ್ರಿಯೂ ನಡೆಯುತ್ತಿದ್ದವು. ಹೀಗೆ ಪೂಜಾಫಲವೆ ಫಲವೆಂದು ಪೂಜಿಸಿ ಶ್ರೀಗಳವರು ಮಹಾತಪಸ್ವಿ ಎಂಬ ಅಭಿದಾನವನ್ನು ಪಡೆದರು. ಎಲ್ಲರೂ ಅವರ ತಪಸ್ಸಿನ ಶಕ್ತಿಗೆ ತಲೆಬಾಗುತ್ತಿದ್ದರು.

"ಬೆಲ್ಲದ ಪುತ್ಥಳಿಯ ಕೈಯಲ್ಲಿ ಹಿಡಿದು ಎಲ್ಲಿ ಚುಂಬಿಸಿದರೂ ಇನಿದಹುದು" ಎಂಬಂತೆ ಶ್ರೀಗಳವರ ಜೀವನದ ಯಾವುದೇ ಮುಖವನ್ನು ಅವಲೋಕಿಸಿದರೂ ಅಲ್ಲಿ ದಿವ್ಯದರ್ಶನದ ರುಚಿ ಕಂಡುಬರದೆ ಇರದು. ಗುರುವಿನ ಹಸ್ತಮಸ್ತಕಸಂಯೋಗದಿಂದ ಮಾತ್ರವೇ ದಿವ್ಯ ತೇಜಸ್ಸನ್ನೂ ಲೌಕಿಕ ಕಲಾಗಮಗಳ ಜ್ಞಾನವನ್ನೂ ತಮ್ಮದನ್ನಾಗಿಸಿಕೊಂಡರು. ಹೀಗಾಗಿ ಇವರು ನುರಿತ ವಾಸ್ತುಶಿಲ್ಪಿಗಳೂ ಸಮಾಜಶಿಲ್ಪಿಗಳೂ ಎಂಬ ಮನ್ನಣೆಗೆ ಪಾತ್ರರಾದರು. ಹಾಲಕೆರೆಯಲ್ಲಿ ದುರುಗವ್ವನ ಗುಡಿಯನ್ನು ತೆಗೆಯಿಸಿ ಮೂರಂಕಣದ ಕಟ್ಟಡ ಮೊದಲು ನಿರ್ಮಾಣವಾಗಿತ್ತು, ಅದನ್ನು ಶ್ರೀಗಳವರು ವಿಸ್ತರಿಸಿ ಈಗಿನ ಕಟ್ಟಿಗೆಯ ಮಠವನ್ನು ಕಟ್ಟಿಸಲು ಮುಂದಾದರು, ಅದರ ಯೋಜನೆಯನ್ನು ತಾವೇ ಸಿದ್ಧಪಡಿಸಿದರು, ಕಲ್ಲು ಕಬ್ಬಿಣ ಕಟ್ಟಿಗೆಗಳಿಗಾಗಿ ಸುತ್ತಮುತ್ತಣ ಗ್ರಾಮದ ಭಕ್ತರನ್ನು ಸಂಪರ್ಕಿಸಿದರು. ಅದಕ್ಕಾಗಿ ಅನೇಕ ಸಲ ಸ್ವತಃ ಪ್ರವಾಸ ಕೈಕೊಂಡರು. ಹೀಗೆ ಪೂಜ್ಯಶ್ರೀಗಳವರ ಪರಿಶ್ರಮದ ಫಲವಾಗಿ ಈಗಿರುವ ಶ್ರೀಮಠ ಸ್ವಾಮಿಗಳವರು ಪೂಜಾನುಷ್ಠಾನ ಮೊದಲಾದ ಸಕಲ ಸೌಲಭ್ಯಗಳನ್ನೊಳಗೊಂಡು ರೂಪುಗೊಂಡಿತು. ಅದೇ ರೀತಿ ಇಟಗಿ, ಕೋಡಿಕೊಪ್ಪ, ಅಬ್ಬಿಗೇರಿ, ಗಂಜಿಹಾಳ ಮೊದಲಾದ ಎಡೆಗಳಲ್ಲಿ ಕಟ್ಟಿಸಿರುವ ಮಠಗಳು ಪೂಜ್ಯ ಶ್ರೀಗಳವರ ಶಿಲ್ಪಶಾಸ್ತ್ರ ಪರಿಣತಿಯನ್ನು ಸಾರುತ್ತಿವೆ, ಪ್ರತಿ ಮಠದಲ್ಲಿ ಶಿವಪೂಜೆಗೆ ಅನುಕೂಲವಾದ ಗವಿಯನ್ನು

ಕಟ್ಟಿಸಿದ್ದಾರೆ. ನರೇಗಲ್ಲಿನ ಮಹಾವಿದ್ಯಾಲಯ, ಹೈಸ್ಕೂಲ, ಹಾಸ್ಟೆಲ್ ಕಟ್ಟಡಗಳಲ್ಲಿ ಶ್ರೀಗಳವರ ಶಿಲ್ಪಶಾಸ್ತ್ರದ ಪ್ರಾವೀಣ್ಯತೆಯನ್ನು ಕಾಣುತ್ತೇವೆ. ಹಾಗೆಯೇ ಹೊಸದಾಗಿ ನಿರ್ಮಿಸಲ್ಪಟ್ಟಿರುವ ಭವ್ಯ ತೇರೂ ಶ್ರೀಗಳವರ ಕಲಾಭಿರುಚಿಗೆ, ಶರಣ ಸಂಸ್ಕೃತಿಗೆ ಪ್ರತೀಕವಾಗಿದೆ.

ಗದುಗಿನ ಹಡಗಲಿ ಹುಚ್ಚಯ್ಯನೆಂಬ ಗೃಹಸ್ಥನ ನಾಲ್ವರು ಹೆಂಡಂದಿರಲ್ಲಿ ಒಬ್ಬಳಾದ ನೀಲವ್ವನು ಹಾಲಕೆರೆ ಅಜ್ಜನವರ ದರ್ಶನದಿಂದ ಪ್ರಭಾವಿತಳಾಗಿ ತನ್ನ ಆಸ್ತಿಯನ್ನೆಲ್ಲ ಶ್ರೀಮಠಕ್ಕೆ ದಾನವಾಗಿತ್ತಳು. ಅದು ಗದಗಿನಲ್ಲಿ ಶ್ರೀಗಳವರ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಯಿತು. ೧೯೩೮ರಲ್ಲಿ ಶ್ರೀ ನಾಗಭೂಷಣ ಶಾಸ್ತ್ರಿಗಳವರು ಅಲ್ಲಿಯ ಸಂಸ್ಕೃತ ಪಾಠಶಾಲೆಯ ಅಧ್ಯಾಪಕರಾಗಿ ಬಂದರು. ೧೭-೧೦-೧೯೩೪ರ ವಿಜಯದಶಮಿಯ ದಿನ ಶಿವಾನುಭವ ಮಂಟಪ ಸ್ಥಾಪನೆಯಾಯಿತು. ೬-೨-೧೯೩೭ರಲ್ಲಿ ಕರ್ನಾಟಕದಲ್ಲಿಯೇ ಪ್ರಥಮವೆನ್ನುವಂತೆ ಅಕ್ಕನಬಳಗ ಸ್ಥಾಪನೆಯಾಯಿತು. ೧೦-೧೦-೧೯೪೦ರಲ್ಲಿ ವೀರಶೈವ ಸಂಸ್ಕೃತಿ ಪ್ರಸಾರಕ ಸಮಿತಿ ಅಸ್ತಿತ್ವದಲ್ಲಿ ಬಂದು ವಚನಸಾಹಿತ್ಯಕ್ಕೆ ಸಂಬಂಧಿಸಿದ ಪರೀಕ್ಷೆಗಳನ್ನು ನಡೆಸುವಂತಾಯಿತು. ೧೯೪೮ರಲ್ಲಿ ಇದು ಅಖಿಲ ಭಾರತ ವೀರಶೈವ ವಿದ್ಯಾಪೀಠವಾಗಿ ಮಾರ್ಪಟ್ಟಿತು. ಈ ಅಘೋಷಿತ "ವೀರಶೈವ ವಿಶ್ವವಿದ್ಯಾಲಯ"ಕ್ಕೆ ಪಂ. ನಾಗಭೂಷಣ ಶಾಸ್ತ್ರಿಗಳೇ ಕುಲಪತಿಗಳು! ಹಡಗಲಿ ಮಠವೇ ಅದರ "ಕ್ಯಾಂಪಸ್ಸು!" ಹಾಲಕೆರೆಯ ಶ್ರೀಗುರು ಅನ್ನದಾನ ಮಹಾಸ್ವಾಮಿಗಳವರೇ ಆಶ್ರಯದಾತರು. ಇದರಿಂದ ಗದುಗಿನ ವೀರಶೈವರಲ್ಲಿಯಂತೂ ಅಪೂರ್ವ ಜಾಗ್ರತಿ ಯುಂಟಾಯಿತು. (ಡಾ. ಎಂ. ಜಿ. ಶಾಸ್ತ್ರಿಮಠ, ಹಾಲಕೆರೆಯ ಶ್ರೀಗುರು ಅನ್ನದಾನೀಶ್ವರ ಮಹಾಸ್ವಾಮಿಗಳು ಪು. ೭೩).

ಶ್ರೀಗಳವರು ಗದಿಗ್ಗೆ ದಯಮಾಡಿಸಿದಾಗ ಹಡಗಲಿ ಮಠದಲ್ಲೆ ವಾಸ್ತವ್ಯ ಮಾಡಿ, ಸಾಯಂಕಾಲ ವಿಹಾರಕ್ಕೆಂದು ಊರ ಹೊರಗೆ ಬಂಗಾರಶೆಟ್ಟರ ಕೆರೆಯವರೆಗೂ ಹೋಗುತ್ತಿದ್ದರು. ಕೆರೆಗಿಂತ ಮೊದಲು ಒಂದು ಹೊಲದಲ್ಲಿ ಸುಮಾರು ೩೦ ಮಾವಿನ ಗಿಡಗಳ ಒಂದು ತೋಪು ಬಹಳ ರಮ್ಯವಾಗಿದ್ದಿತು. ಅದನ್ನು ನೋಡಿದಾಗಲೊಮ್ಮೆ ಶ್ರೀಗಳವರಿಗೆ ಇದು ತಪಸ್ವಿಗಳಿಗೆ ಬಹಳ ಅನುಕೂಲವಾದ ಸ್ಥಳವೆನ್ನಿಸುತ್ತಿದ್ದಿತು. ಆ ತೋಪು ಬೆಟಗೇರಿಯ ಕಣವಿ ಮಲ್ಲೇಶಪ್ಪ ಎಂಬುವವರಿಗೆ ಸೇರಿದ್ದಿತು. ಆತನಿಗೆ ಮಕ್ಕಳಿರಲಿಲ್ಲ. ಆತನ ಹೆಂಡತಿ ನರೇಗಲ್ಲಿನವಳು. ಆಕೆ ಅಜ್ಜನವರಲ್ಲಿ ಭಯ-ಭಕ್ತಿಯುಳ್ಳವಳಾಗಿದ್ದಳು. ಅಜ್ಜನವರ ಇಚ್ಛೆ ತಿಳಿದು, ಅವರಲ್ಲಿಗೆ ಬಂದು ಆ ಹೊಲವನ್ನು ಶ್ರೀಮಠಕ್ಕೆ ದಾನವಾಗಿತ್ತಳು. ಅದಕ್ಕೆ ಪೂಜ್ಯಶ್ರೀಗಳವರು "ಆನಂದಾಶ್ರಮ" ಎಂಬ ಹೆಸರಿತ್ತು ಅಲ್ಲಿ ಒಂದು ಸುಂದರವಾದ ಕುಟೀರವನ್ನು ಕಟ್ಟಿ, ಅಲ್ಲಿಯೇ ಲಿಂಗಪೂಜೆ ಮಾಡಿಕೊಳ್ಳಹತ್ತಿದರು. ಪಂ. ನಾಗಭೂಷಣ ಶಾಸ್ತ್ರಿಗಳವರು "ಶ್ರೀಮದನ್ನದಾನೀಶ್ವರ ಮಹಾಪುರಾಣ"ವನ್ನು ಅಲ್ಲಿಯೇ ಹೇಳತೊಡಗಿದರು. ಮುಂದೆ ಶ್ರೀಗಳವರ ಮಾರ್ಗದರ್ಶನದಲ್ಲಿ ಅಲ್ಲಿ ಒಂದು ಸುಂದರವಾದ ಕಟ್ಟಡ ಕಟ್ಟಲ್ಪಟ್ಟಿತು. ಅದು ಅಲ್ಲಿಗೆ ಬಂದ ಶ್ರೀಗಳವರ ಪೂಜಾದಿಗಳಿಗೆ, ಅಭ್ಯಾಸ ಮಾಡಲು ಬಂದ ವಿದ್ಯಾರ್ಥಿಗಳಿಗೆ ಬಹಳ ಅನುಕೂಲಕರ ಸ್ಥಳವಾಯಿತು.

೧೯೩೮ರ ಸುಮಾರಿನಲ್ಲಿ ಲಿಂ. ಇಲಕಲ್ಲ ಶ್ರೀ ಮಹಾಂತ ಶಿವಯೋಗಿಗಳವರ ನಂದಿನಿಯು ವಿಶ್ರಮಿಸಿದ ಸ್ಥಾನವಾದ ಕಲ್ಲುಮಠದ ಮುಂದಿನ ಬಿಲ್ವಪತ್ರೆಯ ಬನದಲ್ಲಿ ಒಂದು ಅಂದವಾದ ಮಠವನ್ನು ಕಟ್ಟುವ ಯೋಜನೆಯಾಯಿತು. ಶ್ರೀ ಅನ್ನದಾನ ಮಹಾಸ್ವಾಮಿಗಳವರ ಮಾರ್ಗದರ್ಶನದಲ್ಲಿ ಆ ಮಠದ ನಿರ್ಮಾಣವಾಯಿತು. ಮಳೆಗಾಲದಲ್ಲಿ ಮಹಾಪೂರ ಬಂದು ದಾರಿ ಕಟ್ಟಾಗುತ್ತಿದ್ದಿತು. ಅದಕ್ಕಾಗಿ ಶ್ರೀಗಳು ಅಲ್ಲಿಯೆ ಒಂದು ಪೂಜಾಮಂಟಪ ಮತ್ತು ಪಾಕಶಾಲೆಯನ್ನು ಯೋಜಿಸಿದರು. (ಶಿವಯೋಗ ಮಂದಿರದ ಬೆಳಗು. ಪು. ೨೬೨) ಧರ್ಮದ ಬೆನ್ನೆಲುಬು ಯೋಗ, ಅದರಲ್ಲೂ ಶಿವಯೋಗವು ಲಿಂಗಾಯತ ಧರ್ಮದ ಪ್ರಾಣ ಜೀವಾಳ. ಅದರತ್ತ ಜನರನ್ನು ಆಕರ್ಷಿಸಲು ಶಿವಯೋಗ ಮಂದಿರದಲ್ಲಿ ಯೋಗ್ಯ ಅಭ್ಯಾಸದ ವ್ಯವಸ್ಥೆ ಮಾಡಿದರು. ಸಖರಾಯ ಪಟ್ಟದ್ದೇವರು, ಸಿಂಧಗಿ ಪಟ್ಟದ್ದೇವರನ್ನು ಆ ಕಾರ್ಯಕ್ಕೆ ನೇಮಿಸಿ, ಅವರಿಂದ ಒಳ್ಳೆಯ ಶಿಕ್ಷಣ ಕೊಡಿಸಿ, ಧರ್ಮದ ಬಗ್ಗೆ ತಿಳುವಳಿಕೆಯನ್ನು ಕೊಡಿಸಿ ಲಿಂಗಾಯತ ಧರ್ಮಕ್ಕೆ ಭದ್ರ ತಳಪಾಯವನ್ನು ಹಾಕಿದರು. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರ ಕಲ್ಪನೆಯ ಕೂಸಾಗಿದ್ದ, ಲಿಂಗಾಯತ ಧರ್ಮದ ಗುರುಕುಲದಂತಿದ್ದ ಈ ಶಿವಯೋಗ ಮಂದಿರವು ೧೯೪೮ರಲ್ಲಿ ನಾಡಿನಾದ್ಯಂತ ತೋರಿದ ಕ್ಷಾಮದ ಬೇಗೆಗೆ ಬೆಂದು ತತ್ತರಿಸತೊಡಗಿತು. ಆಗ ಅದನ್ನು ಶ್ರೀ ಅನ್ನದಾನ ಮಹಾಸ್ವಾಮಿಗಳವರು ತಮ್ಮ ಕೈಗೆ ತೆಗೆದುಕೊಂಡು ಅದಕ್ಕೆ ಪುನಃ ಪ್ರಾಣಪ್ರತಿಷ್ಠಾಪನೆ ಮಾಡಿದರು. ಸುಮಾರು ೩೦-೩೫ ಸಾವಿರ ರೂಪಾಯಿ ಸಂಗ್ರಹ ಮಾಡಿ, ಅದರ ಸಾಲಗಳನ್ನೆಲ್ಲ ತೀರಿಸಿ, ಅದೊಂದು ವ್ಯವಸ್ಥಿತ ಸಂಸ್ಥೆಯಾಗುವಂತೆ ಮಾಡಿದರು. ಹೀಗೆ ಆಪತ್ಕಾಲದಲ್ಲಿ ತನ್ನನ್ನು ಕೈಹಿಡಿದು ನಡೆಸಿದುದರ ಪ್ರತೀಕವಾಗಿ ಆ ಸಂಸ್ಥೆ ಪೂಜ್ಯಶ್ರೀಗಳವರನ್ನು ಅವರ ಕೊನೆಯುಸಿರಿರುವ ವರೆಗೂ ಗೌರವಿಸುತ್ತ ಬಂದಿತು. ಶ್ರೀ ಕುಮಾರಸ್ವಾಮಿಗಳವರ ಗದ್ದುಗೆಯ ನಿರ್ಮಾಣ ಕಾರ್ಯ ಅಪೂರ್ಣವಾಗಿ ಉಳಿದಿದ್ದಿತು. ಶ್ರೀಗಳವರ ಅಪ್ಪಣೆಯ ಮೇರೆಗೆ ಹಾನಗಲ್ಲ ಸದಾಶಿವಸ್ವಾಮಿಗಳವರು ವಹಿಸಿಕೊಂಡು ೫-೬ ವರ್ಷಗಳಲ್ಲಿ ಸು. ೮೦ ಸಾವಿರ

ರೂಪಾಯಿಗಳ ವಿನಿಯೋಗದಿಂದ ಅದನ್ನು ಪೂರ್ತಿಗೊಳಿಸಿದರು. ಶಿವಯೋಗ ಮಂದಿರಕ್ಕೆ ಶ್ರೀಗಳವರು ಸಲ್ಲಿಸಿದ ಸೇವೆಯನ್ನು ನೋಡಿ ಪೂಜ್ಯಶ್ರೀ ನಾಗನೂರ ಶಿವಬಸವ ಮಹಾಸ್ವಾಮಿಗಳು ಅವರ ಪ್ರಭಾವಕ್ಕೆ ಒಳಗಾದರು.

ಶ್ರೀಗಳವರು ಶ್ರೇಷ್ಠಮಟ್ಟದ ವಾಸ್ತುಶಿಲ್ಪಿಗಳಾಗಿರುವಂತೆ ಉನ್ನತ ಮಟ್ಟದ ಸಮಾಜಶಿಲ್ಪಿಗಳೂ ಆಗಿದ್ದರು. ''ಸರ್ವಂ ಲಿಂಗಮಯಂ ಇದಂ ಜಗತ್'' ಎಂದು ತಿಳಿದಿದ್ದ ಅವರು ಮಾನವನ ಉದ್ಧಾರಕ್ಕೆ ಧರ್ಮವೇ ತಾರಕವೆಂದು ತಿಳಿದಿದ್ದರು. ಅದಕ್ಕಾಗಿ ಧರ್ಮದ ಕೇಂದ್ರಗಳಂತಿರುವ ಮಠಮಾನ್ಯಗಳನ್ನು ಅಭಿವೃದ್ಧಿಪಡಿಸುವುದು, ಅವುಗಳನ್ನು ಧರ್ಮದ ನೆಲೆವನೆಯನ್ನಾಗಿ ಮಾಡುವುದು ಧರ್ಮದರ್ಶಿಗಳ ಆದ್ಯ ಕರ್ತವ್ಯವೆಂದು ತಿಳಿದು ಗಂಜಿಹಾಳ, ಇಟಗಿ, ಹಾಲಕೆರೆ, ಕೋಡಿಕೊಪ್ಪ, ಗದಗ ಮೊದಲಾದವುಗಳಲ್ಲಿಯ ಮಠಗಳನ್ನು ಪುನರುಜ್ಜೀವನಗೊಳಿಸಿದರು. ಕಂದಗಲ್ಲ ಕನಸಾವಿ, ರಾಮತ್ನಾಳ, ಹನುಮಸಾಗರ, ಗ್ವಾಗೇರಿ, ಬಂಡಿ, ಗಜೇಂದ್ರಗಡ, ಬೇಲೂರು, ಅಬ್ಬಿಗೇರಿ, ತೋಟಗಂಟಿ, ಜಕ್ಕಲಿ, ಸಂಗನಹಾಳ, ರಾಜೂರ, ಗುಳಗೋಳಿ, ನಾಗೂರು, ಹೊನ್ನಳ್ಳಿ ಮೊದಲಾದವುಗಳಲ್ಲಿಯ ಇಪ್ಪತ್ತೇಳಕ್ಕಿಂತ ಹೆಚ್ಚು ಶಾಖಾಮಠಗಳೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡರು. ಚಂದನದ ಸಂಗದಿಂದ ಬೇವು ಬೊಬ್ಬುಲಿ ಮರಂಗಳು ಪರಿಮಳಿತವಾಗುವಂತೆ ಶ್ರೀಗಳವರ ಆಶೀರ್ವಾದದಿಂದ ಆ ನಾಡುಗಳೆಲ್ಲ ಅವಿಮುಕ್ತ ಕ್ಷೇತ್ರಗಳಾದವು. ಆಯಾ ಮಠಗಳಲ್ಲಿ ಜ್ಞಾನದಾಸೋಹ, ಪ್ರಸಾದ ದಾಸೋಹ ನಿರಂತರ ನಡೆಯುವಂತೆ ಏರ್ಪಾಡು ಮಾಡಿದರು.

ಶ್ರೀಗಳವರು ಇದ್ದಲ್ಲಿ ಸದಾಕಾಲ ಪುರಾಣ ಪುಣ್ಯಪ್ರವಚನಗಳು ನಡೆಯಲೇಬೇಕಿದ್ದವು. ಹಾಗೆ ನಡೆದವುಗಳಲ್ಲಿ ಹೆಸರಿಸಬೇಕಾದುದು ೧೯೩೦ರಲ್ಲಿ ಬೇಲೂರಿನಲ್ಲಿ ನಡೆದ ಪುರಾಣಪ್ರವಚನ ಕಾರ್ಯಕ್ರಮ. ಆಗ ವಿಜಾಪುರದ ಹಿರಿಯ ಮಠದ ಶ್ರೀ ಶಂಭುಲಿಂಗ ಪಟ್ಟಾಧ್ಯಕ್ಷರು ಪ್ರಕಾಂಡಪಂಡಿತರೆಂದು ಖ್ಯಾತರಾಗಿದ್ದರು. ಅವರಿಂದ ಬೇಲೂರು ಮಠದಲ್ಲಿ ಪುರಾಣ ಹೇಳಿಸಬೇಕೆಂಬುದು ಶ್ರೀಗಳವರ ಅಪೇಕ್ಷೆ. ಶಂಭುಲಿಂಗ ಪಟ್ಟಾಧ್ಯಕ್ಷರು ಗುರುವರ್ಗದ ಪಕ್ಷಪಾತಿಗಳಾಗಿದ್ದರು. ಅವರು ''ತಾವು ವಿರಕ್ತ ಸ್ವಾಮಿಗಳಿಗೆ ನಮಸ್ಕಾರ ಮಾಡುವುದಿಲ್ಲವೆಂದು ತಮ್ಮ ಪೂಜೆ–ಪ್ರಸಾದಗಳು ಅವರೊಡನೆ ನಡೆಯುವದಿಲ್ಲವೆಂದೂ ಇದಕ್ಕೆ ಒಪ್ಪಿದರೆ ಮಾತ್ರ ಪುರಾಣ ಹೇಳಲು ಬರುವುದಾಗಿ'' ಕರಾರು ಹಾಕಿದರು. ಅದಕ್ಕೆ ಪೂಜ್ಯಶ್ರೀಗಳು ''ಜನರಲ್ಲಿ ಧರ್ಮಜಾಗ್ರತಿ ಉಂಟಾಗುವುದು ಮಹತ್ವದ್ದಾಗಿರುವುದರಿಂದ ನಾವು ಅವರ ಕರಾರುಗಳಿಗೆ ಒಪ್ಪಿದ್ದೇವೆ. ಪುರಾಣ ಹೇಳಲು ಅವರೇ ಬರಲಿ'' ಎಂದು ಒಪ್ಪಿಕೊಂಡರು. ಶಂಭುಲಿಂಗ ಪಟ್ಟಾಧ್ಯಕ್ಷರಿಗೆ ಎಲ್ಲ ವಿಧದ ಪ್ರತ್ಯೇಕ ವ್ಯವಸ್ಥೆ ಮಾಡಲಾಯಿತು. ಪಟ್ಟಾಧ್ಯಕ್ಷರು ಅಮೋಘವಾದ ವಾಗ್ವಿಜೃಂಭಣೆಯಿಂದ ಪುರಾಣ ಹೇಳುತ್ತಿದ್ದರು. ಪಂ. ಪಂಚಾಕ್ಷರ ಗವಾಯಿಗಳೂ ಪಂ. ಪುಟ್ಟರಾಜ ಗವಾಯಿಗಳೂ ತಬಲಾ ಮತ್ತು ಪೇಟಿ ಬಾರಿಸುತ್ತ ಸಂಗೀತ ಸೇವೆ ಸಲ್ಲಿಸುತ್ತಿದ್ದರು. ಪುರಾಣ ಕೇಳಲು ದೂರ ದೂರದ ಊರುಗಳಿಂದ ಏಳೆಂಟು ಸಾವಿರ ಜನ ಬರುತ್ತಿದ್ದರು. ಬರಹೋಗುವವರಿಗೆ ಪ್ರಸಾದ ವ್ಯವಸ್ಥೆಯೂ ಬಹಳ ಸಮರ್ಪಕವಾಗಿದ್ದಿತು. ಹೀಗೆ ಒಂದೂವರೆ ತಿಂಗಳವರೆಗೆ ಈ ಕಾರ್ಯಕ್ರಮ ಬಹು ಅಭೂತಪೂರ್ವವಾಗಿ ಜರುಗಿತು. ಶ್ರೀಗಳವರ ಕರ್ತೃತ್ವಶಕ್ತಿಗೆ ನಿದರ್ಶನವಾಯಿತು. ಗಣಾರಾಧನೆಗೆ ಅರವತ್ತೆರಡು ಚೀಲ ಗೋದಿಯ ಮಾದಲಿ ಮಾಡಲಾಗಿದ್ದಿತು. ಪುರಾಣದ ಈ ಯಶಸ್ಸಿನಿಂದ ಪುಲಕಿತಗಾತ್ರರಾದ ಪಟ್ಟಾಧ್ಯಕ್ಷರು ತಮ್ಮ ಕರಾರನ್ನು ಮರೆತು ''ಚರಕುಲಸಾರ್ವಭೌಮರೂ ತಪಸ್ಸಾಮ್ರಾಜ್ಯಚಕ್ರವರ್ತಿಗಳೂ ಆದ ಶ್ರೀಗುರು ಅನ್ನದಾನಿ ಮಹಾಸ್ವಾಮಿಗಳವರ ಪಾದಪದ್ಮಗಳಿಗೆ ತಲೆಬಾಗಿದ್ದೇನೆ'' ಎಂದು ವ್ಯಕ್ತವಾಗಿ ಘೋಷಿಸಿದರು.

ಕ್ರಿ.ಶ. ೧೯೪೦ರಲ್ಲಿ ಗದುಗಿನ ಆನಂದಾಶ್ರಮದಲ್ಲಿ ಇಪ್ಪತ್ತೊಂದು ದಿನಗಳ ಕಾಲ ''ಜ್ಞಾನದಾಸೋಹ'' ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದ್ದಿತು. ಧಾರವಾಡದ ಮುರುಘಾಮಠದ ಮೃತ್ಯುಂಜಯ ಮಹಾಸ್ವಾಮಿಗಳು ಅದರ ಕಾರ್ಯನಿರ್ವಾಹಕರಾಗಿದ್ದರು. ಮುರುಗೋಡದ ಮಹಾಂತ ಸ್ವಾಮಿಗಳನ್ನು ಜ್ಞಾನದಾಸೋಹ ಮುಗಿಯುವವರೆಗೂ ವ್ರತಧಾರಿಗಳಾಗಿ ಲಿಂಗಪೂಜೆ ಮಾಡಿಕೊಂಡಿರಲು ನಿಯಮಿಸಲಾಗಿದ್ದಿತು. ನಾಡಿನ ಪ್ರಮುಖ ಗುರು ವಿರಕ್ತಮೂರ್ತಿಗಳೆಲ್ಲ ಅದರಲ್ಲಿ ಒಳ್ಳೆಯ ಆಸಕ್ತಿಯಿಂದ ಭಾಗವಹಿಸಿದ್ದರು. ಮೈಸೂರಿನ ಗವಿಮಠದ ಲಿಂ. ಗೌರೀಶಂಕರ ಸ್ವಾಮಿಗಳವರ ಪ್ರವಚನವನ್ನು ಕೇಳಿ ಸಾವಿರಾರು ಜನ ಜ್ಞಾನಾಮೃತದ ಸವಿಯಿಂದ ಸಂತೃಪ್ತರಾದರು. ಈ ಜ್ಞಾನದಾಸೋಹದಲ್ಲಿ ಪ್ರೊ. ಎಸ್. ಎಸ್. ಬಸವನಾಳ, ಡಾ. ಎಸ್. ಸಿ. ನಂದಿಮಠ, ಉತ್ತಂಗಿ ಚೆನ್ನಪ್ಪ, ಡಾ. ಆರ್. ಸಿ. ಹಿರೇಮಠ, ಶ್ರೀ ಜೋಳದರಾಶಿ ದೊಡ್ಡನಗೌಡ, ಪಂ. ವೈ. ನಾಗೇಶಶಾಸ್ತ್ರಿ ಮೊದಲಾದ ಗಣ್ಯರು ಭಾಗವಹಿಸಿದ್ದರು. ಪಂ. ನಾಗಭೂಷಣ ಶಾಸ್ತ್ರಿಗಳಿಂದ ಪ್ರತಿದಿನ ಸಾಯಂಕಾಲ ಪ್ರವಚನ ನಡೆಯುತ್ತಿದ್ದಿತು. ಕೊಪ್ಪದ ಮಹಾಂತ ಸ್ವಾಮಿಗಳು ಅಲ್ಲಿಯೇ ಅನುಷ್ಠಾನ ಮಾಡುತ್ತಿದ್ದರು. ಸಾರಿಗೆ ವ್ಯವಸ್ಥೆಯನ್ನು ಶ್ರೀ ಬಸರಿಗಿಡದ ವೀರಪ್ಪನವರು ಉಚಿತವಾಗಿ ಏರ್ಪಡಿಸಿದ್ದರು.

ಅಂದು ನಡೆಯುತ್ತಿದ್ದ ಪ್ರತಿಯೊಂದು ಧಾರ್ಮಿಕ ಕಾರ್ಯಕ್ರಮದಲ್ಲಿ ಭಕ್ತರು ಮಾತ್ರವಲ್ಲ ಮಹಾಮಹಾ ಮಠಮಾನ್ಯಗಳ ಶ್ರೀಗಳವರೂ ಪೂಜ್ಯ ಶ್ರೀಗಳವರಿಗೆ ವಿಶಿಷ್ಟ ಸ್ಥಾನಮಾನಗಳನ್ನಿತ್ತು ಗೌರವಿಸುತ್ತಿದ್ದರು. ೧೯೩೦ರಲ್ಲಿ ನಡೆದ ಮೂರುಸಾವಿರ ಮಠದ ಗುರುಸಿದ್ದೇಶ್ವರ ಸ್ವಾಮಿಗಳವರ ಗದ್ದುಗೆಯ ಮಂಟಪದ ಕಲಶ ಸ್ಥಾಪನೆಯು ಶ್ರೀಗಳವರಿಂದ ನೆರವೇರಿತು. ಹಾಗೆಯೇ ಮೂರುಸಾವಿರ ಮಠದ ಜಗದ್ಗುರುಗಳವರ ಪಟ್ಟಾಭಿಷೇಕೋತ್ಸವದ ಐವತ್ತನೆಯ ಸಂವತ್ಸರದ ಸ್ಮರಣ ಸಮಾರಂಭವು ಶ್ರೀಗಳವರ ಧ್ವಜಾರೋಹಣದೊಂದಿಗೆ ಆರಂಭವಾಯಿತು. ಅಂದೇ ಆ ಮಠದ ಮಹಾದ್ವಾರದ ಉದ್ಘಾಟನೆಯು ಶ್ರೀಗಳವರಿಂದ ನೆರವೇರಿತು. ೧೯೩೮ರಲ್ಲಿ ಮೂರುಸಾವಿರಮಠದ ಜಗದ್ಗುರುಗಳವರು ಶಿವಯೋಗ ಮಂದಿರದಲ್ಲಿ ಕಟ್ಟಿಸಿದ ಧ್ಯಾನ ಮಂದಿರವನ್ನು ಮಹಾಸ್ವಾಮಿಗಳವರೇ ಉದ್ಘಾಟಿಸಿದರು.

ಹಾನಗಲ್ಲ ಶ್ರೀ ಕುಮಾರಸ್ವಾಮಿಗಳವರು ಲಿಂಗೈಕ್ಯರಾದ ವೇಳೆ (ಕ್ರಿ.ಶ.೧೯೩೦) ಯಲ್ಲಿ ಹಾವೇರಿಯ ಶ್ರೀಗಳವರು ಮತ್ತು ಶ್ರೀ ಅನ್ನದಾನ ಮಹಾಸ್ವಾಮಿಗಳವರು ಮುಖ್ಯರಾಗಿ ನಿಂತು ಶ್ರೀಗಳವರ ಸಮಾಧಿ ಕ್ರಿಯೆಯನ್ನು ನೆರವೇರಿಸಿದರು. ಶತಾಯುಷಿಗಳಾಗಿ ಬಾಳಿಬೆಳಗಿದ ಮುರುಗೋಡದ ಶ್ರೀ ಮಹಾಂತಜ್ಜನವರ ಸಮಾಧಿಯ ವೇಳೆಯಲ್ಲಿಯೂ ಶ್ರೀಗಳವರು ವಿಶೇಷ ಪಾತ್ರವಹಿಸಿದರು. ಹಾವೇರಿಯ ಶ್ರೀ ಶಿವಬಸವಸ್ವಾಮಿಗಳವರು ಹಾನಗಲ್ಲ ಹಾಲಕೆರೆ ಮತ್ತು ರೋಣದ ಶ್ರೀಗಳವರನ್ನು ಕರೆಯಿಸಿ ಅವರ ಸಮ್ಮುಖದಲ್ಲಿ ನಿಡಗುಂದಿ ಕೊಪ್ಪದಲ್ಲಿ ಶಿವಯೋಗ ಮಂದಿರದ ಶಾಖಾಮಂದಿರವನ್ನು ೧೯೧೪ರಲ್ಲಿ ಆರಂಭಿಸಿದರು. ೧೯೩೦ರಲ್ಲಿ ಶಿವಯೋಗ ಮಂದಿರದಲ್ಲಿ ನಡೆದ ೧೭ನೆಯ ವೀರಶೈವ ಮಹಾಸಭೆಯಲ್ಲಿ ಪ್ರಸಾದ ವಿನಿಯೋಗದ ಕಾರ್ಯವನ್ನು ಶ್ರೀಗಳವರೊಬ್ಬರೇ ವಹಿಸಿಕೊಂಡಿದ್ದರು. ಸುಮಾರು ೪೦೦ ಚೀಲ ಅಕ್ಕಿಯನ್ನು ಸಂಗ್ರಹಿಸಿ ಅಲ್ಲಿ ಅವರು ಮಾಡಿದ ವ್ಯವಸ್ಥೆ ಎಂಥವರನ್ನೂ ಬೆರಳುಕಚ್ಚುವಂತೆ ಮಾಡಿದ್ದಿತು. ಅಲ್ಲದೆ ಆ ಮಹಾಸಭೆಯ ನಿಧಿಸಂಗ್ರಹಣೆಯ ಕಾರ್ಯದಲ್ಲಿಯೂ ಶ್ರೀಗಳವರು ವಿಶೇಷ ಪಾತ್ರವಹಿಸಿದ್ದರು. ೧೯೨೮ರ ಸುಮಾರಿನಲ್ಲಿ ಬಂಥನಾಳ ಶಿವಯೋಗಿಗಳು ನೆರವೇರಿಸಿದ ೭೭೦ ಮಂಟಪ ಪೂಜಾಸಮಾರಂಭದಲ್ಲಿ ಶ್ರೀಗಳವರು ಒಳ್ಳೆಯ ಆಸಕ್ತಿಯಿಂದ ಭಾಗವಹಿಸಿದ್ದರು. ಮುಧೋಳದ ಮೃತ್ಯುಂಜಯ ಸ್ವಾಮಿಗಳು ನೆರವೇರಿಸಿದ ಸಹಸ್ರಮಂಟಪ ಪೂಜಾಸಮಾರಂಭವು (೨೫-೫-೧೯೩೭) ಶ್ರೀಗಳವರ ಹಿರಿತನದಲ್ಲಿಯೆ ಜರುಗಿತು. ಎಂದೂ ಪಾಲಿಕೆಯಲ್ಲಿ ಕೂಡ್ರದೆ ಇದ್ದ ಶ್ರೀಗಳವರನ್ನು ಶ್ರೀ ಮುರುಗೋಡದ ಮಹಾಂತಪ್ಪಗಳು ತಾವು ನೆರವೇರಿಸಿದ ಮಂಟಪದ ಪೂಜಾಮಹೋತ್ಸವದ ವೇಳೆಯಲ್ಲಿ ಕೂಡ್ರಿಸಿ ಬಹುವಿಜೃಂಭಣೆಯಿಂದ ಮೆರವಣಿಗೆ ಮಾಡಿಸಿದರು. ೧೯೭೮ರಲ್ಲಿ ದಾವಣಗೆರೆಯ ಸದ್ಭಕ್ತರು ಶ್ರೀಗಳನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಸುಮಾರು ೧೫೦೦೦ ರೂಪಾಯಿಗಳ ಕಾಣಿಕೆಯನ್ನಿತ್ತು ಗೌರವಿಸಿದರು. ದಿನಾಂಕ ೩೦-೧೨-೧೯೭೭ ರಂದು ಕೂಡಲ ಸಂಗಮದಲ್ಲಿ ಜರುಗಿದ ಮಹಾತ್ಮಾ ಬಸವೇಶ್ವರ ಅಷ್ಟಶತ ಮಾನೋತ್ಸವದ ಷಟ್ಸ್ಥಲ ಧ್ವಜಾರೋಹಣವು ಶ್ರೀಗಳವರಿಂದಲೇ ನೆರವೇರಿತು. ಆಗ ಶ್ರೀಗಳು ''ಬಸವಣ್ಣನವರ ತತ್ವಗಳು ವಿಶ್ವದಾದ್ಯಂತ ಹಬ್ಬಿ ಶಾಂತಿ ಸುವ್ಯವಸ್ಥೆಗಳು ಜಗತ್ತಿನಲ್ಲಿ ನೆಲೆಗೊಳ್ಳುವಂತಾಗಲಿ'' ಎಂದು ಹಾರೈಸಿದರು. ಬಸವ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ಬಿ. ಡಿ. ಜತ್ತಿಯವರು ಒಮ್ಮೆ ಶ್ರೀಮಠಕ್ಕೆ ಬರಲು ಬಸವ ಸಮಿತಿಗೆ ೧೦೦೧ ರೂಪಾಯಿಗಳನ್ನಿತ್ತು ಆಶೀರ್ವದಿಸಿದರು.

ಶ್ರೀಗಳವರು ಭಕ್ತರಲ್ಲಿ ಎಂದೂ ಭಿನ್ನಭಾವ ತೋರುತ್ತಿದ್ದಿಲ್ಲ. ಒಮ್ಮೆ ಹಾಲಕೆರೆಯಲ್ಲಿ ಒಬ್ಬ ಹಡಪದ ಶ್ರೀಗಳವರನ್ನು ತಾನು ಹೊಸದಾಗಿ ಕಟ್ಟಿಸಿದ ಮನೆಗೆ ಪಾದಪೂಜೆಗೆ ಬಿನ್ನಹ ಮಾಡಿದ. ಹಲವರು ವಿರೋಧಿಸಿದರೂ ''ಭಕ್ತಿಯಿಂದ ಕರೆದರೆ ಹೋಗುವಲ್ಲಿ ತಪ್ಪೇನಿದೆ'' ಎಂದು ಹೋಗಿ ಪಾದಪೂಜೆ ನೆರವೇರಿಸಿ ಬಂದರು. ಕುರುಬ ಜನಾಂಗಕ್ಕೆ ಸೇರಿದ ಸಜ್ಜಲಗುಡ್ಡದ ಶರಣಮ್ಮನವರಿಗೆ ದೊಡ್ಡಬಸವಾರ್ಯರು ಲಿಂದೀಕ್ಷೆಯನ್ನಿತ್ತಾಗ ದೊಡ್ಡ ಪ್ರತಿರೋಧವೇ ಉಂಟಾಯಿತು. ಶರಣಮ್ಮನವರ ಆಚಾರ-ವಿಚಾರಗಳನ್ನು ತಿಳಿದ ಶ್ರೀಗಳು ಅವರ ಬೆಂಬಲಕ್ಕೆ ನಿಲ್ಲಲು ಎದ್ದಿದ್ದ ವಾದ-ವಿವಾದ ನಿಂತುಹೋಯಿತು. ಮುಂದೆ ಶರಣಮ್ಮನವರು ಶ್ರೀಗಳನ್ನು ತಮ್ಮ ಮಾರ್ಗದರ್ಶಿ ಎಂದೇ ಭಾವಿಸಿದರು, ಒಮ್ಮೆ ತಮ್ಮ ಭಾವಚಿತ್ರ ತಗೆಸಿಕೊಳ್ಳುವ ಪ್ರಸಂಗ ಬಂದಾಗ ಶ್ರೀಗಳವರ ಭಾವಚಿತ್ರವನ್ನು ಕೊರಳಲ್ಲಿ ಹಾಕಿಕೊಂಡು, ಮುಂದೆ ಹಿಡಿದು, ಅಜ್ಜನ ಚಿತ್ರ ಮೂಡಿದ ಮೇಲೆ ನನ್ನ ಚಿತ್ರ ಮೂಡಲಿ ಎಂದು ತಗೆಸಿಕೊಂಡಿರು.

ಶ್ರೀಗಳವರಿಂದ ಅಧಿಕಾರ ಅನುಗ್ರಹ ಪಡೆದವರು ಹತ್ತುಹಲವು ಜನ. ಇಲಕಲ್ಲದ ಗುರುಮಹಾಂತ ಸ್ವಾಮಿಗಳು, ನಾಗನೂರ ಶಿವಬಸವ ಸ್ವಾಮಿಗಳು, ಇನಾಮಹೊಂಗಲದ ಸಿದ್ಧಲಿಂಗ ಸ್ವಾಮಿಗಳು, ಚೆನ್ನವೀರ ಸ್ವಾಮಿಗಳು, ಮೂಡಿ ಚೆನ್ನವೀರ ಸ್ವಾಮಿಗಳು, ಅಮೀನಗಡದ ಪ್ರಭುಸ್ವಾಮಿಗಳು, ಕನಕಗಿರಿ ರುದ್ರಮುನಿ ಸ್ವಾಮಿಗಳು, ಶಂಕರ ಸ್ವಾಮಿಗಳು, ಚೆನ್ನಬಸವ ಸ್ವಾಮಿಗಳು, ಕುದರಿಮೋತಿ ಮಹಾಂತ ಸ್ವಾಮಿಗಳು, ರೋಣದ ಶಿವಲಿಂಗ ಸ್ವಾಮಿಗಳು, ಗದುಗಿನ ಶಿವಕುಮಾರ ಸ್ವಾಮಿಗಳು, ಕೊಪ್ಪದ ಮಹಾಂತ ಸ್ವಾಮಿಗಳು, ಹಾಲಕೆರೆ ಬಸವಲಿಂಗ ಸ್ವಾಮಿಗಳು, ಸಂತೆಕೇಲೂರ ಮಲ್ಲಿಕಾರ್ಜುನ ಸ್ವಾಮಿಗಳು, ಬೆಳಗಾವಿಯ

ಪ್ರಭುಸ್ವಾಮಿಗಳು, ಹತ್ತರಕೆ ಪಟ್ಟಾಧ್ಯಕ್ಷರು, ಯಾದವಾಡ ಪಟ್ಟಾಧ್ಯಕ್ಷರು, ಬೆದವಟ್ಟಿ ಪಟ್ಟಾಧ್ಯಕ್ಷರು, ಶಾಂತಮರಿದೇವರು, ಗರಗದ ಮರಿದೇವರು ಮೊದಲಾದವರು ಪ್ರಮುಖರು.

ಧರ್ಮದ ಭದ್ರಬುನಾದಿಗೆ ಸಮಾಜದ ಪ್ರಗತಿಯೆ ಮೂಲಕಾರಣವೆಂದು ತಿಳಿದು, ಶ್ರೀಗಳವರು ಸಮಾಜದ ಪ್ರಗತಿಯತ್ತ ಚಿಂತನೆಗೈಯ್ಯತೊಡಗಿದರು. ಸಮಾಜದ ಪ್ರಗತಿಗೆ ಇರುವ ಒಂದೇ ಒಂದು ಹಾದಿ ವಿದ್ಯೆಯೆಂದು ತಿಳಿದು ಮೊದಮೊದಲು ವಿದ್ಯೆಯನ್ನು ಕಲಿಯಲು ಕಾಶಿ ಮೊದಲಾದ ಸ್ಥಳಗಳಿಗೆ ಹೋಗುವವರಿಗೆ ಅಪಾರ ಸಹಾಯವನ್ನು ಮಾಡಿದರು. ಹಾಗೆ ಹೋಗಿಬಂದವರಲ್ಲಿ ಬಾಳೆಹಳ್ಳಿಯ ಶ್ರೀ ಸದಾಶಿವ ಸ್ವಾಮಿಗಳವರು, ಕೊಟ್ಟೂರ ಶ್ರೀ ಜಗದ್ಗುರು ಸಂಗನಬಸವ ಸ್ವಾಮಿಗಳು ಪ್ರಮುಖರು. ಕೊಪ್ಪದ ಶ್ರೀ ಮಹಾಂತ ಸ್ವಾಮಿಗಳು ಶ್ರೀಗಳವರ ಆದೇಶದ ಮೇರೆಗೆ ಗದುಗಿನ ಆನಂದಾಶ್ರಮದಲ್ಲಿಯೇ ಇದ್ದು ಅನುಷ್ಠಾನಗೈದು ಸಿದ್ಧಿಯನ್ನು ಪಡೆದರು. ಅಂಕಲಗಿಯ ಶ್ರೀ ಅಡವಿ ಮಹಾಸ್ವಾಮಿಗಳು, ಸಾಲೂರ ಶ್ರೀ ಪಟ್ಟದ್ದೇವರು ಕೋಡಿಕೊಪ್ಪದ ಶ್ರೀಮಠದಲ್ಲಿಯೇ ಇದ್ದು ಪಾಠ ಪ್ರವಚನ ಮಾಡುತ್ತ ಅನುಷ್ಠಾನ ಮಾಡಿದರು.

ಶ್ರೀಗಳವರು ಹಾಲಕೆರೆಯಲ್ಲಿ ಕ್ರಿ.ಶ. ೧೯೧೫ರಲ್ಲಿಯೇ ಒಂದು ಪಾಠಶಾಲೆಯನ್ನು ಸ್ಥಾಪಿಸಿ, ನಿಧಿಯನ್ನು ಕೂಡಿಸಿ ಅದರಿಂದ ಆ ಪಾಠಶಾಲೆಯು ಸುಗಮವಾಗಿ ಸಾಗುವಂತೆ ಮಾಡಿದರು. ಕೋಡಿಕೊಪ್ಪದ ಮಹಾವಿದ್ವಾಂಸರಾಗಿದ್ದ ಪಂ. ಬಸವರಾಜಶಾಸ್ತ್ರಿಗಳ ಅಧ್ಯಾಪಕತ್ವದಲ್ಲಿ ಆ ಪಾಠಶಾಲೆ ಊರ್ಜಿತಾವಸ್ಥೆಯನ್ನು ಹೊಂದಿತು. ಕ್ರಿ.ಶ. ೧೯೧೯ ಎಪ್ರಿಲ್ ತಿಂಗಳಿನಲ್ಲಿ ಶ್ರೀಗಳವರು, ಶ್ರೀಮನ್ನಿರಂಜನ ಹಾವೇರಿ ಸ್ವಾಮಿಗಳವರನ್ನು ಕೂಡಿಕೊಂಡು ನರೇಗಲ್ಲ ಶ್ರೀ ಅನ್ನದಾನ ವಿಜಯ ಹೈಸ್ಕೂಲನ್ನು ಸ್ಥಾಪಿಸಿದರು. ಅದಕ್ಕಾಗಿ ಸುಮಾರು ೮೦೦ ರೂಪಾಯಿಗಳನ್ನು ಸಂಗ್ರಹ ಮಾಡಿ, ಅದನ್ನು ಪರಸ್ಪರ ಸಹಕಾರಿ ಸಂಘದಲ್ಲಿ ಇಟ್ಟು, ಬರುವ ಬಡ್ಡಿಯಿಂದ ಶಾಲೆಯ ವ್ಯವಹಾರ ನಡೆಯುವಂತೆ ಮಾಡಿದರು. ಮೊದಮೊದಲು ಗ್ರಾಮದ ಪ್ರಮುಖರೇ ಅದರ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ೧೯೧೯ರಲ್ಲಿ ಆ ಶಾಲೆಗೆ ಸಂದರ್ಶನವಿತ್ತ ಶ್ರೀಯುತ ಗೋಖಲೆ ಎಂಬ ಮಾಮಲೆದಾರನು "ಈ ಹೊತ್ತು ಈ ಶಾಲೆಯನ್ನು ಸಂದರ್ಶಿಸಿದೆವು. ಈ ಶಾಲೆಯು ಸುಮಾರು ದೀಡು ತಿಂಗಳ ಹಿಂದೆ ಸುರು ಆಗಿರುವದು. ಇಷ್ಟು ಸ್ವಲ್ಪ ಅವಧಿಯಲ್ಲಿ ಆಗಿರುವ ಪ್ರಗತಿಯು ಭೂಷಣವಿರುವದು. ಶಿಕ್ಷಕರು ಉತ್ಸಾಹಿ ಇರುತ್ತಾರೆ ಮತ್ತು ಇದೇ ರೀತಿಯಿಂದ ಕೆಲಸ ಸಾಗಿ ಯಶಸ್ವಿಯಾಗುವದೆಂದು ನಾವು ಕೋರುತ್ತೇವೆ. ಶಾಲೆಯನ್ನು ತೆರೆಯುವ ಸಮಾರಂಭವು ಹಾಲಕೆರೆಯ ಶ್ರೀ ಅನ್ನದಾನ ಸ್ವಾಮಿಗಳ ಕೈಯಿಂದ ಆಗಿರುತ್ತದೆ. ಅವರ ಆಶೀರ್ವಾದದಿಂದ ಈ ಶಾಲೆಯ ಉತ್ಕರ್ಷವಾಗುವದೆಂದು ನಂಬಿದ್ದೇನೆ" ಎಂದು ಅಭಿಪ್ರಾಯಪಟ್ಟಿರುವನು. ೨೭–೪–೧೯೪೭ರಂದು ಆ ಶಾಲೆ ಸರಕಾರದಿಂದ ಮನ್ನಣೆ ಪಡೆಯಿತು. ಮುಂದೆ ಕೆಲವೊಂದು ತೊಂದರೆಗಳು ತಲೆದೋರಿದ್ದರಿಂದ ೧೩–೫–೧೯೫೫ರಂದು ಪೂಜ್ಯ ಶ್ರೀಗಳವರೇ "ಎಸ್.ಎ.ವ್ಹಿವ್ಹಿ ಸಮಿತಿ"ಯನ್ನು ಸ್ಥಾಪಿಸಿ ಆ ಶಾಲೆಯ ಸಂಪೂರ್ಣ ಹೊಣೆಯನ್ನು ವಹಿಸಿಕೊಂಡರು. ಈಗ ಈ ಸಂಸ್ಥೆ ಹೆಮ್ಮರವಾಗಿ ಬೆಳೆದು ಅದರ ಅಂಗವಾಗಿ ೧. ಶ್ರೀ ಅನ್ನದಾನೀಶ್ವರ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯ, ನರೇಗಲ್ಲ ೨. ಶ್ರೀ ಅನ್ನದಾನ ವಿಜಯ ಗಂಡುಮಕ್ಕಳ ಮಾಧ್ಯಮಿಕ ಶಾಲೆ, ನರೇಗಲ್ಲ ೩. ಶ್ರೀ ಅನ್ನದಾನ ವಿಜಯ ಬಾಲಕಿಯರ ಮಾಧ್ಯಮಿಕ ಶಾಲೆ, ನರೇಗಲ್ಲ ೪. ಶ್ರೀ ಅನ್ನದಾನೀಶ್ವರ ಮಾಧ್ಯಮಿಕ ಶಾಲೆ, ನಿಡಗುಂದಿ ೫. ಶ್ರೀ ಅನ್ನದಾನ ವಿಜಯ ಮಾಧ್ಯಮಿಕ ಶಾಲೆ, ಅಬ್ಬಿಗೇರಿ ೬. ಮಲ್ಲಣಾರ್ಯ ಸಂಸ್ಕೃತ ಪಾಠಶಾಲೆ ಅಬ್ಬಿಗೇರಿ ೭. ಕೋಡಿಕೊಪ್ಪದ ಶ್ರೀ ವೀರಪ್ಪಜ್ಜನವರ, ಬಾಗಿಲುಕೋಟೆ ಶ್ರೀ ಮಲ್ಲಣಾರ್ಯರ ಉಚಿತ ಪ್ರಸಾದ ನಿಲಯ ೮. ಶ್ರೀ ಅನ್ನದಾನ ವಿಜಯ ವಿದ್ಯಾರ್ಥಿಗಳ ವಸತಿ ಗೃಹಗಳು ನಡೆಸಲ್ಪಡುತ್ತಿದ್ದು ಈ ಭಾಗದ ಸರ್ವತೋಮುಖ ಅಭಿವೃದ್ಧಿಗೆ ನಾಂದಿಹಾಡಿದೆ.

ಇವು ಶ್ರೀಗಳವರು ಪ್ರತ್ಯಕ್ಷವಾಗಿ ನಡೆಸುತ್ತಿದ್ದ ಸಂಸ್ಥೆಗಳಾದರೆ, ಇನ್ನು ಕೆಲವು ಅವರ ಅಭಯ ಹಸ್ತದಿಂದ ಮುಂದೆ ಬಂದವುಗಳಾಗಿವೆ. ಬೇಲೂರು, ಗಜೇಂದ್ರಗಡಗಳಲ್ಲಿ ತಮ್ಮ ಮಠದ ಉತ್ಪನ್ನವನ್ನೆಲ್ಲ ಅಲ್ಲಿಯ ವಿದ್ಯಾವರ್ಧಕ ಸಂಘದ ಅಭಿವೃದ್ಧಿಗಾಗಿ ವಿನಿಯೋಗಿಸಲು ಬಿಟ್ಟುಕೊಟ್ಟಿದ್ದಾರೆ. ಗುಡೂರು ಆಲೂರು ಮೊದಲಾದವುಗಳಲ್ಲಿಯ ಶಾಲೆ ಪ್ರಸಾದ ನಿಲಯಗಳಿಗೆ, ಹನುಮಸಾಗರ, ಕುಷ್ಟಗಿ ಮೊದಲಾದವುಗಳಲ್ಲಿಯ ಪ್ರಸಾದ ನಿಲಯಗಳಿಗೆ ಶ್ರೀರಕ್ಷೆಯಾಗಿ ನಿಂತರು. ಒಮ್ಮೆ ಗೋಕಾಕ ತಾಲೂಕಿನ ಯಾದವಾಡದ ಪಟ್ಟದ್ದೇವರು ತಾವು ಕಟ್ಟಿಸಿದ ಹೈಸ್ಕೂಲಿನ ಉದ್ಘಾಟನೆಗೆ ಶ್ರೀಗಳವರನ್ನು ಆಮಂತ್ರಿಸಿದಾಗ ಆ ಶಾಲೆಗೆ ಶ್ರೀಗಳವರು ೧೦೦೧ ರೂಪಾಯಿಗಳನ್ನಿತ್ತು ಆಶೀರ್ವದಿಸಿದರು. ಸಂಗಮದ ಪಾಟೀಲರಾದ ಶ್ರೀ ಗಂಗನಗೌಡರ ಆಹ್ವಾನದ ಮೇರೆಗೆ ಸಂಗಮಕ್ಕೆ ದಯಮಾಡಿಸಿ ಅಲ್ಲಿಯ ಶಾಲೆಯ ಕಟ್ಟಡಕ್ಕಾಗಿ ೨೦೦ ಚೀಲ ಜೋಳ, ೩೫೫ ರೂಪಾಯಿಗಳನ್ನು ಸಂಗ್ರಹಿಸಿ ಕೊಟ್ಟರು. ಗಂಗನಗೌಡರು ಕೊಟ್ಟ ಒಂದು ಕೂರಿಗೆ ಹೊಲವನ್ನೂ ಆ ಸಂಸ್ಥೆಗೇ ಬಿಟ್ಟುಕೊಟ್ಟರು. ಹೀಗೆ ಅಲ್ಲಲ್ಲಿ ಸಂಗ್ರಹಿಸಿದ ಹಣ, ದವಸ ಧಾನ್ಯಗಳನ್ನೆಲ್ಲ ಅಲ್ಲಲ್ಲಿಯ ಸಂಘ ಸಂಸ್ಥೆಗಳಿಗೇ ಕೊಟ್ಟುಬರುವುದು ಶ್ರೀಗಳವರ ವೈಶಿಷ್ಟ್ಯವಾಗಿದ್ದಿತು.

ಧರ್ಮಗ್ರಂಥಗಳ ಪರಿಶೋಧನೆಗಾಗಿ ಪಂಡಿತರನ್ನು ಬೇರೆ ಬೇರೆ ಸ್ಥಳಗಳಿಗೆ ಕಳುಹಿಸಿ ಅವರಿಂದ ಪರಿಷ್ಕರಿಸಲ್ಪಟ್ಟ ಹಲವು ಗ್ರಂಥಗಳನ್ನು ಶ್ರೀಮಠವು ಪ್ರಕಟಿಸಿದೆ. ೬–೧–೧೯೨೫ರಲ್ಲಿ ಪಂ. ಬಸವರಾಜ ಶಾಸ್ತ್ರಿಗಳನ್ನು ಶ್ರೀಗಳವರು ಮದ್ರಾಸಿಗೆ

ಮಳುಹಿಸಲು ಅವರು ೫ ತಿಂಗಳವರೆಗೆ ಅಲ್ಲಿದ್ದು ಶೋಧಿಸಿ, ಪರಿಷ್ಕರಿಸಿದ ಗ್ರಂಥಗಳನ್ನು ಶ್ರೀಮಠದಿಂದ ಪ್ರಕಟಿಸಿದರು. ಅವುಗಳಲ್ಲಿ ಶಂಕರಲಿಂಗ ಶತಕ, ಕ್ಷಮಾಪರಾಧ ಸ್ತೋತ್ರ ಮೊದಲಾದವು ಪ್ರಮುಖವಾದವು. ಅಲ್ಲದೆ ಶ್ರೀ ಮಠಕ್ಕೆ ಸಂಬಂಧಿಸಿದ ಯೋಗಿರಾಜ ವಿಜಯ, ಶ್ರೀ ಅನ್ನದಾನ ಮಹಾಸ್ವಾಮಿಗಳವರ ಪುರಾಣ ಮೊದಲಾದ ಕೃತಿಗಳನ್ನೂ ಪ್ರಕಟಿಸಿದರು.

ಸಮಾಜೋದ್ಧಾರ ಶ್ರೀಗಳವರು ಪಠಿಸುತ್ತಿದ್ದ ನಿತ್ಯ ಮಂತ್ರವಾಗಿದ್ದಿತು. ಗುರು ವಿರಕ್ತರೆಲ್ಲ ಒಂದಾಗಬೇಕು, ಅವರೆಲ್ಲ ತಮ್ಮ ತಮ್ಮ ಕರ್ತವ್ಯಗಳನ್ನು ಅರಿತು ನಡೆಯಬೇಕು ಎಂಬುದು ಶ್ರೀಗಳವರ ಕಳಕಳಿಯ ಕರೆಯಾಗಿದ್ದಿತು. ಅಂತೆಯೇ ಅವರು ನಡೆದೂ ತೋರುತ್ತಿದ್ದರು. ಹಳ್ಳಿಗಳಲ್ಲಿಯ ಪರಸ್ಪರ ವೈಷಮ್ಯ–ದ್ವೇಷಾಸೂಯೆಗಳನ್ನು ನಿವಾರಿಸಿ ಪರಸ್ಪರ ಸಹಕಾರ–ಸ್ನೇಹಗಳನ್ನುಂಟು ಮಾಡಲು ಯಾತ್ರೆಗಳು ಒಳ್ಳೆಯ ಮಾಧ್ಯಮಗಳೆಂದು ತಿಳಿದು, ತಮ್ಮ ಮೂಲಮಠ ಹಾಗೂ ಶಾಖಾಮಠಗಳಲ್ಲಿ ಅವುಗಳನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸುತ್ತಿದ್ದರು. ಅವುಗಳ ಅಂಗವಾಗಿ ಪುರಾಣ ಪ್ರವಚನ, ಕೀರ್ತನೆಗಳನ್ನೂ ವಿದ್ವಜ್ಜನ ಗೋಷ್ಠಿಗಳನ್ನೂ ಏರ್ಪಡಿಸಿ ಗ್ರಾಮಗಳಲ್ಲಿಯ ಜನರ ಮನದ ಮೈಲಿಗೆಯನ್ನು ಕಳೆದು ಅವರನ್ನು ಮಹಾಂತರನ್ನಾಗಿ ಮಾಡುತ್ತಿದ್ದರು. ಅದೇ ವೇಳೆಯಲ್ಲಿ ಗ್ರಾಮೀಣ ಕಲೆಗಳಾದ ಕರಡಿ ಮಜಲು, ಗೀ ಗೀ ಪದ, ನಾಟಕ, ಬೈಲಾಟ ಮೊದಲಾದವುಗಳನ್ನು ಏರ್ಪಡಿಸಿ ಅವುಗಳಿಗೆ ಸಾಕಷ್ಟು ಪ್ರೋತ್ಸಾಹ ಕೊಡುತ್ತಿದ್ದರು. ಬಡವರೆಂದರೆ ಶ್ರೀಗಳವರಿಗೆ ಅಪಾರ ಕರುಣೆಯಿದ್ದಿತು. ಶ್ರೀಮಠದ ತೋಟ–ಪಟ್ಟಿಗಳಲ್ಲಿಯೇ ಆಗಲಿ, ಕಟ್ಟಡದ ಕಾರ್ಯಗಳಲ್ಲಿಯೇ ಆಗಲಿ ದುಡಿಯುವವರ ಮೇಲೆ ಶ್ರೀಗಳವರ ಕರುಣಾಮೃತದ ಕಳೆ ತುಂಬಿ ಹರಿಯುತ್ತಿದ್ದಿತು. ಅವರಿಗೆ ಕೈ ತುಂಬ ಕೊಟ್ಟು, ಮನದುಂಬಿ ಹರಸಿ ಸಲಹುತ್ತಿದ್ದರು.

ಶ್ರೀಗಳವರ ಪ್ರಭಾವಕ್ಕೆ ಒಳಗಾದವರಲ್ಲಿ ನಾಡಿನ ಪ್ರಮುಖ ರಾಜಕಾರಣಿಗಳೂ ಸೇರಿದ್ದರು. ಒಡಿಸಾದ ರಾಜ್ಯಪಾಲರಾಗಿದ್ದ ಶ್ರೀ ಬಿ. ಡಿ. ಜತ್ತಿಯವರು, ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್. ನಿಜಲಿಂಗಪ್ಪನವರು, ರಾಜ್ಯದ ಶಿಕ್ಷಣ ಮಂತ್ರಿಗಳಗಿದ್ದ ಶ್ರೀ ಎಸ್. ಆರ್. ಕಂಠಿಯವರು, ರಾಜ್ಯದ ಪಂಚಾಯತ್ ಮತ್ತು ಸಹಕಾರ ಸಚಿವರಾಗಿದ್ದ ಶ್ರೀ ಪಿ. ಎಮ್. ನಾಡಗೌಡರು, ರೇಷ್ಮೆ ಖಾತೆಯ ಸಚಿವರಾಗಿದ್ದ ಶ್ರೀ ನಾಗರಾಳ ಸಂಗಪ್ಪ ಅವರು ಶ್ರೀಗಳವರ ಭಕ್ತಾಗ್ರಣಿಗಳಲ್ಲಿ ಪ್ರಮುಖರು. ಇಷ್ಟೆಲ್ಲ ಇದ್ದರೂ ಶ್ರೀಗಳವರು ಎಂದೂ ಆತ್ಮಸ್ತುತಿಗೆ ಆಸ್ಪದವನ್ನೀಯಲಿಲ್ಲ. ಒಮ್ಮೆ ಶಿವಯೋಗ ಮಂದಿರದಲ್ಲಿ ಸಿರಿಗೆರೆಯ ಕೀರ್ತನಕೇಸರಿ ರೇವಣಸಿದ್ಧ ಶಾಸ್ತ್ರಿಗಳು ತಮ್ಮ ಪ್ರವಚನದಲ್ಲಿ ಮೇಲಿಂದ ಮೇಲೆ ಶ್ರೀ ಅನ್ನದಾನ ಮಹಾಸ್ವಾಮಿಗಳವರ ಹೆಸರನ್ನು ಪ್ರಸ್ತಾಪಿಸತೊಡಗಿದಾಗ, ಶ್ರೀಗಳವರು ಅದನ್ನು ತಡೆದು, ಬೇಕಾದರೆ ಹಾನಗಲ್ಲ ಶ್ರೀಗಳವರ ಹೆಸರನ್ನು ತೆಗೆದುಕೊಳ್ಳುವಂತೆ ಹೇಳಿದರು. ಹೀಗೆ ಸದ್ದುಗದ್ದಲವಿಲ್ಲದೆ ಶಿವಯೋಗದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರಾಗಿದ್ದರು ಪೂಜ್ಯ ಶ್ರೀಗಳವರು. ವ್ರತಗಳಲ್ಲಿಯೇ ಅತ್ಯಂತ ಕಠೋರವಾದ "ಶೀಲಾಬಳಕೆ" ವ್ರತವನ್ನು ೩೦ ವರ್ಷಗಳವರೆಗೆ ಅವ್ಯಾಹತವಾಗಿ ನಡೆಸಿ ಶ್ರೀಗಳವರ ಸಮುದಾಯದಲ್ಲಿಯೇ ಒಳ್ಳೆಯ ಗೌರವಕ್ಕೆ ಪಾತ್ರರಾಗಿದ್ದರು.

ಹೀಗೆ ಲಿಂಗವಾಗಿ ಲಿಂಗವನ್ನು ಪೂಜಿಸುತ್ತ ೯೧ ವರ್ಷಗಳವರೆಗೆ ಬದುಕಿದ ಶ್ರೀಗಳವರು, ಕೊನೆಯ ಕೆಲವು ವರ್ಷಗಳಲ್ಲಿ ಅನಾರೋಗ್ಯದಿಂದ ಬಳಲಬೇಕಾಯಿತು. ಘಟಪ್ರಭಾದ ಆರೋಗ್ಯ ಧಾಮದಲ್ಲಿ ಕೆಲಕಾಲ ಚಿಕಿತ್ಸೆ ಪಡೆದರು. ಅಲ್ಲಿಂದ ಬಂದ ಕೆಲವರ್ಷ ಆರೋಗ್ಯವಾಗಿಯೇ ಇದ್ದರು. ಮತ್ತೆ ಅನಾರೋಗ್ಯವುಂಟಾಗಲು ಬೆಂಗಳೂರಿಗೆ ಹೋಗಿ ಸಚಿವರುಗಳಾದ ಶ್ರೀ ಪಿ. ಎಮ್. ನಾಡಗೌಡ, ಶ್ರೀ ಸಿ. ಎನ್. ಪಾಟೀಲ ಅವರುಗಳ ಮನೆಯಲ್ಲಿಯೆ ಇದ್ದು ಡಾ. ರುದ್ರಪ್ಪ ಅವರಿಂದ ಚಿಕಿತ್ಸೆ ಪಡೆದು ಹಾಲಕೆರೆಗೆ ದಯಮಾಡಿಸಿದರು. ಕೆಲವು ದಿನಗಳ ನಂತರ ಮತ್ತೆ ಆರೋಗ್ಯ ಬಿಗಡಾಯಿಸಲು ಹುಬ್ಬಳ್ಳಿಯ ಡಾ. ಆರ್. ಬಿ. ಪಾಟೀಲ ಅವರಲ್ಲಿಗೆ ಕರೆತಂದರು. ಅಲ್ಲಿ ಅವರು ಎಷ್ಟೇ ಪ್ರಯತ್ನಿಸಿದರೂ ಫಲ ಕಾಣದಂತಾಯಿತು. ತಕ್ಷಣವೇ ಮೂರುಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರನ್ನು ಕರೆಯಿಸಿಕೊಳ್ಳಲಾಯಿತು. ಅವರು ಹಿಂಜರಿಯುತ್ತಲೇ ಕೊಟ್ಟ ಪಾದೋದಕವನ್ನು ಶ್ರೀಗಳವರು ಆ ಸ್ಥಿತಿಯಲ್ಲಿಯೂ ಸಂಪೂರ್ಣವಾಗಿ ಸ್ವೀಕರಿಸಿ ಲಿಂಗದಲ್ಲಿ ಐಕ್ಯವಾದರು (೧೯–೮–೧೯೭೭ ಶುಕ್ರವಾರ, ಪಿಂಗಳನಾಮ ಸಂವತ್ಸರ, ಶ್ರಾವಣ ಪಂಚಮಿ). ಸುದ್ದಿ ಕಾಳ್ಗಿಚ್ಚಿನಂತೆ ನಾಡಿನ ತುಂಬೆಲ್ಲ ಹಬ್ಬಿತು. ಸಾಗರೋಪಾದಿಯಲ್ಲಿ ಹರ ಗುರು ಚರಮೂರ್ತಿಗಳು ಭಕ್ತಸಮೂಹ ಹಾಲಕೆರೆಗೆ ಬಂದು ಸೇರಿತು. ಮರುದಿನ ಶ್ರೀಗಳವರು ಹಾಲಕೆರೆಯ ಕಟ್ಟಿಗೆ ಮಠದಲ್ಲಿ ಕಟ್ಟಿಸಿದ ಸಮಾಧಿ ಸ್ಥಳದಲ್ಲಿಯೆ ಶ್ರೀಗಳವರ ಅಂತ್ಯ ಸಂಸ್ಕಾರವನ್ನು ಮಾಡಲಾಯಿತು. ಇಡಿ ನಾಡೇ ಶೋಕಸಾಗರದಲ್ಲಿ ಮುಳುಗಿಹೋಯಿತು. ಬಡಮಕ್ಕಳು ತಮ್ಮ ಬಾಳಜ್ಯೋತಿಯಂತಿದ್ದ ಶ್ರೀಗಳವರ ಅಗಲುವಿಕೆಯಿಂದ ಅನಾಥಪ್ರಜ್ಞೆಯನ್ನನುಭವಿಸುವಂತಾಯಿತು.

ಹೀಗೆ ತೊಂಬತ್ತು ವರ್ಷ ಬದುಕಿ, ಆತ್ಮೋದ್ಧಾರದೊಂದಿಗೆ ಸಮಾಜೋದ್ಧಾರವನ್ನೂ ಪಠಿಸುತ್ತ ಲಿಂಗದಲ್ಲಿ ಲಿಂಗವಾಗಿ ಹೋದ ಪೂಜ್ಯಶ್ರೀ ಅನ್ನದಾನ ಮಹಾಸ್ವಾಮಿಗಳವರನ್ನು ಆ ಭಾಗದ ಜನ ತಮ್ಮ ಮನೆ–ಮನಗಳಲ್ಲಿ ಸದಾ ಸ್ಮರಿಸುತ್ತಲೇ ಇದ್ದಾರೆ.

■■

# ನವಿಲಗುಂದ ಶ್ರೀ ಬಸವಲಿಂಗ ಮಹಾಸ್ವಾಮಿಗಳು

• ಡಾ. ಸಂಗಮೇಶ ಹಂಡಿಗಿ ಹುಬ್ಬಳ್ಳಿ

## ಪರಂಪರೆ

ನವಿಲಗುಂದ ನೆಲವು ಪ್ರಾಚೀನ ಕಾಲದಿಂದಲೂ ಪುಣ್ಯಪುರುಷರು ಅಡಿಯಿಟ್ಟಿರುವುದರಿಂದ ಪುಣ್ಯಕ್ಷೇತ್ರವೆನಿಸಿದೆ. ಹದಿನಾರನೆಯ ಶತಮಾನದಲ್ಲಿ ಆಗಿ ಹೋದ ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಪುಣ್ಯಪರಂಪರೆಯ ಪವಾಡಪುರುಷ ಶ್ರೀ ಜಡೆಸ್ವಾಮಿಗಳು ತಪಸ್ಸು ಮಾಡಿದ ಗವಿಮಠವು ಗುಡ್ಡದ ಓರೆಯಲ್ಲಿದೆ.

ಜೈನ ಮತದ ಗೌಡರೊಬ್ಬರು ಜಡೆಸ್ವಾಮಿಗಳು ತಪಸ್ಸು ಮಾಡುತ್ತಿದ್ದ ಗವಿಯಿಂದ ಅನತಿ ದೂರದಲ್ಲಿ ಬಾವಿಯನ್ನು ಅಗೆಸತೊಡಗಿದ್ದರು. ಎಷ್ಟು ಆಳ ಅಗೆದರೂಬಾವಿಯಲ್ಲಿ ನೀರು ಕಾಣಲಿಲ್ಲ. ಗವಿಯ ಬಳಿ ಧ್ಯಾನಸ್ಥರಾದ ಸ್ವಾಮಿಗಳನ್ನು ಗೌಡರು ಕಂಡು ನಮಸ್ಕರಿಸಿ, ವಿನೀತರಾಗಿ ತಮ್ಮ ಉದ್ದೇಶವನ್ನು ವಿವರಿಸಿದರು. ಸ್ವಾಮಿಗಳು ಚಿಂತಿಸಬೇಡಿರೆಂದು ಗೌಡರಿಗೆ ಅಭಯವಿತ್ತರು. ತಾವು ಬಾವಿಯಲ್ಲಿ ಇಳಿದು ಗಂಗೆಗಾಗಿ ಪೂಜೆ ಪ್ರಾರ್ಥನೆ ಸಲ್ಲಿಸಿ ಮೇಲೆ ಬರುವುದೊಂದೇ ತಡ ಬಾವಿಯಲ್ಲಿ ನೀರಿನ ಸೆಲೆ ಚಿಮ್ಮಿತು. ಗೌಡರು ಸ್ವಾಮಿಗಳ ದಿವ್ಯ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ಗವಿಯ ಸುತ್ತಲಿನ ವಿಶಾಲವಾದ ಪ್ರದೇಶವನ್ನು ಅವರಿಗೆ ದಾನವಾಗಿ ಅರ್ಪಿಸಿದರು. ಆ ಸ್ಥಳದಲ್ಲಿ ತಲೆಯೆತ್ತಿದ ಮಠವೇ ಇಂದಿನ ಗವಿಮಠ.

ಈ ಮಠದ ಭವ್ಯ ಪರಂಪರೆಯಲ್ಲಿ ಆಗಿಹೋದ ಶ್ರೀ ಸಿದ್ಧಲಿಂಗ ಸ್ವಾಮಿಗಳ ನಂತರ ಬಂದವರೇ ಶ್ರೀ ಮ.ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳು

## ಜನನ-ಬಾಲ್ಯ

ನವಿಲಗುಂದ ತಾಲೂಕಿನ ತಿರ್ಲಾಪುರ ಗ್ರಾಮದ ಬಡತನದ ಆದರೆ ಸದಾಚಾರದ ಸದ್ಭಕ್ತರ 'ಅಣ್ಣಿಗೇರಿ' ಎಂಬ ಮನೆತನದ ಎಲ್ಲಪ್ಪ ಮತ್ತುಮಲ್ಲವ್ವ ದಂಪತಿಗಳ ಪುತ್ರನಾಗಿ ೧೮೮೮ರಲ್ಲಿ ಬಸವಲಿಂಗ ಜನಿಸಿದ. ಈ ಪೂರ್ವದಲ್ಲಿ ಒಂದು ಪ್ರಸಂಗ ನಡೆಯಿತಂತೆ. ಯಾರಿಗೋ ಆಗಬೇಕಾದ ಶಿಕ್ಷೆ ಒಂದು ತಪ್ಪಿನಿಂದಾಗಿ ಅಣ್ಣಿಗೇರಿ ಎಲ್ಲಪ್ಪನಿಗಾಯಿತಂತೆ. ಇದರಿಂದಾಗಿ ಮನೆತನವು ಕಷ್ಟಕ್ಕೆ ಒಳಗಾಗಬೇಕಾಯಿತು ಎಲಪ್ಪನ ಪತ್ನಿ ಆಗ ಗರ್ಭಿಣಿಯಾಗಿದ್ದಳು. ಗಂಡನಿಗಾದ ಅನ್ಯಾಯಕ್ಕಾಗಿ ಆಕೆ ಕೊರಗುವಂತಾಯಿತು. ಆಕೆಗೆ ಬಾಳಿನಲ್ಲಿ ವೈರಾಗ್ಯವುಂಟಾಯಿತು. ಆಗ ತಿರ್ಲಾಪುರದ ಹಿರೇಮಠದ ಚರಂತೆಪ್ಪ ಆಕೆಗೆ ಸಮಾಧಾನ ಹೇಳಿ ಗಂಡ ಎಲ್ಲಪ್ಪನಿಗೆ ಬಿಡುಗಡೆಯಾಗುವುದು. ಹುಟ್ಟಲಿರುವ ಶಿಶುವನ್ನು ತನಗೆ ಕೊಡಬೇಕೆಂದು ಹೇಳಿದ್ದನು. ಮಲ್ಲವ್ವ ಅದಕ್ಕೆ ಒಪ್ಪಿಕೊಂಡಿದ್ದಳು.

ಚರಂತೆಪ್ಪನ ನುಡಿ ನಿಜವಾಯಿತು. ಗಂಡ ಬಿಡುಗಡೆಯಾಗಿ ಬಂದ. ಒಂದೆರಡು ವರ್ಷಗಳ ನಂತರ ಮಗು ರೋಗಗ್ರಸ್ತವಾಯಿತು. ಅನೇಕ ವೈದ್ಯರಿಗೆ ತೋರಿಸಿದರೂ ಗುಣವಾಗಲಿಲ್ಲ. ಆಗ ಮಲ್ಲವ್ವ ಚರಂತೆಪ್ಪನಿಗೆ ಕೊಟ್ಟ ಮಾತನ್ನು ನೆನಪಿಸಿಕೊಂಡಳು. ದಂಪತಿಗಳಿಬ್ಬರೂ ಮಗನನ್ನು ಚರಂತೆಪ್ಪನಿಗೆ ಒಪ್ಪಿಸಬೇಕೆಂದು ನಿರ್ಣಯಿಸಿದರು. ಆ ಪ್ರಕಾರ ಮಗನನ್ನು ಚರಂತೆಪ್ಪನಿಗೆ ಒಪ್ಪಿಸಿದರು. ಚರಂತೆಪ್ಪನಿಗೆ ಮನೆ, ಮಠಗಳಿರಲಿಲ್ಲ. ಮಗುವನ್ನು ನವಿಲಗುಂದ ಗವಿಮಠದ ಅಂದಿನ ಶ್ರೀ ಸಿದ್ಧಲಿಂಗ ಸ್ವಾಮಿಗಳಿಗೆ ಒಪ್ಪಿಸಿದ. ಶ್ರೀಗಳವರು ಮಗುವಿನ ಪಾಲನೆ, ಪೋಷಣೆ ಮಾಡಿದರು. ತಿರ್ಲಾಪುರದ ಶರಣ ದಂಪತಿಗಳು ತಮ್ಮ ಮುದ್ದಿನ ಮಗನನ್ನು ಲೋಕ ಹಿತಾರ್ಥವಾಗಿ ಅರ್ಪಿಸಿ ಕೃತಾರ್ಥರಾದರು.

ಶಿಕ್ಷಣ : ಗವಿಮಠದ ಶ್ರೀಗಳವರು ವಟು ಬಸವಲಿಂಗನಿಗೆ ಶುಭದಿನ ನೋಡಿ ಅಕ್ಷರಾಭ್ಯಾಸ ಮಾಡಿಸಿದರು ಜೊತೆಗೆ ಅಧ್ಯಾತ್ಮಿಕ ಸಂಸ್ಕಾರವನ್ನು ನೀಡಿದರು. ನವಿಲಗುಂದದ ವಟುವಿಗೆ ಎಂಟನೆಯ ವಯಸ್ಸಿನಲ್ಲಿ ನವಿಲಗುಂದ ಶಿರಸಂಗಿ ಸಂಸ್ಥಾನದ ದಾನವೀರ ಶ್ರೀಮಂತ ಲಿಂಗರಾಜ ದೇಸಾಯಿ ಅವರ ನೇತೃತ್ವದಲ್ಲಿ ಶಿವಲಿಂಗ ದೀಕ್ಷಾ ಸಂಸ್ಕಾರ ನೆರವೇರಿಸಿದರು ಇದೊಂದು ಅಪೂರ್ವ ಯೋಗ !

ಗುರುಗಳ ಅಪ್ಪಣೆ ಪಡೆದು ಬಸವಲಿಂಗ ಮರಿದೇವರು ಸಂಸ್ಕೃತ ಅಧ್ಯಯನ ಮಾಡಲು ಧಾರವಾಡದ ಹೂಲಿಮಠದ ಪಾಠ ಶಾಲೆಯಲ್ಲಿ ೧೯೦೪ರಲ್ಲಿ ಪ್ರವೇಶ ಪಡೆದರು. ಧಾರವಾಡದಲ್ಲಿಯ ಪ್ರತಿಷ್ಠಿತ ಸವದತ್ತಿ ಮೂಗಪ್ಪನವರು ಮರಿದೇವರಿಗೆ ತಮ್ಮ ಮನೆಯಲ್ಲಿಯೇ ಪ್ರಸಾದದ ಏರ್ಪಾಟು ಮಾಡಿದರು. ನಂತರ ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠದ ಸಂಸ್ಕೃತ ವಿದ್ಯಾಲಯದಲ್ಲಿ ಪಂಚಮಹಾ ಕಾವ್ಯಗಳನ್ನು ಅಧ್ಯಯನಿಸಿ ಪಾರಂಗತರಾದರು. ೧೯೦೭ರಲ್ಲಿ ಹಳ್ಯಾಳದಲ್ಲಿ ವಾರದ ಮನೆಗಳಲ್ಲಿ ಪ್ರಸಾದ ಸ್ವೀಕರಿಸಿ ವಿದ್ಯಾರ್ಜನೆ ಮಾಡಿದರು.

ಶಿವಯೋಗಮಂದಿರದಲ್ಲಿ : ವೀರವಿರಾಗಿ, ಸಮಾಜಾನುರಾಗಿ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಇಪ್ಪತ್ತನೆಯ ಶತಮಾನದ ಆದಿ ಭಾಗದಲ್ಲಿ ೧೯೦೯ರಲ್ಲಿ ಬಾಗಿಲು ಕೋಟೆಯ ವೈರಾಗ್ಯದ ಮಲ್ಲಣಾರ್ಯರ ಆದರ್ಶ ಪಾಲನೆಗಾಗಿ ಚಿತ್ತರಗಿಯ ಮಹಾತಪಸ್ವಿ ಶ್ರೀ ವಿಜಯ ಮಹಾಂತ ಶಿವಯೋಗಿಗಳು ತೋರಿದ ಕೊಟ್ಟೂರು ಬಸವೇಶ್ವರನ ತಪೋಸ್ಥಾನದಲ್ಲಿ 'ಶಿವಯೋಗ ಮಂದಿರ' ವೆಂಬ ಸಾರ್ಥಕ ಹೆಸರಿನಿಂದ ಯೋಗಾಶ್ರಮವನ್ನು ಸ್ಥಾಪಿಸಿದರು. ಬಾದಾಮಿ, ಬನಶಂಕರಿ, ಮಹಾಕೂಟ, ಐಹೊಳೆ, ಪಟ್ಟದಕಲ್ಲುಗಳಂತಹ ಐತಿಹಾಸಿಕ, ಧಾರ್ಮಿಕ ಕ್ಷೇತ್ರಗಳ ಮಧ್ಯೆ ಮಲಪ್ರಭೆಯ ಪವಿತ್ರ ತೀರದಲ್ಲಿ ಪ್ರಕೃತಿ ಸೌಂದರ್ಯದ ಮಧ್ಯೆ ಶಿವಸಂಪದದ ಶಿವಯೋಗಮಂದಿರ ತಲೆಯೆತ್ತಿ ನಿಂತಿತು. ಪ್ರಾರಂಭದಲ್ಲಿ ಪರ್ಣಕುಟೀರಗಳ ನಿರ್ಮಾಣವಾಯಿತು. ಶಿವಯೋಗ ಸಾಧನೆಗಾಗಿ ಏಳು ಜನ ಸಾಧಕರು ಸಪ್ತರ್ಷಿಗಳಂತೆ ಸಂಸ್ಥೆಯಲ್ಲಿ ಪ್ರವೇಶ ಪಡೆದ ಪುಣ್ಯವಂತರು. ೧ ವ್ಯಾಕರಣಾಳ ಶ್ರೀ ಸಿದ್ಧಲಿಂಗ ಪಟ್ಟಾಧ್ಯಕ್ಷರು. ೨.ಸವದತ್ತಿಯ ಶ್ರೀ ಅಪ್ಪಯ್ಯದೇವರು ೩. ಕಂಚಗಲ್ಲ ಬಿದರೆಯ ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು ೪. ಬಾಗಿಲುಕೋಟೆಯ ಕರವೀರಮಠದ ಶ್ರೀ ಮಹಾದೇವ ದೇಶಿಕರು (ಕುರವತ್ತಿ ಶ್ರೀಗಳು), ೫. ಮಮದಾಪುರದ ಶ್ರೀ ಗುರುಸಿದ್ಧದೇವರು ೬. ನವಿಲಗುಂದದ ಶ್ರೀ ಶಿವಮೂರ್ತಿ ದೇಶಿಕರು, ಇವರೇ ಏಳು ಜನ ಸಾಧಕರು. ನವಿಲಗುಂದ ಬಸವಲಿಂಗದೇವರು ಹಾನಗಲ್ಲ ಶ್ರೀಗಳವರ ನೆಚ್ಚಿನ ಶಿಷ್ಯರಾಗಿ ಶಿವಯೋಗ ಸಾಧನೆಯಲ್ಲಿ ನಿಷ್ಠೆಯಿಂದ ಮುಂದುವರಿದರು.

ವಚನ ಸಾಹಿತ್ಯಪ್ರೇಮ : ಹಾನಗಲ್ಲ ಶ್ರೀಗಳವರು ಪ್ರತಿನಿತ್ಯ ಪ್ರಸಾದದ ನಂತರ ಡಾ. ಫ.ಗು. ಹಳಕಟ್ಟಿ ಅವರು ಸಂಪಾದಿಸಿದ 'ವಚನ ಶಾಸ್ತ್ರಸಾರ' ಗ್ರಂಥದಲ್ಲಿಯ ವಚನಗಳನ್ನು ಭಕ್ತರಿಗೆ, ಸಾಧಕರಿಗೆ ತಿಳಿಸಿ ಹೇಳುತ್ತಿದ್ದರು. ಅವರಲ್ಲಿ ಶಿವಶರಣರ ವಚನ ಸಾಹಿತ್ಯದ ಅಧ್ಯಯನ ಕುರಿತು ಆಸಕ್ತಿ ಮೂಡಿಸುತ್ತಿದ್ದರು.

ನವಿಲಗುಂದದ ಶ್ರೀ ಬಸವಲಿಂಗ ದೇವರಿಗೆ ಹಾನಗಲ್ಲ ಶ್ರೀಗಳವರ ಪ್ರೇರಣೆಯಿಂದಲೇ ಬಸವಾದಿ ಪ್ರಮಥರ ವಚನಗಳ ಬಗ್ಗೆ ಆಸಕ್ತಿ ಅಭಿರುಚಿ ಮೂಡಿತು. ಪ್ರತಿನಿತ್ಯ ಪ್ರಸಾದವಾದೊಡನೆ ಶ್ರೀ ಬಸವಲಿಂಗ ದೇವರಿಂದ ಶತಕತ್ರಯ ಹಾಗೂ ವಚನಶಾಸ್ತ್ರದ ಗ್ರಂಥಗಳನ್ನು ಓದಿಸಿ ಅನುಭವ ಹೇಳಿಸುತ್ತಿದ್ದರು. ತತ್ಪರಿಣಾಮವಾಗಿ ಬಸವಲಿಂಗ ದೇಶಿಕರು ಶರಣರ ನೂರಾರು ವಚನಗಳನ್ನು ಮುಖಪಾಠ ಮಾಡಿಕೊಂಡಿದ್ದರು. ವಚನಗಳನ್ನು ಉದಾಹರಿಸುತ್ತ ಉಪನ್ಯಾಸ ಮಾಡುವ ಕಲೆಯಲ್ಲಿ ಪರಿಣತಿ ಸಾಧಿಸಿದರು. ಶಿಷ್ಯನ ಈ ಸಾಧನೆಯನ್ನು ಸ್ವತಃ ಕಂಡು ಹಾನಗಲ್ಲ ಶ್ರೀಗಳವರು ಸಂತೋಷಪಡುತ್ತಿದ್ದರು.

ಉತ್ತಮವಾಗ್ಮಿ : ೧೯೦೪ರಲ್ಲಿಯೇ ಅಖಿಲಭಾರತ ವೀರಶೈವ ಮಹಾಸಭೆಯನ್ನು ಸ್ಥಾಪಿಸಿ ಸಮಾಜದ ಉತ್ಕರ್ಷಕ್ಕೆ ಕಾರಣರಾದ ಹಾನಗಲ್ಲ ಶ್ರೀಗಳವರು 'ಧರ್ಮೋತ್ತೇಜಕ ಸಭೆ'ಯನ್ನು ೧೯೦೯ರಲ್ಲಿ ಬಂಕಾಪುರದಲ್ಲಿ ಪ್ರಾರಂಭಿಸಿದರು. ಇದರ ವಿಶೇಷ ಅಧಿವೇಶನವು ಶಿವಯೋಗ ಮಂದಿರದಲ್ಲಿ ಶಿವರಾತ್ರಿಯ ಯಾತ್ರಾ ಮಹೋತ್ಸವ ಕಾಲಕ್ಕೆ ನಡೆಯುವಂತೆ ಏರ್ಪಾಟು ಮಾಡಿದ್ದರು.

೧೯೧೪ರಲ್ಲಿ ಜರುಗಿದ ಧರ್ಮೋತ್ತೇಜಕ ಸಭೆಯಲ್ಲಿ "ನವಲಗುಂದದ ಶ್ರೀ ಬಸವಲಿಂಗದೇವರು ದ್ವೈತ ಅದ್ವೈತ ವಿಶಿಷ್ಟಾದ್ವೈತ ಇವುಗಳ ತಾರತಮ್ಯವನ್ನು ಈ ನಾಲ್ಕು ಹೆಸರುಗಳ ಅನ್ವರ್ಥ ಮಾಡುವುದರ ಮೇಲಿಂದಲೇ ಚೆನ್ನಾಗಿ ಬೋಧಿಸಿದರು."

೧೯೧೫ರಲ್ಲಿ ಜರುಗಿದ ಧರ್ಮೋತ್ತೇಜಕ ಸಭೆಯಲ್ಲಿ 'ಜೀವನು ಮಹತ್ ಪರಿಮಾಣವುಳ್ಳವನಲ್ಲ' ಎಂಬ ದಾರ್ಶನಿಕ ತತ್ವವನ್ನು ಯುಕ್ತಿಯುಕ್ತವಾಗಿ, ಶಾಸ್ತ್ರೀಯವಾಗಿ, ಪ್ರತಿಪಾದಿಸಿ ಪೂಜ್ಯಶ್ರೀ ಗಳವರ ಮೆಚ್ಚುಗೆಯನ್ನು ಪಡೆದರು.

೧೯೧೬ರಲ್ಲಿ ನೆರವೇರಿದ ಸಭೆಯಲ್ಲಿ "ನವಲಗುಂದ ಶ್ರೀ ಬಸವಲಿಂಗದೇವರು ಸಾಧಕರ ವಿಷಯಗಳ ಸಾರಸರ್ವಸ್ವವನ್ನು ಉಪನಿಷತ್ತು, ಆಗಮ, ವಚನಗಳ ಪ್ರಮಾಣಗಳೊಡನೆ, ಎಲ್ಲರಿಗೂ ತಿಳಿಯುವಂತೆ ವಿವರಿಸಿ ಭಾಷಣ ಮಾಡಿದರು."

ಶಿವಯೋಗ ಮಂದಿರದ ವಾರ್ಷಿಕ ವರದಿಗಳನ್ನು ಗಮನಿಸಿದಾಗ ಈ ಅಧಿವೇಶನಗಳಲ್ಲಿ ಶ್ರೀ ಬಸವಲಿಂಗದೇವರ ಪಾತ್ರ ಅತ್ಯಂತ ಪ್ರಮುಖವಾಗಿತ್ತೆಂಬುದು ತಿಳಿದು ಬರುತ್ತದೆ.

ಎಂಥ ಜಟಿಲ ವಿಷಯವನ್ನೂ ತಿಳಿಯಾದ ಭಾಷೆಯಲ್ಲಿ ಸರಳಶೈಲಿಯಲ್ಲಿ ಸಾಮಾನ್ಯರಿಗೂ ತಿಳಿದುಕೊಳ್ಳುವಂತೆ ಪ್ರತಿಪಾದಿಸುತ್ತಿದ್ದರು. ಅವರ ಭಾಷಣಗಳನ್ನು ಕೇಳಲು ಜನರು ತುಂಬಾ ಕುತೂಹಲಿಗಳಾಗಿರುತ್ತಿದ್ದರು. ಸ್ವಲ್ಪ ಸಮಯದಲ್ಲಿ ಸಾರವತ್ತಾಗಿ ವಿವೇಚಿಸುವ ಕಲೆ ಅವರಿಗೆ ಕರಗತವಾಗಿತ್ತು. ಅಂತೆಯೇ ಎಲ್ಲರೂ ಮಾತನಾಡಿದ ಮೇಲೆ ಸಮಾರೋಪ ರೂಪದಲ್ಲಿ ಅವರ ಉಪನ್ಯಾಸ ಅರ್ಥಪೂರ್ಣವಾಗಿರುತ್ತಿತ್ತು ಬಸವಲಿಂಗ ದೇವರ ಭಾಷಣ ವೈಖರಿಯನ್ನು ಕಂಡು ಹಾನಗಲ್ಲ ಶ್ರೀಗಳವರು ಸಂತೋಷಪಡುತ್ತಿದ್ದರು. ಶ್ರೀ ಜಂಗಿನ ಮುರುಗಯ್ಯ ಮುಂತಾದ ಪ್ರಮುಖರು ಬಸವಲಿಂಗದೇವರ ಭಾಷಣ ಕಲೆಯನ್ನು ಮೆಚ್ಚಿ ಪ್ರಶಂಸಿಸುತ್ತಿದ್ದರು.

ಶ್ರೀ ಬಸವಲಿಂಗದೇವರು ಬೃಹತ್ ಸಭೆ, ಸಮಾರಂಭಗಳಲ್ಲಿ ಅಸ್ಖಲಿತವಾಗಿ ತಾತ್ವಿಕವಾಗಿ ಮಾತನಾಡಬಲ್ಲ ಪ್ರಾವಿಣ್ಯತೆ ಪಡೆದಿದ್ದರು. ಅಂತೆಯೇ ಹಾನಗಲ್ಲ ಶ್ರೀಗಳವರು ಬೆಳಗಾವಿಯಲ್ಲಿ ೧೯೨೪ರಲ್ಲಿ ಗಾಂಧೀಜಿ ಅಧ್ಯಕ್ಷತೆಯಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನದಲ್ಲಿ ಅಸ್ಪೃಶ್ಯತೆ ನಿವಾರಣೆ ಕುರಿತು ತಮ್ಮ ವಿಚಾರಗಳನ್ನು ವ್ಯಕ್ತಮಾಡಲು ಶ್ರೀ ಬಸವಲಿಂಗದೇವರನ್ನೇ ಕಳಿಸಲು ನಿರ್ಣಯಿಸಿದ್ದರು. ಆ ಬಗ್ಗೆ ಕೆಲವು ಟಿಪ್ಪಣಿಗಳನ್ನು ಬರೆಯಿಸಿದ್ದರು.[೧]

ಮಾತೃಮಂದಿರ ಸೇವೆ : ಹಾನಗಲ್ಲ ಶ್ರೀಗಳವರು ಶಿವಯೋಗಮಂದಿರದ ಆರ್ಥಿಕ ಅನುಕೂಲತೆಗಳನ್ನು ಒದಗಿಸುವುದಕ್ಕಾಗಿ ದೇಶಾಟನ ಮಾಡುತ್ತಿದ್ದರು. ತಪೋಮೂರ್ತಿಗಳೂ ಕಾರ್ಯಕುಶಲರೂ ಆದ ಹಾವೇರಿಯ ಶ್ರೀ ಶಿವಬಸವ ಮಹಾಸ್ವಾಮಿಗಳನ್ನು ಆಜೀವ ಅಧ್ಯಕ್ಷರನ್ನಾಗಿ ಮಾಡಿ ಮಂದಿರದ ವ್ಯವಸ್ಥೆ ಹಾಗೂ ಸಾಧಕರ ಯೋಗಕ್ಷೇಮವನ್ನು ನೋಡಿಕೊಳ್ಳುವ ಹೊಣೆಯನ್ನು ವಹಿಸಿದ್ದರು. ಹಾನಗಲ್ಲ ಶ್ರೀಗಳವರ ಅಪೇಕ್ಷೆಯಂತೆ ನವಿಲಗುಂದ ಶ್ರೀ ಬಸವಲಿಂಗ ದೇವರಿಗೆ ಹಾವೇರಿ ಶ್ರೀಗಳವರು ಅನುಗ್ರಹ ದೀಕ್ಷೆಯನ್ನು ಕರುಣಿಸಿದರು. ಸದ್ಗುರುವಿನ ಕರಸಂಜಾತರಾದ ಅವರು ಶ್ರೀ ಬಸವಲಿಂಗ ದೇಶಿಕರೆನಿಸಿದರು.

ಸದಾಲಿಂಗ ಪೂಜಾನುಷ್ಠಾನ ನಿರತರಾಗಿರುತ್ತಿದ್ದ ಹಾವೇರಿ ಶ್ರೀಗಳವರು ಶಿವಯೋಗಮಂದಿರದ ದೈನಂದಿನ ವ್ಯವಸ್ಥೆಯನ್ನು ನೋಡಿಕೊಳ್ಳಲು ತಮ್ಮ ನೆಚ್ಚಿನ ಶಿಷ್ಯ ಶ್ರೀ ಬಸವಲಿಂಗದೇಶಿಕರನ್ನೇ ನೇಮಿಸಿದರು.

ಒಮ್ಮೆ ಹಾನಗಲ್ಲ ಶ್ರೀಗಳವರು ಹಿರಿಯ ಸಾಧಕರ ಸೇವಾಭಾವನೆಯನ್ನು ಪರೀಕ್ಷಿಸಲು 'ನಿಮ್ಮ ಮಠಗಳ ಆಸ್ತಿ ಪಾಸ್ತಿ ತೊರೆದು ಸಂಸ್ಥೆಗೆ ಆಜೀವ ಸೇವೆ ಸಲ್ಲಿಸಲು ಪ್ರತಿಜ್ಞೆ ಮಾಡಬೇಕು' ಎಂದು ಅಪ್ಪಣೆ ಮಾಡಿದಾಗ ಮೂವರು ಸಾಧಕರು ಶ್ರೀಗಳವರಿಗೆ ಸಾಷ್ಟಾಂಗ ಪ್ರಣಾಮ ಸಲ್ಲಿಸಿ ಮಾತೃ ಸಂಸ್ಥೆಗೆ ತಮ್ಮ ಜೀವಿತವನ್ನೇ ಮುಡುಪಾಗಿಡುವೆವೆಂದು ಪ್ರತಿಜ್ಞೆ ಮಾಡಿದರು. ಅವರಲ್ಲಿ ನವಿಲಗುಂದ ಶ್ರೀ ಬಸವಲಿಂಗದೇಶಿಕರೂ ಒಬ್ಬರು (ಇನ್ನಿಬ್ಬರು ಕೊಪ್ಪದ (ಇಲಕಲ್ಲ) ಶ್ರೀ ಮಹಾಂತ ದೇಶಿಕರು ಹಾಗೂ ಕಂಚಗಲ್ಲ ಬಿದರೆಯ ಶ್ರೀ ಪ್ರಭುಕುಮಾರ ಪಟ್ಟಾಧ್ಯಕ್ಷರು) ಹಾನಗಲ್ಲ ಶ್ರೀಗಳವರು ಆನಂದ ತುಂದಿಲರಾಗಿ ನವಿಲಗುಂದ ಶ್ರೀ ಬಸವಲಿಂಗ ದೇಶಿಕರ ಶಿರದ ಮೇಲೆ ವರದ ಹಸ್ತವಿರಿಸಿ, ಮಂದಿರದ ಸೇವೆ ಮಾಡುವಂತೆ ಆಶೀರ್ವದಿಸಿದ್ದರು.

ನವಿಲಗುಂದ ಶ್ರೀ ಬಸವಲಿಂಗ ದೇಶಿಕರ ಪ್ರತಿಯೊಂದು ಕಾರ್ಯದಲ್ಲಿಯೂ ಶಿಸ್ತು ಅಚ್ಚುಕಟ್ಟುತನಕ್ಕೆ ಪ್ರಾಶಸ್ತ್ಯ ಕೊಡುತ್ತಿದ್ದರು. ವಟು, ಸಾಧಕರ ದಿನನಿತ್ಯದ ಚಟುವಟಿಕೆಗಳನ್ನು ನೋಡಿಕೊಳ್ಳುತ್ತಿದ್ದರು. ತಾವೇ 'ವೃಷಲಿಂಗ' ಅಂಕಿತದಲ್ಲಿ ರಚಿಸಿದ್ದ ಶಿವಯೋಗ ಮಂದಿರದ ಗೀತೆಗಳನ್ನು ಸಾಧಕರು ಪ್ರತಿನಿತ್ಯ ಪ್ರಾತಃಕಾಲ ಯೋಗಾಸನಗಳನ್ನು ಹಾಕುವ ಪೂರ್ವದಲ್ಲಿ ಹಾಡುವ ಏರ್ಪಾಟು ಮಾಡಿದರು. ಪ್ರತಿನಿತ್ಯ ಎರಡು ಹೊತ್ತು ಸಾಮೂಹಿಕ ಪ್ರಾರ್ಥನೆಯನ್ನು ಸಂಗೀತದೊಂದಿಗೆ ಮಾಡುವಂತೆ ಕಟ್ಟಳೆ ಮಾಡಿದರು. ಸಾಧಕರ ಶೈಕ್ಷಣಿಕ ಚಟುವಟಿಕೆಗಳ ಜೊತೆಗೆ ಕ್ರೀಡಾ ಸ್ಪರ್ಧೆ, ವನಮಹೋತ್ಸವ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನಗಳನ್ನು ಕೊಡುತ್ತಿದ್ದರು.

ಶಿವಯೋಗ ಮಂದಿರದ ಪ್ರಥಮ ಪ್ರಾಧ್ಯಾಪಕರಾಗಿದ್ದ ಇಟಗಿಯ ಪಂ. ಸೋಮನಾಥ ಶಾಸ್ತ್ರಿಗಳು, ಆಚಾರಶೀಲರೂ ಪ್ರಸಾದಿಕರೂ ಆಗಿದ್ದರು. ಇವರಿಂದ ನವಿಲಗುಂದ ಶ್ರೀ ಬಸವಲಿಂಗ ದೇಶಿಕರು ಸಂಸ್ಕೃತವನ್ನಲ್ಲದೆ ಶಿವಯೋಗ ಪದ್ಧತಿಯನ್ನು ಕಲಿತರು.

ಸಂಸ್ಥೆಗಾಗಿ ಭಿಕ್ಷಾಟನೆ : ನವಿಲಗುಂದ ಶ್ರೀ ಬಸವಲಿಂಗ ದೇಶಿಕರು ಶಿವಯೋಗಮಂದಿರದ ಆಧ್ಯಾತ್ಮಿಕ ಶಿಕ್ಷಣವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡು, ಅದರ ಸೇವೆಯನ್ನು ತ್ರಿಕರಣ ಪೂರ್ವಕವಾಗಿ ಮಾಡಿದ ಹಿರಿಯ ಸಾಧಕರಲ್ಲಿ ಅಗ್ರಗಣ್ಯರು ಶಿವಯೋಗ ಮಂದಿರದ ವಾರ್ಷಿಕ ವರದಿಗಳು ಹಾಗೂ ಶಿವಯೋಗ ಮಂದಿರದ 'ಬೆಳಗು' ಕೃತಿಗಳು ಇದಕ್ಕೆ ನಿದರ್ಶನ ಒದಗಿಸುತ್ತವೆ.

“ನವಿಲಗುಂದ ಶ್ರೀ ಬಸವಲಿಂಗ ದೇಶಿಕರು ದಾನದತ್ತಿಗಳಿಗಾಗಿ ಬೇರೆಯವರನ್ನು ಬೇಡುವ ಮೊದಲು ತಾವೇ ಸ್ವತಃ ದಾನವಿತ್ತು ಇತರರಿಗೆ ಆದರ್ಶರಾದರು. “ತಮ್ಮ ಗವಿಮಠದ ವತಿಯಿಂದ ಸಾವಿರಾರು ರೂಪಾಯಿಗಳ ಗುರುಕಾಣಿಕೆಯನ್ನು

ಮಾತೃ ಸಂಸ್ಥೆಗೆ ಅರ್ಪಿಸಿದುದಲ್ಲದೆ ೧೯೨೧ರಲ್ಲಿ ನವಿಲಗುಂದದ ಭಕ್ತರಿಂದ ಎಂಟು ಸಾವಿರ ರೂಪಾಯಿಗಳ ಕಾಣಿಕೆಯೊಂದಿಗೆ ಐದುವರೆ ಎಕರೆ ಫಲವತ್ತಾದ ಭೂಮಿಯನ್ನು ಪಡೆದು ಮಂದಿರಕ್ಕೆ ದತ್ತಿಯಿತ್ತರು'' ('ಶಿವಯೋಗ ಮಂದಿರದ ಬೆಳಗು')

ನವಿಲಗುಂದದ ಶ್ರೀ ಬಸವಲಿಂಗ ದೇಶಿಕೇಂದ್ರರ ಪ್ರೇರಣೆಯಿಂದ ಅನೇಕ ಸದ್ಭಕ್ತರು ಶಿವಯೋಗ ಮಂದಿರ ಸಂಸ್ಥೆಗೆ ಭಕ್ತಿಯ ಕಾಣಿಕೆಗಳನ್ನರ್ಪಿಸಿದರು. ತಿರ್ಲಾಪುರದ ಸದ್ಭಕ್ತ ಶ್ರೀ ಲಿಂಗಪ್ಪ ಮಲ್ಲಪ್ಪ ಕಲ್ಲೇದ ಅವರು ನಾಲ್ಕು ಎಕರೆ ಚೆನ್ನಾಗಿ ಬೆಳೆ ಬರುವ ಎರೆಭೂಮಿಯನ್ನು ಸಂಸ್ಥೆಗೆ ದಾನಪತ್ರ ಸಹಿತ ಅರ್ಪಿಸಿದರು. ನವಿಲಗುಂದ ಭಾವುಕ ಭಕ್ತ ಶ್ರೀ ಬಸನಗೌಡ ಪಾಟೀಲ ಅವರು ಬಹಳ ದಿನಗಳಿಂದ ಅನಾರೋಗ್ಯದಿಂದ ಬಳಲುತ್ತಿದ್ದರು. ರೋಗ ಪೀಡೆ ತೊಲಗಿದರೆ ಶ್ರೀ ಶಿವಯೋಗಮಂದಿರ ಸಂಸ್ಥೆಗೆ ಭಕ್ತಿ ಸಲ್ಲಿಸುವುದಾಗಿ ಹರಕೆ ಹೊತ್ತರು. ಕೆಲವು ದಿನಗಳಲ್ಲಿಯೇ ರೋಗ ಬಾಧೆ ಹೋಗಿ ಆರೋಗ್ಯವಂತರಾದರು. ಆ ಕೂಡಲೇ ಗೌಡರು ಚಿಕ್ಕನರಗುಂದ ಸೀಮೆಯ ತಮ್ಮ ಫಲವತ್ತಾದ ಉತ್ತಮ ಕ್ಷೇತ್ರದ ಐದು ಎಕರೆ ಭೂಮಿಯನ್ನು ಮಂದಿರಕ್ಕೆ ದಾನ ಮಾಡಿದರು.

''ನವಿಲಗುಂದದ ಶ್ರೀ ಬಸವಲಿಂಗ ದೇಶಿಕೇಂದ್ರರು ಇಲ್ಲಿಯೇ ಶಿಕ್ಷಣ ಹೊಂದಿ, ಇಲ್ಲಿಯೇ ಕೆಲಸಮಾಡುತ್ತಲಿದ್ದಾರೆ. ಇವರಾದರೂ ಸಂಸ್ಥೆಯ ಶ್ರಮವಿಭಾಗಿಗಳಾಗಿ ಕೆಲವು ದಿವಸ ಇಲ್ಲಿಯೇ ಇದ್ದು ಮಂದಿರದ ಮೇಲ್ವಿಚಾರಣೆಯನ್ನು ತೆಗೆದು ಕೊಳ್ಳುವುದೂ ಸಂದರ್ಭಾನುಸಾರ ಭಿಕ್ಷಾಟನೆಗೆ ಹೋಗಿ ಸಂಸ್ಥೆಗೆ ಧನಸಹಾಯವನ್ನೊದಗಿಸುವುದೂ ಮುಂತಾದ ಕಾರ್ಯಗಳನ್ನು ವಹಿಸಿಕೊಂಡು ಸಾಗಿರುವರು (೧೯೨೪-೨೫)

ನವಿಲಗುಂದ ಶ್ರೀ ಬಸವಲಿಂಗ ದೇಶಿಕರು ಸವದತ್ತಿ ಬುಡರಕಟ್ಟಿ, ಗೋಪನಕೊಪ್ಪ, ಸಂಪಗಾಂವ, ಮೊರಬ, ಚಿಲಕವಾಡ, ಅರಳಿಕಟ್ಟಿ, ಅಣ್ಣಿಗೇರಿ ಮುಂತಾದ ಗ್ರಾಮಗಳಲ್ಲಿ ಮಂದಿರಕ್ಕಾಗಿ ಭಿಕ್ಷಾಟನೆ ಮಾಡಿ ಧನ ಧಾನ್ಯಗಳನ್ನು ಸಂಗ್ರಹಿಸಿದರು. ವಿಜಾಪುರ, ಧಾರವಾಡ, ಬೆಳಗಾವಿ ಭಾಗಗಳಲ್ಲಿ ಸಂಚರಿಸಿ ಧರ್ಮಜಾಗೃತಿ ಮಾಡುತ್ತ ಸದ್ಭಕ್ತರಿಂದ ದಾನ ದತ್ತಿಗಳನ್ನು ಪಡೆದು ಮಂದಿರದ ಆರ್ಥಿಕ ಸ್ಥಿತಿಯನ್ನು ಬಲಪಡಿಸುವಲ್ಲಿ ನವಿಲಗುಂದ ಶ್ರೀ ಬಸವಲಿಂಗ ದೇಶಿಕರು ಪಟ್ಟ ಪರಿಶ್ರಮ ಪ್ರಶಂಸನೀಯ.

ತಮ್ಮ ಗುರುವರ್ಯ ಹಾನಗಲ್ಲ ಶ್ರೀಗಳವರಿಗೆ ಕೊಟ್ಟ ಅಭಿವಚನದಂತೆ ಮಂದಿರದ ಸೇವೆಯಲ್ಲಿ ಆಜೀವ ಪರ್ಯಂತ ನಿರತರಾಗಿದ್ದರು. ವ್ಯಾಸಂಗ ಮುಗಿಸಿದ ನಂತರವೂ ಹದಿನಾರು ವರ್ಷಗಳವರೆಗೆ ಅಲ್ಲಿದ್ದು ಸಂಸ್ಥೆಯ ಆಡಳಿತವನ್ನು ನೋಡಿಕೊಂಡರು. ನಂತರ ಅವರನ್ನು ಸಂಸ್ಥೆಯ ಉಪಾಧ್ಯಕ್ಷರೆಂದು ಆಯ್ಕೆ ಮಾಡಲಾಯಿತು. ಆಜೀವ ಪರ್ಯಂತ ಉಪಾಧ್ಯಕ್ಷರಾಗಿ ಉಳಿದುದು ಮಂದಿರದ ಬಗೆಗಿರುವ ಅವರ ಕಳಕಳಿ, ಅದರ ಉತ್ಕರ್ಷಕ್ಕಾಗಿ ಅನವರತ ಪರಿಶ್ರಮ, ಕಾರ್ಯಕುಶಲತೆಗಳೇ ಸಾಕ್ಷಿ.

ಶರಣ, ಸತ್ಪುರುಷರ ದರ್ಶನ : ಶಿವಯೋಗ ಮಂದಿರದಲ್ಲಿ ಸಾಧಕರಾಗಿದ್ದಾಗ ತಮ್ಮ ಗುರುವರ್ಯ ಹಾನಗಲ್ಲ ಶ್ರೀಗಳವರ ಸಂಚಾರಗಳಲ್ಲಿ ನವಿಲಗುಂದದ ಶ್ರೀ ಬಸವಲಿಂಗ ದೇಶಿಕರು ಜೊತೆಯಾಗಿರುತ್ತಿದ್ದರು. ಮುಂದೆ ಸಾಧಕರ ನೇತಾರರಾಗಿ ಪ್ರಯಾಣ ಕೈಕೊಳ್ಳುತ್ತಿದ್ದರು.

೧೯೧೮ರಲ್ಲಿ ಸೊಲ್ಲಾಪುರದಲ್ಲಿ ನಾಲತವಾಡದ ಶ್ರೀ ವೀರೇಶ್ವರ, ಶರಣರ ದರ್ಶನ ಪಡೆದರು. ಶರಣರು 'ನಿನ್ನದು ಅಮೃತ ಹಸ್ತ' ಎಂದು ಹೇಳಿ ಒಂದು ಭಸ್ಮದ ಗಟ್ಟಿ ಜೊತೆಗೆ ಒಂದು ದುಡ್ಡನ್ನು ಆಶೀರ್ವದಿಸಿದರು. ಆಗ ಸೊನ್ನಲಿಗೆಯ ಸಿದ್ಧರಾಮನ ದಿವ್ಯ ಸಮಾಧಿಯ ದರ್ಶನವನ್ನು ಮಾಡಿದರು.

೧೯೨೧ರಲ್ಲಿ ಅಥಣಿಯ ಜಂಗಮಜ್ಯೋತಿ, ಮಹಾತಪಸ್ವಿ ಶ್ರೀ ಮುರುಘೇಂದ್ರ ಶಿವಯೋಗಿಗಳ ದರ್ಶನ ಪಡೆದರು. ಅವರು ಧರಿಸಿದ ಶಿರೋವಸ್ತ್ರವನ್ನು ಪ್ರಾರ್ಥಿಸಿ, ಆಶೀರ್ವಾದ ರೂಪದಲ್ಲಿ ಪಡೆದರು. ಪ್ರತಿಯಾಗಿ ತಾವು ತಂದ ಮಡಿಯಾದ ನೂತನ ವಸ್ತ್ರವನ್ನು ಅವರಿಗೆ ಅರ್ಪಿಸಿದರು. ಮುಂದೆ ಹಲವಾರು ವರ್ಷಗಳವರೆಗೂ ಶಿವಯೋಗಿಗಳಿತ್ತ ವಸ್ತ್ರವನ್ನು ಪೂಜ್ಯ ಭಾವನೆಯಿಂದ ಕಾಯ್ದಿರಿಸಿದ್ದರು.

### ಕನ್ನಡ ನಾಡು ನುಡಿಯ ಕಳಕಳಿ :

ಶ್ರೀ ಬಸವಲಿಂಗದೇಶಿಕರು ೧೯೩೩ರಲ್ಲಿ ಮಂದಿರದ ಸಾಧಕರನ್ನು ಕಲಕತ್ತೆಯ ಸಂಸ್ಕೃತ ಪರೀಕ್ಷೆಗಳನ್ನು ಕಟ್ಟಲು ಪುಣೆಯ ಕೇಂದ್ರಕ್ಕೆ ಕರೆದುಕೊಂಡು ಹೋಗಿದ್ದರು. ಪುಣೆಯು ಮಹಾರಾಷ್ಟ್ರದ ಸಾಂಸ್ಕೃತಿಕ ನಗರ. ಅಲ್ಲಿ ವೀರಶೈವರು ಹೆಚ್ಚಿನ ಸಂಖ್ಯೆಯಲ್ಲಿದ್ದರೂ ತಮ್ಮ ಧಾರ್ಮಿಕ ಸಂಸ್ಕೃತಿಯಿಂದ ವಿಮುಖರಾಗುತ್ತಿದ್ದರು. ಅಂಥವರಲ್ಲಿ ಕನ್ನಡ ನಾಡು, ನುಡಿ, ಧರ್ಮದ ಕುರಿತು ಜಾಗೃತಿಯನ್ನುಂಟು ಮಾಡುವ ಘನೋದ್ದೇಶವನ್ನಿಟ್ಟುಕೊಂಡಿದ್ದರು. ಮರಾಠಿಯ ಕೇಂದ್ರನಗರದಲ್ಲಿ ನಿರ್ಭೀತವಾಗಿ ಕನ್ನಡದಲ್ಲಿ ಕರ್ನಾಟಕದ ಧರ್ಮ ಸಂಸ್ಕೃತಿಗಳ ಬಗ್ಗೆ ಉಪನ್ಯಾಸಗಳನ್ನಿತ್ತರು. ಅಲ್ಲಿಯ ಫರ್ಗುಸನ್ ಕಾಲೇಜಿನ ಆಮಂತ್ರಣದ

ಮೇರೆಗೆ ಕನ್ನಡ ವಾಙ್ಮಯ ಮತ್ತು ಧರ್ಮದ ಕುರಿತು ಉದ್ಬೋಧಕ ಭಾಷಣ ಮಾಡಿ ಕನ್ನಡ ಡಿಂಡಿಮವನ್ನು ಮೊಳಗಿಸಿದರು. ಆಗ ಅಲ್ಲಿ ಪ್ರಾಧ್ಯಾಪಕರಾಗಿದ್ದ ಪ್ರೊ. ವ್ಹಿ.ಕೆ. ಗೋಕಾಕ, ಪ್ರೊ. ಟಿ.ಕೆ. ತುಕೋಳ ಅವರು ಶ್ರೀಗಳವರು ಕನ್ನಡ ನಾಡು ನುಡಿಯ ಬಗ್ಗೆ ಅಸ್ಖಲಿತವಾಗಿ, ತುಂಬಾ ಪರಿಣಾಮಕಾರಿಯಾಗಿ ಮಾತನಾಡಿದುದನ್ನು ಕೇಳಿ ಆನಂದಿಸಿ ಪ್ರಶಂಸಿಸಿದರು. ಶ್ರೀ ಟಿ.ಕೆ.ತುಕೋಳ ಅವರು ಸಬ್‌ಜಡ್ಜ್ ಆಗಿ, ಜಿಲ್ಲಾ ನ್ಯಾಯಾಧೀಶರಾಗಿ, ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾದಾಗಲೂ ಶ್ರೀಗಳವರೊಂದಿಗೆ ಪತ್ರ ಮುಖೇನ ಹಾಗೂ ಪ್ರತ್ಯಕ್ಷವಾಗಿಯೂ ಶ್ರೀಗಳವರ ಆಶೀರ್ವಾದಗಳನ್ನು ಪಡೆಯುತ್ತಿದ್ದರು.

ಕನ್ನಡ ನುಡಿಯ ಸರ್ವತೋಮುಖ ಬೆಳವಣಿಗೆಯನ್ನು ಪ್ರಮುಖ ಉದ್ದೇಶ ವಿರಿಸಿಕೊಂಡು ಜನ್ಮತಾಳಿದ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನ ಆಜೀವ ಸದಸ್ಯರಾದ ಮೊದಲ ಮಠಾಧೀಶರು ಶ್ರೀ ಬಸವಲಿಂಗ ದೇಶಿಕರು. ಕನ್ನಡದ ಕಣ್ವರೆನಿಸಿದ ಶ್ರೀ ಬಿ.ಎಂ. ಶ್ರೀಕಂಠಯ್ಯ ಹಾಗೂ ಎಂ.ಆರ್. ಶ್ರೀನಿವಾಸ ಮೂರ್ತಿಯವರ ನಿಕಟ ಸಂಪರ್ಕ ಹೊಂದಿದ ಶ್ರೀ ದೇಶಿಕರು ಅವರೊಂದಿಗೆ ಕರ್ನಾಟಕ ಏಕೀಕರಣದ ಕ್ರಾಂತಿಯಲ್ಲಿಯೂ ಪಾಲ್ಗೊಂಡು ಉಳಿದ ಧರ್ಮಾಧಿಕಾರಿಗಳಿಗೆ ಮಾದರಿಯೆನಿಸಿದರು. ಕನ್ನಡ ಕ್ರಾಂತಿಯಲ್ಲಿ ಬೆಂಗಳೂರಿನ ಶ್ರೀ ಸರ್ಪಭೂಷಣ ಮಠದ 'ಅಭಿನವ ಅಲ್ಲಮ'ರೆನಿಸಿದ ಶ್ರೀ ಮಹಾದೇವ ಸ್ವಾಮಿಗಳಿಗೆ ಬೆಂಬಲಿಗರಾದರು. ಈ ಉಭಯತರ ಉಪನ್ಯಾಸಗಳು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಆಗಾಗ್ಗೆ ನಡೆದು ನಗರದ ಜನರಲ್ಲಿ ಕನ್ನಡದ ಬಗೆಗೆ ಆಸಕ್ತಿಯನ್ನು ಮೂಡಿಸುತ್ತಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ೧೯೩೫ ನವೆಂಬರ ೧೨ ಮಂಗಳವಾರ ಬಿ.ಎಂ. ಶ್ರೀ ಕಂಠಯ್ಯನವರ ಅಧ್ಯಕ್ಷತೆಯಲ್ಲಿ ಶ್ರೀ ಬಸವಲಿಂಗ ದೇಶಿಕರು 'ವೀರಶೈವರ ಯೋಗ' ಕುರಿತು ಉಪನ್ಯಾಸ ಮಾಡಿದರು. ಶ್ರೀ ಮಹಾದೇವ ಸ್ವಾಮಿಗಳು ಬಸವಣ್ಣನವರ ಕೆಲವು ವಚನಗಳನ್ನು ಓದಿ ಮಾತನಾಡಿದರು. ನವಿಲಗುಂದ ಶ್ರೀಗಳು ಕನ್ನಡ ಕಾರ್ಯಕರ್ತರ ಎದುರು ಕನ್ನಡದ ಕುರಿತು ತಮ್ಮ ಕ್ರಾಂತಿಕಾರಿ ವಿಚಾರಗಳನ್ನು ಸಾದರಪಡಿಸಿದರು :

"ಕನ್ನಡಿಗರಾದ ನಾವು ಕನ್ನಡ ವಾಙ್ಮಯವನ್ನು ತಿರಸ್ಕರಿಸುತ್ತಿದ್ದೇವೆ. ಇದು ನಮ್ಮಲ್ಲಿಯ ಹೇಡಿತನ ಹಾಗೂ ಕ್ಷುದ್ರ ಭಾವನೆಯನ್ನು ವ್ಯಕ್ತಪಡಿಸುವುದು. ಕನ್ನಡ ಮಾತೆಯನ್ನು ನಾವು ತಿರಸ್ಕರಿಸುವುದೆಂದರೆ ಮಾತೃದ್ರೋಹಿಯಾದಂತಲ್ಲದೆ ಮತ್ತೇನು ? ಕನ್ನಡ ತಾಯಿಯ ಉದರದಲ್ಲಿ ಚೈತನ್ಯ ರತ್ನಗಳು ಉದಯಿಸಿ ಕರ್ನಾಟಕದ ಕೀರ್ತಿಯನ್ನು ನಂದಿಸದೆ ಬೆಳಗಿಸಿದ್ದು ಈಗಲೂ ಬೆಳಗಿಸುತ್ತಿರುವುದು ಯಾರಿಗೂ ಅರಿಯದ ಸಂಗತಿಯಲ್ಲ. ನಮ್ಮಲ್ಲಿ ಒಳ್ಳೆಯದೆನ್ನುವುದು ಇದ್ದರೆ ಅದನ್ನು ಅಭಿಮಾನದಿಂದ ಜಗತ್ತಿನ ಮುಂದಿಡಬೇಕು." ಏಳು ದಶಕಗಳ ಹಿಂದೆಯೇ ಶ್ರೀಗಳವರು ಆಡಿದ ಈ ನುಡಿಗಳು ಇಂದಿಗೂ ಪ್ರಸ್ತುತ.

ಕನ್ನಡ ನಾಡು ನುಡಿಯ ಕುರಿತ ಉತ್ಸವ, ಸಮ್ಮೇಳನಗಳು ಕರ್ನಾಟಕದ ಯಾವುದೇ ಭಾಗದಲ್ಲಿ ನಡೆದರೂ ಶ್ರೀಗಳವರು ಪಾಲ್ಗೊಳ್ಳುತ್ತಿದ್ದರು. ೧೯೩೬ರಲ್ಲಿ ಹಂಪಿಯಲ್ಲಿ ವಿಜೃಂಭಣೆಯಿಂದ ನಡೆದ ವಿಜಯನಗರ ಕರ್ನಾಟಕ ಸಾಮ್ರಾಜ್ಯದ ಆರನೆಯ ಶತಮಾನೋತ್ಸವದಲ್ಲಿ ಶ್ರೀಗಳವರು ಭಾಗವಹಿಸಿದ್ದರು. ಅಲ್ಲಿಂದ ಮರಳಿ ಬರುವಾಗ ಉತ್ಸವಕ್ಕೆ ಬಂದಿದ್ದ ಪ್ರೊ.ಬಿ.ಎಂ.ಶ್ರೀ ಕಂಠಯ್ಯನ ವರನ್ನು ಹಾಗೂ ಪ್ರೊ. ವಿ ಸೀತಾರಾಮಯ್ಯನವರನ್ನು ಶಿವಯೋಗಮಂದಿರಕ್ಕೆ ಸಂದರ್ಶನವೀಯಲು ಕರೆತಂದಿದ್ದರು. ಅವರು ಅಲ್ಲಮಪ್ರಭು ಮತ್ತು ಬಸವೇಶ್ವರರ ಕುರಿತು ಉಪನ್ಯಾಸ ಮಾಡಿದರು. ಈ ಸಂದರ್ಭದಲ್ಲಿ ಶ್ರೀಗಳವರ ಆಶೀರ್ವಾದ ಪಡೆದುದನ್ನು ಕೃತಜ್ಞತೆಯಿಂದ ಸ್ಮರಿಸಿ ದಿನಾಂಕ ೩೦-೧೨-೧೯೩೬ರಂದು ಪತ್ರ ಬರೆದರು. ಶಿವಯೋಗ ಮಂದಿರದ ನಿಸರ್ಗ ಸೌಂದರ್ಯ, ವ್ಯವಸ್ಥಿತ ಗ್ರಂಥಾಲಯಗಳನ್ನು ನೋಡಿ ಸಂತಸಪಟ್ಟುದುದನ್ನು ಉಲ್ಲೇಖಿಸಿದ್ದಾರೆ. ನವಿಲಗುಂದ ಶ್ರೀಗಳವರು ಸಂಸ್ಥೆಯನ್ನು ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ಪೋಷಿಸಿಕೊಂಡು ಬಂದುದನ್ನು ಶ್ಲಾಘಿಸಿದ್ದಾರೆ. ಸಾಧಕರಿಂದ ನಡೆಸುತ್ತಿರುವ 'ಸುಕುಮಾರ' ಪತ್ರಿಕೆಯನ್ನು ಉಲ್ಲೇಖಿಸಿದ್ದಾರೆ. ಸ್ವಾಮಿಗಳು ಬಹಳ ದಯಾಳುಗಳು ಅವರ ಆಶೀರ್ವಾದ ಮತ್ತು ಸಿಹಿನೆನಪುಗಳೊಂದಿಗೆ ಮರಳಿದೆವು ಎಂದು ಬರೆದಿದ್ದಾರೆ.

ನವಿಲಗುಂದ ಶ್ರೀಗಳವರ ಅಧಿಕಾರಾವಧಿಯಲ್ಲಿ ನಾಡಿನ ಹಲವಾರು ವಿದ್ವಾಂಸರು ಶಿವಯೋಗ ಮಂದಿರಕ್ಕೆ ಸಂದರ್ಶನವೀಯುತ್ತಿದ್ದರು. ಅವರಿಂದ ಸಾಧಕರಿಗಾದ ಜ್ಞಾನಾರ್ಜನೆಯ ಲಾಭ ಅಪಾರ.

೧೯೪೦ ಫೆಬ್ರುವರಿ ೪ ಹಾಗೂ ೫ ರಂದು ಎರಡು ದಿನಗಳವರೆಗೆ ಧಾರವಾಡ ಜಿಲ್ಲಾ ೪ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಶ್ರೀ ಬಸವಲಿಂಗ ಸ್ವಾಮಿಗಳು ನವಿಲಗುಂದದ ತಮ್ಮ ಗವಿಮಠದಲ್ಲಿ ಸಂಘಟಿಸಿದ್ದರು. ಆದಿತ್ಯವಾರ ೪-೨-೧೯೪೦ರಂದು ಡಾ. ಶಿ. ಚೆ. ನಂದಿಮಠ ಅವರು ಸಮ್ಮೇಳನದ ಸರ್ವಾಧ್ಯಕ್ಷರಾಗಿದ್ದರು. ಶ್ರೀ ರಾವಬಹಾದ್ದೂರ ಶಿವಪ್ಪನವರು ಮಾನ್ವಿ ಗದಗ ಅವರು ಸಮ್ಮೇಳನದ ಪ್ರಾರಂಭೋತ್ಸವದ ಉದ್ಘಾಟಕರಾಗಿದ್ದರು. ಶ್ರೀ ಬಿ.ಎಂ. ಶ್ರೀ ಕಂಠಯ್ಯನವರು ಕವಿಗೋಷ್ಠಿಯ ಅಧ್ಯಕ್ಷರಾಗಿದ್ದರು. ನವಿಲಗುಂದದ ಶ್ರೀ ಜೀವಪ್ಪನವರು ಆನೆಗುಂದಿ ಅವರು ಸ್ವಾಗತಾಧ್ಯಕ್ಷರಾಗಿದ್ದರು.

ಸೋಮವಾರ ದಿ. ೫-೨-೧೯೪೦ರಂದು ನಾಟ್ಯಗೋಷ್ಠಿಯ ಅಧ್ಯಕ್ಷತೆಯನ್ನು ಬೆಂಗಳೂರಿನ ಶ್ರೀ ಅ.ನ.ಕೃಷ್ಣರಾಯರು ವಹಿಸಿದ್ದರು. ಶ್ರೀ ಅನ್ನದಾನಪ್ಪ ಹುರಕಡ್ಲಿ (ಧ್ರೇವಿ ಆರಾಧಕ ಶ್ರೀ ಹುರಕಡ್ಲಿ ಅಜ್ಜನವರು) ಅವರು ಸ್ವಾಗತಾಧ್ಯಕ್ಷರಾಗಿದ್ದರು. ಶ್ರೀಮತಿ ಗೌರೀದೇವಿ ಇಂಚಲಮಠ ಮುರಗೋಡ ಅವರು ಮಹಿಳಾಗೋಷ್ಠಿಯ ಅಧ್ಯಕ್ಷರಾಗಿದ್ದರು. ಶ್ರೀಮಂತ ಸುಂದರಾಬಾಯಿ ಸರದೇಸಾಯಿ ಅವರು ಸಿರಸಂಗಿ ಉದ್ಘಾಟಕರಾಗಿದ್ದರು. ಎರಡು ದಿನಗಳವರೆಗೆ ನಡೆದ ಈ ಸಮ್ಮೇಳನದಲ್ಲಿ ನಾಡಿನ ನಾಮಾಂಕಿತ ನವಿಲಗುಂದ ಶ್ರೀಗಳವರು ಉತ್ತರ ಕರ್ನಾಟಕ ಸಮಿತಿಯ ಅಧ್ಯಕ್ಷರಾಗಿದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ದಿನಾಂಕ ೨೩-೨-೧೯೪೦ರಂದು ಬಿ.ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಶ್ರೀಗಳವರು ಬಸವಣ್ಣನವರ ವಚನಗಳ ಕುರಿತು ತೌಲನಿಕವಾಗಿ ಉಪನ್ಯಾಸವಿತ್ತರು. ಬಿ.ಎಂ. ಶ್ರೀ ಅವರಿಗೆ ಸಲ್ಲಿಸಿದ ಸಂಭಾವನಾ ಗ್ರಂಥದಲ್ಲಿ ಸ್ವಾಮಿಗಳ 'ಶರಣರ ವಚನಗಳು' ಲೇಖನವು ವಚನ ಸಾಹಿತ್ಯದ ಹಿರಿಮೆ ಗರಿಮೆಯನ್ನು ಮನೋಜ್ಞವಾಗಿ ನಿರೂಪಿಸುತ್ತದೆ. ೨೧-೪-೧೯೪೦ರಲ್ಲಿ ಹಾನಗಲ್ಲಿನಲ್ಲಿ ವಸಂತ ಸಾಹಿತ್ಯೋತ್ಸವವನ್ನು ಉದ್ಘಾಟಿಸಿ ಕರ್ನಾಟಕ ಏಕೀಕರಣದ ಅವಶ್ಯಕತೆಯನ್ನು ಕುರಿತು ಮಾತನಾಡಿದರು. ಕರ್ನಾಟಕ ಏಕೀಕರಣದ ಕುರಿತು ಮೈಸೂರಿನ ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್ ಅವರ ಮೇಲೆ ಪ್ರಭಾವ ಬೀರಿದ್ದರು.

ಸುಕುಮಾರ ಪತ್ರಿಕೆ - ಗ್ರಂಥಾಲಯ :

ಸಾಧಕರಲ್ಲಿ ವಾಚನಾಭಿರುಚಿ ಬೆಳೆಯಲು ಉತ್ಕೃಷ್ಟಗ್ರಂಥಗಳು ಅವಶ್ಯವೆಂಬುದನ್ನರಿತ ನವಿಲಗುಂದ ಶ್ರೀಗಳವರು ಸಂಸ್ಥೆಯ ಹಿತೈಷಿಗಳಾಗಿದ್ದ ಕಿತ್ತೂರ ರೇವಣಸಿದ್ಧಪ್ಪನವರ ಸ್ಮರಣಾರ್ಥ ಶ್ರೀ ರೇವಣಸಿದ್ಧೇಶ್ವರ ಗ್ರಂಥಾಲಯ ಪ್ರಾರಂಭಿಸಿದರು. ಶ್ರೀಗಳವರ ಆಶೀರ್ವಾದ, ಪ್ರೋತ್ಸಾಹದ ಫಲವಾಗಿ ಸಾಧಕರು ಶಿವಯೋಗಿ ಸಂಘಕಟ್ಟಿದರು.

ನವಿಲಗುಂದ ಶ್ರೀಗಳವರು ಸಾಧಕರಲ್ಲಿ ಕನ್ನಡ ಸಾಹಿತ್ಯ, ಸಂಸ್ಕೃತಿ ಬಗ್ಗೆ ಆಸಕ್ತಿ ತಳೆದು ಲೇಖನ ಕಲೆ ಬೆಳೆಯಬೇಕೆಂದು ಬಯಸಿ 'ಸುಕುಮಾರ' ಕೈ ಬರಹದ ಮಾಸ ಪತ್ರಿಕೆಯನ್ನು ಪ್ರಾರಂಭಿಸಲು ಪ್ರೇರಣೆ ನೀಡಿದರು.

'ಸುಕುಮಾರ' ಎಂಬ ಶುಭನಾಮದಲ್ಲಿ ಕ್ರಿ.ಶ. ೧೯೩೩ ಶಕೆ ೧೮೫೫ ಯುಗಾದಿಯ ಶುಭದಿನದಂದು ಕೈಬರಹದ ಮಾಸಪತ್ರಿಕೆಯ ಪ್ರಕಟನೆ ಪ್ರಾರಂಭವಾಯಿತು. ಸಂಸ್ಥೆಯಲ್ಲಿ ಮುದ್ರಣಾಲಯವಿರಲಿಲ್ಲ. ಅಡ್ನೂರ ಚಂದ್ರಶೇಖರದೇವರು (ಡಾ. ಜ.ಚ.ನಿ) ತಮ್ಮ ಮುದ್ದಾದ ಮುತ್ತಿನಂತಹ ಅಕ್ಷರಗಳಿಂದ ಸಂಚಿಕೆಯನ್ನು ರೂಪಿಸಿದರು. ಹಿರಿಯ ಸಾಧಕ-ಅರಳಿಕಟ್ಟಿಯ ಶ್ರೀ ರೇಣುಕದೇಶಿಕರು (ಶ್ರೀ ನಿ.ಪ್ರ. ಸದಾಶಿವ ಮಹಾಸ್ವಾಮಿಗಳು ಹಾನಗಲ್ಲ) ತಮ್ಮ ಕಲಾತ್ಮಕ ಚಿತ್ರಗಳಿಂದ ಪತ್ರಿಕೆಯನ್ನು ಅಲಂಕರಿಸಿದರು. ಗುತ್ತಲದ ಶ್ರೀ ಬಸವಲಿಂಗ ದೇಶಿಕರು (ತೆಲಸಂಗ ಹಿರೇಮಠದ ಶ್ರೀ ಬಸವಲಿಂಗ ಪಟ್ಟಾಧ್ಯಕ್ಷರು) ಸಂಪಾದಕರಾದರು. ನವಿಲಗುಂದ ಶ್ರೀಗಳವರ ಮಾರ್ಗದರ್ಶನದಲ್ಲಿ ಪ್ರತಿ ತಿಂಗಳು ನಿಯಮಿತವಾಗಿ ಪ್ರಕಟವಗುತ್ತಿತ್ತು. ಸ್ವತಃ ನವಿಲಗುಂದ ಶ್ರೀಗಳವರು 'ಬ. ನವಿಲಗುಂದ' ಎಂಬ ಅಂಕಿತದಲ್ಲಿ 'ಸುಕುಮಾರ'ದಲ್ಲಿ ಉತ್ತಮ ಲೇಖನಗಳನ್ನು ಬರೆಯುತ್ತಿದ್ದರು. ಪ್ರತಿ ಸಂಚಿಕೆಯನ್ನು ಸಾಧಕರು ಓದುವುದಕ್ಕಾಗಿ ಶ್ರೀ ರೇವಣಸಿದ್ಧೇಶ್ವರ ಗ್ರಂಥಾಲಯದಲ್ಲಿ ಪ್ರದರ್ಶಿಸ ಲಾಗುತ್ತಿತ್ತು. ಮುಂದೆ ಆರು ಸಾವಿರ ವಚನಗಳನ್ನು ಬರೆದು 'ವಚನ ಬ್ರಹ್ಮ'ನೆಂದು ಖ್ಯಾತಿವೆತ್ತ ಡಾ. ಜಚನಿಯವರ ವಚನಗಳ ಉಗಮವಾದುದು 'ಸುಕುಮಾರ' ಗಂಗೋತ್ರಿಯಿಂದಲೇ ಎಂಬುದು ಗಮನಾರ್ಹ.

ಪ್ರೊ. ಬಿ.ಎಂ. ಶ್ರೀ ಮೊದಲಾದ ವಿದ್ವಾಂಸರು 'ಸುಕುಮಾರ' ಸಂಚಿಕೆಗಳ ಕುರಿತು ಸದಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೧೦-೯-೧೯೩೩ರಂದು ಸಿದ್ಧಗಂಗಾಮಠದ ಶ್ರೀ ಶಿವಕುಮಾರ ಸ್ವಾಮಿಗಳು, ೧೮-೧೨-೧೯೩೪ರಂದು ಬೆಂಗಳೂರು ಸರ್ಪಭೂಷಣ ಮಠದ 'ಅಭಿನವ ಅಲ್ಲಮ' ಶ್ರೀ ಮಹಾದೇವ ಸ್ವಾಮಿಗಳು ಸುಕುಮಾರ ಸಂಚಿಕೆಗಳನ್ನು ಅವಲೋಕಿಸಿ ತಮ್ಮ ಸದಭಿಪ್ರಾಯವಿತ್ತದು ಸಾಧಕರಿಗೆ ಸ್ಫೂರ್ತಿದಾಯಕ

ಈ ಪತ್ರಿಕೆಯನ್ನು ಮುದ್ರಣ ಮಾಡುವ ಸಲುವಾಗಿ ನವಿಲಗುಂದ ಶ್ರೀಗಳವರು ಹಾವೇರಿ ಹುಕ್ಕೇರಿಮಠದಲ್ಲಿದ್ದ ಮುದ್ರಣ ಯಂತ್ರವನ್ನು ಮಂದಿರಕ್ಕೆ ತರುವ ಏರ್ಪಾಟು ಮಾಡಿದರು. ಕೆಲಕಾಲದ ನಂತರ ಹಾನಗಲ್ಲ ಶ್ರೀ ನಿ.ಪ್ರ. ಸದಾಶಿವಸ್ವಾಮಿ ಗಳವರ ಕೃಪೆಯಿಂದಾಗಿ ಪ್ರೊ. ಜಿ.ಎಂ. ಉಮಾಪತಿ ಶಾಸ್ತ್ರಿಗಳವರ ಸಂಪಾದಕತ್ವದಲ್ಲಿ ಐದು ವರ್ಷಗಳವರೆಗೆ ನಡೆಯಿತು. ಅಕ್ಟೋಬರ ೧೯೫೦ರಂದು ಪ್ರಕಟವಾದ 'ಸುಕುಮಾರ' ಮುದ್ರಿತ ಸಂಚಿಕೆಗೆ ನವಿಲಗುಂದ ಶ್ರೀಗಳವರು ಶುಭಾಶೀರ್ವಾದ ಸಂದೇಶ ಕಳಿಸಿ ಪ್ರೋತ್ಸಾಹಿಸಿದರು.

ಶಿವಯೋಗಮಂದಿರದಲ್ಲಿ ಶಿವಾನುಭವಗೋಷ್ಠಿಗಳು ಕಾಲಕಾಲಕ್ಕೆ ನಡೆಯುತ್ತಿದ್ದವು. ಶ್ರೀ ಬಸವಲಿಂಗಸ್ವಾಮಿಗಳು ಧಾರವಾಡ ಮುರುಘಾಮಠದ ಆಶ್ರಯದಲ್ಲಿ ಶಿವಾನುಭಂವ ಸಮ್ಮೇಳನಗಳು ನಡೆಯುವಂತೆ ಶ್ರೀ ಮೃತ್ಯುಂಜಯ ಅಪ್ಪಗಳಿಗೆ ಪ್ರೇರಣೆ ನೀಡಿದರು. ಹುಬ್ಬಳ್ಳಿಯ ಮೂರುಸಾವಿರಮಠದ ಹಾಗೂ ಧಾರವಾಡದ ಮುರುಘಾಮಠದ ಎಲ್ಲ ಧಾರ್ಮಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ನವಿಲಗುಂದ ಶ್ರೀಗಳವರ ಸಲಹೆ ಸಹಕಾರ ಇದ್ದೇ ಇರುತ್ತಿತ್ತು.

**ಗವಾಯಿಗಳ ಗರಡಿ ಗವಿಮಠ :**

ಶಿವಯೋಗಮಂದಿರದಲ್ಲಿದ್ದ ಗಾನಯೋಗಿ ಪಂ.ಪಂಚಾಕ್ಷರ ಗವಾಯಿಗಳಿಗೆ ಹಾನಗಲ್ಲ ಶ್ರೀಗಳವರ ಅಪ್ಪಣೆಯ ಮೇರೆಗೆ ೧೯೩೩ರಲ್ಲಿ ಶ್ರೀ ಬಸವಲಿಂಗಸ್ವಾಮಿಗಳು ತಮ್ಮ ಮಠದಲ್ಲಿ ಆಶ್ರಯವಿತ್ತು ಮಿರ್ಜಿಯ ಖ್ಯಾತ ಗಾಯಕ ಪಂ. ನೀಲಕಂಠ ಬುವಾ ಅವರಿಂದ ಸಂಗೀತ ಶಿಕ್ಷಣ ಕೊಡಿಸಿದರು. ಪಂ. ಪುಟ್ಟರಾಜ ಗವಾಯಿಗಳು ಇಲ್ಲಿಯೇ ಇದ್ದು ಸಂಗೀತ ಕಲಿತರು. ಶ್ರೀ ಬಸವಲಿಂಗ ಸ್ವಾಮಿಗಳು ಮೂರುವರೆಸಾವಿರ ರೂಪಾಯಿ ವೆಚ್ಚಮಾಡಿ ಪಾಠಶಾಲೆಯ ಶಿಕ್ಷಕರಿಗೆ ಸಕಲ ಸೌಕರ್ಯ ನೀಡಿ, ಸಾಧಕರಿಗೆ ಯಾವ ಕೊರತೆಯೂ ಆಗದಂತೆ ನೋಡಿಕೊಂಡರು. ಇದು ಶ್ರೀಗಳವರ ಸಂಗೀತ ಕಲಾಭಿಮಾನಕ್ಕೆ ಸಾಕ್ಷಿ. ಗುರುಕುಮಾರೇಶನ ಆಜ್ಞಾಪಾಲನೆಯ ಸಂತೃಪ್ತಿ ಸಮನಿಸಿತು.

ಶ್ರೀ ಬಸವಲಿಂಗಸ್ವಾಮಿಗಳಿಗೆ ನವಿಲಗುಂದ ಗವಿಮಠದ ಪಟ್ಟಾಧಿಕಾರ ಮಾಡಬೇಕೆಂದು ಬಯಸಿದ ಭಕ್ತರ ಭಕ್ತಿಯ ಕರೆಯ ಮೇರೆಗೆ ಶ್ರೀಗಳವರು ನವಿಲಗುಂದಕ್ಕೆ ಹೋಗಬೇಕಾಯಿತು. ೧೯೩೮ರಲ್ಲಿ ಸಂಸ್ಥೆಯ ವ್ಯವಸ್ಥೆಯನ್ನು ಹಾನಗಲ್ಲ ವಿರಕ್ತಮಠದ ಶ್ರೀ ನಿ.ಪ್ರ. ಸದಾಶಿವ ಮಹಾಸ್ವಾಮಿಗಳಿಗೆ ಒಪ್ಪಿಸಿದರು. ಶ್ರೀ ಬಸವಲಿಂಗಸ್ವಾಮಿಗಳು ಅಖಂಡ ಇಪ್ಪತ್ತೊಂಬತ್ತು ವರ್ಷಗಳವರೆಗೆ ಶಿವಯೋಗ ಮಂದಿರದಲ್ಲಿ ಸಾಧಕರಾಗಿ ಸೇರಿ ಶಿವಯೋಗದೊಂದಿಗೆ ವಿದ್ಯಾರ್ಜನೆಮಾಡಿ ಪರಿಣತಿ ಪಡೆದು ಸಂಸ್ಥೆಯ ಆಜೀವ ಉಪಾಧ್ಯಕ್ಷರಾಗಿ ಶಿವಯೋಗಮಂದಿರವನ್ನು ಸರ್ವಾಂಗ ಸುಂದರವಾಗಿ ರೂಪಿಸಿದುದು ಮಠಾಧೀಶರ ಇತಿಹಾಸದಲ್ಲಿಯೇ ವಿಶಿಷ್ಟವಾದುದು.

ಪೀಠಾಧಿಕಾರಿಗಳಾಗದೆ ದೇಶಿಕರಾಗಿದ್ದುಕೊಂಡೇ ನಾಡು, ಹೊರನಾಡುಗಳಲ್ಲಿ ಧರ್ಮ, ಸಾಹಿತ್ಯ, ಸಂಸ್ಕೃತಿ, ನಾಡು, ನುಡಿಯ ಕುರಿತು ತಮ್ಮ ಘನ ವ್ಯಕ್ತಿತ್ವ ಪ್ರಭಾವಪೂರ್ಣ ವಾಕ್ಪಟುತ್ವದ ಮೂಲಕ ಇಪ್ಪತ್ತೈದು ವರ್ಷಗಳ ಪರ್ಯಂತರ ಪೀಠಾಧಿಕಾರಿಯಾಗುವವರೆಗೂ ಜನ ಜಾಗೃತಿ ಮಾಡಿದುದು ಅವರದೇ ಆದ ವೈಶಿಷ್ಟ್ಯ.

೧೨-೫-೧೯೩೮ರಂದು ನವಿಲಗುಂದದ ಗವಿಮಠದಲ್ಲಿ ಶಲವಡಿಯ ಮಹಾಮಹಿಮ ಶ್ರೀ ನಿ.ಪ್ರ. ಗುರುಶಾಂತ ಮಹಾಸ್ವಾಮಿಗಳವರು ಶ್ರೀ ಬಸವಲಿಂಗ ಮಹಾಸ್ವಾಮಿಗಳಿಗೆ ಪೀಠಾಧಿಕಾರ ಪ್ರಧಾನ ಮಾಡಿದರು. ಮುಂದೆ ಅವರು ಮಾಡಿದ ಮಣಿಹಗಳು ನಮ್ಮ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ದಾಖಲಾರ್ಹವಾದವು.

**ಶ್ರೀ ಸಿದ್ಧಲಿಂಗೇಶ್ವರ ಸ್ಮರಣೆ :** ಇಪ್ಪತ್ತನೆಯ ಶತಮಾನದ ದ್ವಿತೀಯ ದಶಕದಲ್ಲಿ ಹಾನಗಲ್ಲ ಶ್ರೀ ಕುಮಾರ ಶಿವಯೋಗಿಗಳು ಶಿವಯೋಗ ಮಂದಿರದ ಸಾಧಕರೊಂದಿಗೆ ಎಡೆಯೂರಿಗೆ ಪಯಣಿಸಿ ಶ್ರೀ ಸಿದ್ಧಲಿಂಗೇಶ್ವರರ ಗದ್ದುಗೆ ದರ್ಶನ ಮಾಡಿದರು. ಅದು ಜಾಗೃತ ಸ್ಥಾನವೆಂದು ಮನವರಿಕೆ ಮಾಡಿಕೊಂಡರು. ಆಗ ತಮ್ಮ ಜೊತೆಗಿದ್ದ ನೆಚ್ಚಿನ ಶಿಷ್ಯ ಶ್ರೀ ಬಸವಲಿಂಗ ದೇಶಿಕರ ಹೃದಯದಲ್ಲಿ ಸಿದ್ಧಲಿಂಗೇಶನ ಬಗೆಗೆ ಭಕ್ತಿಯ ಬೀಜವನ್ನು ನೆಟ್ಟರು.

ಗುರುವಿನ ಆಣತಿಯಂತೆ ಅಂದಿನಿಂದ ಶ್ರೀ ಬಸವಲಿಂಗಸ್ವಾಮಿಗಳು ಪ್ರತಿವರ್ಷ ಎಡೆಯೂರಿನ ಯಾತ್ರೆ ಮಾಡುವುದನ್ನು ವ್ರತವೆಂಬಂತೆ ಆಜೀವ ಪರ್ಯಂತ ನಡೆಸಿಕೊಂಡು ಬಂದರು. ಎಡೆಯೂರಿನ ಶ್ರೀ ಸಿದ್ಧಲಿಂಗೇಶ್ವರರ ಪಾದುಕೆಗಳನ್ನು ತಂದು ಗವಿಮಠದಲ್ಲಿ ಪ್ರತಿಷ್ಠಾಪಿಸಿದರು. ರಾಮಭಕ್ತ ಹನುಮಂತನ ರೋಮ ರೋಮವೂ ರಾಮನಾಮ ಜಪಿಸುತ್ತಿತ್ತಂತೆ ಶ್ರೀಗಳವರು ಕುಳಿತರೆ ಸಿದ್ಧಲಿಂಗೇಶ ನಡೆದರೆ ಸಿದ್ಧಲಿಂಗೇಶ, ನುಡಿದರೆ ಸಿದ್ಧಲಿಂಗೇಶನೆಂದೇ ನೆನೆಯುತ್ತಿದ್ದರು. ಅವರ ನಾಡಿಯ ಬಡಿತದಲ್ಲಿ ಸಿದ್ಧಲಿಂಗೇಶನ ನಾಮವೇ ಮಿಡಿಯುತ್ತಿತ್ತು. ಉತ್ತರ ಕರ್ನಾಟಕದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರ ಬಗೆಗೆ ಭಕ್ತಿಯನ್ನು ಮಾಡಿಸಿವರು ಶ್ರೀ ಬಸವಲಿಂಗ ಮಹಾಸ್ವಾಮಿಗಳು. ನವಿಲಗುಂದದ ಬಡಾವಣೆಯೊಂದಕ್ಕೆ 'ಸಿದ್ಧಲಿಂಗೇಶ ನಗರ'ವೆಂದು ಸಿದ್ಧಗಂಗಾ ಮಠದ ಶ್ರೀ ಶಿವಕುಮಾರ ಮಹಾಸ್ವಾಮಿಗಳಿಂದ ನಾಮಕರಣ ಮಾಡಿಸಿ ನಲಿದರು. ತಮ್ಮ ಗವಿಮಠದ ಯಾತ್ರಾ ಮಹೋತ್ಸವವು ಶ್ರೀ ಸಿದ್ಧಲಿಂಗೇಶ್ವರ ಯಾತ್ರಾ ಮಹೋತ್ಸವವಾಗಿ ಪರಿಣಮಿಸಿತು. ಇದೆಲ್ಲ ಶ್ರೀ ಸಿದ್ಧಲಿಂಗೇಶ್ವರರ ಬಗೆಗಿನ ಅವರ ಅನನ್ಯ ಭಕ್ತಿಯ ದ್ಯೋತಕ. ಎಡೆಯೂರ ಕ್ಷೇತ್ರದಲ್ಲಿ ಶ್ರೀಗಳವರ ಅಮೃತ ಹಸ್ತದಿಂದ ಪ್ರಾರಂಭವಾದ ದಾಸೋಹವು ಇಂದಿಗೂ ಪ್ರಗತಿಯತ್ತ ಮುನ್ನಡೆಯುತ್ತಲಿದೆ.

ಶಿವ ಸಾಹಿತಿ : ಶ್ರೀಗಳವರು ಅಷ್ಟಾವರಣಗಳ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲವರಾಗಿದ್ದರು. 'ಅಷ್ಟಾವರಣಗುಚ್ಛ' ಎಂಬ ಹೆಸರಿನಲ್ಲಿ ಪುಸ್ತಕಗಳನ್ನು ಪ್ರಕಟಿಸುವ ಯೋಜನೆ ಕೈಕೊಂಡರು. ಅದರ ಪ್ರಥಮ ಪುಷ್ಪವಾಗಿ 'ಲಿಂಗ' ಕೃತಿಯನ್ನು ೧೯೨೪ರಲ್ಲಿಯೂ 'ಗುರು' ಕೃತಿಯನ್ನು ೧೯೨೮ರಲ್ಲಿಯೂ ಪ್ರಕಟಿಸಿದರು. ಗ್ರಂಥಕರ್ತರ ಹೆಸರು 'ಬ, ಶಿವಯೋಗಮಂದಿರ' ಎಂದು ಮಾತ್ರ ಇದೆ. ತಮ್ಮ ಹೆಸರಿನ ಪ್ರಚಾರ ಬೇಕಿರಲಿಲ್ಲೆಂಬ ನಿರಪೇಕ್ಷ ಭಾವನೆಗೆ ಇದು ನಿದರ್ಶನವಾಗಿದೆ. ಇವೆರಡೂ ಕೃತಿಗಳನ್ನು ತಮ್ಮ ಆರಾಧ್ಯ ಮೂರ್ತಿ ಶ್ರೀ ಸಿದ್ಧಲಿಂಗೇಶ್ವರರಿಗೆ ಸಮರ್ಪಿಸಿದ್ದಾರೆ.

೧೯೨೪ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟವಾದ 'ಲಿಂಗ' ಕೃತಿಯಲ್ಲಿ ''ಇದು ಲೇಖಕರ ಮೊದಲನೆಯ ಪ್ರಯತ್ನ, ಆದ್ದರಿಂದ ಇದರಲ್ಲಿ ಕಂಡ ದೋಷಗಳನ್ನು ವಿದ್ವಾಂಸರು ಸೂಚಿಸಬೇಕು'' ಎಂದು ತಮ್ಮ ವಿನಯ ಶ್ರೀಯನ್ನು ವ್ಯಕ್ತಪಡಿಸಿದ್ದಾರೆ. ಈ ಕೃತಿಯಲ್ಲಿ ಯೋಗವಾಶಿಷ್ಠ, ಶಿವಾಗಮಗಳು, ಉಪನಿಷತ್ತು ಭಗವದ್ಗೀತೆ, ಲಿಂಗಧಾರಣ ಚಂದ್ರಿಕೆ, ವಚನಗಳು, ಶತಕತ್ರಯ, ನಿಜಗುಣರ ಕೃತಿಗಳು, ಪ್ರಭುಲಿಂಗಲೀಲೆ ಮುಂತಾದ ಕೃತಿಗಳನ್ನು ಉಲ್ಲೇಖಿಸಲಾಗಿದೆ. ಇದರಲ್ಲಿ ಗುರುಶಿಷ್ಯ ಸಂವಾದ ರೂಪದಲ್ಲಿ ನಿರೂಪಿಸಿರುವುದರಿಂದ ವಿಷಯವು ಸುಗಮವಾಗುವಂತಾಗಿದೆ. ಇದರ ದ್ವಿತೀಯ ಪರಿಷ್ಕೃತ ಮುದ್ರಣವು ೧೯೭೦ರಲ್ಲಿ ಪ್ರಕಟವಾಯಿತು.

'ಗುರು' ಪುಸ್ತಕಕ್ಕೆ 'ಕರ್ನಾಟಕ ಕುಲಪುರೋಹಿತ' ಆಲೂರ ವೆಂಕಟರಾಯರು ಮುನ್ನುಡಿ ಬರೆದದ್ದು ವಿಶೇಷ. 'ಸದ್ಗುರು, ಮದ್ಗುರು, ಜಗದ್ಗುರು' ಎಂದು ತೋಂಟದ ಸಿದ್ಧಲಿಂಗೇಶ್ವರರಿಗೆ ಸಂಬೋಧಿಸಿ ಅರ್ಪಿಸಿದದು ಅವರ ಗುರುನಿಷ್ಠೆಯ ಪ್ರತೀಕವಾಗಿದೆ. ಈ ಪುಟ್ಟ ಪುಸ್ತಕಕ್ಕೆ ಅವರು ಬಳಸಿದ ಆಕರ ಗ್ರಂಥಗಳು ಹಲವು. ಸಂಸ್ಕೃತದ ಉಪನಿಷತ್ತು, ಭಗವದ್ಗೀತೆ, ಕನ್ನಡ ವಚನ ವಾಙ್ಮಯ, ಕೈವಲ್ಯಸಾರ, ಪುರಂದರದಾಸರ ಕೀರ್ತನೆಗಳು, ಮರಾಠಿ ದಾಸಬೋಧೆ ಇತ್ಯಾದಿ ಕೃತಿಗಳಿಂದ ವಿಷಯ ಪ್ರತಿಪಾದನೆ ಮಾಡಿದ್ದಾರೆ. ಇದೂ ಸಹ ಗುರುಶಿಷ್ಯ ಸಂವಾದ ರೂಪದಲ್ಲಿರುವುದರಿಂದ ಓದುಗರಿಗೆ ಆಕರ್ಷಕವಾಗಿ, ಸುಲಭ ಗ್ರಾಹ್ಯವಾಗುವಂತಾಗಿದೆ.

'ಮಾನವ ನೀತಿ' ಎಂಬ ಪುಸ್ತಕವನ್ನು ೧೯೩೪ರಲ್ಲಿ ಪ್ರಕಟಿಸಿದರು. ಇದರಲ್ಲಿ ೧೦೧ ನೀತಿ ಸೂಕ್ತಿಗಳಿವೆ. ಇದನ್ನೇ ಪರಿಷ್ಕರಿಸಿ 'ನೀತಿ' ಎಂಬ ಹೆಸರಿನಲ್ಲಿ ೧೯೬೩ರಲ್ಲಿ ಪ್ರಕಟಿಸಲಾಯಿತು.

೧೯೩೩ರಿಂದ ೧೯೬೦ರ ಅವಧಿಯಲ್ಲಿ ಶ್ರೀಗಳವರು ಮಾಡಿದ ಭಾಷಣ, ಪ್ರವಚನ, ಬರೆದ ಕೆಲವು ಲೇಖನಗಳು 'ನುಡಿ ಮುತ್ತು' ಪುಸ್ತಕದಲ್ಲಿ ಪ್ರಕಟವಾಗಿದೆ. ಅವರು ಆಡಿದ ಮಾತು ಮುತ್ತು! ಅಂತೆಯೆ 'ನುಡಿ ಮುತ್ತು' ಶೀರ್ಷಿಕೆ ಔಚಿತ್ಯಪೂರ್ಣ. ಇದು ೧೯೬೧ರಲ್ಲಿ ಪ್ರಥಮ ಮುದ್ರಣವಾಗಿ ಬೆಳಕು ಕಂಡಿತು. ಮುಂದೆ ಐದು ವರ್ಷಗಳ ಅವಧಿಯಲ್ಲಿ ಡಾ. ಎಂ. ಎಸ್. ಸುಂಕಾಪುರ ಅವರಿಂದ ಪರಿಷ್ಕೃತಗೊಂಡು ದ್ವಿತೀಯ ಮುದ್ರಣ ಕಂಡಿತು. ನಂತರ ಮೂರನೆಯ ಮುದ್ರಣ ಕಂಡಿತು. ಶ್ರೀಗಳವರ 'ನುಡಿಮುತ್ತು' ಬರಿ ಮುತ್ತಾಗಿರಲಿಲ್ಲ, ಶರಣರು ಆಡಿದಂತೆ ಮಾತು ಮಾಣಿಕ್ಯ ಮಾತು ಜ್ಯೋತಿರ್ಲಿಂಗವೆಂಬುದನ್ನು ಇದು ಸಾಬೀತು ಪಡಿಸುತ್ತದೆ. ೧೯೫೭ರಲ್ಲಿ ಹುಬ್ಬಳ್ಳಿಯ ಕರ್ನಾಟಕ ಮೆಡಿಕಲ್ ಕಾಲೇಜಿನ ಪ್ರಾರಂಭೋತ್ಸವದಲ್ಲಿ 'ಆರೋಗ್ಯವೇ ಭಾಗ್ಯ' ಎಂದು, ಹುಬ್ಬಳ್ಳಿಯ ಸಾಯನ್ಸ ಕಾಲೇಜಿಗೆ ಪಿ.ಸಿ. ಜಾಬಿನ ಸಾಯನ್ಸ ಕಾಲೇಜು ಎಂದು ನಾಮಕರಣಗೊಂಡಾಗ 'ವಿಜ್ಞಾನದ ಗುರಿ ಸುಜ್ಞಾನವಾಗಬೇಕು' ಎಂಬ ಆಶೀರ್ವಚನಗಳು ಈ ಕೃತಿಯಲ್ಲಿ ಸಮಾವೇಶಗೊಂಡಿವೆ.

೧೯೬೦ರಲ್ಲಿ ಶಿವಯೋಗಮಂದಿರದ ಸುವರ್ಣ ಮಹೋತ್ಸವ ಹಾಗೂ ಅಖಿಲಭಾರತ ವೀರಶೈವ ಮಹಾಸಭೆಯ ನೇತೃತ್ವ ವಹಿಸಿ ಸಮರ್ಥವಾಗಿ ಸಂಘಟಿಸಿದ ಕೀರ್ತಿ ಪೂಜ್ಯಶ್ರೀ ಬಸವಲಿಂಗ ಮಹಾಸ್ವಾಮಿಗಳಿಗೆ ಸಲ್ಲುತ್ತದೆ. ೧೯-೨-೧೯೬೦ರಂದು ಜರುಗಿದ ಸುವರ್ಣ ಮಹೋತ್ಸವದ ಸ್ವಾಗತಾಧ್ಯಕ್ಷರಾಗಿ ಶ್ರೀಗಳವರು ಆಡಿದ ನುಡಿಗಳು ನಿಜಕ್ಕೂ ಬಂಗಾರದಂಥವುಗಳು ''ಶಿವಯೋಗ ಮಂದಿರ ಹಾಗೂ ವೀರಶೈವ ಮಹಾಸಭೆ ಎರಡು ಅವಳಿ ಜವಳಿ ಇದ್ದಂತೆ. ಒಂದರಲ್ಲಿ ಪಾರಮಾರ್ಥ ಮುಖ್ಯ. ಇನ್ನೊಂದರಲ್ಲಿ ಲೌಕಿಕ ಮುಖ್ಯ. ಇವೆರಡೂ ನಾಣ್ಯದ ಎರಡು ಮುಖಗಳಿದ್ದಂತೆ. ಇವೆರಡಕೂ ಒಬ್ಬರೆ ಉತ್ಪಾದಕರು.... ಹಾನಗಲ್ಲ ಶ್ರೀಗಳವರ ಧಾರ್ಮಿಕ ಆಂದೋಲನವು ಮಹಾತ್ಮಾಜಿಯವರ ರಾಜಕಾರಣದಂತೆ, ಸಾರ್ವಜನಿಕ ಪ್ರೇಮ ಮತ್ತು ಬುದ್ಧಿವಂತಿಕೆಯಿಂದ ಸಾಗಿತು....''

ಶಿಕ್ಷಣ ಪ್ರೇಮಿ : ಶ್ರೀ ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳು ಬಾಗಿಲುಕೋಟೆಯ ಬಸವೇಶ್ವರ ವಿದ್ಯಾವರ್ಧಕ ಸಂಘದ ಅಧ್ಯಕ್ಷರಾಗಿ ಶಿಕ್ಷಣ ಕ್ಷೇತ್ರದಲ್ಲಿ ಅವರು ಸಲ್ಲಿಸಿದ ಸೇವೆ ಚಿರಸ್ಮರಣೀಯ ಶ್ರೀಗಳವರ ನೇತೃತ್ವದಲ್ಲಿ ಸಂಘದ ಆಶ್ರಯದಲ್ಲಿ ೧೬೦ ಗ್ರಾಮಗಳಲ್ಲಿ ಕನ್ನಡ ಪ್ರಾಥಮಿಕ ಶಾಲೆಗಳು ಸ್ಥಾಪಿತವಾದವು. ಇದರಿಂದಾಗಿ ಸಾವಿರಾರು ಬಡ ವಿದ್ಯಾರ್ಥಿಗಳಿಗೆ ವಿದ್ಯೆ ಸಂಪಾದಿಸುವ ಸದವಕಾಶ ಪ್ರಾಪ್ತವಾಯಿತು. ಈ ಪ್ರಾಥಮಿಕ ಶಾಲೆಗಳ ಶಿಕ್ಷಕರ ತರಬೇತಿಗಾಗಿ ೧೯೫೨ರಲ್ಲಿ ಬಸವೇಶ್ವರ ಕನ್ನಡ ಟ್ರೇನಿಂಗ್ ಕಾಲೇಜನ್ನು ಪ್ರಾರಂಭಿಸಲಾಯಿತು.

ಇಡೀ ಉತ್ತರಕರ್ನಾಟಕದ ನಾಲ್ಕು ಜಿಲ್ಲೆಗಳಲ್ಲಿ ಉಚ್ಚ ಶಿಕ್ಷಣ ನೀಡುವ ಕೇವಲ ಎರಡು ಕಾಲೇಜುಗಳು ಮಾತ್ರ ಇದ್ದವು. ಒಂದು ಧಾರವಾಡದ ಕರ್ನಾಟಕ ಕಾಲೇಜು, ಇನ್ನೊಂದು ಬೆಳಗಾವಿಯ ಕೆ.ಎಲ್.ಇ. ಸಂಸ್ಥೆಯ ಲಿಂಗರಾಜ ಕಾಲೇಜು. ವಿಜಾಪುರ ಜಿಲ್ಲೆಯು ಹಿಂದುಳಿದ ಕ್ಷೇತ್ರವೆನಿಸಿತು. ಆಗ ತಾಲೂಕ ಕೇಂದ್ರವಾದ ಬಾಗಿ ಉಕೋಟೆಯ ಬಡ ವಿದ್ಯಾರ್ಥಿಗಳಿಗೆ ಉಚ್ಚ ಶಿಕ್ಷಣ ಪಡೆಯುವುದು ಅಸಾಧ್ಯವಾಗಿತ್ತು ಇದನ್ನು ಗಮನಿಸಿ ಶ್ರೀಗಳವರು ಬೆಳಗಾವಿ ಲಿಂಗರಾಜ ಕಾಲೇಜಿನಲ್ಲಿ ಹನ್ನೊಂದು ವರ್ಷ ಸೇವೆ ಸಲ್ಲಿಸಿದ ಅನುಭವಿ ಡಾ. ಎಸ್.ಸಿ.ನಂದಿಮಠ ಅವರನ್ನು ಕರೆಯಿಸಿ, ಬಾಗಿಲಕೋಟೆಯ ಉತ್ಸಾಹಿ ಹಾಗೂ ಉದಾರ ಹೃದಯದ ವರ್ತಕರ ಸಹಾಯ ಸಹಕಾರದಿಂದ ೧೯೪೪ರಲ್ಲಿ ಬಸವೇಶ್ವರ ಕಾಲೇಜನ್ನು ಸ್ಥಾಪಿಸಿದರು. ಇದು ಬಾಗಿಲುಕೋಟೆಯ ಶೈಕ್ಷಣಿಕ ಕ್ಷೇತ್ರದಲ್ಲಿ ಸುವರ್ಣ ಅಧ್ಯಾಯನನ್ನು ನಿರ್ಮಿಸಿತು. ಮುಂದೆ ಸಂಘವು ಮುಧೋಳ ರಾಮದುರ್ಗದ ಎರಡು ಹೈಸ್ಕೂಲುಗಳ ಆಡಳಿತವನ್ನು ವಹಿಸಿಕೊಂಡು ಪ್ರಗತಿಪಥದಲ್ಲಿ ಮುನ್ನಡೆಸಿತು.

ಶ್ರೀಗಳವರು ಸಂಘದ ಕಾರ್ಯಕರ್ತರಿಗೆ ಪ್ರೇರಣೆ ನೀಡಿದ ಫಲವಾಗಿ ೧೯೫೮ರಲ್ಲಿ ಬಸವೇಶ್ವರ ಪಾಲಿಟೆಕ್ನಿಕ್ ಹಾಗೂ ೧೯೬೩ರಲ್ಲಿ ಬಸವೇಶ್ವರ ಇಂಜನೀಯರಿಂಗ್ ಕಾಲೇಜು ಸ್ಥಾಪಿತವಾದವು.

ಶ್ರೀಗಳವರ ನೇತೃತ್ವದಲ್ಲಿ ಶ್ರೀ ಎಸ್.ಆರ್.ಕಂಠಿ ಹಾಗೂ ಶ್ರೀ ಪಿ.ಎಂ. ನಾಡಗೌಡ ಅವರು ಸಂಘಕ್ಕೆ ಸಲ್ಲಿಸಿದ ಸೇವೆ ಸಂಸ್ಮರಣೀಯ. ಶ್ರೀ ನಾಡಗೌಡರ ಪ್ರಯತ್ನ ವಿಶೇಷದಿಂದ ೧೯೭೦ರಲ್ಲಿ ವಾಣಿಜ್ಯ ಮಹಾವಿದ್ಯಾಲಯ ಸ್ಥಾಪನೆಯಾದುದು ಸಂಘದ ಕೀರ್ತಿ ಕಿರೀಟದಲ್ಲಿ ಮತ್ತೊಂದು ಚಿನ್ನದ ಗರಿ ಸೇರ್ಪಡೆಯಾಯಿತು.

ಹೀಗೆ ಮಹಾಸ್ವಾಮಿಗಳವರು ಸಂಘವು ಅನೇಕ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಲು ಸೂಕ್ತ ಸಲಹೆ, ಮಾರ್ಗದರ್ಶನ ಮತ್ತು ಪ್ರೋತ್ಸಾಹ ನೀಡಿದುದನ್ನು ಮರೆಯುವಂತಿಲ್ಲ.

ಸರ್ವಧರ್ಮ ಸಮ್ಮೇಳನಗಳು : ಹಿಂದು, ಇಸ್ಲಾಂ, ಕ್ರಿಶ್ಚಿಯನ್, ಜೈನ್, ಬೌದ್ಧ ಶೈವ, ವೀರಶೈವ ಮುಂತಾದ ಧರ್ಮಗಳ ತಜ್ಞರನ್ನು ಒಂದೆಡೆ ಕೂಡಿಸಬೇಕು. ಅವರ ಧರ್ಮಗಳ ಬಗ್ಗೆ ವಿಚಾರಗಳನ್ನು ವ್ಯಕ್ತಪಡಿಸಿ, ಆ ಮೂಲಕ ಧರ್ಮ ಸಮನ್ವಯವನ್ನು ಸಾಧಿಸುವ ಹೆಗ್ಗುರಿಯನ್ನು ಶ್ರೀ ಬಸವಲಿಂಗ ಮಹಾಸ್ವಾಮಿಗಳು ಹೊಂದಿದ್ದರು. ಈ ದಿಸೆಯಲ್ಲಿ ಸರ್ವಧರ್ಮ ಸಮ್ಮೇಳನಗಳನ್ನು ಸಂಘಟಿಸಲು ಯೋಜಿಸಿದರು.

ಇದರ ಹಿನ್ನೆಲೆಯಾಗಿ ಹಾನಗಲ್ಲ ಶ್ರೀಗಳವರು ಬಸವಲಿಂಗ ಮಹಾಸ್ವಾಮಿಗಳ ಹೃದಯದಲ್ಲಿ ಸರ್ವಧರ್ಮಗಳ ತಿಳುವಳಿಕೆ ಮಾಡಿಕೊಳ್ಳಲು ಬೀಜಾವಾಹ ಮಾಡಿದರು. ಆ ಪ್ರಸಂಗ ಹೀಗಿದೆ :

ಶಿವಯೋಗ ಮಂದಿರಕ್ಕೆ ಗಣ್ಯಮಾನ್ಯರು ಆಗಮಿಸಿದಾಗ ಹಿರಿಯ ಸಾಧಕರಿಂದ ಅವರ ಸಮ್ಮುಖದಲ್ಲಿ ಉಪನ್ಯಾಸವೇರ್ಪಡಿಸ ಲಾಗುತ್ತಿತ್ತು ಒಮ್ಮೆ ಅನ್ಯಮತದ ಅತಿಥಿಗಳು ಆಗಮಿಸಿದ್ದರು. ಅವರ ಉಪಸ್ಥಿತಿಯಲ್ಲಿ ಹಿರಿಯ ಸಾಧಕರಾದ ಶ್ರೀ ಬಸವಲಿಂಗ ದೇಸಿಕರಿಗೆ ಉಪನ್ಯಾಸವೀಯಲು ಹಾನಗಲ್ಲ ಶ್ರೀಗಳವರು ಆದೇಶಿಸಿದ್ದರು. ಉತ್ತಮ ವಾಗ್ಮಿಗಳೆಂದು ಹೆಸರಾದ ಶ್ರೀ ಬಸವಲಿಂಗ, ದೇಶಿಕರು ಮಾತನಾಡುತ್ತಾ 'ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೆ ಎಂದು ಆಗಮವಾಕ್ಯವನ್ನು ಆಧರಿಸಿ, 'ವೀರಶೈವ ಧರ್ಮಕ್ಕಿಂತ ಶ್ರೇಷ್ಠವಾದ ಧರ್ಮ ಬೇರಾವುದೂ ಇಲ್ಲ' ಎಂದು ಅತ್ಯಂತ ಸ್ಫೂರ್ತಿಯಿಂದ ಮತನಾಡಿದರು. ಅತಿಥಿಗಳನ್ನು ಬೀಳ್ಕೊಟ್ಟನಂತರ ಹಾನಗಲ್ಲ ಶ್ರೀಗಳವರು ಶ್ರೀ ಬಸವಲಿಂಗ ದೇಶಿಕರನ್ನು ಕರೆಕಳುಹಿಸಿ, "ನೀನು ಎಷ್ಟು ಧರ್ಮಗಳನ್ನು ತಿಳಿದುಕೊಂಡಿರುವಿ ?'' ಎಂದು ಪ್ರಶ್ನಿಸಿದರು. ಸೂಕ್ಷ್ಮಗ್ರಾಹಿಯಾದ ದೇಶಿಕರು, "ನನ್ನದು ತಪ್ಪಾಯಿತು. ಕ್ಷಮಿಸಬೇಕು" ಎಂದು ಸಾಷ್ಟಾಂಗ ಪ್ರಣಾಮ ಮಾಡಿದರು. ಈ ಪ್ರಸಂಗವೇ ನವಿಲಗುಂದ ಶ್ರೀಗಳವರಲ್ಲಿ ಸರ್ವಧರ್ಮ ಸಮ್ಮೇಳನ ಕರೆದು ಸಮನ್ವಯ ಸಾಧಿಸಬೇಕೆಂದು ಸಂಕಲ್ಪಿಸುವಂತಾಯಿತು. ಈ ಮೂಲಕ ಉತ್ತರ ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ವಿನೂತನ ಮೈಲಿಗಲ್ಲನ್ನು ನೆಟ್ಟರು.

ಪ್ರಥಮ ಸಮ್ಮೇಳನವನ್ನು ದಿನಾಂಕ ೮ ಮತ್ತು ೯ ಫೆಬ್ರುವರಿ ೧೯೪೭ರಂದು ಸಂಘಟಿಸಲಾಗಿತ್ತು. ಧಾರವಾಡದ ಪ್ರೊ. ಶಿ.ಶಿ. ಬಸವನಾಳ ಅವರ ಅಧ್ಯಕ್ಷತೆಯಲ್ಲಿ ವ್ಹಿ. ಬಿ. ಹಾಲಭಾವಿ ಅವರು ಉದ್ಘಾಟಿಸಿದರು. ಪುರಾಣಿಕ ಬುದ್ಧಯ್ಯಸ್ವಾಮಿಗಳು ಸ್ವಾಗತಾಧ್ಯಕ್ಷರಾಗಿದ್ದರು.

ಸಮ್ಮೇಳನದ ಆರಂಭದಲ್ಲಿ 'ಗಮಕ ಕಲಾನಿಧಿ' ಜೋಳದರಾಶಿ ದೊಡ್ಡನಗೌಡರು ತಾವು ರಚಿಸಿದ ವಿಶ್ವಧರ್ಮ ಗೀತೆಯನ್ನು ಹಾಡಿದರು. ಎರಡು ದಿನ ನಡೆದ ಈ ಸಮ್ಮೇಳನದಲ್ಲಿ ಬೌದ್ಧ, ಜೈನ, ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಕ್ರಿಶ್ಚಿಯನ್, ಇಸ್ಲಾಂ ಧರ್ಮಗಳ ಕುರಿತು ಉಪನ್ಯಾಸಗಳು ಜರುಗಿದವು.

೧೯೪೫ರಿಂದ ಪ್ರಾರಂಭವಾಗಿ ೬-೫-೧೯೭೩ರ ತನಕ ಜರುಗಿದ ಸರ್ವಧರ್ಮ ಸಮ್ಮೇಳನಗಳ ಅಧ್ಯಕ್ಷತೆ ವಹಿಸಿದವರು. ಶ್ರೀ ನಿ.ಪ್ರ. ಸಂಗನಬಸವ ಶಿವಯೋಗಿಗಳು ಬಂಥನಾಳ, ಹಾವೇರಿಯ ಶ್ರೀ ಎಸ್. ಬಿ. ಹಿರೇಮಠ ಧಾರವಾಡದ ಪ್ರೊ. ಎಸ್.ಎಸ್. ಮಾಳವಾಡ, ಪಂ. ನಾಗಭೂಷಣಶಾಸ್ತ್ರಿಗಳು, ಶ್ರೀ ಎಸ್.ಎಸ್. ಒಡೆಯರ ಡಾ. ಸಿದ್ದಯ್ಯ ಪುರಾಣಿಕ, ಶ್ರೀಮತಿ ಸರೋಜಿನಿ ಮಹಿಷಿ, ಕೆನಡಾದ, ಯಾರ್ಕ ವಿಶ್ವವಿದ್ಯಾಲಯದ ಡಾ. ಕೆ. ಈಶ್ವರನ್, ಡಾ. ಎ.ಎಂ. ರಾಜಶೇಖರಯ್ಯ 'ಕವಿಭೂಷಣ' ಬೆಟಗೇರಿ ಕೃಷ್ಣಶರ್ಮರು ಸಂಪಾದಕರು 'ಜಯಂತಿ' ಮಾಸಪತ್ರಿಕೆ, ಧಾರವಾಡ, ಡಾ. ಟಿ. ಜಿ. ಕಲಘಟಗಿ, ಡಾ. ಪಂಚಾಕ್ಷರಿ ಹಿರೇಮಠ.

ಬಾಗಿಲುಕೋಟೆಯ 'ದಾನವೀರ' ಶ್ರೀಸಕ್ಕರಿ ವೆಂಕಪ್ಪನವರು, ವಿಜಾಪುರದ 'ಸಂದರ್ಶನ' ವಾರಪತ್ರಿಕೆಯ ಸಂಪಾದಕ ಶ್ರೀ ವ್ಹಿ.ಬಿ.ನಾಯಕ, ಹುಬ್ಬಳ್ಳಿಯ ರುದ್ರಾಕ್ಷಿ ಮಠದ ಶ್ರೀ ರುದ್ರಸ್ವಾಮಿಗಳು, ಧಾರವಾಡದ ಡಾ. ಆರ್. ಸಿ. ಹಿರೇಮಠ, ಡಾ. ಎಸ್.ಎಂ.ವೃಷಭೇಂದ್ರಸ್ವಾಮಿಗಳು, ನವಿಲುಗುಂದದ ಶ್ರೀ ಎಂ.ಕೆ. ಕುಲಕರ್ಣಿ, ಹುಬ್ಬಳ್ಳಿಯ ಮೂರು ಸಾವಿರಮಠದ ಡಾ. ಮೂಜಗಂ, ಪ್ರಪಂಚ 'ವಾರಪತ್ರಿಕೆಯ ಸಂಪಾದಕ ಡಾ. ಪಾಟೀಲ ಪುಟ್ಟಪ್ಪನವರು ಮುಂತಾದವರು ಉದ್ಘಾಟಕರಾಗಿದ್ದರು.

ವಿವಿಧ ಧರ್ಮಗಳ ಕುರಿತು ಉಪನ್ಯಾಸ ನೀಡಿದವರು; ಬೆಂಗಳೂರಿನ 'ಕಾದಂಬರಿ ಸಾರ್ವಭೌಮ' ಅ.ನ.ಕೃಷ್ಣರಾಯರು, ಆಲಮಟ್ಟಿಯ ಹರ್ಡೇಕರ ಮಂಜಪ್ಪನವರು, 'ಕೀರ್ತನ ಕೇಸರಿ' 'ಪಂಡಿರತ್ನಂ' ಬಿ.ಶಿವಮೂರ್ತಿಶಾಸ್ತ್ರಿಗಳು, ಧಾರವಾಡದ 'ಪ್ರದೀಪ' ಮಾಸಪತ್ರಿಕೆಯ ಸಂಪಾದಕ ವಿನೀತ ರಾಮಚಂದ್ರರಾಯರು, ದಾವಣಗೇರಿಯ ಶ್ರೀ ಕಾರಡಗಿ ವಕೀಲರು, ನವಿಲಗುಂದದ ಎಲ್.ಆರ್.ಮುತಾಲಿ ಪಾಟೀಲ, ತಮ್ಮನಗೌಡರು ಹುಲಕೋಟಿ ಪಂ.ಬಸವರಾಜಶಾಸ್ತ್ರಿಗಳು ಪಗಡದಿನ್ನಿ, ನರೇಗಲ್ಲದ ಪಂ. ಕಾಶೀನಾಥ ಶಾಸ್ತ್ರಿಗಳ ಗಚ್ಚಿನಮಠ ಡಾ. ಬಿ.ಆರ್.ಶ್ರೀನಿವಾಸ ಅಯ್ಯಂಗಾರ, ಧಾರವಾಡದ ಪ್ರೊ.ಕೆ.ಎಸ್. ನಾರಾಯಣಚಾರ್ಯ, ಪಿ.ಆಯ್.ಹಿರೇಮಠ ವಕೀಲರು.

ಜೈನಧರ್ಮದ ಬಗ್ಗೆ ಉಪನ್ಯಾಸವಿತ್ತವರು : ಧಾರವಾಡದ ಪ್ರೊ. ಆರ್.ಡಿ. ಶಾ, ವಾಯ್.ಎಲ್.ಸಂಗೊಳ್ಳಿ, ಜಿನದತ್ತ ದೇಸಾಯಿ, ಪ್ರೊ. ಸಂಗಮೇಶ ಹಂಡಿಗಿ ಮುಂತಾದವರು.

ಇಸ್ಲಾಂ ಧರ್ಮದ ಕುರಿತು ಉಪನ್ಯಾಸವಿತ್ತವರು; ಹುಬ್ಬಳ್ಳಿಯ ಮೌಲ್ವಿ ಮಹಮ್ಮದ ಬುಡನ್ ಸಾಹೇಬ ಬರ್ದೂರ, ಧಾರವಾಡದ ಜನಾಬ ಎ.ವ್ಹಿ ಹಕೀಮ, ಡಾ. ಎಂ. ಝುಡ್, ಖಾನ ಹುಬ್ಬಳ್ಳಿಯ ಶ್ರೀ ಅಕಬರ ಅಲಿ, ನವಿಲಗುಂದದ ಅ.ಚ.ಕಾಗದಗಾರ, ಎಂ.ಜಿ.ಹೊಂಗಲ, ಧಾರವಾಡದ ಎಂ.ಎ.ಚೌಧರಿ.

ಕ್ರಿಶ್ಚಿಯನ್ ಧರ್ಮದ ಬಗ್ಗೆ ಉಪನ್ಯಾಸವಿತ್ತವರು : ಹುಬ್ಬಳ್ಳಿಯ ಸಿ.ಎಸ್.ಕರ್ಬಿ, ಎಸ್.ಸಿ.ಗೋಕಾವಿ, ಕೆ.ಎ.ನಂದಿಕೇಶ್ವರ ಶಾಗೋಟಿ,

ಸ್ವಾಗತಾಧ್ಯಕ್ಷರು ಬಾಗಿಲಕೋಟೆಯ ದಾನವೀರ ಸಕ್ಕರಿ ವೆಂಕಪ್ಪನವರು, ನರೇಗಲ್ಲದ ಪಂ.ಕಾಶೀನಾಥಶಾಸ್ತ್ರಿಗಳು, ಗಚ್ಚಿನಮಠ, ನವಿಲಗುಂದದ ಪಂ. ಶ್ರೀ ಗುರುದೇವ ಶಿವಾಚಾರ್ಯ ಮಹಾಸ್ವಾಮಿಗಳು, ಚಿಕ್ಕ ಮಣ್ಣೂರಬೃಹನ್ಮಠ, ಪ್ರಾಚಾರ್ಯ ಡಾ. ಬಿ.ಸಿ. ಪೂಜಾರ ಮುಂತಾದವರು.

ದಿನಾಂಕ ೬-೩-೧೯೭೩ರಂದು ಜರುಗಿದ ೨೯ನೆಯ ಸರ್ವಧರ್ಮ ಸಮ್ಮೇಳನವು ಶ್ರೀಗಳವರು ನಡೆಸಿದ ಕೊನೆಯ ಸಮ್ಮೇಳನವಾಯಿತು.

ಪ್ರಥಮ ಸರ್ವಧರ್ಮ ಸಮ್ಮೇಳನದ 'ಉಪನ್ಯಾಸ ಸಂಗ್ರಹ'ವನ್ನು ಎಂ.ಜಿ. ವಿರುಪಾಕ್ಷನ್ ವ್ಯವಸ್ಥಿತವಾಗಿ ಸಂಪಾದಿಸಿದ್ದಾರೆ. ಸಮ್ಮೇಳನದ ರಜತ ಮಹೋತ್ಸವವನ್ನು ೧೯೬೯ರಲ್ಲಿ ಆಚರಿಸಲಾಯಿತು. ಬೃಹತ್ ಗಾತ್ರದ 'ಸ್ಮರಣ ಸಂಪುಟ' ಪ್ರಕಟವಾಗಿದೆ.

ಸರ್ವಧರ್ಮ ಸಮ್ಮೇಳನಗಳಲ್ಲಿ ಸಾನ್ನಿಧ್ಯವಹಿಸಿ ಶ್ರೀ ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳು ನೀಡಿದ ಆಶೀರ್ವಚನಗಳ ಸಂಕ್ಷಿಪ್ತ ಸಾರ :

"ಅನೇಕ ಹೊಳೆ ಹಳ್ಳಗಳು ಬೇರೆ ಬೇರೆಯಾಗಿ ಹರಿದರೂ ಕಡೆಗೆ ಹೊಂದುವ ಸ್ಥಾನವು ಒಂದೇ ಆಗಿದ್ದಂತೆ ವಿವಿಧ ಮತ ಧರ್ಮಗಳು ಬೇರೆ ಬೇರೆ ಆಚಾರ ವಿಚಾರಗಳುಳ್ಳವುಗಳಾಗಿದ್ದರೂ ಕೊನೆಗೆ ತಲುಪುವುದು ಒಬ್ಬ ದೇವನಲ್ಲಿಯೇ ಆದುದರಿಂದ ಅವೆಲ್ಲವೂ ಪಾರಮಾರ್ಥ ಸಾಧಕ ಜೀವನದ ವಿಭಿನ್ನಾವಸ್ಥೆಗಳಿಂದ ಉದ್ಭವಿಸಿದ ಸತ್ಯರೂಪಗಳು. ಅವು ಪರಸ್ಪರ ವಿರೋಧಿಗಳಲ್ಲ,

ಪತಿವ್ರತಾ ಸ್ತ್ರೀಯು ಕೇವಲ ತನ್ನ ಪತಿ ಸೇವೆಯಲ್ಲಿ ಮಾತ್ರ ನಿರತಳಾಗದೆ ಮನೆಯಲ್ಲಿರುವ ಭಾವ ಮೈದುನರನ್ನು
ಸರಿಯಾಗಿ ನೋಡಿಕೊಂಡರೆ ಮಾತ್ರ ಆಕೆ ಒಳ್ಳೆಯ ಗೃಹಿಣಿಯೆನಿಸಿಕೊಳ್ಳುವಳು. ಹಾಗೆಯೇ ಸ್ವಧರ್ಮನಿಷ್ಠೆ ಪರಧರ್ಮ ಸಹಿಷ್ಣುತೆ
ಇದ್ದರೆ ಸರ್ವಧರ್ಮ ಸಮನ್ವಯವೆನಿಸುವುದು. ಕರುಳ ಬಾಂಧವ್ಯ, ಕರಣ (ಅಂತಃಕರಣ) ಬಾಂಧವ್ಯ ಬೆಳೆಯಲಿ''.

ಹೀಗೆ ಸಾಂಪ್ರದಾಯಿಕ ಮಠದ ಸ್ವಾಮಿಗಳೊಬ್ಬರು ಅಂದಿನ ಕಾಲದಲ್ಲಿಯೇ ಇಷ್ಟೊಂದು ಪ್ರಗತಿಪರ, ವೈಚಾರಿಕ
ಮನೋಭಾವವನ್ನು ವ್ಯಕ್ತಪಡಿಸಿ ಸರ್ವರಲ್ಲಿಯೂ ಸಾಮರಸ್ಯವನ್ನು ಸಾಧಿಸಲು ಪ್ರಯತ್ನಿಸಿದುದು ನಿಜಕ್ಕೂ ಆದರ್ಶ ಮತ್ತು
ಅನುಕರಣೀಯ.

## ಲಿಂಗೈಕ್ಯ

ಎಂಬತ್ತೇಳರ ತುಂಬು ಜೀವನದ ಶ್ರೀಗಳವರು ವಯಸ್ಸು ಮತ್ತು ತಪಸ್ಸುಗಳಿಂದ ಹಣ್ಣಾಗಿದ್ದರು. ಆದರೂ ಪ್ರತಿ ವರ್ಷದಂತೆ ಈ ಸಲವೂ ಎಡೆಯೂರ ಕ್ಷೇತ್ರಕ್ಕೆ ಪಯಣಿಸಿ ಶ್ರೀ ಸಿದ್ಧಲಿಂಗೇಶ್ವರ ದರ್ಶನ ಪಡೆದು ಮರಳಿದರು. ಅದೇ ಕೊನೆಯ ದರ್ಶನವಾಯಿತು! ಅನಾರೋಗ್ಯದಿಂದ ಹಾಸಿಗೆ ಹಿಡಿದರು. ಆದರೂ ಸ್ನಾನ ಲಿಂಗಪೂಜೆಯನ್ನು ಬಿಟ್ಟಿರಲಿಲ್ಲ. ಸಿದ್ಧಲಿಂಗೇಶನ ಕರುಣೆಯ ಕಂದನಾಗಿ, ಎಂಬತ್ತೇಳು ವರ್ಷಗಳ ತುಂಬು ಜೀವನವನ್ನು ಸಾರ್ಥಕವಾಗಿ ಬದುಕಿದ ಶ್ರೀಗಳವರು ೪–೩–೧೯೭೪ ರಂದು ಬೆಳಗಿನ ಪೂಜೆಯಲ್ಲಿ ನಿರತರಾದಾಗ ಅಂಗೈಯಲ್ಲಿ ಹಿಡಿದ ಇಷ್ಟಲಿಂಗ ಹಿಡಿದಂತೆಯೇ ಇತ್ತು. ಅವರ ಆತ್ಮಲಿಂಗ ಮಹಾಲಿಂಗದಲ್ಲಿ ಲೀನವಾಯಿತು ! ಅವರು ಹಚ್ಚಿಹೋದ ಧರ್ಮ ಸಮನ್ವಯದ ಜ್ಯೋತಿಯು ಜನಜೀವನವನ್ನು ಬೆಳಗಲಿ !!

ಸದ್ಯದ ಪೀಠಾಧೀಶ ಶ್ರೀ ನಿ.ಪ್ರ. ಬಸವಲಿಂಗಮಹಾಸ್ವಾಮಿಗಳು ಸಾಮಾಜಿಕ ಕಳಕಳಿಯುಳ್ಳ ಸಂಘಟನಾ ಸಮರ್ಥರು. ಉತ್ತಮ ವಾಗ್ಮಿಗಳು. ಮಠದಲ್ಲಿ ಪ್ರತಿವರ್ಷ ಜರುಗುವ ಎಡೆಯೂರು ಸಿದ್ಧಲಿಂಗೇಶ್ವರ ಜಾತ್ರಾಮಹೋತ್ಸವದಲ್ಲಿ ಲಿಂಗೈಕ್ಯ ಶ್ರೀಗಳವರ ಸ್ಮರಣೋತ್ಸವ, ಸಾಮೂಹಿಕ ವಿವಾಹ, ಧರ್ಮಸಭೆ, ಮಹಾದಾಸೋಹ ನಡೆಸುವ ಮೂಲಕ ಜನಜಾಗೃತಿ ಗೈಯುತ್ತಿರುವುದು ಸ್ತುತ್ಯ. ಅವರು ಪ್ರಪ್ರಥಮ ಸರ್ವಧರ್ಮ ಮಹಿಳಾ ಸಮ್ಮೇಳನವನ್ನು ಹಿರಿಯ ಲೇಖಕಿ ಶ್ರೀಮತಿ ಶಾಂತಾದೇವಿ ಮಾಳವಾಡ ಅವರ ಅಧ್ಯಕ್ಷತೆಯಲ್ಲಿ ಜರುಗಿಸಿದುದು ನಾಡಿನ ಧಾರ್ಮಿಕ ಇತಿಹಾಸದಲ್ಲಿ ದಾಖಲೆಯಾಗುವಂತಾಯಿತು.

■■

# ಪೂಜ್ಯಶ್ರೀ ಶಿವಬಸವ ಮಹಾಸ್ವಾಮಿಗಳು ರುದ್ರಾಕ್ಷಿಮಠ, ನಾಗನೂರು - ಬೆಳಗಾವಿ

● ಬಸವರಾಜ ಜಗಜಂಪಿ

ಪರಿಶುದ್ಧ ಬದುಕಿನ ಸರಳ ಹಾಗೂ ಸಹಜ ಜೀವನ ಶೈಲಿಯಿಂದ ಇಂದಿಗೂ ಸ್ಮರಣೆಯಲ್ಲಿ ಉಳಿದವರು ಶಿವಬಸವ ಸ್ವಾಮಿಗಳು. ಕಾಯಕ, ತ್ಯಾಗ, ಅಧ್ಯಾತ್ಮ, ದಾಸೋಹ, ಸರಳತೆ, ಮಾನವೀಯತೆ, ಸಾಮಾಜಿಕ ಕಳಕಳಿ—ಮೊದಲಾದವುಗಳಲ್ಲಿ ಒಂದೊಂದು ಮೌಲ್ಯವನ್ನು ಪ್ರತಿನಿಧಿಸುವ ಒಬ್ಬೊಬ್ಬ ಸ್ವಾಮಿಗಳಿರುವುದು ಅಪರೂಪವೇನಲ್ಲ. ಆದರೆ ಈ ಎಲ್ಲ ಉನ್ನತ ಹಾಗೂ ಉದಾತ್ತ ಮೌಲ್ಯಗಳನ್ನು ಒಬ್ಬ ಸ್ವಾಮೀಜಿಯವರಲ್ಲಿ ಕಾಣುವುದು ಅಪರೂಪ ಎಂದೇ ಹೇಳಬೇಕು. ಬೆಳಗಾವಿಯ ನಾಗನೂರು ರುದ್ರಾಕ್ಷಿ ಮಠದ ಶಿವಬಸವಸ್ವಾಮಿಗಳು ಈ ಎಲ್ಲ ಮೌಲ್ಯಗಳನ್ನು ಒಟ್ಟಾಗಿ, ಅಚ್ಚುಕಟ್ಟಾಗಿ ಅಳವಡಿಸಿಕೊಂಡ ಧೀಮಂತ ವ್ಯಕ್ತಿತ್ವದವರು.

ನಾಗನೂರು ರುದ್ರಾಕ್ಷಿಮಠಕ್ಕೆ ಏಳನೆಯವರಾಗಿ ಎಂಟು ವರ್ಷದ ಪ್ರಾಯದಲ್ಲಿ ಉತ್ತರಾಧಿಕಾರಿಗಳಾಗಿ ಬಂದವರೇ ಶಿವಬಸವಸ್ವಾಮಿಗಳು. ಪೂಜ್ಯ ಶಿವಬಸವಸ್ವಾಮಿಗಳು ಮಠಾಧ್ಯಕ್ಷರಾದ ಮೇಲೆ ಚೌಕೀಮಠವನ್ನು ತುಂಬ ವಿಶಾಲವಾಗಿ, ವ್ಯವಸ್ಥಿತವಾಗಿ ಕಟ್ಟಿಸಿದರು. ಅಲ್ಲಿನ ಆರಂಭದ ಕರ್ತೃಗಳಿಬ್ಬರ ಗದ್ದುಗೆಗಳನ್ನು ಬಾದಾಮಿ ಕಲ್ಲುಗಳಿಂದ ಕಟ್ಟಿಸಿದರು. ಮೇಲೆ ಅಮೃತಶಿಲೆಯ ಹೊದಿಕೆಯನ್ನೂ ಹಾಕಿಸಿದರು. ಈ ಜೋಡು ಗದ್ದುಗೆಗಳು ಸುಂದರವಾಗಿವೆ. ಕಲಾತ್ಮಕವಾಗಿವೆ. ಮೂಲಕರ್ತೃಗಳು ತೋಡಿಸಿದ ಮಠದ ಎದುರಿಗಿನ ಬಾವಿಯನ್ನು ಶಿವಬಸವಸ್ವಾಮಿಗಳು ಜೀರ್ಣೋದ್ಧಾರ ಮಾಡಿಸಿದರು. ಚೌಕೀಮಠದ ಪಕ್ಕದಲ್ಲೇ ಕಮತದ (ಒಕ್ಕಲುತನ) ಮನೆ ಇದೆ. ಮಠಕ್ಕೆ ಸೇರಿದ ಹೊಲಗಳನ್ನು ಸಾಗುವಳಿ ಮಾಡುವ ರೈತರು ವಾಸಿಸಲು, ದನಕರುಗಳನ್ನು ಕಟ್ಟಲು, ಒಕ್ಕಲುತನದ ಸಾಧನ ಸಾಮಗ್ರಿಗಳನ್ನಿಡಲು ಅಲ್ಲಿ ಅನುಕೂಲ ಕಲ್ಪಿಸಲಾಗಿದೆ. ಒಟ್ಟಿನಲ್ಲಿ ಭಕ್ತರನ್ನು ಆಕರ್ಷಿಸುವ, ಅವರಿಗೆ ನೆಮ್ಮದಿ ನೀಡುವ ಪರಿಸರ ಅಲ್ಲಿದೆ.

ಶಿವಬಸವಸ್ವಾಮಿಗಳು ಮೂಲತಃ ನಾಗನೂರಿನವರು. ದೈವಭಕ್ತಿ ರಾಜ ಶಕ್ತಿಗಳ ಸಂಗಮಸ್ಥಾನವೆನಿಸಿದ ನಾಗನೂರಿನ ಶೀಲಯ್ಯನವರಮಠ ಮನೆತನದ ಶಿವಬಸವಸ್ವಾಮಿ ಮತ್ತು ಬಸಮ್ಮ ಎಂಬ ದಂಪತಿಗಳು. ಬಸಮ್ಮನ ತವರುಮನೆ ಹಿರೇಕೊಪ್ಪ. ಅಲ್ಲಿನ ಹಿರಿಯರ ಪ್ರೇಮಾನುಗ್ರಹಕ್ಕೆ ಮಣಿದ ದಂಪತಿಗಳು ನಾಗನೂರನ್ನು ಬಿಟ್ಟು ಹಿರೇಕೊಪ್ಪದಲ್ಲಿ ನೆಲೆಸಿದರು. ಅವರ ಹಿರಿಯ ಮಗ ಅಡಿವೆಯ್ಯ ಪತ್ನಿ ರುದ್ರಮ್ಮ ತುಂಬ ಸಾತ್ವಿಕ ಸ್ವಭಾವದವರು. ಅಡಿವೆಯ್ಯ ಮತ್ತು ರುದ್ರಮ್ಮನವರ ಕಿರಿಯ ಸುಪುತ್ರರೇ ಶಿವಬಸವಸ್ವಾಮಿಗಳು. ಅವರು ಹುಟ್ಟಿದ್ದು ೮ ಡಿಸೆಂಬರ್ ೧೮೮೯ ರಂದು.

ಶಿವಬಸವಸ್ವಾಮಿಗಳು ಅಂಬೆಗಾಲಿಡುವ ಹಂತದಲ್ಲೇ ಅಥಣಿಯ ಪೂಜ್ಯ ಮುರುಘೇಂದ್ರ ಮಹಾಶಿವಯೋಗಿಗಳ ಪರಮಕೃಪೆಗೆ ಪಾತ್ರರಾದರು. ಹಿರೇಕೊಪ್ಪದ ತೋಡಕರ ಮನೆತನದ ಬಾಳಪ್ಪನವರು ಗುರುಲಿಂಗ ಜಂಗಮ ಪ್ರೇಮಿಗಳು. ಅಥಣಿ ಶಿವಯೋಗಿಗಳು ಬಾಳಪ್ಪನವರ ಮನೆಯಲ್ಲಿ ವಾಸ್ತವ್ಯ ಹೂಡಿದ್ದಾರೆ. ಅದೊಂದು ಅಪರೂಪದ ಸಂದರ್ಭ. ರುದ್ರಮ್ಮನು ತನ್ನ ಮಗು ಶಿವಬಸವನನ್ನು ಬಗಲಲ್ಲಿ ಎತ್ತಿಕೊಂಡು ಶಿವಯೋಗಿಗಳ ದರ್ಶನ ಪಡೆಯಬೇಕೆಂಬ ಪ್ರಬಲ ಇಚ್ಛೆಯಿಂದ ಬಾಳಪ್ಪನವರ ಮನೆಗೆ ಬಂದಿದ್ದಾಳೆ. ಶಿವಯೋಗಿಗಳು ಲಿಂಗಪೂಜಾ ನಿರತರಾಗಿದ್ದಾರೆ. ಜಂಗಮದಾಸೋಹಿ ಬಾಳಪ್ಪನವರ ಮನೆತುಂಬ ಭಕ್ತರು ಸೇರಿದ್ದಾರೆ. ಎಲ್ಲರಿಗೂ ಅಂದು ಅಲ್ಲೇ ಪ್ರಸಾದದ ವ್ಯವಸ್ಥೆ ಮಾಡಿದ್ದಾರೆ. ರುದ್ರಮ್ಮ ತೋಡಕರ ಬಾಳಪ್ಪನವರ ಮನೆಯವರ ಜೊತೆ ತಾನೂ ಅಡಿಗೆ ಮಾಡುವುದಕ್ಕೆ ತೊಡಗಿದ್ದಾಳೆ.

ಇತ್ತ ರುದ್ರಮ್ಮನ ಕಂಕುಳಲ್ಲಿದ್ದ ಶಿಶು ಶಿವಬಸವಸ್ವಾಮಿ ಹೇಗೋ ಎಲ್ಲರ ಕಣ್ತಪ್ಪಿಸಿ, ಶಿವಯೋಗಿಗಳತ್ತ ಅಂಬೆಗಾಲಿಡುತ್ತ ಸಾಗುತ್ತದೆ. ಶಿವಯೋಗಿಗಳ ಎದುರಿನ ಪೂಜಾ ಪರಿಕರಗಳತ್ತ ಮಗುವಿನ ದೃಷ್ಟಿ ಹರಿಯುತ್ತದೆ. ಸ್ವಲ್ಪ ಹೊತ್ತು ಸುಮ್ಮನೆ ಕುಳಿತು ಎಲ್ಲವನ್ನು ದಿಟ್ಟಿಸಿ ನೋಡುತ್ತದೆ. ಥಳಥಳ ಹೊಳೆಯುವ ಘಂಟೆಯ ಮೇಲೆಯೇ ಮಗುವಿನ ಕಣ್ಣು ನೆಡುತ್ತವೆ. ಗಂಟೆಯನ್ನು ಎತ್ತಿಕೊಂಡದ್ದೆ ಬಾರಿಸಲು ಆರಂಭಿಸುತ್ತದೆ. ಶಿವಯೋಗಿಗಳ ಲಿಂಗಪೂಜೆಗೆ ಭಂಗತರುತ್ತದೆ. ಘಂಟೆಯ ಸಪ್ಪಳ ನಿರಂತರ ಕೇಳತೊಡಗಿದಾಗ ಮನೆಯ ಜನರೆಲ್ಲರೂ ಪೂಜೆಯ ಕೋಣೆಯತ್ತ ಧಾವಿಸುತ್ತಾರೆ. ರುದ್ರಮ್ಮನು ಅತ್ತ ಕಡೆಯೇ ಓಡುತ್ತಾಳೆ,

ನಿಂತುನೋಡುತ್ತಾಳೆ. ಶಿವಬಸವ ಘಂಟೆಯನ್ನು ಬಾರಿಸುತ್ತ ಆನಂದ ಅನುಭವಿಸುತ್ತಿದ್ದಾನೆ. ಆದರೆ ರುದ್ರಮ್ಮ ಮಾತ್ರ ಭಯಭೀತಳಾಗಿದ್ದಾಳೆ. ಮಗುವಿನ ಮುಗ್ಧತೆ ಶಿವಯೋಗಿಗಳಿಗೆ ಸಹಜವಾಗಿಯೇ ಸಂತಸ ನೀಡುತ್ತದೆ. ಅವರು ತುಂಬಾ ಪ್ರಸನ್ನಚಿತ್ತರಾಗಿದ್ದಾರೆ. ಅಂತೆಯೇ ಅದು ರುದ್ರಮ್ಮನಿಗೆ ಸಮಾಧಾನ ತರುತ್ತದೆ.

ಶಿವಯೋಗಿಗಳು "ಈ ಮಗು ಪ್ರಸಾದ ಸಮಯದಲ್ಲಿ ಲೀಲೆಯನ್ನು ಆಡಿರುವುದರಿಂದ ಈತ ಪ್ರಸಾದ ಕಾಯನಾಗುವನು"–ಎಂದು ಶಿವಬಸವನನ್ನು ಮನದುಂಬಿ ಆಶೀರ್ವದಿಸುತ್ತಾರೆ. ಮತ್ತು ಶಿವಯೋಗಿಗಳು "ತಾಯಿ, ಈ ಮಗುವನ್ನು ನಮಗೆ ಕೊಡುವಿಯೇನಮ್ಮ?" ಅಂದರು. ಅದಕ್ಕೆ ರುದ್ರಮ್ಮ "ಆಗಲ್ರಿಯಪ್ಪಾ" ಎಂದಳು. ಹೀಗೆ ಅಥಣಿ ಶಿವಯೋಗಿಗಳ ಅಪೇಕ್ಷೆಯಂತೆ ಶಿವಬಸವ ಸಮಾಜಕ್ಕೆ ಸಮರ್ಪಿತನಾಗುತ್ತಾನೆ.

ಶಿವಯೋಗಿಗಳ ಕೃಪೆಗೆ ಪಾತ್ರನಾದ ಮಗು ಶಿವಬಸವ ಬೆಳೆಯುತ್ತ ಎಂಟು ವರ್ಷದ ಬಾಲಕನಾದ. ತಾಯಿ ರುದ್ರಮ್ಮ ಲಿಂಗೈಕ್ಯಳಾದಳು. ಅದೇ ಸಮಯದಲ್ಲಿ ರುದ್ರಾಕ್ಷಿಮಠದ ಆರನೆಯ ಪೀಠಾಧಿಪತಿಗಳಾದ ವೀರಭದ್ರ ಸ್ವಾಮಿಗಳು ಲಿಂಗೈಕ್ಯ ರಾದರು. ಅವರ ಉತ್ತರಾಧಿಕಾರಿಯ ಶೋಧದ ಹೊಣೆಹೊತ್ತ ಗುರುಪಾದಯ್ಯ ಶೀಲಯ್ಯನವರಮಠ ಎಂಬ ಹಿರಿಯರು ಒಮ್ಮೆ ಹಿರೇಕೊಪ್ಪಕ್ಕೆ ಬಂದರು. ಲಕ್ಷಣ ಶಾಸ್ತ್ರದಲ್ಲಿ ಬಲ್ಲಿದರಾದ ಗುರುಪಾದಯ್ಯ ತಮ್ಮದೇ ಮನೆತನದ ಬಾಲಕ ಶಿವಬಸವ ಮುಖಲಕ್ಷಣಗಳನ್ನು ಗಮನಿಸಿದರು. ಚಿಂತನೆ ಮಾಡಿದರು. ಅವರ ಆಲೋಚನೆ ಸರಿಯಾಗಿತ್ತು. ಅಂತೆಯೇ ಆ ಬಾಲಕನನ್ನು ರುದ್ರಾಕ್ಷಿಮಠದ ಉತ್ತರಾಧಿಕಾರಿಯಾಗಿಸಲು ಮನದಲ್ಲೇ ನಿರ್ಧರಿಸಿದರು. ಹಿರೇಕೊಪ್ಪದ ಹಿರಿಯರೊಂದಿಗೆ ಚರ್ಚಿಸಿದರು. ಅಂತಿಮವಾಗಿ ಅವರನ್ನು ಒಪ್ಪಿಸುವಲ್ಲಿ ಯಶಸ್ವಿಯಾದರು. ಶಿವಬಸವ ಮರಿದೇವರನ್ನು ನಾಗನೂರಿಗೆ ಕರೆತಂದರು.

ಶಿವಬಸವನನ್ನು ಬರಮಾಡಿಕೊಳ್ಳುವಲ್ಲಿ ನಾಗನೂರಿನ ಜನತೆ ತೋರಿದ ಉತ್ಸಾಹ, ಹುರುಪು ಹುಮ್ಮಸ್ಸುಗಳು ಅಭೂತ ಪೂರ್ವವಾಗಿದ್ದವು. ತಮ್ಮ ಊರಿನ ಬಾಲಕ, ತಾವೇ ಕಟ್ಟಿ ಬೆಳೆಸಿದ ಮಠಕ್ಕೆ ಮಠಾಧಿಪತಿಯಾಗುವ ಸಂಗತಿ ಅವರಲ್ಲಿ ಪುಳಕವುಂಟುಮಾಡಿತು.

ನಾಗನೂರು ಚಿಕ್ಕ ಗ್ರಾಮ. ಅಲ್ಲಿನ ರುದ್ರಾಕ್ಷಿಮಠ ಭಾರಿ ಆಸ್ತಿಯನ್ನೇನೂ ಹೊಂದಿರಲಿಲ್ಲ. ಆದರೆ ಅಲ್ಲಿ ಪೂಜ್ಯ ಶಿವಬಸವ ಮರಿದೇವರು ಪಾದವಿಟ್ಟುದು ಅಮೃತಘಳಿಗೆ. ಅದು ನಾಗನೂರು ಗ್ರಾಮ ಹಾಗೂ ರುದ್ರಾಕ್ಷಿಮಠಗಳೆರಡಕ್ಕೂ ಶುಕ್ರದೆಸೆ ಪ್ರಾಪ್ತವಾದ ಕಾಲ.

ನಾಗನೂರಿನಲ್ಲಿ ಆಗ ಶೈಕ್ಷಣಿಕ ಅನುಕೂಲಗಳಿರಲಿಲ್ಲ. ಆದರೆ ಕಲಿಯಬೇಕೆಂಬ ಹಂಬಲ ಮಾತ್ರ ಶಿವಬಸವ ಸ್ವಾಮಿಗಳಲ್ಲಿ ಪ್ರಬಲವಾಗಿತ್ತು. ಸಾಧು ಸ್ವಭಾವದ ಅದೃಶ್ಯಪ್ಪ ಮಾಸ್ತರರ ಪ್ರೇರಣೆ, ಸಹಾಯಗಳಿಂದ ಮೂರನೆಯ ವರ್ಗದವರೆಗಿನ ಶಿಕ್ಷಣ ಪಡೆದರು. ಆಗ ನಾಗನೂರಿಗೆ ಆಕಸ್ಮಿಕವಾಗಿ ದಯಮಾಡಿಸಿದ ಹುಬ್ಬಳ್ಳಿ ರುದ್ರಾಕ್ಷಿಮಠದ ಚೆನ್ನಮಲ್ಲಿಕಾರ್ಜುನ ಸ್ವಾಮಿಗಳ ದೃಷ್ಟಿಗೆ ಬಿದ್ದರು. ಶಿವಬಸವಸ್ವಾಮಿಗಳನ್ನು ಓದಲು ಹುಬ್ಬಳ್ಳಿಗೆ ಕಳಿಸುವಂತೆ ಹಿರಿಯರಿಗೆ ಸೂಚಿಸಿದರು. ಪೂಜ್ಯರ ಸಲಹೆ ಸೂಕ್ತವೆನಿಸಿತು. ಹಿರಿಯರು ಅದರಂತೆ ಶಿವಬಸವ ದೇವರನ್ನು ಹುಬ್ಬಳ್ಳಿ ರುದ್ರಾಕ್ಷಿಮಠಕ್ಕೆ ಕಳಿಸಿದರು. ಅಲ್ಲಿ ಶಿವಬಸವದೇವರು ಸಂಸ್ಕೃತವನ್ನು ಕಲಿತರು. ಸಿದ್ಧಾರೂಢ ಸ್ವಾಮಿಗಳ ಪ್ರವಚನಗಳನ್ನು ಆಲಿಸುವ ಸದವಕಾಶ ಒದಗಿತು. ಸಿದ್ಧಾರೂಢ ಮಠದಲ್ಲಿ ನಡೆಯುತ್ತಿದ್ದ ನಿಜಗುಣ ಶಿವಯೋಗಿಗಳ ಷಟ್‌ಶಾಸ್ತ್ರ ಪ್ರವಚನ–ಚಿಂತನ–ಗೋಷ್ಠಿಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಎರಡು ವರ್ಷಕಳೆದವು.

ಶಿವಬಸವ ಮರಿದೇವರು ಹುಬ್ಬಳ್ಳಿಯಿಂದ ಶಿವಯೋಗಮಂದಿರಕ್ಕೆ ತೆರಳಿದರು. ಹಾನಗಲ್ಲ ಕುಮಾರಸ್ವಾಮಿಗಳ ಮಾರ್ಗದರ್ಶನದಲ್ಲಿ ಹನ್ನೆರಡು ವರ್ಷ ಅಧ್ಯಯನ ನಡೆಸಿದರು. ತಮ್ಮ ಸರಳ ಸಜ್ಜನಿಕೆಗಳಿಂದ, ಶ್ರದ್ಧೆನಿಷ್ಠೆಗಳಿಂದ ಗುರು ಕುಮಾರಸ್ವಾಮಿಗಳಿಗೆ ತುಂಬ ಅಚ್ಚು ಮೆಚ್ಚಿನವರಾದರು. ಪ್ರಭಾವಿ ಕುಮಾರ ಮಹಾಸ್ವಾಮಿಗಳ ಸಾನಿಧ್ಯ–ಆಶೀರ್ವಾದಗಳ ಫಲವಾಗಿ ಚೊಕ್ಕ ಚಿನ್ನವಾದರು.

ಶಿವಬಸವದೇವರು ಮರಳಿ ನಾಗನೂರಿಗೆ ಬಂದರು. ಆಸ್ತಿ–ಪಾಸ್ತಿ ಏನೂ ಇಲ್ಲದ ಬಡಮಠ ನಾಗನೂರು ರುದ್ರಾಕ್ಷಿಮಠ. ಅದನ್ನು ಚೆನ್ನಾಗಿ ಕಟ್ಟಿ ಬೆಳೆಸುವ ಕನಸು ಅವರದು. ಆ ಉನ್ನತ ಕನಸನ್ನು ಸಾಕಾರಗೊಳಿಸಲು ಶಿವಬಸವ ದೇವರು ಶ್ರಮಿಸ ತೊಡಗಿದರು. ಯಾವುದೇ ಕಾರ್ಯವನ್ನು ಕೈಕೊಂಡರೂ ಊರಿಗೇ ಊರೇ ಶಿವಬಸವ ದೇವರ ಬೆಂಬಲಕ್ಕೆ ನಿಲ್ಲುತ್ತಿತ್ತು. ನಾಗನೂರು ಭಕ್ತರೇ ಶ್ರೀಮಠದ ಸಂಪತ್ತು. ಚಿವಟಗುಂಡಿಯ ಗೌಡರು ಅಂಥ ಭಕ್ತರಲ್ಲಿ ಒಬ್ಬರು. ಗೌಡರು ಶ್ರೀಮಠಕ್ಕೆ ಕೊಡಿಸಿಕೊಟ್ಟ ಐದು ಎಕರೆಯಷ್ಟು ಭೂಮಿಯಲ್ಲಿ ಒಕ್ಕಲುತನ ಆರಂಭವಾಯಿತು. ಮಠದಲ್ಲಿ ದಾಸೋಹ ಪ್ರಾರಂಭವಾಯಿತು. ಮಠದ ಬಗ್ಗೆ ನಾಗನೂರಿನ ಜನರಲ್ಲದೇ ಸುತ್ತಮುತ್ತಣ ಹತ್ತೂರಹಳ್ಳಿಯವರು ಪ್ರಭಾವಿತರಾದರು. ಮಠದ ಚಟುವಟಿಕೆಗಳಿಂದ ಆಕರ್ಷಿತರಾದರು. ತಾವು ಕಾಯಕದಿಂದ ಬೆಳೆದ ಬೆಳೆಯಲ್ಲಿ ಒಂದು ಪಾಲನ್ನು ದಾಸೋಹದ ಉದಾತ್ತ ಉದ್ದೇಶಕ್ಕಾಗಿ ತೆಗೆದಿರಿಸಿ ಮಠಕ್ಕೆ ಅರ್ಪಿಸಿದರು. ಸ್ವಾಮೀಜಿ ಕೈಕೊಂಡ ಕಾಯಕ ದಾಸೋಹಗಳ ಅರ್ಥಸಾರ್ಥಕತೆಯನ್ನು ಹೆಚ್ಚಿಸಿದರು.

ಕೃಷಿಕಾಯಕದಲ್ಲಿ ತರುಣ ಶಿವಬಸವ ಸ್ವಾಮೀಜಿಯವರಿಗೆ ಅಪಾರ ಆಸಕ್ತಿ. ಕೃಷಿಕಾಯಕವೇ ಅವರಿಗೆ ಯೋಗವಾಯಿತು. ಅಂತೆಯೇ ಅವರು ಕಾಯಕಯೋಗಿಯೆನಿಸಿದರು. ಶಿವಬಸವ ಸ್ವಾಮೀಜಿಯವರದು ತುಂಬ ಸರಳ ಜೀವನ. ಅವರು ಆಡಂಬರಕ್ಕೆಂದೂ ಆಶೆಪಟ್ಟವರಲ್ಲ. ಬುದ್ಧಿವಂತರಾದಷ್ಟೇ ವ್ಯವಹಾರ ಕುಶಲರು. ಅವರ ಶುದ್ಧ ಸಂಕಲ್ಪ, ಶ್ರದ್ಧೆ, ಸತತ ಪ್ರಯತ್ನ, ಕಾಯಕ ನಿಷ್ಠೆಗಳ ಕಾರಣ ರುದ್ರಾಕ್ಷಿಮಠ ಬೆಳೆಯತೊಡಗಿತು. ವಿದ್ಯಾರ್ಥಿಗಳ, ವಿದ್ವಾಂಸರ, ಸಂಶೋಧಕರ ಮತ್ತು ಸಾರ್ವಜನಿಕರ ಸೇವೆಗೈಯಲು ಸಜ್ಜುಗೊಂಡಿತು. ಅಂಥ ಬಹುಮುಖ ಸೇವೆಗೆ ಶಿವಬಸವ ಸ್ವಾಮೀಜಿ ಅಣಿಯಾದರು. ಅಂತು ಅವರನ್ನು ರೂಪಿಸಿ ಸಜ್ಜುಗೊಳಿಸಿದವರು. ಗುರುವಿನಗುರುವೆನಿಸಿದ ಹಾನಗಲ್ಲ ಕುಮಾರಸ್ವಾಮಿಗಳೆಂಬುದು ಸ್ಮರಣಾರ್ಹ.

ವಿದ್ಯಾರ್ಥಿ ಪ್ರಸಾದ ನಿಲಯ

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದ ಸಾಮಾಜಿಕ, ಸಾಹಿತ್ಯಿಕ, ಧಾರ್ಮಿಕ, ಕ್ಷೇತ್ರಗಳಲ್ಲಿ ಉನ್ನತಿ ಸಾಧಿಸಿದ ಲಿಂಗಾಯತ ಧರ್ಮ ಮತ್ತು ಸಮಾಜಗಳು ನಂತರದ ಶತಮಾನಗಳಲ್ಲಿ ಅಜ್ಞಾತವಾಸ ಅನುಭವಿಸಬೇಕಾಗಿ ಬಂದುದು ವಿಪರ್ಯಾಸ. ಹದಿನೈದನೆಯ ಶತಮಾನದಲ್ಲಿ ಪುನಃ ಪ್ರಜ್ವಲಿಸಿದ ಲಿಂಗಾಯತ ಜ್ಯೋತಿ ಮತ್ತೆ ಕಾಲಗರ್ಭದಲ್ಲಿ ಅಡಗಿ ಹೋಯಿತು. ಕನ್ನಡಿಗರು ತಮ್ಮ ತಾಯಿ ಭಾಷೆಯಾದ ಕನ್ನಡವನ್ನೇ ಮರೆತರು. ಕನ್ನಡ ನಾಡಿನಲ್ಲಿ ಕನ್ನಡ ಭಾಷೆಯೇ ಹೇಳ ಹೆಸರಿಲ್ಲದಂತಾಯಿತು.

ಅಂಥ ಕ್ಲಿಷ್ಟ ಪರಿಸ್ಥಿತಿಯಲ್ಲಿ ಕನ್ನಡದ ನಿಷ್ಠಾವಂತ ಕಾವಲುಗಾರರಾಗಿ ಬಂದವರೆಂದರೆ ಶಿಕ್ಷಣಾಧಿಕಾರಿ ರಸೆಲ್ ಹಾಗೂ ಡೆಪ್ಯೂಟಿ ಚೆನ್ನಬಸಪ್ಪನವರು ಅದು ಲಿಂಗಾಯತ ಸಮಾಜದ ಜಾಗೃತಿಗೂ ಕಾರಣವಾಯಿತು. ಯುಗದ ಕರೆಗೆ ಲಿಂಗಾಯತ ಮುಖಂಡರು ಕಿವಿಗೊಟ್ಟರು, ಸಕಾರಾತ್ಮಕವಾಗಿ ಸ್ಪಂದಿಸಿದರು. ಸಮಾಜದ ಹಿತಚಿಂತಕರೆನಿಸಿದ ಕೆಲವು ಹಿರಿಯರು ಕನ್ನಡ ಭಾಷೆಗೆ ಅಗತ್ಯದ ಪ್ರಾಧಾನ್ಯವನ್ನು ತಂದುಕೊಡಲು ಮುಂದಾದಂತೆ ಶಿಕ್ಷಣ ಕೊಡಿಸುವತ್ತಲೂ ತೀವ್ರ ಗಮನ ಹರಿಸಿದರು.

ಹತ್ತೊಂಬತ್ತನೆಯ ಶತಮಾನದ ಕೊನೆಯ ಅವಧಿಯು ಕರ್ನಾಟಕದ ಲಿಂಗಾಯತರ ಪಾಲಿಗೆ ಕತ್ತಲೆ. ಆ ಕತ್ತಲೆಯನ್ನು ಕಳೆದು ಜ್ಞಾನದ ಬೆಳಕಿನ ಹೊಂಗಿರಣ ಚೆಲ್ಲಿದವರು ಶ್ರೀ ಡೆಪ್ಯೂಟಿ ಚೆನ್ನಬಸಪ್ಪನವರು. ಬೆಳ್ಳಂಬೆಳಕು ಮೂಡಿಸಿದವರು ರಾವಬಹದ್ದೂರ ಅರಟಾಳ ರುದ್ರಗೌಡರು. ಈ ಮಹನೀಯರಿಂದ ಲಿಂಗಾಯತ ಸಮಾಜ ಕೊಡವಿಕೊಂಡು ಎದ್ದಿತು.

ಅಂದು ಕನ್ನಡ ಶಾಲೆಗಳು ಇರಲಿಲ್ಲ. ಇದ್ದರೂ ಮೂಲಭೂತ ಸೌಲಭ್ಯಗಳ ಕೊರತೆಯನ್ನು ಅನುಭವಿಸುತ್ತಿದ್ದವು. ಮಠಗಳಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ನಡೆಯುತ್ತಿತ್ತು. ಮಠಗಳಲ್ಲಿ ಕಲಿಸುವ ಪದ್ಧತಿ ತುಂಬ ಸರಳವಾಗಿತ್ತು. ಅಯ್ಯಗಳು ಕಲಿಸುತ್ತಿದ್ದರು. ಮಠಗಳಲ್ಲಿ ಶಾಲೆಗಳು ಕಾರ್ಯನಿರ್ವಹಿಸುತ್ತಿದ್ದ ಕಾರಣ ಅಂಥ ಮಠಗಳಿಗೆ 'ಸಾಲಿಮಠ'ಗಳೆಂದು ಕರೆಯುವ ರೂಢಿಯಿತ್ತು.

ಅಂದಿನ ದಿನಗಳಲ್ಲಿ ಸಾಮಾನ್ಯರಿಗೆ ಶಿಕ್ಷಣ ಎಂಬುದು ಕನಸಿನ ಮಾತಾಗಿತ್ತು. ಅನೇಕ ಆಸಕ್ತರು ಶಿಕ್ಷಣ ಪಡೆಯಲು ಪರಿತಪಿಸುತ್ತಿದ್ದರು. ಉನ್ನತ ಶಿಕ್ಷಣ ಪಡೆಯಲು ಅಕ್ಷರಶಃ ಪರದಾಡುತ್ತಿದ್ದರು. ಕೃಷಿ ಹಾಗೂ ವ್ಯಾಪಾರ ವ್ಯವಹಾರದ ಹಿನ್ನೆಲೆಯುಳ್ಳ ಲಿಂಗಾಯತರ ಪಾಡು ಯಾತಕ್ಕೂ ಬೇಡ. ಲಿಂಗಾಯತರು ಆರ್ಥಿಕವಾಗಿ ದುರ್ಬಲರು. ಮೊದಲಿನಿಂದಲೂ ಶಿಕ್ಷಣ ವಂಚಿತರು. ಲಿಂಗಾಯತರಂತೆಯೇ ಶಿಕ್ಷಣ ಪಡೆಯಲು ತುದಿಗಾಲ ಮೇಲೆ ನಿಂತವರೆಷ್ಟೋ ಜನ. ಇಂತಹ ಸಂಧಿ ಕಾಲದಲ್ಲಿ ಕರ್ನಾಟಕದಲ್ಲಿ ಶಿಕ್ಷಣ ಸಂಸ್ಥೆಯೊಂದನ್ನು ಸ್ಥಾಪಿಸಿ, ಲಿಂಗಾಯತ ಧರ್ಮ ಹಾಗೂ ಸಮಾಜಗಳು ಉನ್ನತಿ ಹೊಂದಲು ಕಾರಣರಾದವರು ಕೆ.ಎಲ್.ಇ. ಸಂಸ್ಥೆಯ ಸಂಸ್ಥಾಪಕ ಸಪ್ತರ್ಷಿಗಳು. ಅವರೆಲ್ಲರೂ ಏಕಕಾಲದಲ್ಲಿ ಜನ್ಮವೆತ್ತಿಬಂದುದು ಕನ್ನಡ ನಾಡಿನ ಪುಣ್ಯವೆನ್ನಬೇಕು.

'ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸೈಟಿ' (ಕೆ.ಎಲ್.ಇ)ಯ ಸ್ಥಾಪನೆ ಕರ್ನಾಟಕದ ಶೈಕ್ಷಣಿಕ ಇತಿಹಾಸದಲ್ಲಿ ಒಂದು ಮಹತ್ವದ ಅಧ್ಯಾಯ. ಏಳು ಜನ ಯುವ ಮಿತ್ರರು ಲಿಂಗಾಯತ ಸಮಾಜದ ಸ್ಥಿತಿಗತಿಗಳ ಬಗೆಗೆ ಗಂಭೀರ ಚಿಂತನೆ ನಡೆಸಿದರು. ಕನ್ನಡ ನಾಡು ನುಡಿಗಳ ಅಭಿವೃದ್ಧಿಯ ಬಗೆಗೂ ಅವರು ಚರ್ಚಿಸಿದರು. ಲಿಂಗಾಯತ ಸಮಾಜವನ್ನು ಪ್ರಗತಿಪಥದಲ್ಲಿ ಕೊಂಡೊಯ್ಯುವ ನಿಟ್ಟಿನಲ್ಲಿ ಯೋಚಿಸಿದರು. ಲಿಂಗಾಯತ ಸಮಾಜವನ್ನು ಶಿಕ್ಷಣದ ಅಡಿಪಾಯದ ಮೇಲೆ ಭದ್ರವಾಗಿ ಕಟ್ಟಿ ನಿಲ್ಲಿಸುವ ಸೂಕ್ತ ಯೋಚನೆ ಹೊಳೆಯಿತು. ೧೩. ನವಂಬರ್ ೧೯೧೬ ರಂದು ಕೆಎಲ್ಇ ಸಂಸ್ಥೆ ಸ್ಥಾಪನೆಗೊಂಡಿತು. ಬೆಳಗಾವಿ ಪರಿಸರದ ಸಾವಿರಾರು ಜನರಿಗೆ ವಿದ್ಯೆ ಪಡೆಯುವ ಅವಕಾಶ ಲಭಿಸಿತು.

೬ ಜೂನ್ ೧೯೩೭ ಉತ್ತರ ಕರ್ನಾಟಕದ ಜನತೆಗೆ ರುದಾಕ್ಷಿಮಠದ ಬಹುದೊಡ್ಡ ಕೊಡುಗೆಯೊಂದು ಸಂದಾಯಗೊಂಡ ದಿನ. ಶಿವಬಸವ ಸ್ವಾಮಿಗಳ ಕನಸು ನನಸಾದ ಸುದಿನ. ಶ್ರೀಮಠದ ಕಾರ್ಯಕ್ಷೇತ್ರ ವಿಸ್ತಾರಗೊಳ್ಳಬೇಕೆಂಬ ಶಿವಬಸವಸ್ವಾಮಿಗಳ ಮಹತ್ವಾಕಾಂಕ್ಷೆ ಈಡೇರಿದ ಮಹಾಸುದಿನ. ಶ್ರೀಮಠದ ಕಾರ್ಯಕ್ಷೇತ್ರ ವಿಸ್ತರಣಗೊಳ್ಳಲು ಅಡಿಗಲ್ಲು ಹಾಕಿದ ಸಂಭ್ರಮದ ಕ್ಷಣ.

ಬೆಳಗಾವಿಯ ದಂಡು ಪ್ರದೇಶಕ್ಕೆ ಸೇರಿದ ಕೋಟೆಯಲ್ಲಿನ ವಿಶಾಲ ಬಂಗ್ಲೆಯೊಂದನ್ನು ಬಾಡಿಗೆಗೆ ಪಡೆದು 'ಪ್ರಸಾದ ನಿಲಯ'ವನ್ನು ಆರಂಭಿಸಿದರು. ಈ ಮಹಾನ್ ಕಾರ್ಯದಲ್ಲಿ ಶಿವಬಸವ ಸ್ವಾಮಿಗಳ ನೆರವಿಗೆ ನಿಂತವರು ಕೆ.ಎಲ್.ಇ. ಸಂಸ್ಥೆಯ

ಸಂಸ್ಥಾಪಕ ಸಪ್ತರ್ಷಿಗಳಲ್ಲಿ ಓರ್ವರಾದ ಶ್ರೀ ಬಿ. ಬಿ. ಮಮದಾಪೂರ ಮಾಸ್ತರರು, ಶಹಾಪುರದ ಜಿಗಜಿನ್ನಿ ವಕೀಲರು, ಶ್ರಿಂಗಾರಿ ಶಾಂತವೀರಪ್ಪನವರು, ಕೊಂಬಕಾಳಿಮಠ ದುಂಡಯ್ಯನವರು, ಗೊಂಬಿಮಠ ಸ್ವಾಮಿಗಳು ಮಾಡಿದ ಪ್ರಯತ್ನ ಕೂಡ ಸ್ಮರಣಾರ್ಹ.

ಮೊದಲನೆಯ ವರ್ಷ ಪ್ರಸಾದ ನಿಲಯಕ್ಕೆ ಸೇರಿದ ವಿದ್ಯಾರ್ಥಿಗಳ ಸಂಖ್ಯೆ ಇಪ್ಪತ್ತೈದು. ತುಂಬ ಬಿಗಿ ಬಂದೋಬಸ್ತಿನಿಂದ ಕೂಡಿದ್ದ ಕೋಟೆ ಪ್ರದೇಶವನ್ನು ಬಿಟ್ಟು, ಪ್ರಸಾದ ನಿಲಯವು ಸಂಸ್ಥಾನಿಕರ ಆಡಳಿತಕ್ಕೊಳಪಟ್ಟ ಶಹಾಪುರದ ಬೋಳಮಲ್ಲರ ಕಟ್ಟಡಕ್ಕೆ ಸ್ಥಳಾಂತರಗೊಂಡಿತು. ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಮತ್ತಷ್ಟು ಅನುಕೂಲವಾಯಿತು.

ಪ್ರಸಾದ ನಿಲಯ ಶಿವಬಸವ ಸ್ವಾಮಿಗಳ ಕನಸಿನ ಕೂಸು, ಜೀವನದ ಘನ ಉದ್ದೇಶ. ಆ ಉದಾತ್ತ ಉದ್ದೇಶದ ಸಾಧನೆಗಾಗಿ ಅವರು ಹಗಲಿರುಳು ಶ್ರಮಿಸಿದರು. ಜನಕಲ್ಯಾಣವನ್ನೇ ಆತ್ಮಕಲ್ಯಾಣವೆಂದು ಭಾವಿಸಿದ ಶ್ರೀಗಳು ಕೈಯಲ್ಲಿ ಕಾಸಿಲ್ಲದೆ ಕೇವಲ ಇಚ್ಛಾಶಕ್ತಿ ಹಾಗೂ ಅಖಂಡ ಆತ್ಮ ವಿಶ್ವಾಸದಿಂದ ಆ ಮಹಾಮಣಿಹದ ಸಾಧನೆಗೆ ತೊಡಗಿದರು. ಜೋಳಿಗೆ ಹಿಡಿದರು. ತೆರಳಿದಲ್ಲೆಲ್ಲ ಅವರ ಜೋಳಿಗೆ ತುಂಬಿತು. ಸ್ವಾಮಿಗಳ ಹುರುಪು ಇಮ್ಮಡಿಗೊಂಡಿತು. ಅವರು ಕೈಗೆತ್ತಿಕೊಂಡ ಕಾರ್ಯವನ್ನು ಸಮಾಜ ಗುರುತಿಸಿತು. ಕೊಡುಗೈ ದಾನಿಗಳು ಮುಂದೆ ಬಂದರು. ದಾನ ನೀಡಿದರು.

ಶಿವಬಸವ ಸ್ವಾಮಿಗಳದು ಮಾತೃವಾತ್ಸಲ್ಯ-ಮೃದುಹೃದಯ. ಅಂತೆಯೇ ವಿದ್ಯಾರ್ಥಿಗಳನ್ನು ಅವರು ಮಕ್ಕಳಂತೆ ಕಂಡರು. ಚಿಕ್ಕ ವಿದ್ಯಾರ್ಥಿಗಳು ಅತ್ತಾಗ ಪ್ರೀತಿಯಿಂದ ಸಂತೈಸಿದರು. ಅವರ ಮೇಲೆ ಮಮತೆಯ ಮಹಾಪೂರವನ್ನೇ ಹರಿಸಿದರು. ಆದರೆ ಅವರದು ಅಷ್ಟೇ ಕಠಿಣ ನಿಲುವು. ವಿದ್ಯಾಭ್ಯಾಸದ ವಿಷಯದಲ್ಲಿ ಅವರು ತುಂಬ ಕಟ್ಟುನಿಟ್ಟು. ಅಭ್ಯಾಸ ಮಾಡದ ವಿದ್ಯಾರ್ಥಿಗಳಿಗೆ ಬೆತ್ತದ ಶಿಕ್ಷೆ ತಪ್ಪಿದ್ದಲ್ಲ. ಪ್ರಸಾದದ ಸಮಯವಂತೂ ಶಿವಬಸವ ಸ್ವಾಮಿಗಳಿಗೆ ಅತ್ಯಂತ ಆಪ್ಯಾಯಮಾನ ವಾದುದು. ಎಲ್ಲ ವಿದ್ಯಾರ್ಥಿಗಳು ಹಣೆತುಂಬ ಭಸ್ಮಧರಿಸಿ, ಶರಣರ ವಚನಗಳನ್ನು ಪಠಿಸುತ್ತಿದ್ದರು. ಆದರಿಂದ ಪ್ರಸಾದ ಕೋಣೆಯಲ್ಲಿ ಒಂದು ಪವಿತ್ರ ವಾತಾವರಣ ನಿರ್ಮಾಣವಾಗುತ್ತಿತ್ತು. ಎಲ್ಲಿಲ್ಲದ ಪಾವಿತ್ರ್ಯ ಪ್ರಾಪ್ತವಾಗುತ್ತಿತ್ತು.

ಶ್ರಾವಣ ಮಾಸ ಆರಂಭವಾದರಾಯ್ತು. ಸ್ವಾಮಿಗಳನ್ನು ಭಕ್ತರು ಪ್ರಸಾದಕ್ಕೆ ಆಹ್ವಾನಿಸುತ್ತಿದ್ದರು. ಆಗ ಶ್ರೀಗಳು 'ನನಗೆ ಒಂದೇ ಹೊಟ್ಟೆ ಇಲ್ಲಪ್ಪ, ನೂರು ನೂರು ಹೊಟ್ಟೆ' ಎನ್ನುತ್ತಿದ್ದರು. ಸೂಕ್ಷ್ಮ ಸ್ವಭಾವದ ಭಕ್ತರು ಅದನ್ನು ತಿಳಿದುಕೊಂಡು ಎಲ್ಲ ವಿದ್ಯಾರ್ಥಿಗಳನ್ನು ಪ್ರಸಾದಕ್ಕೆ ಆಮಂತ್ರಿಸುತ್ತಿದ್ದರು. ತಾವು ಸ್ವೀಕರಿಸುವ ಪ್ರಸಾದವೇ ವಿದ್ಯಾರ್ಥಿಗಳಿಗೂ ಲಭಿಸಬೇಕೆಂಬ ತತ್ವ ಸ್ವಾಮೀಜಿ ಅವರದು.

ಕೆಲಕಾಲದ ನಂತರ ಪ್ರಸಾದ ನಿಲಯದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. ಪ್ರಸಾದ ನಿಲಯದ ಪ್ರಗತಿಯ ಬಗೆಗೆ ಕೇಳಿ ಅಭಿಮಾನಿಗಳು ಹಿತೈಷಿಗಳು ಸಂತಸಪಟ್ಟರು. ಲಿಂಗರಾಜ ಕಾಲೇಜು ಮತ್ತು ಜಿ.ಎ.ಹೈಸ್ಕೂಲುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳಿಗೆ ವಿಶೇಷ ಅನುಕೂಲ ಕಲ್ಪಿಸಿಕೊಡುವ ಉದ್ದೇಶದಿಂದ ಬೆಳಗಾವಿಯಲ್ಲೂ ಒಂದು ಪ್ರಸಾದ ನಿಲಯವನ್ನು ಆರಂಭಿಸುವಂತೆ ಕೆಲವು ಹಿರಿಯರು ಶ್ರೀಗಳಲ್ಲಿ ವಿನಂತಿಸಿಕೊಂಡರು. ಶ್ರೀಗಳು ತಕ್ಷಣ ಕಾರ್ಯ ಪ್ರವೃತ್ತರಾದರು. ತಾವು ಮಾಡುತ್ತಿರುವ ಕೆಲಸಗಳನ್ನು ಕಂಡು ಮೆಚ್ಚಿಕೊಂಡ ಸಿದ್ನಾಳ ಶಿವರುದ್ರಪ್ಪನವರಲ್ಲಿಗೆ ತೆರಳಿದರು. ಪ್ರಸಾದ ನಿಲಯಕ್ಕೆ ಸೂಕ್ತ ಕಟ್ಟಡವೊಂದನ್ನು ಕೊಡಿಸುವಂತೆ ಕೇಳಿದರು. 'ದೆವ್ವದ ಮನೆ' ಎಂದೇ ಖ್ಯಾತಿ ಹೊಂದಿದ್ದ ಮಾರುತಿ ಬೀದಿಯ ದೇಶಪಾಂಡೆಯವರ ಮನೆಯನ್ನು ಹದಿನೈದು ಸಾವಿರ ರೂಪಾಯಿಗೆ ಖರೀದಿಸಿದರು. ಭಾರೀ ವಿಶಾಲವಾದ ಆ ಮನೆಯನ್ನೇ ವಿದ್ಯಾರ್ಥಿಗಳ ಪ್ರಸಾದ ವಸತಿ ಮತ್ತು ತಮ್ಮ ವಾಸಕ್ಕೂ ಅನುಕೂಲವಾಗುವಂತೆ ರೂಪಿಸಿಕೊಂಡರು. ಅದು ಶಿವಬಸವ ಸ್ವಾಮಿಗಳು ಇಟ್ಟ ಮೊದಲ ದಿಟ್ಟ ಹೆಜ್ಜೆ. ಬೆಳಗಾವಿಯಲ್ಲಿ ಮಾಡಿದ ಮೊದಲ ಸ್ಥಿರಾಸ್ತಿ. ಶಹಾಪುರ ಬೋಳಮಲ್ಲರ ಮನೆಯಲ್ಲಿದ್ದ ಪ್ರಸಾದ ನಿಲಯ ೧೯೩೭ರಲ್ಲಿ ಮಾರುತಿ ಬೀದಿಯ ಕಟ್ಟಡಕ್ಕೆ ಸ್ಥಳಾಂತರಗೊಂಡಿತು.

''ವಿದ್ಯಾರ್ಥಿ ಎಂಬುದು ಒಂದೇ ಜಾತಿ'' ಎಂದು ಬಲವಾಗಿ ನಂಬಿದ್ದ ಶ್ರೀಗಳ ಆಶ್ರಯದಲ್ಲಿ ಲಿಂಗಾಯತ ವಿದ್ಯಾರ್ಥಿಗಳೊಂದಿಗೆ ಬ್ರಾಹ್ಮಣರು, ಹರಿಜನರು, ಮಹಮ್ಮದೀಯರು ಜಾತಿಮತಗಳ ಭೇದ ಭಾವವಿಲ್ಲದೆ ಕೂಡಿ ಇರುತ್ತ ಭಾವೈಕ್ಯದ ಉಜ್ವಲ ಉದಾಹರಣೆಯೆನಿಸಿದರು.

೧೯೪೮ರಲ್ಲಿ ಹೊಸಕಟ್ಟಡ ನಿರ್ಮಾಣ ಕಾರ್ಯ ಆರಂಭಗೊಂಡಿತು. ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀ ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು ಆಶೀರ್ವದಿಸಿದರು. ದಾನಶೂರ ಬಸರೀಗಿಡದ ವೀರಪ್ಪನವರು ೫೧೦೦೧ ರೂಪಾಯಿಗಳ ಕೊಡುಗೆ ಕೊಟ್ಟರು. ನಾಲ್ಕುನೂರು ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯ ಹಾಗೂ ಪ್ರಸಾದ ಒದಗಿಸುವ ಸಾಮರ್ಥ್ಯದ ಸ್ವತಂತ್ರ ಹಾಗೂ ಭವ್ಯ ಕಟ್ಟಡ ಸಿದ್ಧಗೊಂಡಿತು. ೧೦-೯-೧೯೫೦ರಂದು ಮೈಸೂರಿನ ಅಂದಿನ ಮಹಾರಾಜರಾಗಿದ್ದ ಜಯಚಾಮರಾಜೇಂದ್ರ ಒಡೆಯರು ನೂತನ ಪ್ರಸಾದ ನಿಲಯದ ಕಟ್ಟಡವನ್ನು ಉದ್ಘಾಟಿಸಿದರು.

ಅದೇ ಸಂದರ್ಭದಲ್ಲಿ ಸ್ವಾಮೀಜಿ ರಾಮದೇವ ಬೀದಿಯಲ್ಲೂ ಒಂದು ಕಟ್ಟಡವನ್ನು ಖರೀದಿಸಿ ವಿದ್ಯಾರ್ಥಿಗಳ ವಾಸಕ್ಕೆ ಏರ್ಪಾಡು ಮಾಡಿದರು. ಕಾಲಕ್ರಮದಲ್ಲಿ ಅಲ್ಲಿ ಮಾರಾಟ ಮಳಿಗೆಗಳ ಸಂಕೀರ್ಣವನ್ನು ನಿರ್ಮಿಸಿದರು.

ಮಾರುತಿ ಬೀದಿಯಲ್ಲಿನ ಪ್ರಸಾದ ನಿಲಯದ ಕಟ್ಟಡ ವಿಶಾಲವಾದುದು. ಚೌಕಾಕಾರದಲ್ಲಿ ನಿರ್ಮಾಣಗೊಂಡ ಕಟ್ಟಡದ ಮಧ್ಯೆ ಒಂದು ಸಾವಿರ ಜನರಿಗೆ ಕೂಡ್ರಲು ಅವಕಾಶವಾಗಬಲ್ಲ ವಿಶಾಲ ಮಂಟಪ. ಗಣೇಶ ಉತ್ಸವ, ನಾಡಹಬ್ಬ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲು ವೇದಿಕೆಯಾಗುತ್ತಿದ್ದ ಅದು ಆಗಾಗ ವಿವಾಹ ಮಂಟಪವೂ ಆಗುತ್ತಿತ್ತು. ಬೆಳಗಾವಿಯ ಹೃದಯ ಭಾಗದಲ್ಲಿದ್ದುದರಿಂದ ಮದುವೆ ಮೊದಲಾದ ಸಾಮಾಜಿಕ ಕಾರ್ಯಗಳಿಗೆ ಪ್ರಸಾದ ನಿಲಯ ತುಂಬ ಅನುಕೂಲಕರವೆನಿಸಿತು. ಶಿಕ್ಷಣಕ್ಕೆ ಅನುಕೂಲ ಕಲ್ಪಿಸುವುದರೊಂದಿಗೆ ಧಾರ್ಮಿಕ ಸಂಸ್ಕಾರವನ್ನು ನೀಡುವ ಕೇಂದ್ರವೆನಿಸಿತು.

ಬರಬರುತ್ತ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. ಕಟ್ಟಡ ಚಿಕ್ಕದಾಯಿತು. ಊರೊಳಗೆ ಬೆಳೆಸಲು ಇನ್ನು ಆಸ್ಪದವಿಲ್ಲವೆಂಬುದನ್ನು ಸ್ವಾಮೀಜಿ ಮನಗಂಡರು. ಪುಣೆ–ಬೆಂಗಳೂರು ಹೆದ್ದಾರಿಗೆ ಹೊಂದಿಕೊಂಡಿದ್ದ ಸರಕಾರಿ ಭೂಮಿಯನ್ನು ಪಡೆಯುವುದಕ್ಕಾಗಿ ಕಾನೂನಿನ ಸಲಹೆ ಪಡೆದು ಅರ್ಜಿಸಲ್ಲಿಸಲಾಯಿತು. ಹಂತ–ಹಂತವಾಗಿ ಒಟ್ಟು ಹದಿನಾರು ಎಕರೆಯಷ್ಟು ವಿಶಾಲ ನಿವೇಶನ ಮಂಜೂರಾಯಿತು.

ಅಲ್ಲಿ ಕುಮಾರೇಶ್ವರ ಪ್ರಸಾದ ನಿಲಯ, ಉದ್ಯೋಗ ನಿರತ ಮಹಿಳಾ ವಸತಿಗೃಹ, ಪ್ರಾಥಮಿಕ ಶಾಲೆ, ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ, ಔದ್ಯೋಗಿಕ ತರಬೇತಿ ಕೇಂದ್ರ, ಅಂಗನವಾಡಿ ಕಾರ್ಯಕರ್ತೆಯರ ತರಬೇತಿ ಕೇಂದ್ರ, ಮಹಿಳಾ ಶಿಕ್ಷಣ ಮಹಾವಿದ್ಯಾಲಯ, ಬಹು ತಾಂತ್ರಿಕ ಸಂಸ್ಥೆ, ಶ್ರೀಗಳ ಹಾಗೂ ಅಧ್ಯಯನ ನಿರತ ಕಿರಿಯ ಸ್ವಾಮಿಗಳ ವಾಸ್ತವ್ಯ ಕೋಣೆ, ಕಾರ್ಯಾಲಯ, ಲಿಂಗಾಯತ ಕೇಂದ್ರ ಗ್ರಂಥಾಲಯ ಮೊದಲಾದವು ನಿರ್ಮಾಣಗೊಂಡವು. ಸಾಂಸ್ಕೃತಿಕ ಸಮಾರಂಭಗಳಿಗೆ, ಮದುವೆ ಮೊದಲಾದ ಮಂಗಲ ಕಾರ್ಯಗಳಿಗೆ ಅನುಕೂಲವಾಗುವಂತೆ ಸಾರ್ವಜನಿಕರ ಸೇವೆಗಾಗಿ ಬೃಹದಾಕಾರದ ಪ್ರಭುದೇವ ಸಭಾಗೃಹ ಸಿದ್ಧಗೊಂಡಿತು.

ಈ ಎಲ್ಲ ಕಟ್ಟಡಗಳಿಗೆ ಹೊಂದಿಕೊಂಡು ವಿಶಾಲಬಡಾವಣೆಯೊಂದು ನಿರ್ಮಾಣಗೊಂಡಿತು. ಕಾಯಕಯೋಗಿ ಶಿವಬಸವ ಸ್ವಾಮಿಗಳ ಪ್ರಭಾವದಿಂದ ಸಮಸ್ತ ಪರಿಸರ ಪವಿತ್ರಗೊಂಡಿತು. ಎಲ್ಲವೂ ಶಿವಬಸವಮಯವಾಯಿತು. ಅಂತೆಯೇ ಭಕ್ತರ ಅಪೇಕ್ಷೆಯಂತೆ ಬೆಳಗಾವಿ ಮಹಾನಗರ ಸಭೆಯವರು ಆ ವಿಶಾಲ ಪ್ರದೇಶಕ್ಕೆ ''ಶಿವಬಸವ ನಗರ'' ಎಂದು ನಾಮಕರಣ ಮಾಡಿದರು. ಶ್ರೀಗಳ ಸೇವೆ ಸಾರ್ಥಕವಾಯ್ತು.

### ಶೈಕ್ಷಣಿಕ ಸೇವೆ

ಸಮಾಜದ ಸರ್ವತೋಮುಖ ಬೆಳವಣಿಗೆಗೆ ಶಿಕ್ಷಣವೊಂದೇ ಸರ್ವೋತ್ತಮ ಮಾರ್ಗವೆಂಬುದನ್ನು ಮನಗಂಡವರು ಲಿಂಗಾಯತರು. ಅಂತೆಯೇ ಅವರು ಉಚಿತ ಪ್ರಸಾದ ನಿಲಯ–ಶಿಕ್ಷಣ ಸಂಸ್ಥೆ–ಅದಕ್ಕೆ ಪೂರಕವಾದ ಅಂಗಸಂಸ್ಥೆಗಳನ್ನು ಸ್ಥಾಪಿಸಿ ಕ್ರಾಂತಿಯನ್ನೇ ಮಾಡಿದರು. ಲಿಂಗಾಯತ ಮಠಗಳಿಗೂ ಶಿಕ್ಷಣಕ್ಕೂ ಅನ್ಯೋನ್ಯ ಸಂಬಂಧವಿದೆ. ಆರಂಭದಲ್ಲಿ ಧರ್ಮ ಅಧ್ಯಾತ್ಮ ಹಾಗೂ ದಾಸೋಹದ ಕೇಂದ್ರಗಳಾಗಿದ್ದ ಲಿಂಗಾಯತ ಮಠಗಳು ಬರಬರುತ್ತ ಜ್ಞಾನದಾಸೋಹದ ಕಾರ್ಯವನ್ನು ತುಂಬ ಸಮರ್ಥವಾಗಿ ಕೈಕೊಂಡವು. ಅನ್ನದಾಸೋಹದೊಂದಿಗೆ ಜ್ಞಾನ ದಾಸೋಹವನ್ನು ನಡೆಸಿಕೊಂಡು ಬಂದ ಲಿಂಗಾಯತ ಮಠಗಳು ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಕೊಡುಗೆ ಅನನ್ಯ.

ನಾಗನೂರು ಬೆಳಗಾವಿ ರುದ್ರಾಕ್ಷಿಮಠವು ಉತ್ತರ ಕರ್ನಾಟಕದ ಶೈಕ್ಷಣಿಕ ಚರಿತ್ರೆಯೊಂದಿಗೆ ತನ್ನನ್ನು ಗುರುತಿಸಿಕೊಂಡಿದೆ. ಪ್ರಾಥಮಿಕ ಶಿಕ್ಷಣಕ್ಕೆ ಭದ್ರ ಅಡಿಪಾಯ ಹಾಕುವ ಉದ್ದೇಶದಿಂದ ಶಿವಬಸವ ಸ್ವಾಮಿಗಳು ಕನ್ನಡ ಶಾಲೆಯನ್ನು ಆರಂಭಿಸಿದರು. ಅದರ ಬೆನ್ನಿನಲ್ಲೇ ಪ್ರೌಢಶಾಲೆ, ಬಾಲಕರ ವಸತಿ ಪ್ರೌಢಶಾಲೆ, ಪದವಿಪೂರ್ವ ಮಹಾವಿದ್ಯಾಲಯ, ತಾಂತ್ರಿಕ ಶಿಕ್ಷಣ ಸಂಸ್ಥೆ, ಹೀಗೆ ಶ್ರೀಗಳು ಹಲವಾರು ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದರು. ಇವೆಲ್ಲವೂ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿವೆ. ತನ್ಮೂಲಕ ಕನ್ನಡವನ್ನು ಪೋಷಿಸುವ ಕೆಲಸ ಮಾಡುತ್ತಿವೆ. ಈ ಸಂಸ್ಥೆಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳ ಸಂಖ್ಯೆ ಹಲವು ಸಾವಿರ. ಇಲ್ಲಿ ಸೇವೆ ಸಲ್ಲಿಸುತ್ತಿರುವ ಸಿಬ್ಬಂದಿ ಎರಡುನೂರಕ್ಕೂ ಹೆಚ್ಚು ಶ್ರೀ ಕುಮಾರೇಶ್ವರ ವಿದ್ಯಾರ್ಥಿ ಪ್ರಸಾದ ನಿಲಯ ಹಾಗೂ ವಿದ್ಯಾರ್ಥಿನಿ ಪ್ರಸಾದ ನಿಲಯಗಳು ಬೆಳಗಾವಿ ಶಿಕ್ಷಣ ಸಂಸ್ಥೆಗಳಿಗೆ ಪೂರಕವಾಗಿ, ಮೌಲಿಕ ಸೇವೆ ಸಲ್ಲಿಸುತ್ತಿವೆ. ೧೯೯೮ ರಲ್ಲಿ ಆರಂಭಗೊಂಡ ಶ್ರೀ ಸಿದ್ಧರಾಮೇಶ್ವರ ಮಾಧ್ಯಮಿಕ ಶಾಲೆಯು ಶಿವಬಸವ ನಗರದ ಕುಮಾರೇಶ್ವರ ಪ್ರಸಾದ ನಿಲಯಕ್ಕೆ ಹೊಂದಿಕೊಂಡೇ ಇದೆ. ಸುಂದರ ಪರಿಸರದಲ್ಲಿ ಗುರುಕುಲ ಮಾದರಿಯಲ್ಲಿರುವ, ಉತ್ತಮ ಗುಣಮಟ್ಟದ ಶಿಕ್ಷಣ ನೀಡುತ್ತಿರುವ ಈ ಶಾಲೆ ತನ್ನದೇ ಆದ ಖ್ಯಾತಿ ಹೊಂದಿದೆ. ಉತ್ತಮಗುಣ, ಶೀಲ ಸಂವರ್ಧನೆಯೊಂದಿಗೆ ವಿದ್ಯಾರ್ಥಿಗಳ ಪರಿಪೂರ್ಣ ವ್ಯಕ್ತಿತ್ವ ರೂಪಿಸುವುದು ಈ ಶಾಲೆಯ ಮುಖ್ಯ ಉದ್ದೇಶ.

ಇಪ್ಪತ್ತೊಂದನೆಯ ಶತಮಾನಕ್ಕೆ ಪ್ರವೇಶಿಸಿದ ಯುವಕರು ನಿರುದ್ಯೋಗದ ಭೀಕರ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇಂದು ವೃತ್ತಿಯಾಧಾರಿತ ಶಿಕ್ಷಣ ಪಡೆಯುವುದು ಹೆಚ್ಚು ಜನಪ್ರಿಯವಾಗತೊಡಗಿದೆ. ಅದನ್ನು ತುಂಬ ಹಿಂದೆಯೇ ಊಹಿಸಿದ್ದ ಸ್ವಾಮೀಜಿ, ಬೆಳಗಾವಿಯಲ್ಲಿ ಕೈಗಾರಿಕಾ ತರಬೇತಿ ಕೇಂದ್ರ ಮತ್ತು ತಾಂತ್ರಿಕ ಶಿಕ್ಷಣಾಲಯಗಳನ್ನು ಆರಂಭಿಸಿದರು. ನಾಗನೂರಿನಲ್ಲಿ ಕೈಗಾರಿಕಾ ತರಬೇತಿ ಕೇಂದ್ರವನ್ನು ಸ್ಥಾಪಿಸಿ, ಗ್ರಾಮೀಣ ಭಾಗದ ವಿದ್ಯಾರ್ಥಿಗಳಿಗೆ ಅನುಕೂಲ ಕಲ್ಪಿಸಿದರು. ಬೆಳಗಾವಿಗೆ ಶಿಕ್ಷಣ ಪಡೆಯಲು ಬರುವ ವಿದ್ಯಾರ್ಥಿಗಳಿಗೆ  ನೆಲೆಯನ್ನು ಒದಗಿಸುವುದರ ಜೊತೆಗೆ ಅವರು ಮಾಡಿದ ಇತರ ಕಾರ್ಯಗಳು ತುಂಬ ಮೌಲಿಕ ಹಾಗೂ ಗಮನಾರ್ಹ.ಅದು ಕರ್ನಾಟಕದ ಏಕೀಕರಣದ ಸಂದರ್ಭ. ರುದ್ರಾಕ್ಷಿಮಠ ಮತ್ತು ಪ್ರಸಾದ ನಿಲಯಗಳು ಆಗ ಹೋರಾಟದ ಸ್ಫೂರ್ತಿಯ ತಾಣಗಳಾಗಿದ್ದವು. ಶ್ರೀಗಳು ನಾಡು ನುಡಿಗಳ ಕಟ್ಟಾ ಅಭಿಮಾನಿಗಳು. ಅಂತೆಯೇ ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ ಸ್ವಾಮೀಜಿ ಸ್ಪಂದಿಸಿದ ರೀತಿ ಇಂದಿಗೂ ಸ್ಫೂರ್ತಿದಾಯಕ. ಭಾಷಾವಿವಾದದ ಫಲವಾಗಿ 'ಮಹಾರಾಷ್ಟ್ರ ಏಕೀಕರಣ ಸಮಿತಿ' ಅಸ್ತಿತ್ವಕ್ಕೆ ಬಂದಿತು. ಅದಕ್ಕೆ ಪ್ರತಿಯಾಗಿ ಕನ್ನಡಿಗರಲ್ಲಿ ಎಲ್ಲಿಲ್ಲದ ಒಕ್ಕಟ್ಟು ಮೂಡಿತು. ೧೯೫೪ ರ ಉತ್ತರಾರ್ಧ. ಭಾಷಾವಾರು ಪ್ರಾಂತ ರಚನೆಯ ಹಿನ್ನೆಲೆಯಲ್ಲಿ ಫಜಲ್‌ಅಲಿ ಆಯೋಗ ಬೆಳಗಾವಿಗೆ ಬಂದಿತು. ಆಯೋಗದೆದುರು ಕನ್ನಡ ಮರಾಠಿ ಬಾಂಧವರು ಸಂಘಸಂಸ್ಥೆಗಳವರು ಮನವಿಯನ್ನು ಅರ್ಪಿಸುವ ಸಿದ್ಧತೆ ನಡೆಸಿದರು.

ಬೆಳಗಾವಿಯಲ್ಲಿ ಕನ್ನಡಿಗರ ಸಂಖ್ಯೆ ಹೆಚ್ಚಲು, ಕನ್ನಡ ಚಟುವಟಿಕೆಗಳು ಹೆಚ್ಚಲು, ಕನ್ನಡ ಬೆಳೆಯಲು ಸ್ವಾಮೀಜಿ ಕಾರಣರು. ಆಯೋಗದೆದುರು ಸ್ವಾಮೀಜಿ ಹೇಳಿಕೆ ನೀಡುವುದು ತುಂಬ ಸೂಕ್ತ ಎಂಬ ಅಭಿಪ್ರಾಯ ವ್ಯಕ್ತವಾಯಿತು. ಫಜಲ್ ಅಲಿಯವರ ಅಧ್ಯಕ್ಷತೆಯ ಆಯೋಗಕ್ಕೆ ಶ್ರೀ ಕುಂಜ ಹಾಗೂ ಸರದಾರ್ ಪಣಿಕ್ಕರ್ ಸದಸ್ಯರು.  ಹೇಳಿಕೆ ನೀಡಲು ಸಂಪೂರ್ಣ ಸಿದ್ಧತೆ ಮಾಡಿಕೊಂಡಿದ್ದ ಸ್ವಾಮೀಜಿ ಭೌಗೋಲಿಕ ಅಂಶದೊಂದಿಗೆ ಐತಿಹಾಸಿಕ ಹಾಗೂ ಸಾಮಾಜಿಕ ಅಂಶಗಳನ್ನು ಸಮೀಕರಿಸಿ ಅತ್ಯಂತ ಪ್ರಭಾವಯುತವಾಗಿ ತಮ್ಮ ವಿಚಾರಗಳನ್ನು ಪ್ರತಿಪಾದಿಸಿದರು. ಬೆಳಗಾವಿ ಕರ್ನಾಟಕದ್ದು ಕನ್ನಡಿಗರದ್ದು ಎಂಬ ಧ್ವನಿಯೇ ಅವರ ವಾದದ ಪ್ರಮುಖ ಅಂಶವಾಗಿತ್ತು. ಬೆಳಗಾವಿ ಕರ್ನಾಟಕದ್ದು ಎಂದು ಸ್ವಾಮೀಜಿ ಗಟ್ಟಿಯಾದ ಮುದ್ರೆ ಒತ್ತಿದರು. ಸಂಪೂರ್ಣ ಬೆಳಗಾವಿ ಜಿಲ್ಲೆ ಕರ್ನಾಟಕದ ಅವಿಭಾಜ್ಯ ಅಂಗವಾಗಿ ಉಳಿಯಿತು.

ಮರಾಠಿಗರು ಬೆಳಗಾವಿಯಲ್ಲಿ ಭಾರಿ ಪ್ರತಿಭಟನೆ ನಡೆಸಿದರು. ನವೆಂಬರ್ ೧, ೧೯೫೬ ರಂದು ಭಾಷಾವಾರು ಪ್ರಾಂತಗಳ ರಚನೆಯಾಯಿತು. ಬೆಳಗಾವಿ ವಿಶಾಲ ಮೈಸೂರಿಗೆ ಸೇರಿದ ಜಿಲ್ಲೆಯಾಯಿತು. ನಾಡಿನಾದ್ಯಂತ ಅದನ್ನು ಉತ್ಸವವಾಗಿ ಆಚರಿಸಿದರು. ವಿದ್ಯಾರ್ಥಿ ಪ್ರಸಾದ ನಿಲಯದಲ್ಲಿ ಎಲ್ಲಿಲ್ಲದ ಸಂಭ್ರಮ ವಿಜಯದ ಸಂಕೇತವಾಗಿ ದೀಪೋತ್ಸವ ನಡೆಸಲಾಯಿತು. ಸಭೆಗೆ ಬಂದ ಸಾವಿರಾರು ಜನರ ಪ್ರಸಾದ ಹಾಗೂ ವಸತಿಯ ವ್ಯವಸ್ಥೆಯ ಹೊಣೆಯನ್ನು ಸ್ವಾಮೀಜಿ ಅಚ್ಚುಕಟ್ಟಾಗಿ ನಿರ್ವಹಿಸಿದರು.

ಸ್ವಾಮೀಜಿಗೆ ಕನ್ನಡ ಭಾಷಿಕರಂತೆ ಮರಾಠ ಭಕ್ತರೂ ಅಪಾರ ಸಂಖ್ಯೆಯಲ್ಲಿ ಇದ್ದರು. ಸ್ವಾಮೀಜಿ ಆ ಭಕ್ತರನ್ನು ತುಂಬ ಪ್ರೀತಿಸುತ್ತಿದ್ದರು. ಆದರೆ ಕನ್ನಡದ ಪ್ರಶ್ನೆ ಬಂದಾಗ ಅವರು ಕಠೋರವಾಗುತ್ತಿದ್ದರು. ಕನ್ನಡವನ್ನು ಪೋಷಿಸುವ, ಬಳಸುವ ಹಾಗೂ ಬೆಳೆಸುವ ಹೊಣೆ ಅವರದಾಗಿತ್ತು. ಅವರು ಯಾವುದೇ ಕೆಲಸ ಮಾಡಿದರೂ ಅದರ ಹಿಂದಿನ ಕಾಳಜಿ ಕನ್ನಡದ್ದೇ ಆಗಿತ್ತು.

ಸಭೆ, ಮೆರವಣಿಗೆ ಇತ್ಯಾದಿ ಸಂದರ್ಭಗಳಲ್ಲಿ ಕನ್ನಡ ವಿರೋಧಿಗಳು ಪ್ರಸಾದ  ನಿಲಯದ ಮೇಲೆ ತಪ್ಪದೇ ಕಲ್ಲು ತೂರಾಟ ನಡೆಸುತ್ತಿದ್ದರು. ಕೇಕೇ ಹಾಕುತ್ತಿದ್ದರು. ಅದಕ್ಕೆ ಪ್ರತಿಯಾಗಿ ಪ್ರಸಾದ ನಿಲಯದ ವಿದ್ಯಾರ್ಥಿಗಳು 'ಕನ್ನಡಾಂಬೆಗೆ ಜಯವಾಗಲಿ' ಎಂದು ಉದ್ಘೋಷಿಸುತ್ತಿದ್ದರು.

ಕನ್ನಡ ಚಳವಳಿ ತೀವ್ರಗೊಂಡ ಸಂದರ್ಭದಲ್ಲಿ ಕನ್ನಡ ವಿರೋಧಿಗಳು ಬೆಳಗಾವಿಯ ಶಾಂತಿ–ನೆಮ್ಮದಿಗಳನ್ನು ಕೆಡಿಸಲು ಯತ್ನಿಸುತ್ತಿದ್ದರು. ಪುಂಡಾಟಿಕೆ ನಡೆಸಿ, ಕನ್ನಡಿಗರ ವ್ಯವಹಾರಕ್ಕೆ ಅಡ್ಡಿ ಒಡ್ಡುತ್ತಿದ್ದರು. ಸ್ವಾಮೀಜಿಯವರ ಪ್ರಾಣಕ್ಕೆ ಅಪಾಯವೊಡ್ಡುವ ಸಂಚು ಮಾಡಿದರು. ಸುರಕ್ಷಿತ ಸ್ಥಳಕ್ಕೆ ಕರೆದೊಯ್ಯುತ್ತಿದ್ದ ಸಂದರ್ಭದಲ್ಲಿ ಸ್ವಾಮೀಜಿಯವರ ಮೇಲೆ ದಾಳಿ ಮಾಡಲು ಕೋಲು ಬಡಿಗೆಗಳನ್ನು ಹಿಡಿದ ಪುಂಡರು ಧಾವಿಸಿದರು. ಅಷ್ಟರಲ್ಲಿ ಪೋಲೀಸರು ಬಂದರು. ಪುಂಡರು ಓಡಿಹೋದರು. ನಡೆಯಬಹುದಾಗಿದ್ದ ಅನಾಹುತ ತಪ್ಪಿತು.

ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ರಜಾಕಾರರ ಹಾವಳಿಯನ್ನು ತಡೆಗಟ್ಟುವಲ್ಲಿ ಭಾಳ್ಕಿಪಟ್ಟದ್ದೇವರೊಂದಿಗೆ ಸಹಕರಿಸಿ ನೆರವು ನೀಡಿದ ಶಿವಬಸವ ಸ್ವಾಮಿಗಳು ನಾಡು ನುಡಿಯ ಅಭಿಮಾನವನ್ನು ಅಭಿವ್ಯಕ್ತಪಡಿಸಿದರು.

ಕರ್ನಾಟಕ ಮಹಾರಾಷ್ಟ್ರ ಗಡಿ ಸಮಸ್ಯೆಗೆ ಸಂಬಂಧಿಸಿದಂತೆ ಭಾರತದ ಸರ್ವೋಚ್ಚ ನ್ಯಾಯಾಲಯದ ಪ್ರಧಾನ ನ್ಯಾಯಾಧೀಶರಾದ ಮೆಹರ್‌ಚಂದ್ ಮಹಾಜನ ಅವರ ನೇತೃತ್ವದಲ್ಲಿ ೨೫–೧೦–೧೯೬೬ ರಂದು ಆಯೋಗ ನೇಮಕಗೊಂಡಿತು. ಗಡಿ ಸಮಸ್ಯೆಯನ್ನು ಬಗೆಹರಿಸುವ ನಿಟ್ಟಿನಲ್ಲಿ ಆಯೋಗ ಕಾರ್ಯೋನ್ಮುಖವಾಯಿತು.

ಗಡಿಜಿಲ್ಲೆ ಬೆಳಗಾವಿಗೆ ತನ್ನದೇ ವೈಶಿಷ್ಟ್ಯವಿದೆ. ಮಹಾತ್ಮಾ ಗಾಂಧೀಜಿ ಅವರನ್ನೊಳಗೊಂಡು ಹಲವಾರು ನಾಯಕರು ಬೆಳಗಾವಿ ಕರ್ನಾಟಕದ್ದೆಂದು ಹೇಳಿದ್ದು ಸ್ಮರಣೀಯ. ಆಡಳಿತಾತ್ಮಕವಾಗಿಯೇ ಬೆಳಗಾವಿ ಕರ್ನಾಟಕದ ಪ್ರಮುಖ ಸ್ಥಾನವಾಗಿದೆ. ಅಂತೆಯೇ ಬೆಳಗಾವಿಯ ಬಗೆಗೆ ಎಲ್ಲ ಧುರೀಣರು, ಸಮುದಾಯದ ನಾಯಕರು ತಮ್ಮ ಅಭಿಪ್ರಾಯ ಮಂಡಿಸಿದರು. ಶಿವಬಸವ ಸ್ವಾಮೀಜಿ "ಬೆಳಗಾವಿ ಎಂದೆಂದೂ ಕರ್ನಾಟಕದ್ದು, ಗಡಿವಿವಾದ ಮುಗಿದುಹೋದ ಅಧ್ಯಾಯ ಅದನ್ನು ಮತ್ತೆ ಮತ್ತೆ ಕೆದಕಬಾರದು" ಎಂದು ತಮ್ಮ ಅಭಿಪ್ರಾಯವನ್ನು ಪ್ರಬಲವಾಗಿ ಪ್ರತಿಪಾದಿಸಿದರು. ಬೆಳಗಾವಿ ಕನ್ನಡಿಗರ ಪ್ರತಿಷ್ಠೆಯ ಪ್ರತೀಕ ಎಂದು ನಿರ್ಣಾಯಕ ಧ್ವನಿಯಲ್ಲಿ ಹೇಳಿದರು.

೧೫ ಆಗಸ್ಟ ೧೯೬೭ ರಂದು ಭಾರತದ ಸರ್ವೋಚ್ಚನ್ಯಾಯಾಲಯದ ಪ್ರಧಾನ ನ್ಯಾಯಾಧೀಶರಾಗಿದ್ದ ಮೆಹರ್‌ಚಂದ್ ಮಹಾಜನ ನೇತೃತ್ವದ ಆಯೋಗ ತನ್ನ ಸುದೀರ್ಘ ವರದಿಯನ್ನು ಸರಕಾರಕ್ಕೆ ಸಮರ್ಪಿಸಿತು. ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗವಾಗಿಯೇ ಉಳಿಯಿತು. ಇಂದಿನ ಬೆಳಗಾವಿ ಅಂಥ ಎಲ್ಲ ಗೊಂದಲಗಳಿಂದ ಮುಕ್ತವಾಗಿದೆ. ಅದಕ್ಕಾಗಿ ಹೋರಾಡಿದ, ಶ್ರದ್ಧೆಯಿಂದ ಶ್ರಮಿಸಿದ ಶಿವಬಸವ ಸ್ವಾಮಿಗಳು ಇಂದಿಗೂ ಸ್ಮರಣೀಯರು.

ನಾಡಹಬ್ಬದ ನೇತಾರರು

ಬೆಳಗಾವಿ ಮಹಾನಗರದ ಹೃದಯಭಾಗದಲ್ಲಿರುವ ರುದ್ರಾಕ್ಷಿಮಠದ ಪ್ರಸಾದ ನಿಲಯವನ್ನು ಇಂದಿಗೂ ಬೋರ್ಡಿಂಗ್ ಎನ್ನುತ್ತಾರೆ. ಇದು ಕನ್ನಡದ ಶಕ್ತಿ ಕೇಂದ್ರ. ಕನ್ನಡ–ಕನ್ನಡಿಗ–ಕರ್ನಾಟಕಕ್ಕೆ ಸಂಬಂಧಿಸಿದ ಸಭೆಗಳೆಲ್ಲ ಇಲ್ಲೇ ನಡೆಯುತ್ತಿದ್ದವು. ಅದೆಲ್ಲದರ ಹಿಂದಿನ ದೊಡ್ಡ ಶಕ್ತಿ ಸ್ವಾಮೀಜಿ. ಅವರೇ ನೇತಾರರು.

೧೯೩೪ ರಿಂದ ನಾಡಹಬ್ಬದ ಕಾರ್ಯಕ್ರಮಗಳು ಹನುಮನ ಬೀದಿಯ ಪ್ರಸಾದ ನಿಲಯದಲ್ಲಿ ಜರುಗತೊಡಗಿದವು. ಸ್ವಾಮೀಜಿ ಸಕಲ ಅನುಕೂಲತೆಗಳನ್ನು ಕಲ್ಪಿಸಿದರು. ಸ್ವಾಮೀಜಿಯವರ ಆಸಕ್ತಿ ಅಭಿಮಾನಗಳ ಫಲವಾಗಿ ಬೋರ್ಡಿಂಗಿನ ಆವರಣವೇ ನಾಡಹಬ್ಬದ ಕಾರ್ಯಕ್ರಮಗಳಿಗೆ ಶಾಶ್ವತ ವೇದಿಕೆಯಾಯಿತು. ಸಂಭ್ರಮದ ನಾಡ ಹಬ್ಬದ ಆಚರಣೆಗೆ ಇದೀಗ ಎಂಬತ್ತು ವರ್ಷ ತುಂಬಿದೆ.

ಸಾಹಿತ್ಯ ಸಂಸ್ಕೃತಿ ಪ್ರೇಮಿ

ಶಿವಬಸವ ಸ್ವಾಮಿಗಳು ಸ್ವತಃ ಸಾಹಿತಿಗಳಲ್ಲದಿದ್ದರೂ ಸಾಹಿತಿಗಳನ್ನು ರೂಪಿಸಿದರು. ಉದಯೋನ್ಮುಖ ಸಾಹಿತಿಗಳನ್ನು ಪ್ರೋತ್ಸಾಹಿಸಿದರು. ಸಾಹಿತಿ ವಿದ್ವಾಂಸರು ತೊಂದರೆಯಲ್ಲಿದ್ದಾಗ ಅವರ ನೆರವಿಗೆ ನಿಂತು ಮಾನವೀಯತೆಯನ್ನು ಮೆರೆದರು.

ಸ್ವಾಮೀಗಳು ಒಮ್ಮೆ ರೈಲಿನಲ್ಲಿ ಹುಬ್ಬಳ್ಳಿಗೆ ಹೊರಟ ಸಂದರ್ಭ. ಮೂವರು ಸಹ ಪ್ರಯಾಣಿಕರು ಪರಸ್ಪರ ಮಾತನಾಡುತ್ತ, ಕವಿ ಸಣಕಲ್ಲರು ತುಂಬ ತೊಂದರೆಯಲ್ಲಿರುವುದರ ಬಗ್ಗೆ ಪ್ರಸ್ತಾಪಿಸಿದ್ದು ಶ್ರೀಗಳಿಗೆ ಕೇಳಿಸಿತು. ಅವರ ಮನಸ್ಸಿಗೆ ಕಸಿವಿಸಿಯಾಯ್ತು. ಈಶ್ವರ ಸಣಕಲ್ಲ ಸ್ವಾಮಿಗಳ ಮನಸ್ಸನ್ನು ಆವರಿಸಿಕೊಂಡರು. ಹುಬ್ಬಳ್ಳಿಯಿಂದ ನೇರವಾಗಿ ನಾಗನೂರಿಗೆ ಹೋಗಿ ಭಕ್ತರೆದುರು ಸಣಕಲ್ಲರನ್ನು ಕುರಿತು ಹೇಳಿದರು. ಅವರಿಗೆ ಆರ್ಥಿಕ ಸಹಾಯದ ಅಗತ್ಯವಿದೆಯೆಂದರು.

'ಸಣಕಲ್ಲ–ಸಾಹಿತ್ಯ ಪ್ರೋತ್ಸಾಹ ನಿಧಿ' ಹೆಸರಿನಲ್ಲಿ ಹಣ ಸಂಗ್ರಹಿಸಿ, ಬೆಳಗಾವಿಯಲ್ಲಿ ಸಮಾರಂಭ ಏರ್ಪಡಿಸಿ, ನಿಧಿ ಅರ್ಪಿಸುವ ಯೋಜನೆ ಸಿದ್ಧಗೊಂಡಿತು. ಲಿಂಗರಾಜ ಕಾಲೇಜಿನ ಪ್ರಾಚಾರ್ಯ ಡಾ. ಜಿ. ಎಸ್. ಪರಮಶಿವಯ್ಯನವರ ಆತಿಥ್ಯದಲ್ಲಿ ಸಭೆ ನಡೆಸಿ, ಸಂಗ್ರಹಗೊಂಡ ನಿಧಿಯನ್ನು ಸಣಕಲ್ಲರಿಗೆ ಅರ್ಪಿಸಿದರು. ಸಣಕಲ್ಲರ ಹೃದಯ ತುಂಬಿ ಬಂದಿತು.

ಸಣಕಲ್ಲರು ನಿವೃತ್ತರಾದ ನಂತರ ಅವರನ್ನು ಕರೆಸಿಕೊಂಡ ಸ್ವಾಮಿಗಳು ಮಠದಲ್ಲೇ ಆಶ್ರಯ ನೀಡಿದರು. ಅವರ ಸಾಹಿತ್ಯ ರಚನೆಗೆ ಸಕಲ ಸೌಲಭ್ಯ ಒದಗಿಸಿದರು. ಆ ದಿನಗಳು ಸಣಕಲ್ಲರ ಬದುಕಿಗೆ ನೆಮ್ಮದಿ ನೀಡಿದವು.

ಫ. ಗು. ಹಳಕಟ್ಟಿ ಕನ್ನಡದ ಶ್ರೇಷ್ಠ ಸಂಶೋಧಕರು. ಶರಣಸಾಹಿತ್ಯವನ್ನು ತುಂಬ ಕಷ್ಟಪಟ್ಟು ಸಂಗ್ರಹಿಸಿ, ಪರಿಷ್ಕರಿಸಿ, ಮುದ್ರಿಸಿ, ಪ್ರಸಾರ ಮಾಡಿದ ಅವರನ್ನು 'ವಚನ ಪಿತಾಮಹ' ಎನ್ನುತ್ತಾರೆ. ವಿಜಾಪೂರಕ್ಕೆ ಹೋದ ಸಂದರ್ಭದಲ್ಲಿ ಅವರನ್ನು ಕಾಣಲು ಬಂದ ಶ್ರೀಗಳು ಟಾಂಗಾ ತೆಗೆದುಕೊಂಡು ಹೊರಟರು. ಮನೆಯ ಒಳಗೆ ಹಳಕಟ್ಟಿಯವರು ತಮ್ಮ ಹರಿದ ಧೋತರವನ್ನು ಹೊಲಿಯುತ್ತ ಕುಳಿತಿದ್ದರು. ಅಲ್ಲಿನ ಒಟ್ಟು ದೃಶ್ಯ ಅವರ ಆರ್ಥಿಕ ದುಸ್ಥಿತಿಗೆ ದಟ್ಟ ಸಾಕ್ಷಿಯಾಗಿತ್ತು. ಹರಕು ಚಾಪೆಯ ಮೇಲೆ ಸ್ವಲ್ಪ ಹೊತ್ತು ಕುಳಿತು, ಈಗ ಬರುತ್ತೇನೆಂದು ಹೇಳಿ ಹೋದರು. ಶರಣ ಹಳಕಟ್ಟಿಯವರಿಗೆ ಬೇಕಾದ ಹೊಸ ಅರಿವೆ, ವಸ್ತ್ರ, ಕಾಳು ಖರಿದಿಸಿ ಕೊಟ್ಟು ಬಂದರು. ಹಳಕಟ್ಟಿಯವರ ತ್ಯಾಗಮಯ ಬದುಕು, ಸಂಶೋಧನೆ, ಸಾಧನೆ ಹಾಗೂ ಅವರು ಕನ್ನಡಿಗರಿಗೆ ಮಾಡಿದ ಉಪಕಾರವನ್ನು ಕುರಿತು ನಾಗನೂರಿನ ಭಕ್ತರೆದುರು ವಿವರಿಸಿದರು.

ನಾಗನೂರು ಹಾಗೂ ಬೆಳಗಾವಿ ಭಕ್ತರು ಕೂಡಿ ಹಳಕಟ್ಟಿಯವರಿಗಾಗಿ ಐದು ಸಾವಿರಕ್ಕೂ ಹೆಚ್ಚು ಹಣ ಸಂಗ್ರಹಿಸಿದರು. ಧಾರವಾಡ ನವಕಲ್ಯಾಣಮಠದ ಶ್ರೀ ಕುಮಾರ ಸ್ವಾಮಿಗಳ ಸಾನಿಧ್ಯದಲ್ಲಿ ೪-೧೨-೧೯೫೬ ರಂದು ಸಮಾರಂಭ ಏರ್ಪಡಿಸಿ, ಹಳಕಟ್ಟಿಯವರನ್ನು ಗೌರವಿಸಿ ನಿಧಿ ಅರ್ಪಿಸಿದರು.

ಬೆಳಗಾವಿ ಜಿ.ಎ. ಹೈಸ್ಕೂಲಿನ ಪ್ರಾಚಾರ್ಯ ಶ್ರೀ ಎಸ್. ಡಿ. ಇಂಚಲ ಖ್ಯಾತ ಕವಿಗಳು, ಬೆಳಗಾವಿ ಪರಿಸರದ ಕನ್ನಡಪರ ಚಟುವಟಿಕೆಗಳಲ್ಲಿ ಅವರದು ಕ್ರಿಯಾಶೀಲ ಪಾತ್ರ. ಅವರು ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿ ವಿಜೇತ ಶಿಕ್ಷಕರು ಅಂದಿನ ಸಮಾರಂಭದಲ್ಲಿ ಎಸ್.ಡಿ. ಇಂಚಲ ಅವರನ್ನು ಸತ್ಕರಿಸಲಾಯಿತು.

ಡಾ. ಆರ್. ಸಿ. ಹಿರೇಮಠ ಕನ್ನಡದ ಖ್ಯಾತ ವಿದ್ವಾಂಸರು, ಭಾಷಾ ವಿಜ್ಞಾನಿಗಳು, ಲಿಂಗರಾಜ ಕಾಲೇಜಿನಲ್ಲಿ ಎಂ.ಎ. ಫೆಲೋ ಆಗಿ ಓದಿ, ಪರೀಕ್ಷೆಗಾಗಿ, ಮುಂಬಯಿಗೆ ಹೊರಟಾಗ ಶಿವಬಸವ ಸ್ವಾಮೀಗಳು ಅವರನ್ನು ಕಂಡು ಆಶೀರ್ವಾದ ಬಯಸಿದರು. ಶ್ರೀಗಳು ಹಣ್ಣು-ಹೂವು ನೂರೊಂದು ರೂಪಾಯಿಗಳನ್ನು ನೀಡಿ ಆಶೀರ್ವದಿಸಿದರು. "ಚೆನ್ನಾಗಿ ಓದಿರಿ, ಚೆನ್ನಾಗಿ ಬರೆಯಿರಿ, ಒಳ್ಳೆಯ ಫಲಿತಾಂಶ ತನ್ನಿರಿ" ಹಣದ ಕೊರತೆಯಾದರೆ ನಮಗೆ ತಾರು ಕೊಡಿರಿ. ಕಾಳಜಿ ಮಾಡಬೇಡಿರಿ" ಎಂದು ತುಂಬು ಹೃದಯದಿಂದ ಆಶೀರ್ವದಿಸಿ ಬೀಳ್ಕೊಟ್ಟರು.

ಶಿವಬಸವ ಸ್ವಾಮಿಗಳಿಗೆ ಕನ್ನಡ ಕಾರ್ಯಕರ್ತರ ಬಗೆಗೆ ಅಪಾರವಾದ ಪ್ರೀತಿವಾತ್ಸಲ್ಯ ಹಾಗೂ ಅಭಿಮಾನ. ಬೆಳಗಾವಿಯ ಸಿದ್ಧನಗೌಡ ಪಾಟೀಲರು ಕನ್ನಡ ಅಭ್ಯರ್ಥಿಯಾಗಿ ನಗರಸೇವಕರೆಂದು ಆಯ್ಕೆ ಹೊಂದಿದ್ದರು. ಒಂದು ದಿನ ಬೆಳಗಿನ ಜಾವ ಆರುಗಂಟೆಗೆ ಶ್ರೀಗಳು ಸಿದ್ದನಗೌಡರ ಮನೆಗೆ ತೆರಳಿ ಸಿದ್ದನಗೌಡರನ್ನು ಅಭಿನಂದಿಸಿ ಆಶೀರ್ವದಿಸಿದರು. ಹದಿನೈದು ದಿನಗಳು ಕಳೆದವು. ಸಿದ್ಧನಗೌಡರು ಅನಿರೀಕ್ಷಿತ ಬೆಳವಣಿಗೆಯ ಫಲವಾಗಿ ಬೆಳಗಾವಿ ಮಹಾನಗರ ಸಭೆಯ ಕನ್ನಡದ ಪ್ರಪ್ರಥಮ ಮೇಯರ್ ಆಗಿ ಆಯ್ಕೆಗೊಂಡು ಹೊಸ ಇತಿಹಾಸ ಬರೆದರು.

ಸಾಹಿತಿ, ಕಲಾವಿದರ ಬಗೆಗೆ ಸ್ವಾಮಿಗಳವರಿಗೆ ತುಂಬ ಕಾಳಜಿ. ಬೆಳಗಾವಿಗೆ ಬರುತ್ತಿದ್ದ ಕಲಾವಿದರನ್ನು ಕರೆಸಿ ಗೌರವಿಸಿ, ಪ್ರೋತ್ಸಾಹಿಸುತ್ತಿದ್ದರು. ಕರ್ನಾಟಕ ವೃತ್ತಿ, ರಂಗಭೂಮಿಯ ಹೆಸರಾಂತ ಕಲಾವಿದ ಏಣಗಿ ಬಾಳಪ್ಪನವರಿಗೆ 'ನಾಟ್ಯಭೂಷಣ ಪ್ರಶಸ್ತಿ' ಬಂದ ಸಂದರ್ಭ. ಕನ್ನಡ ನಾಡಿನಾದ್ಯಂತ ಜಗಜ್ಯೋತಿ ಬಸವೇಶ್ವರ ನಾಟಕವನ್ನು ಪ್ರದರ್ಶಿಸಿ ದಾಖಲೆ ನಿರ್ಮಿಸಿದ ಬಾಳಪ್ಪನವರನ್ನು ಶ್ರೀ ಮಠಕ್ಕೆ ಬರಮಾಡಿಕೊಂಡು ಗೌರವಿಸಿ ಆಶೀರ್ವದಿಸಿದರು.

ಶಾಲೆ, ಕಾಲೇಜು, ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ ಸ್ವಾಮಿಗಳು ಬೆಂಗಳೂರಿನಲ್ಲಿ ಕಲ್ಯಾಣ ಕೇಂದ್ರವೊಂದನ್ನು ಸ್ಥಾಪಿಸಿದರು. ಸ್ಪರ್ಧಾತ್ಮಕ ಪರೀಕ್ಷೆಗೆ ಓದುವ ವಿದ್ಯಾರ್ಥಿಗಳಿಗೆ ಅದು ತುಂಬ ಅನುಕೂಲವಾಯಿತು. ವಿದ್ಯಾರ್ಥಿಗಳಿಗೆ ಬೆಂಗಳೂರಿಗಿಂತ ದೆಹಲಿಯಲ್ಲಿ ಶ್ರೇಷ್ಠ ಮಟ್ಟದ ತರಬೇತಿ ನೀಡಲಾಗುತ್ತದೆಯೆಂಬುದನ್ನು ತಿಳಿದುಕೊಂಡ ಸ್ವಾಮಿಗಳು ಆ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದರು. ಅವರ ಪ್ರಯತ್ನದ ಫಲವಾಗಿ ದೆಹಲಿಯಲ್ಲಿ ರುದ್ರಾಕ್ಷಿಮಠದ ಕಲ್ಯಾಣ ಕೇಂದ್ರವು ಆರಂಭ ವಾಯಿತು. ಧಾರವಾಡ, ಬೆಳಗಾವಿಗಳಲ್ಲೂ ಅಂಥ ಕೇಂದ್ರಗಳು ಅಸ್ತಿತ್ವಕ್ಕೆ ಬಂದವು.

ತಾವು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳೊಂದಿಗೆ ಇತರ ಸಂಸ್ಥೆಗಳನ್ನು ಪ್ರೋತ್ಸಾಹಿಸಿ, ಪ್ರಗತಿಪಥದತ್ತ ಮುನ್ನಡೆಸಿದ್ದು ಶಿವಬಸವ ಸ್ವಾಮಿಗಳ ಉದಾತ್ತತೆಗೆ ಉಜ್ವಲ ಉದಾಹರಣೆಯಾಗಿದೆ. ವಿರಕ್ತರ ವಿಶ್ವವಿದ್ಯಾಲಯವೆನಿಸಿದ ಶಿವಯೋಗಮಂದಿರ ಶ್ರೀಗಳ ಮಾತೃ ಸಂಸ್ಥೆ. ೧೯೪೮ ರಿಂದ ೫೬ ರ ವರೆಗೆ ಅದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ ಶ್ರೀಗಳು, ಅದು ಆರ್ಥಿಕವಾಗಿ ಚೇತರಿಸಿಕೊಳ್ಳುವಂತೆ ಮಾಡಿದರು. ೧೯೬೧ ರಿಂದ ೧೯೬೬ರ ವರೆಗೆ ಘಟಪ್ರಭೆಯ ಶ್ರೀ ಗುರುಸಿದ್ಧೇಶ್ವರ ಆಸ್ಪತ್ರೆಯ ಅಧ್ಯಕ್ಷರಾಗಿ, ಬೆಳಗಾವಿಯ ನಿವೃತ್ತ ಜಿಲ್ಲಾಧಿಕಾರಿ ಡಾ. ಶೇಖ ಅವರು ಸ್ಥಾಪಿಸಿದ ಹೋಮಿಯೋಪಥಿ ಕಾಲೇಜಿನ ವಿಶ್ವಸ್ತ ಮಂಡಳಿಯ ಗೌರವ ಅಧ್ಯಕ್ಷರಾಗಿ ಶ್ರೀಗಳದು ಗಮನಾರ್ಹ ಸೇವೆ. ೧೯೬೬ರಲ್ಲಿ ಶಿವಯೋಗಮಂದಿರ ಆರ್ಥಿಕವಾಗಿ ಸಂಕಷ್ಟ ಕ್ಕೀಡಾಯಿತು. ಎರಡನೆಯ ಬಾರಿ ಅದರ ಅಧ್ಯಕ್ಷರಾಗಿ, ನಿಸ್ಪೃಹ ಸೇವೆ ಸಲ್ಲಿಸಿ, ಶಿವಯೋಗ ಮಂದಿರಕ್ಕೆ ಕಾಯಕಲ್ಪ ಒದಗಿಸಿದರು.

ಶಿವಬಸವಸ್ವಾಮಿಗಳು ಉಜ್ವಲ ದೇಶಾಭಿಮಾನಿಗಳು. ಸ್ವಾಮಿಗಳು ಹುದಲಿಗೆ ಆಗಮಿಸಿದ ರಾಷ್ಟ್ರಪಿತ ಗಾಂಧೀಜಿಯವರನ್ನು ಕಂಡರು. ಜಾತ್ಯತೀತ ದೃಷ್ಟಿಯ ಶ್ರೀಗಳು ವಿದ್ಯಾರ್ಥಿಗಳ ಶೀಲ-ಚಾರಿತ್ರ್ಯಗಳ ಅಭಿವೃದ್ಧಿಗೆ ಶ್ರದ್ಧೆಯಿಂದ ಶ್ರಮಿಸುತ್ತಿರುವುದನ್ನು ತಿಳಿದು ಗಾಂಧೀಜಿ ತುಂಬ ಮೆಚ್ಚಿಕೊಂಡರು. ಗಾಂಧೀಜಿ ಭೆಟ್ಟಿ ನಂತರ ಸ್ವಾಮಿಗಳು ಖಾದೀ ಧರಿಸುವುದನ್ನು ವ್ರತವಾಗಿ ಸ್ವೀಕರಿಸಿದರು. ಸ್ವಾತಂತ್ರ್ಯಯೋಧರಿಗೆ ಆಶ್ರಯವಿತ್ತ ಅವರು ರಾಷ್ಟ್ರೀಯ ಚಳವಳಿಗಾರರೊಂದಿಗೆ ಸಂಪರ್ಕವಿಟ್ಟುಕೊಂಡ ಕಾರಣ ಬ್ರಿಟಿಶರ ಕೋಪಕ್ಕೆ ತುತ್ತಾದರು. ಸ್ವಾಮಿಗಳನ್ನು ಬಂಧಿಸುವ ಸುದ್ದಿ ಹಬ್ಬಿತು. ಅವರು ಭೂಗತರಾದರು. ಹೇಗೋ ರೈಲಿನಲ್ಲಿ

ಬ್ಯಾಡಗಿಗೆ ಹೋಗಿ, ಸಾಗರದ ಮೂಲಕ ಕೆಳದಿಯನ್ನು ತಲುಪಿ ಅಲ್ಲಿನ ಮಠದಲ್ಲಿ ಆಶ್ರಯ ಪಡೆದರು. ೧೯೪೭ರ ಆರಂಭದಲ್ಲಿ ಚಳವಳಿಗಾರರ ಬಂಧನಸತ್ರ ನಿಂತೊಡನೆ ಬೆಳಗಾವಿಗೆ ವಾಪಸಾದರು.

ಆಗಲೇ ರುದ್ರಾಕ್ಷಿಮಠದ ಕಟ್ಟಡ ತುಂಬ ಜೀರ್ಣಗೊಂಡಿತ್ತು. ೧೯೫೬ ರಲ್ಲಿ ಕಟ್ಟಡದ ಜೀರ್ಣೋದ್ಧಾರವನ್ನು ಆರಂಭಿಸಿದರು. ಒಂದು ವರ್ಷದ ಅವಧಿಯಲ್ಲಿ ಅದಕ್ಕೆ ಹೊಸ ಸ್ವರೂಪ ಕೊಟ್ಟರು.ಶಿವಬಸವಸ್ವಾಮಿಗಳು ಸಂಸ್ಕೃತ ಅಭ್ಯಸಿಸಿದ್ದು ಶಿವಯೋಗ ಮಂದಿರದಲ್ಲಿ. ಸಂಸ್ಕೃತದಲ್ಲಿ ಧರ್ಮ, ತತ್ವಜ್ಞಾನ, ಸಾಹಿತ್ಯ, ಶಾಸ್ತ್ರ ಮೊದಲಾಗಿ ಹತ್ತು ಹಲವು ವಿಷಯಕ್ಕೆ ಸಂಬಂಧಿಸಿದ ಜ್ಞಾನವಿದೆ. ತಮ್ಮಲ್ಲಿ ಓದುವ ವಿದ್ಯಾರ್ಥಿಗಳು ಆ ಜ್ಞಾನವನ್ನು ಪಡೆಯಬೇಕೆಂಬ ಹಂಬಲದಿಂದ ೧೯೬೨ರಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಪಾಠಶಾಲೆಯನ್ನು ಆರಂಭಿಸಿ ಬೆಳಗಾವಿಯಲ್ಲಿದ್ದ ಆ ಕೊರತೆಯನ್ನೂ ನಿವಾರಿಸಿದರು.

ಪ್ರಸಾದ ನಿಲಯದಲ್ಲಿ ಗ್ರಂಥಭಂಡಾರದ ಸ್ಥಾಪನೆ ಸ್ವಾಮಿಗಳವರ ಹೊಸ ಯೋಜನೆ. ಮಹಾದಾನಿ ಭೂಮರಡ್ಡಿ ಬಸಪ್ಪ ನವರಿಂದ ಉದ್ಘಾಟನೆಗೊಂಡ ಈ ಗ್ರಂಥಾಲಯದಲ್ಲಿ ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಪೂರಕವಾಗಬಲ್ಲ ಸಾವಿರಾರು ಗ್ರಂಥಗಳಿವೆ. ಮಹಿಳೆಯರು ಓದಬೇಕು, ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಬೇಕು ಎಂಬ ಇಚ್ಛೆ ಶ್ರೀಗಳದು. ಅವರಿಗೆ ಅಂಥ ಒಂದು ಸಂಘಟನೆಯ ಅಗತ್ಯವನ್ನು ಮನಗಂಡು ಅಕ್ಕನ ಬಳಗವನ್ನು ಕಟ್ಟಿದರು. ಹನುಮನ ಬೀದಿಯ ಪ್ರಸಾದ ನಿಲಯಕ್ಕೆ ಹೊಂದಿಕೊಂಡಂತೆ ಅಕ್ಕನ ಬಳಗದ ಕಟ್ಟಡವನ್ನು ನಿರ್ಮಿಸಿ ಹೆಣ್ಣುಮಕ್ಕಳು ಏರ್ಪಡಿಸುವ ಕಾರ್ಯಗಳಿಗೆ ಅನುಕೂಲ ಕಲ್ಪಿಸಿದರು.

ಡಾ. ಸ. ಜ. ನಾಗಲೋಟಿಮಠ ಪ್ರಸಿದ್ಧ ವೈದ್ಯರು. ಸಾಹಿತಿಗಳು ಶ್ರೀಗಳೊಂದಿಗೆ ಅವರದು ತುಂಬ ಆತ್ಮೀಯ ಒಡನಾಟ, ಬೆಳಗಾವಿಯಲ್ಲೊಂದು ವಿಜ್ಞಾನ ಕೇಂದ್ರವನ್ನು ಸ್ಥಾಪಿಸಬೇಕೆಂಬುದು ಅವರ ಕನಸು. ಶ್ರೀಗಳ ಎದುರು ಅದನ್ನು ಪ್ರಸ್ತಾಪಿಸಿ ನಿವೇಶನ ನೀಡಿ ಆಶೀರ್ವದಿಸಲು ಪ್ರಾರ್ಥಿಸಿದರು. ವಿಜ್ಞಾನದ ಮಹತ್ವವನ್ನು ಅರಿತುಕೊಂಡಿದ್ದ ಸ್ವಾಮಿಗಳು, ಶಿವಬಸವನಗರದಲ್ಲಿನ ವಿಶಾಲ ಪ್ರದೇಶದಲ್ಲಿ ಒಂದು ಎಕರೆ ನಿವೇಶನ ನೀಡಿ ವಿಜ್ಞಾನ ಕೇಂದ್ರಕ್ಕೆ ಚಾಲನೆ ನೀಡಿದರು. ಅದರ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರ ವಹಿಸಿದರು.

ನಾಗನೂರಿನಂಥ ಚಿಕ್ಕ ಗ್ರಾಮದ ಬಡಮಠವೊಂದರ ಸ್ವಾಮಿತ್ವವನ್ನು ಪಡೆದುಬಂದ ಶಿವಬಸವ ಸ್ವಾಮಿಗಳು ೬೬ ವರ್ಷಗಳ ಸುದೀರ್ಘ ಅವಧಿಯಲ್ಲಿ ಮಾಡಿದ ಕಾರ್ಯ ಅಗಾಧವಾದುದು. ಇದು ಸಾರ್ವಕಾಲಿಕ ದಾಖಲೆಯೇ ಸರಿ. ಗಡಿನಾಡಿನ ಬೆಳಗಾವಿಯಲ್ಲಿ ಕನ್ನಡ ವಾತಾವರಣ ಮೂಡಿಸುವಲ್ಲಿ, ಶೈಕ್ಷಣಿಕ ಅಭಿವೃದ್ಧಿ ಸಾಧಿಸುವಲ್ಲಿ, ಸಾಮಾಜಿಕ–ಸಾಹಿತ್ಯಿಕ–ಸಾಂಸ್ಕೃತಿಕ –ಧಾರ್ಮಿಕ ಜಾಗೃತಿ ಮೂಡಿಸುವಲ್ಲಿ ಶ್ರೀಗಳ ಪರಿಶ್ರಮ ಅನನ್ಯ. ಅವರದು ಅನುಪಮ ಸೇವೆ.

### ಸೇವೆಗೆ ಸಂದ ಗೌರವ

ಅನ್ನದಾಸೋಹ, ಜ್ಞಾನದಾಸೋಹಗಳೊಂದಿಗೆ ಶಿವಬಸವ ಸ್ವಾಮಿಗಳ ಕನ್ನಡದ ಕೆಲಸ ಮಾಡುತ್ತ ಹಣ್ಣಾದರು. ಸಮಾಜ ಸೇವೆಗೆ ತಮ್ಮನ್ನೇ ಅರ್ಪಿಸಿಕೊಂಡಿದ್ದ ಶ್ರೀಗಳಿಗೆ ನೂರು ತುಂಬಿತು. ಸ್ವಾಮಿಗಳವರ ಒಟ್ಟು ಸೇವೆಯನ್ನು ಕರ್ನಾಟಕ ವಿಶ್ವವಿದ್ಯಾಲಯ ಗುರುತಿಸಿತು. ೨೨–೧೨–೧೯೮೯ ರಂದು ಶ್ರೀಗಳಿಗೆ ಗೌರವ ಡಾಕ್ಟರೇಟ್ (Doctor of letters) ಪದವಿ ನೀಡಿದ ವಿಶ್ವವಿದ್ಯಾಲಯ ಸ್ವಾಮಿಗಳವರನ್ನು ಗೌರವಿಸಿ ತನ್ನ ಘನತೆಯನ್ನು ಹೆಚ್ಚಿಸಿಕೊಂಡಿತು.

ಕನ್ನಡನಾಡು ನುಡಿಗಳಿಗೆ ಸೇವೆ ಸಲ್ಲಿಸಿದವರಿಗೆ ನೀಡುವ ಕರ್ನಾಟಕ ಸರಕಾರದ ಪ್ರತಿಷ್ಠಿತ ರಾಜ್ಯೋತ್ಸವ ಪ್ರಶಸ್ತಿ (೧೯೯೨) ಸ್ವಾಮಿಗಳವರಿಗೆ ಬಂದಿತು.

### ಕಾಯಕಯೋಗಿಗೆ ಶತಮಾನದ ಸಂಭ್ರಮ

ಶಿವಬಸವ ಸ್ವಾಮಿಗಳು ಕಾಯಕಯೋಗಿಗಳೆಂದೇ ಹೆಸರಾದವರು. ಕಾಯಕ ಅವರಿಗೆ ಯೋಗವಾಗಿತ್ತು. ಶಿವಯೋಗ ವಾಗಿತ್ತು. ಕನ್ನಡದ ಕಾಯಕವಂತೂ ಅವರಿಗೆ ಎಲ್ಲಿಲ್ಲದ ಸಂತಸ ನೀಡುತ್ತಿತ್ತು. ಸಾಮಿಗಳಿಗೆ ನೂರು ವರ್ಷ ತುಂಬಿದ ಸಂದರ್ಭ. ಎಲ್ಲೆಡೆ ಸಂಭ್ರಮದ ವಾತಾವರಣ ೧೯೮೯ ನವ್ಹೆಂಬರ್ ತಿಂಗಳಲ್ಲಿ ನಾಗನೂರಿನ ಭಕ್ತಸಮುದಾಯವು ಅತಿ ವಿಜೃಂಭಣೆಯಿಂದ ಶತಮಾನೋತ್ಸವ ಆಚರಿಸಿತು. ಬೆಳಗಾವಿಯಲ್ಲಿಯೂ ೧೯೯೦ ರ ಫೆಬ್ರುವರಿಯಲ್ಲಿ ಐದು ದಿನಗಳ ವಿಶೇಷ ಸಮಾರಂಭ.

ಶತಾಯುಷಿ ಕಾಯಕಯೋಗಿಯನ್ನು ಕಾಣಲು, ವಂದಿಸಲು, ಗುರುವಂದನೆ ಸಲ್ಲಿಸಿ ಕೃತಾರ್ಥರಾಗಲು, ಆಶೀರ್ವಾದ ಪಡೆದು ಧನ್ಯರಾಗಲು ನಾಡಿನ ನಾನಾ ಕಡೆಗಳಿಂದ ಭಕ್ತರು, ಅಭಿಮಾನಿಗಳು ಸಾಗರೋಪಾದಿ ಆಗಮಿಸಿದರು. ಕನ್ನಡ ಸಾಹಿತಿಗಳಿಗೆ, ಹೋರಾಟಗಾರರಿಗೆ, ಪತ್ರಕರ್ತರಿಗೆ, ಕಲಾವಿದರಿಗೆ, ಸಾಧಕರಿಗೆ, ಗೌರವ ಅಭಿನಂದನೆ ಸಲ್ಲಿಸುವ ಮೂಲಕ ಶತಮಾನೋತ್ಸವ ವನ್ನು ಸಂಭ್ರಮದಿಂದ ಆಚರಿಸಲಾಯಿತು. ಎಲ್ಲವೂ ಕನ್ನಡಮಯ ಕನ್ನಡ ಸಾಹಿತ್ಯ ಸಂಸ್ಕೃತಿಮಯ. ಬೆಳಗಾವಿ ಪತ್ರಕರ್ತರನ್ನು

ಮರಾಠಿ ದೈನಿಕ ತರುಣ ಭಾರತ ಪತ್ರಿಕೆಯ ಸಂಪಾದಕ ಬಾಬುರಾವ್ ಠಾಕೂರ್ ಅವರನ್ನು ಹಾಗೂ ನಾಡು ನುಡಿಗಳಿಗೆ ಸ್ಮರಣೀಯ ಸೇವೆಸಲ್ಲಿಸಿದ ಹಿರಿಯ ಪತ್ರಕರ್ತ ಡಾ. ಪಾಟೀಲ ಪುಟ್ಟಪ್ಪನವರನ್ನು ಸತ್ಕರಿಸಿ ಅಭಿನಂದಿಸಲಾಯಿತು. ಕನ್ನಡ ನಾಡಿನ ನಾಯಕರು, ಸಾಹಿತಿ–ಕಲಾವಿದರು, ಮಠಾಧೀಶರು–ಭಕ್ತರು ಹಾಗೂ ಅಭಿಮಾನಿಗಳು ಬೃಹತ್ ಸಂಖ್ಯೆಯಲ್ಲಿ ಸೇರಿದ್ದ ಸಮಾರಂಭ ಬೆಳಗಾವಿ ನೆಲದಲ್ಲಿ ಇತಿಹಾಸ ಬರೆಯಿತು.

### ಸದಾ ಸ್ಮರಣೀಯರು

ಇಪ್ಪತ್ತನೆಯ ಶತಮಾನದ ನಲವತ್ತರ ದಶಕದ ಬೆಳಗಾವಿ ಹಲವು ಬಗೆಯ ಸಂಕ್ರಮಣಗಳಿಗೆ ಒಳಗಾಗುತ್ತಿದ್ದ ಕಾಲ. ಕನ್ನಡಕ್ಕೆ ಕನ್ನಡಿಗರಿಗೆ ಕರ್ನಾಟಕಕ್ಕೆ ಅಡ್ಡಿ–ಆತಂಕ–ಅಪಾಯಗಳು ಕವಿದಿದ್ದ ಕಾಲ. ಬೆಳಗಾವಿಯ ಕನ್ನಡಿಗರು ಆಗ ಹೊಸ ಆಸಕ್ತಿಗಳಿಗೆ ಮೈಯೊಡ್ಡಲು ಸಿದ್ಧರಾಗುತ್ತಿದ್ದರು. ಸ್ವಾಮಿಗಳು ಆಗ ಬೆಳಗಾವಿಗೆ ಆಗಮಿಸಿದರು. ಕೆ.ಎಲ್.ಇ. ಸಂಸ್ಥೆಯವರು ಆಗ ಪದವಿ ಕಾಲೇಜನ್ನು ಆರಂಭಿಸಲು ಗಂಭೀರವಾಗಿ ಪ್ರಯತ್ನಿಸುತ್ತಿದ್ದರು. ಅದು ಬೆಳಗಾವಿ ಕನ್ನಡಿಗರ ಬದುಕಿನ ನಸುಕು. ಸ್ವಾಮಿಗಳಿಂದ ಪ್ರಸಾದ ನಿಲಯ ಆರಂಭಗೊಂಡ ಬೆನ್ನಿನಲ್ಲೇ ಲಿಂಗರಾಜ ಕಾಲೇಜು ಅಸ್ತಿತ್ವಕ್ಕೆ ಬಂದಿತು.

ಬೆಳಗಾವಿಯಲ್ಲಿ ನೆಲೆಸಿದ ಸ್ವಾಮಿಗಳು ಎಲ್ಲರೊಂದಿಗೆ ಒಂದಾಗಿ, ತಮ್ಮ ಕಾಯಕ ದಾಸೋಹಗಳಿಂದ ಜನತೆಯ ಮೇಲೆ ಪ್ರಭಾವ ಬೀರಿದರು. ವಿದ್ಯಾರ್ಥಿಗಳಷ್ಟೇ ಅಲ್ಲ, ಮಠಕ್ಕೆ ಸಾಮಾನ್ಯ ಜನರ ಬರು ಹೋಗುವಿಕೆ ಬೆಳೆಯಿತು. ಅಂತೆಯೇ ಸ್ವಾಮಿಗಳು ಆ ಜನ ಸಂಪರ್ಕವನ್ನೇ ತಮ್ಮ ಕಾಯಕದ ಹಾದಿಗೆ ಸೇತುವೆಯಾಗಿಸಿಕೊಂಡರು.

ತಾವು ಕನ್ನಡ ಕರ್ನಾಟಕಗಳ ಉದ್ಧಾರಕ್ಕೆ ಹೊರಟವರೆಂದು ಸ್ವಾಮಿಗಳು ಎಂದೂ ಭಾವಿಸಿರಲಿಲ್ಲ. ಪರಿಸ್ಥಿತಿ ಅವರನ್ನು ಹಾಗೆ ಸಜ್ಜುಗೊಳಿಸಿತು. ನಾಡು ನುಡಿಗಳ ಹಿತಕ್ಕೆ ಅಪಾಯವೊದಗಿದ ಸಂದರ್ಭದಲ್ಲಿ ಸ್ವಾಮಿಗಳು ಎಲ್ಲ ರೀತಿಯ ತ್ಯಾಗಕ್ಕೂ ಸಿದ್ಧರಾದರು. ಕನ್ನಡ ಚಳುವಳಿಗೆ ಬೆಂಬಲ ನೀಡಿದರು. ಅವರು ಎಲ್ಲಿಯೂ ಪ್ರತ್ಯಕ್ಷವಾಗಿ ಪಾಲ್ಗೊಳ್ಳಲಿಲ್ಲ. ವೇದಿಕೆ ಏರಲಿಲ್ಲ. ಮಾತನಾಡಲಿಲ್ಲ. ಎಲ್ಲವೂ ತೆರೆಯ ಮರೆಯಲ್ಲಿ. ಮೌನವಾಗಿದ್ದುಕೊಂಡೇ ಪ್ರೋತ್ಸಾಹಿಸಿದರು. ಅದು ಅವರ ಸಹಜ ಮಾರ್ಗವಾಗಿತ್ತು.

ಸ್ವಾತಂತ್ರ್ಯ ಆಂದೋಲನ ಸಂದರ್ಭದಲ್ಲಿ ಅವರು ಬ್ರಿಟಿಷರ ರೋಷಕ್ಕೆ ಗುರಿಯಾದರು. ಕರ್ನಾಟಕದ ಏಕೀಕರಣ ಸಂದರ್ಭದಲ್ಲಿ ಮರಾಠಿಗರ ದುರಾಕ್ರಮಣಕ್ಕೆ ತುತ್ತಾದರು. ಆದರೆ ಅವರು ಯಾವುದಕ್ಕೂ ಹಿಂದೇಟು ಹಾಕಲಿಲ್ಲ. ಅವರು ನಡೆದದ್ದೇ ದಾರಿಯಾಯ್ತು. ಆ ದೃಷ್ಟಿಯಿಂದ ಅವರೊಬ್ಬ ವೀರ ಸನ್ಯಾಸಿ. ಧೀಮಂತ ಯೋಗಿ.

ಸ್ವಾಮಿಗಳು ಒಬ್ಬ ದಾರ್ಶನಿಕರು–'ನೆಲೆ ಇದ್ರೆ ನೆಲ ಇರ್‍ತದೆ' ಎಂಬುದು ಸ್ವಾಮಿಗಳು ಅರಿತುಕೊಂಡ ಆತ್ಯಂತಿಕ ಸತ್ಯ. ಅದು ಬರಿ ಭೂಮಿ ಸೀಮೆಗೆ ಸಂಬಂಧಿಸಿದ್ದಲ್ಲ. ಕನ್ನಡ ನೆಲ ಸುರಕ್ಷಿತವಾಗಿ ಉಳಿ ಬೇಕು. ಅನ್ನುವ ದೂರದೃಷ್ಟಿ ಅವರದು.

ಅವರು ಮಮತಾಮಯಿ. ಕಷ್ಟದಲ್ಲಿದ್ದವರ ಬಗೆಗೆ ಅವರು ಕೇವಲ ಅಧರಾನುಕಂಪೆ ತೋರಲಿಲ್ಲ. ಆರ್ಥಿಕವಾಗಿ ನಿಕೃಷ್ಟ ಸ್ಥಿತಿಯಲ್ಲಿದ್ದ ಕನ್ನಡ ಸಾಹಿತಿಗಳನ್ನು ಕರೆಸಿಕೊಂಡು, ನಿಧಿ ಅರ್ಪಿಸಿ ಗೌರವಿಸಿದರು. ಕೆಲವರಿಗೆ ಅವರಿದ್ದಲ್ಲಿಗೇ ತೆರಳಿ ಸಹಾಯ ಸಲ್ಲಿಸಿದರು. ಸ್ವಾಮೀಜಿ ಏನೇ ಮಾಡಲಿ, ಅವರದೊಂದು ಛಾಪು ಅಲ್ಲಿ ಎದ್ದು ಕಾಣುತ್ತಿತ್ತು.

ಶಿವಬಸವ ಸ್ವಾಮಿಗಳು ಹುಟ್ಟಿದ್ದು ಲಿಂಗಾಯತರಾಗಿ ಬೆಳೆದದ್ದು ಕನ್ನಡಿಗರಾಗಿ, ಅವರು ಕಾವಿ ಧರಿಸಿ ಸಮಾಜವನ್ನು ಕಟ್ಟಿದರು. ಶಿಕ್ಷಣ ಸೌಲಭ್ಯ ಒದಗಿಸಿದರು. ಕನ್ನಡ ಮನಸ್ಸುಗಳನ್ನು ಒಂದುಗೂಡಿಸಿದರು. ಬೆಳಗಾವಿಯಲ್ಲಿ ಕನ್ನಡ ವಿಜೃಂಭಿಸುವಂತೆ ಮಾಡಿದರು. ಶಿಕ್ಷಣಕ್ಕಾಗಿ, ಕನ್ನಡಕ್ಕಾಗಿ, ಮಾಡಬೇಕೆಂಬ ದೃಢ ಮನಸ್ಸಿನಿಂದ ೧೯೩೦ರಲ್ಲಿ ಬೆಳಗಾವಿಗೆ ದಯಮಾಡಿಸಿದರು. ಅಖಂಡ ೬೨ ವರ್ಷಗಳ ಕಾಲ ಬೆಳಗಾವಿ ಪರಿಸರದಲ್ಲಿ ಉಳಿದರು. ತಮ್ಮ ಸರಳ ಹಾಗೂ ಸಹಜ ಇರುವಿಕೆಯಿಂದ ಎಲ್ಲರನ್ನೂ ಆಕರ್ಷಿಸಿದರು. ವಿಶಿಷ್ಟ ದುಡಿಮೆಯಿ ಂದ ಭಾರಿ ಪ್ರಭಾವ ಬೀರಿದರು. ಕನ್ನಡಿಗರ ದೊಡ್ಡ ಆಸ್ತಿಯಾದರು. ಸ್ವಾಮೀಗಳು ಬೆಳಗಾವಿಯವರಾದರು. ಬೆಳಗಾವಿ ಅವರದಾಯಿತು. ಅಂತೆಯೇ ಕನ್ನಡ ಕಾಯಕ ಜೀವಿಯಾಗಿ, ಕನ್ನಡ ಕಾಯಕಯೋಗಿಯಾಗಿ ಬದುಕಿದ ಅವರ ಬದುಕು ಇಂದಿಗೂ ಮಾದರಿಯಾಗಿ ಉಳಿದಿದೆ.

■■

## ಹಾನಗಲ್ಲ ಶ್ರೀ ಸದಾಶಿವ ಮಹಾಸ್ವಾಮಿಗಳು

• ಶ್ರೀ ಚನ್ನಬಸವ ಸೋಮನಾಥಶಾಸ್ತ್ರಿ ಹಿರೇಮಠ, ಇಟಗಿ

ಕಾಲ ಚಕ್ರದ ಕೊನೆ ಮೊದಲಂತೆ ಕಲಿಪುರುಷನ ಹಗಲಿರುಳಿನಂತೆ ಭಾರತಾಂಬೆಯ ಭಾಗ್ಯೋದಯದಿಂದ ಆಗಾಗ ಯುಗ ಯುಗಾಂತರದಿಂದಲೂ ಯುಗಪುರುಷರೂ, ಮಹಾ ಮನಸ್ವಿಗಳೂ, ಮಹಾ ಮಹಾ ಮಂತ್ರ ದ್ರಷ್ಟಾರರೂ, ಯೋಗಿ-ಶಿವಯೋಗಿಗಳೂ ಭಾರತ ಮಾತೆಯ ಪುಣ್ಯಗರ್ಭದಿಂದ ಉದಿಸಿ ಲೋಕವ ನಾಕಕ್ಕೆ ಹಿರಿದೆನ್ನುವಂತೆ ತೊಳಗಿ ಬೆಳಗಿ ಕೀರ್ತಿ ಜ್ಯೋತಿಗಳಾಗಿದ್ದಾರೆ. ಆಗುತ್ತಲಿದ್ದಾರೆ.

ಖಣಿಯಿಂದ ರತ್ನ, ಮೃಗದಿಂದ ಕಸ್ತೂರಿ, ಪುಷ್ಪದಿಂದ ಪರಿಮಳವು ಹೊರ ಹೊಮ್ಮುವಂತೆ ಮಹಾತ್ಮರ ಉದಯವು ಕಿರಿ ಹಳ್ಳಿಗಳಲ್ಲಿ ಮತ್ತು ಬಡತನದ ಮನೆತನದಲ್ಲಿ ಎಂಬುದು ಸರ್ವಶೃತ. ಅಂತೆಯೇ ಯುಗ ಪುರುಷ ಕಾರಣಿಕ ಪರಮ ಪೂಜ್ಯ ಲಿಂಗೈಕ್ಯ ಹಾನಗಲ್ಲ ಶ್ರೀ ನಿ.ಪ್ರ.ಕುಮಾರ ಶಿವಯೋಗಿ ಮಹಾಸ್ವಾಮಿಗಳಿಂದ ಸ್ಥಾಪಿತವಾದ ''ಶ್ರೀ ಮದ್ವೀರಶೈವ ಶಿವಯೋಗಮಂದಿರ'' ಸಂಸ್ಥೆಯ ಸರ್ವಮಾನ್ಯ ಸಂಚಾಲಕರೂ ಸೌಹಾರ್ದದಿಂದ ಪಾಲಕರೂ ಆಗಿರುವ ಹಾನಗಲ್ಲಿನ ವೀರ ವಿರಕ್ತಮಠಾಧೀಶರಾಗಿರುವ ಪರಮಪೂಜ್ಯ ಶ್ರೀ ನಿ.ಪ್ರ.ಸ್ವರೂಪಿ ಸದಾಶಿವ ಮಹಾಸ್ವಾಮಿಗಳವರ ಉದಯವು, ಧಾರವಾಡ ಜಿಲ್ಲೆಯ ಹುಬ್ಬಳ್ಳಿ ತಾಲೂಕಿನ ಅರಳಿಕಟ್ಟಿ ಎಂಬ ಹಳ್ಳಿಯಲ್ಲಿ ಆಯಿತು. ಆ ಅರಳಿಕಟ್ಟಿ ಚಿಕ್ಕ ಗ್ರಾಮದಲ್ಲಿ ಸದ್ಭಕ್ತಿ ಸದಾಚಾರ ಸಂಪನ್ನರೂ ಗುರು-ಲಿಂಗ-ಜಂಗಮ ಪ್ರಾಣಿಗಳೂ ಆದ ವೇ. ಶ್ರೀ ಗಂಗಯ್ಯನವರು ಅವರ ಧರ್ಮ ಪತ್ನಿಯಾದ ಸಾಧ್ವೀ ಶೀಲವತೀ ರಾಚಮ್ಮನವರ ಪವಿತ್ರ ಗರ್ಭ ಸುಧಾಂಬುಧಿಯಲ್ಲಿ ಇಶ್ವಿ ಸನ್ ಸಾವಿರದ ಒಂಬೈನೂರುಆರ (೧೯೦೬)ರಲ್ಲಿ ಬಾಂದಳದಲ್ಲಿ ಬಿದಿಗೆಯ ಚಂದ್ರನು ಉದಿಸಿ ಬಂದಂತೆ ಜನ್ಮ ತಾಳಿದರು. ಇವರಿಗೆ ತಾಯ್ತಂದೆಗಳು ಬಂಧು ಬಳಗದವರು ಮತ್ತು ಹಲವಾರು ಸುಮಂಗಲೆಯರು.

''ಭವರೋಗ ಕಳೆಯಲ್ಕೆ ಶಿವಯೋಗ ಬೆಳಸಲ್ಕೆ ಶಿವನಿಳೆಗೆ ಬಂದೆ ಜೋ ಜೋ ।<br>ಕವಿದಿರ್ದ ಕತ್ತಲೆಯ ಶಿವತೇಜೋ ಬಲದಿಂದ ಬೆಳಗಿ ಕಳೆಯಲು ಬಂದೆ<br>ಜೋ ಜೋ॥''

ಎಂದು ಮುಂತಾಗಿ ಮುದ್ದಿಕ್ಕಿ ಜೋಗುಳ ಹಾಡಿ ಶ್ರೀ ಗುರುವಿನಿಂ ಲಘು ದೀಕ್ಷೆಗೈದ ಶಿಶುವಂ ಕಣ್ಣಾನದುಂಬಿ ನೋಡಿದ ಒಳಗಣ್ಣಿನ ಶ್ರೀ ಗುರುಗಳು ಹೊಂಬೆಳಗಿನ ಈ ಶಿಶುವಿಗೆ ''ಚಂದ್ರಶೇಖರ'' ಎಂದು ಬಳಗದಿಂದೊಡಗೂಡಿ ನಾಮಕರಣ ಮಾಡಿದರು. ಕೆಲವೇ ದಿನಗಳಲ್ಲಿ ದೇವರ ಕೋಣೆಯಲ್ಲಿ ಶಿವ ತೇಜೋಮೂರ್ತಿ ಯಾದ ಚಂದ್ರಶೇಖರಯ್ಯನ ತಲೆಯ ಮೇಲೆ ಫಣಿರಾಜನು (ನಾಗರಾಜ) ಹೆಡೆ ಎತ್ತಿ ಲೀಲಾಜಾಲವಾಗಿ ಆನಂದದಿಂದ ಆಡತೊಡಗಿತ್ತು, ಇದನ್ನು ಕಂಡು ಮಾತಾಪಿತರು ಆಶ್ಚರ್ಯಚಕಿತರಾಗಿ ಭಯಭೀತರಾಗಿ, ಶಿವಸಂಕೇತದಂತೆ ೧೯೦೭ರಲ್ಲಿ ಭಿಕ್ಷಾಟನೆ ಗಾಗಿ ದಯಮಾಡಿಸಿದ ಶ್ರೀ ಶಿವಯೋಗಮಂದಿರದ ಸಂಸ್ಥಾಪಕರೂ, ದೀಪಕರೂ, ಪರಮ ಪರಂಜ್ಯೋತಿ ಸ್ವರೂಪರೂ ಆದ ಪೂಜ್ಯ ಕಾರಣಿಕ ಶ್ರೀ ನಿ.ಪ್ರ. ಕುಮಾರ ಶಿವಯೋಗಿಗಳಿದ್ದೆಡೆಗೆ ಧಾವಿಸಿ ಬಂದು ಸನ್ನಿಧಿಯಲ್ಲಿ ನಡೆದ ಘಟನೆಯನ್ನು ಅರಿಕೆ ಮಾಡಿಕೊಳ್ಳಲು, ಶ್ರೀಗಳವರು ಥಟ್ಟನೆ ''ಆತನಿಂದ ಲೋಕೋಪಕಾರವಾಗಬೇಕಾ ಗಿದೆ. ಸಮಾಜ ಜೀವಿಯಾಗಬೇಕಾಗಿದೆ ಮತ್ತು ಆ ಕೂಸು ನಿಮ್ಮದಾಗದೆ. ಶ್ರೀ ಗುರುವಿನದಾಗುವದು, ಶ್ರೀ ಗುರುವಾಗುವದು. ಸಮಾಜಜೀವಿ, ಸಮಾಜೋದ್ಧಾರಕ ವಸ್ತುವಾಗುವದು. ಆದ್ದರಿಂದ ಈ ಘಟನೆ ನಡೆದಿದೆ. ನೀವು ಅಂಜಬೇಡಿರಿ. ಅಂಥ ಪುಣ್ಯ ಪುರುಷನನ್ನು ಪಡೆದ ಗರ್ಭವೇ ಮಹಾ ಗರ್ಭ, ನೀವೆ ಭಾಗ್ಯಶಾಲಿಗಳು, ಧನ್ಯರು''. ಎಂದು ಆನಂದದಿಂದ ಆಶೀರ್ವದಿಸಿದರು. ದಿವ್ಯಜ್ಞಾನಿಗಳಾದ ಶ್ರೀ ಕುಮಾರ ಶಿವಯೋಗಿಶ್ವರರ ಅಮರವಾಣಿ ಎಂದಾದರೂ ಸುಳ್ಳಾದೀತೆ? ಅದೆಂದು ಸಾಧ್ಯ !

ಹತ್ತೊಂಬತ್ತುನೂರು ಹದಿನೈದು (೧೯೧೫)ರಲ್ಲಿ ಅಲ್ಲಿಯ ಮಠದ ಶಿಷ್ಯ ಪ್ರಮುಖರು ಶ್ರೀ ಚಂದ್ರಶೇಖರನನ್ನು ತಮ್ಮ ಊರ ಹಿರಿಯ ಮಠದ ಅಧಿಕಾರಿಯನ್ನಾಗಿಸಲು, ಹಾನಗಲ್ಲ ಕುಮಾರ ಶಿವಯೋಗಿಗಳವರ ಪಾದಾರವಿಂದಗಳಲ್ಲಿ

ಅರ್ಪಿಸಿದರು. ಆಗ ಮಹಾಶಿವಯೋಗಿಗಳು ಆತನ ಪೂರ್ವಾಶ್ರಮದ ಹೆಸರಿನ ಸ್ಥಾನದಲ್ಲಿ ಶ್ರೀ ರೇಣುಕಾರ್ಯನೆಂದು ನೂತನ ಪುಣ್ಯ ನಾಮವನ್ನು ದಯಪಾಲಿಸಿ ಅವರಿಗೆ ಅಧ್ಯಯನ, ಅನುಷ್ಠಾನಾದಿಗಳಿಂದ ಸರ್ವ ಸೌಹಾರ್ದ ಸೌಕರ್ಯಗಳಿಂದ ತರಬೇತು ಕೊಡಿಸಿದರು. ತತ್ಪರಿಣಾಮವಾಗಿ ಕನ್ನಡ-ಸಂಸ್ಕೃತ ಘನ ವಿದ್ವಾಂಸರೂ, ಶಿವಾನುಭವಿಗಳೂ ಶಿವಯೋಗಿ ಸಿದ್ಧರೂ ಆದ ಶ್ರೀ ವ್ಯಕ್ರನಾಳ ಪಟ್ಟಾಧ್ಯಕ್ಷರಿಂದ ವೀರ ಮಾಹೇಶ್ವರ ದೀಕ್ಷೆ ಪಡೆದರು. ಗಣಿಯಿಂದ ಹೊರ ಹೊಮ್ಮಿ, ಶಿಲ್ಪಿಯಿಂದ ಸಂಸ್ಕರಿಸಿದ ರತ್ನದಂತೆ ಮೇಧಾವಿ (ಜಾಣ) ಯಾದ ಈ ವಟುವು ಕನ್ನಡ, ಸಂಸ್ಕೃತ, ಸಂಗೀತ, ಚಿತ್ರಕಲೆಗಳಲ್ಲಿ ಪರಿಣತೆಯಿಂದ ಪಳಗಿದನು. ಈತನಲ್ಲಿರುವ ಸಹಜ ಶೀಲ ಸೌಜನ್ಯ ಶಾಂತಿ-ದಾಕ್ಷಿಣ್ಯಾದಿ ಗುಣಗಳನ್ನು ಕ್ರಮೇಣ ನಿರೀಕ್ಷಿಸಿ ಶ್ರೀ ಕುಮಾರ ಪರಂಜ್ಯೋತಿಃ ಪ್ರಭಾ ಹೊಂಗಿರಣ (ತಪೋನಿಧಿಗಳ ಪ್ರೇಮಾಂತಃಕರಣ) ಗಳು ಶ್ರೀಗಳ ಪ್ರಜ್ಞಾಂತಃ ಪಟಲದ ಮೇಲೆ ಸಂಪೂರ್ಣ ಬಿದ್ದಂತೆ ಪ್ರಕಾಂಡ ಪಂಡಿತರಿಂದ, ಸೂಜ್ಞರಿಂದ ಪದವಾಕ್ಯ-ಪ್ರಮಾಣಜ್ಞರೂ, ಶಿವಾನುಭಾವಿಗಳೂ ಆದ ಇವರು ಶ್ರೀ ಶಿವಯೋಗಿಯ ಕರುಣೆಯ ಪಡೆದು ಚಿದ್ಗುರುವಿನಿಂದ ಅನುಗ್ರಹಿತರಾಗಿ ''ಶ್ರೀ ರೇಣುಕ ದೇಶಿಕ''ರಾದರಲ್ಲದೆ; ಅಧ್ಯಯನವನ್ನು ಪುಷ್ಪದೊಳಗಿನ ಮಧುವಿಗೆರಗುವ ತುಂಬಿಯಂತೆ ಸದ್ವಿದ್ಯಾ ವ್ಯಸನಿ-ವ್ಯಾಸಂಗವನ್ನು ಮುಂದುವರಿಸುವದರೊಂದಿಗೆ ಶ್ರೀ ಶಿವಯೋಗಮಂದಿರದ ಕಾರ್ಯಭಾರವು ಚರಿತ್ರ ನಾಯಕನ ದಾಯಿತು. ಯಾವಾಗಲೂ ''ಬೆಳೆಯುವ ಸಿರಿಯ ಮೊಳಕೆಯಲ್ಲಿ ನೋಡು'' ಎಂಬಂತೆ ಮಹಾತ್ಮರ ಜೀವನದ ಉಜ್ವಲತೆಯು ಜ್ಯೋತಿ ಸ್ವರೂಪವಾಗಿ ಪ್ರಜ್ವಲಿಸುತ್ತಿತ್ತು.

ಹಾನಗಲ್ಲ ಮಠದ ಪರಮ ಗುರು ಶ್ರೀ ಕುಮಾರ ಪರಂಜ್ಯೋತಿಯ ಬೆಳಗು, ಮಹಾ ಬೆಳಗಿನಲ್ಲಿ ಬೆರೆದ ಬಳಿಕ ಉತ್ತರಾಧಿಕಾರ ಸ್ಥಾನಾಪನ್ನರಾದ ಪರಮಪೂಜ್ಯ ಶ್ರೀ ನಿ.ಪ್ರ. ಮಹೇಶ್ವರ ಮಹಾಸ್ವಾಮಿಗಳು ತಮ್ಮ ಅಂಗಕರಣಂಗಳನ್ನು ಲಿಂಗಕಿರಣಂಗಳನ್ನಾಗಿಸಿದ ಬಳಿಕ (ಲಿಂಗರೂಪಿಗಳಾದ ಬಳಿಕ) ಹಲವಾರು ಗಣ್ಯ ಪೂಜ್ಯರು ವಿಚಾರಿಸಿ ಮಠಗಳು ಮಹದರುವಿನ ಚಿದ್ವೆಳಕನ್ನೀಯುವ ಶಿವಾದ್ವೈತದ ಹೊಂಬೆಳಗಿನ ಹೊನಲನ್ನು ಹೊರಚಿಮ್ಮುವ ದೀಪಸ್ತಂಭಗಳು. ನಾಸ್ತಿಕರನ್ನು ಆಸ್ತಿಕರನ್ನಾಗಿ, ಮಾನವತೆಯಿಂದ ಮನಸ್ವಿಗಳನ್ನಾಗಿಸುವ, ಮಠದ ಪೀಠಗಳಿಗೆ ಯೋಗ್ಯತಾ ಸಂಪನ್ನರನ್ನೇ ಹುಡುಕುತ್ತಿರುವಾಗ ಶಿವಯೋಗ ಧಾಮದ ''ಶ್ರೀ ಶಿವಯೋಗ ಮಂದಿರದಲ್ಲಿ'' ಶಿವಯೋಗ ಸದಾಚಾರ ಸತತಾಭ್ಯಾಸದಲ್ಲಿ ಪಳಗಿದ ಕುಶಲ ಮತಿ-ಮೇಧಾವಿ ಗಳಾದ ''ಶ್ರೀ ರೇಣುಕ ದೇಶಿಕರನ್ನು'' ಆ ಮಠದ (ಹಾನಗಲ್ಲ ವಿರಕ್ತಮಠ) ಉತ್ತರಾಧಿಕಾರಿಗಳನ್ನಾಗಿ ಮಾಡಲು ಹುಬ್ಬಳ್ಳಿಯ ಮೂರು ಸಾವಿರಮಠದ ಅಂದಿನ ಜಗದ್ಗುರುಗಳಾದ ಲಿಂ. ಶ್ರೀ ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು, ನವಲಗುಂದದ ಲಿಂ. ಶ್ರೀ ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳು, ಗುತ್ತಲದ ಲಿಂ. ಶ್ರೀ ರುದ್ರಮುನಿ ಮಹಾಸ್ವಾಮಿಗಳು, ಶ್ರೀಮಾನ್ ದೇವಿಹೊಸೂರ ಶೆಟ್ಟರು ಇನ್ನುಳಿದ ಪ್ರಮುಖ ಸದ್ಭಕ್ತರ ಬಯಕೆಯಂತೆ ''ಶ್ರೀ ರೇಣುಕ ದೇಶಿಕರನ್ನು'' ಹಾನಗಲ್ಲಿನ ವಿರಕ್ತ ಪೀಠಾಧಿಕಾರಿಗಳನ್ನಾಗಿ ಮಾಡಿದರು. ಜಡೆಮಠದ ಲಿಂ. ಶ್ರೀ ನಿ.ಪ್ರ. ಸಿದ್ಧಬಸವ ಮಹಾಸ್ವಾಮಿಗಳವರಿಂದ, ಅಧಿಕಾರ ಪಡೆದು ವೇ. ಪಂ. ಸೋಮನಾಥ ಶಾಸ್ತ್ರಿಗಳು ಇಟಗಿ, ಗೊಗ್ಗೀಹಳ್ಳಿ ಸಂಸ್ಥಾನಮಠ ಅವರ ಪೌರೋಹಿತ್ಯದಲ್ಲಿ ಶೂನ್ಯ ಸಿಂಹಾನಾಧೀಶ ರಾದರು. ಕ್ರಿ.ಶ. ೧೯೩೭ ರಲ್ಲಿ ಆ ಶುಭ ಮಂಗಲ ಸಮಯಕ್ಕೆ ಪರಮ ಗುರುವಿನ ಮೊದಲ ಪುಣ್ಯನಾಮವಾದ ಶ್ರೀ ನಿ. ಪ್ರ. ಸದಾಶಿವ ಸ್ವಾಮಿಗಳೆಂದು ಅಭಿನವ ಅಭಿದಾನವಾಯಿತು.

ಪರಮಗುರು ಪರಮಾರಾಧ್ಯರಾದ ಶ್ರೀ ನಿ.ಪ್ರ. ಕುಮಾರ ಶಿವಯೋಗಿಗಳು ಸ್ಥಾಪಿಸಿದ ''ಶ್ರೀ ಮದ್ವೀರಶೈವ ಶಿವಯೋಗ ಮಂದಿರ''ದ ಶ್ರೇಯಸ್ಸಿಗಾಗಿ ತಮ್ಮ ಮಠವನ್ನು ಬದಿಗಿರಿಸಿ, ''ಲೋಕವೇ ನನ್ನ ಮಠ, ಮಾನವ ಕುಲಕೋಟಿಯ ಸರ್ವಾಂಗೀಣ ಶ್ರೇಯಸ್ಸೇ ನನ್ನ ಶ್ರೇಯಸ್ಸು'' ಎಂದು ಭಾವಿಸಿ ಆಧ್ಯಾತ್ಮ ತತ್ವಾಮೃತ ಪಿಪಾಸುಗಳ ನೆಲೆವೀಡಾದ ಋಷಿಪುಂಗವರ, ಮಹಾ ಶಿವಯೋಗಿಗಳ ತಪೋ ಧನವನ್ನು ಮಡಿಗಿಟ್ಟ ಭಾರತ ಹೃದಯ ಪೀಠದಂತಿರುವ ಶ್ರೀ ಶಿವಯೋಗಮಂದಿರವೆ ಮಹಾ ಮಠವೆಂದು ಭಾವಿಸಿ ಶಿವಯೋಗ ನಿದ್ರೆಯಲ್ಲಿ ಕಾಲಕಳೆಯುತ್ತ ''ಪ್ರತಿಯೊಬ್ಬ ವ್ಯಕ್ತಿಯೂ ಶಿವ ಭಾವನೆಯಿಂದ, ವ್ಯಕ್ತಿ-ವ್ಯಕ್ತಿಯೂ ''ಶಿವಯೋಗಮಂದಿರ''ವಾಗ ಬೇಕೆಂದು ಶ್ರೀ ಗುರು ಕುಮಾರೇಶನ ಹಿರಿಯಾಸೆಯಂತೆ ಅವರ ಆಶಯವೆಂಬ ದಾರಿ ದೀಪದ ಹೊಂಗಿರಣದ ಮುಂಬೆಳಗಿನಲ್ಲಿ ಸಹಜವಾಗಿ ಮುನ್ನಡೆಯುತ್ತ ಶಿವ- ಜೀವನದ ಹೂದೋಟದಲ್ಲಿ ಹೂಗಳಂತೆ ಅರಳುತ್ತಿರುವ ವಟು ಶಿವಯೋಗ ಸಾಧಕರಿಗೆ ಸಮಯೋಚಿತವಾಗಿ ಧರ್ಮದ ಸಮನ್ವಯದ ಸಾಹಿತ್ಯದ ತಿಳುವಳಿಕೆ ಯೊಂದಿಗೆ ಪಂಡಿತರಿಂದ ಕನ್ನಡ, ಸಾಹಿತ್ಯ, ಸಂಗೀತ-ನ್ಯಾಯ-ವ್ಯಾಕರಣ ವಚನ ವಾಙ್ಮಯ ರೂಪಷಡ್‌ರಸಾನ್ನಿತ್ವಮೃಷ್ಟಾನ್ನವನ್ನು ಉಣಿಸಿ ತಣಿಸುತ್ತ, ತಮ್ಮ ಜೀವನವನ್ನೇ ಅವರ ಆತ್ಮೋನ್ನತಿಗೆ ಮೀಸಲಾಗಿರಿಸಿ ಸತ್ಕಾರ್ಯ ಸನ್ಮಾರ್ಗದಲ್ಲಿ ಮುನ್ನಡೆಯುವಂತೆ ಸಮಾಜದ ಮೂಲ ಸ್ತಂಭಗಳಂತಿರುವ ಗುರು-ವಿರಕ್ತಮೂರ್ತಿಗಳನ್ನು ಭೇದ ಭಾವವಿಲ್ಲದೆ ಮಮತೆಯಿಂದ ತರಬೇತಿಗೊಳಿಸಿ, ಶಿವಯೋಗಿ, ವಟು, ಸಾಧಕರು ಆದರ್ಶ ಸಮಾಜ ಸುಧಾರಕರು, ಧರ್ಮ ಪ್ರಚಾರ ದುರಂಧರರು, ಶಿವಯೋಗದಲ್ಲಿ ಪಳಗಿದವರು (ಶಿವಯೋಗ

ಸಿದ್ಧರು) ಆಗಬೇಕೆಂಬ ಹಿರಿಯಾಸೆ ಶ್ರೀಗಳವರದು. ಆ ದಿಶೆಯಲ್ಲಿ (ವಟುಗಳ ಪುರೋಭಿವೃದ್ಧಿಗೆ) ತನು-ಮನ- ಧನವನ್ನೇ ಧಾರೆಯೆರೆದು ವಟು ಪಟುಗಳ ಮೂಲಕ ಶ್ರೀ ವೀರಶೈವ ಧರ್ಮವು ಅಷ್ಟೇ ಅಲ್ಲದೆ ಸರ್ವಧರ್ಮ ಸರ್ವಾಂಗ ಸುಂದರವಾಗಲಿ, ಮಾನವ ದೇವನಾಗಲಿ ಎಂಬ ಮಹದಾಶೆಯಿಂದ ಸತತವೂ ದುಡಿಯುತ್ತಿದ್ದಾರೆ. ಸಾಧಕರಿಗಾಗಿ ಆಗಾಗ ಪಾಕ್ಷಿಕ, ಮಾಸಿಕ, ವಾಕ್ ಸ್ಪರ್ಧೆಯನ್ನೇರ್ಪಡಿಸುತ್ತಿದ್ದಾರೆ. ಇದರಿಂದ ಆತ್ಮೋನ್ನತಿಗೆ ಆಧ್ಯಾತ್ಮ ತಾಯಿಯಂತೆ ವಟು ವಾತ್ಸಲ್ಯವು ಸಹಜವಾಗಿಯೇ ಎಷ್ಟಿದೆ ಎಂಬುದು ರವಿ ಪ್ರಕಾಶದಂತೆ ಸ್ಪಷ್ಟವಾಗುವದು.

ಪರೋಪಕಾರವೇ ಮಹಾತ್ಮರ ಜನ್ಮಸಿದ್ಧ ಗುಣವಾಗಿರುವದು. ಅದು ನಿಜ. ಅಂತೆಯೇ ''ಜನಸೇವೆಯೇ ಶಿವನ ಸೇವೆ, ದೇಶ ಸೇವೆಯೇ ಈಶ ಸೇವೆ'' ಎಂಬುದನ್ನು ಮನಗಂಡು ತಮ್ಮ ಸರ್ವಸ್ವವನ್ನೆ ಪರರ ಕಲ್ಯಾಣಕ್ಕಾಗಿ ಮೀಸಲಾಗಿರಿಸಿದ್ದಾರೆ. ಶ್ರೀಗಳು ಸಮಾಜದಲ್ಲಿ ನಡೆಯತಕ್ಕ ಅನ್ಯಾಯ, ಅನಾಚಾರ, ಅತ್ಯಾಚಾರಗಳನ್ನು, ಉಚ್ಛೃಂಖಲ ವಿಚಾರಗಳನ್ನು ಕಂಡು ಕನಿಕರಬಟ್ಟು, ಸಮಾಜವನ್ನು ಚೇತರಿಸಲು, ಎಚ್ಚರಿಸಲು ತಮ್ಮ ಅಮೋಘ ಜ್ಞಾನಜ್ಯೋತಿಯನ್ನು ಹೊರ ಹೊಮ್ಮಿಸಿ, ಅವರಲ್ಲಿರುವ ಮೂಢ ನಂಬುಗೆಯ ಹೋಗಲಾಡಿಸಿ ಓಂಕಾರಸ್ವರೂಪವಾದ ಶಿವಾದ್ವೈತ, ಶಕ್ತಿವಿಶಿಷ್ಟಾದ್ವೈತ ರೂಪವಾದ ಷಡಕ್ಷರಿ ಮಹಾ ಮಂತ್ರಾರ್ಥರೂಪ ವಾದ ''ಇಷ್ಟಲಿಂಗ''ವನ್ನು ಪೂಜಿಸಲು ಮೃದು ಮಧುರ ಸದುಕ್ತಿಗಳಿಂದ ಸಲಹೆ-ಸೂಚನೆಗಳನ್ನು ನೀಡಿ ಜನರನ್ನು ಎಚ್ಚರಿಸುತ್ತಾರೆ.

ಬಾಹ್ಯಾಚಾರಿ ಶ್ರೇಷ್ಠ ಲಿಂಗಾರ್ಚನಾರೂಪ ಕ್ರಿಯೆಗಳು ಅತ್ಯವಶ್ಯವು. ನಿಜವಾದ ಶಕ್ತಿಯ ಕೇಂದ್ರ ಸೂಕ್ಷ್ಮ-ಕಾರಣಗತ ಪ್ರಾಣ-ಭಾವಗಳೇ ಅಲ್ಲ ಸ್ಥೂಲಾಂಗಗತ ''ಇಷ್ಟಲಿಂಗ''ವೂ ಅಹುದು. ಮನಸ್ಸು ಮೂರ್ತವಸ್ತು ನಿರಾಕಾರ ವಸ್ತುವನ್ನು ಗ್ರಹಿಸದು. ಸ್ಥೂಲೇಂದ್ರಿಯಗಳಿಗೆ ಗೋಚರ ಗ್ರಾಹ್ಯವಾಗಬೇಕಾದರೆ ಇಷ್ಟಲಿಂಗೋಪಾಸನೆ'' ಬೇಕೇ ಬೇಕು. ಹಾಲು ಹೆಪ್ಪು ಗಟ್ಟಿ ಸ್ಥೂಲವಾದಾಗ ಅದರ ಶಕ್ತಿ ಸಣ್ಣದೇ ? ಸಂಸ್ಕಾರದಿಂದ ಬೆಣ್ಣೆ, ಸಂಸ್ಕಾರದಿಂದ ತುಪ್ಪ, ಅದರ ಮಾಧುರ್ಯ ಸಾಲದೆ ಸಣ್ಣದೇ ? ಬೀಜ ಮೊಳೆತು ಬೆಳೆದು ಹಣ್ಣಾಗಿ ನಿಂತಾಗ ಕೇವಲ ಬೀಜಕ್ಕಿಂತ ಹಣ್ಣು ಕಡಿಮೆಯೇನು ? ಬೀಜ ಸೂಕ್ಷ್ಮವಿರಬಹುದು; ಹಣ್ಣು ಸ್ಥೂಲವಿರಬಹುದು. ಆದರೆ ಹಣ್ಣಿನಲ್ಲಿ ಆ ಬೀಜವೂ ಇದ್ದು ಮಿಗಿಲಾಗಿ ಮಧುರ ರಸವೂ ಇರುತ್ತದೆ. ಈ ರಸ ಬೀಜದಲ್ಲಿ ಇದ್ದರೂ ಅಭಿವ್ಯಕ್ತವಾಗಿರದು. ಸವಿಯಲುಬಾರದು. ಈ ದೃಷ್ಟಿಯಿಂದ ಸ್ಥೂಲಕ್ಕೆ ಇರುವ ಕೊರತೆಯೇನು ? ಜೀವನ ಉಪಯುಕ್ತತೆಯ ಹಂತದಲ್ಲಿ ಬಾಹ್ಯೇಂದ್ರಿಯ ಹಾಗೂ ಮನೋಗ್ರಾಹ್ಯ ''ಇಷ್ಟಲಿಂಗ''ಕ್ಕೆ ಶ್ರೇಷ್ಠತೆಯಿಲ್ಲದಿಲ್ಲ ಅತ್ಯಾಧಿಕ್ಯತೆಯಿದೆ. ಸೂಕ್ಷ್ಮ-ಸ್ಥೂಲಗಳೆರಡರ ಸಮಷ್ಟಿ ಸಹಕಾರವೇ ಜೀವನ. ಜೀವನ ನಾಣ್ಯದ ಎರಡು ಮಗ್ಗಲುಗಳು. ಈ ಮೂಲಕ ಶಕ್ತಿ ರಹಸ್ಯವನ್ನರಿಯಬೇಕು. ಅರಿತು ಅನುಭವಿಸಬೇಕು. ಅನುಭವಿಸಿ ಆನಂದಿಸಬೇಕು. ರೂಹಿಲ್ಲದ (ಕಣ್ಮನೋ ಗೋಚರ) ನೆನಹು ಅರಣ್ಯರೋಧನ. ಕನ್ನಡಿಯಿಲ್ಲದೆ ತನ್ನ ಮುಖವ ಕಾಣಬಹುದೆ ? ಭೂಮಿಯಿಲ್ಲದೆ ಬಂಡಿ ನಡೆಯಬಹುದೆ ? ಆಕಾಶದಲ್ಲಿ ಹಾರುವ ಪಟಕ್ಕಾದರೂ ಸೂತ್ರವಿರಬೇಕು. ದೇಹವಿಲ್ಲದಿದ್ದರೆ ಪ್ರಾಣಕ್ಕೆ ಆಶ್ರಯ ಉಂಟೆ ? ಆತ್ಮನಿಗೆ ಆಶ್ರಯ ಉಂಟೆ ? ಬಯಲು ಬಮ್ಮವಾದಿಗಳಿಗೆ ನೆಲೆ ಕಲೆ ಉಂಟೆ ? ಮುಮುಕ್ಷುಗಳಿಗೆ ಇಷ್ಟಲಿಂಗದ ಅವಶ್ಯಕತೆಯಿದೆ. ಗರ್ಭದೊಳಿರುವ ಶಿಶುವಿನ ಕುರುಹು (ಗಂಡೋ ? ಹೆಣ್ಣೋ ? ಗುಣಿಯೋ ದುರ್ಗುಣಿಯೋ ಎಂದು) ಕಂಡು ಆನಂದಿಸಲು ಅಸಾಧ್ಯ. ಅಸಮಂಜಸ, ಅದೇ ಶಿಶು ಹೊರ ಬಂದ ಮೇಲೆ ಶಿಶುವನ್ನು ನೋಡಿ ಲಾಲಿಸಿ ಮುದ್ದಾಡುವ ತಾಯಿಗಾದ ಆನಂದಕ್ಕೆ ಮೇರೆಯು ಉಂಟೆ ? ಮೂರು ಅಂಗಗಳಿಗೆ ಮೂರು ಲಿಂಗ. ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಿಗೆ ಕ್ರಮವಾಗಿ ಇಷ್ಟ, ಪ್ರಾಣ, ಭಾವವೆಂದು. ಮೂರು ಲಿಂಗ ಸಂಬಂಧವನ್ನು ಶ್ರೀಗುರು ತನ್ನ ಜ್ಞಾನ ಕ್ರಿಯಾರೂಪ ಯೋಗಿಕ ಶಕ್ತಿಯಿಂದ ಕೇಂದ್ರೀಕರಿಸಿ ತನ್ನ ಶಿಷ್ಯನಾದ ಉಪಾಸಕನ ಸಹಸ್ರಾರದಲ್ಲಿರುವ ಚಿತ್ಕಲೆಯನೆ ಕರ''ದಿಷ್ಟಲಿಂಗವ''ನ್ನಾಗಿ ಕರುಣಿಸಿ ಸ್ಥೂಲ-ಸೂಕ್ಷ್ಮ-ಕಾರಣ ಮೂರು ಹಂತದ ಕಾಜಿನ ಪೆಟ್ಟಿಗೆ ಇದ್ದು ಅದರ ಮೇಲೆ ದೀಪವನ್ನಿಟ್ಟಂತೆ. ೧) ದೀಪ, ೨) ದೀಪದ ಕಿರಣ, ೩) ದೀಪ ಪ್ರಕಾಶವಿದ್ದಂತೆ ಕ್ರಮವಾಗಿ, ೧) ಇಷ್ಟ, ೨) ಪ್ರಾಣ, ೩) ಭಾವ ಲಿಂಗ ರೂಪಗಳು ಕಂಗೊಳಿಸುತ್ತಿದ್ದು ಆ ದೀಪವನ್ನೇ ತೆಗೆದು ಬಿಟ್ಟರೆ ದೀಪದ ಕಿರಣ ಪ್ರಕಾಶ ಎಲ್ಲವೂ ಇಲ್ಲವಾದಂತೆ. ಇಷ್ಟಲಿಂಗವು ಉಪಾಸಕನಿಗೆ ಅತ್ಯವಶ್ಯ. ಮನಸ್ಸು ಬಲು ಚಂಚಲ. ಇದಕ್ಕೆ ಏನಾದರೂ ಉದ್ಯೋಗಬೇಕು. ''ಯೋಗಃ ಚಿತ್ತವೃತ್ತಿ ನಿರೋಧಃ'' ಎಂದು ಅದರ ಹರಿದಾಡುವಿಕೆಯನ್ನು ಕೇವಲ ಕಟ್ಟಿ ನಿಲ್ಲಿಸಲು ಸಾಧ್ಯವಿಲ್ಲ. ಮಹಾಪೂರಕ್ಕೆ ಆಣೆಕಟ್ಟು ಕಟ್ಟಿ ನಿಲ್ಲಿಸಿದರೆ ಆಗದು. ಆ ಪ್ರವಾಹಕ್ಕೆ ಸದುಪಯೋಗ ''ಭೂ ಸುಧಾರಣೆ'' ಬೆಳೆಸುವ ಮುಂತಾದವುಗಳಿಗೆ ಉಪಯೋಗಿಸುವಂತೆ ಗುರು-ಚರ-ಧ್ಯಾನ-ಪೂಜಾ ''ಸಕಲೇಷ್ಟದ'' ವಾದ ''ಇಷ್ಟಲಿಂಗ''ದ ನಿಷ್ಠೆಯ ಧ್ಯಾನ, ಜಪ, ತಪಃ ಪೂಜಾದಿಗಳಲ್ಲಿ ಮನ ತೊಡಗಿದರೆ ಮನಸ್ಸಿನ ಸದುದ್ಯೋಗ ಸಾರ್ಥಕವಾಗುವದು.

''ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ, ಎನ್ನಗುಳ್ಳದೊಂದು ಮನ, ಆ ಮನ ನಿಮ್ಮೊಳು ಒಡವೆರೆದ ಬಳಿಕ ಎನಗೆ ಭವವುಂಟೆ ಚೆನ್ನಮಲ್ಲಿಕಾರ್ಜುನಾ ?'' ಎಂಬ ಮಹಾ ವೈರಾಗ್ಯ ಶಿರೋಮಣಿ, ಮಹಾ ಶಿವಶರಣೆ ಅಕ್ಕಮಹಾದೇವಿಯ ಅನುಭವದ ಅಮರ ವಾಣಿಯಂತೆ ಮನಸ್ಸನ್ನು ಮಹಾದೇವನಲ್ಲಿ ತೊಡಗಿಸಿದರ ಭವದ ಭೀತಿ ಇನ್ನಿಲ್ಲ, ನಿರ್ಭವ.

ಯಾವ ಪ್ರಕಾರವಾಗಿ ಬೀಜವು ಮೊಳೆತು ಪಲ್ಲವಿಸಿ ವೃಕ್ಷವಾಗುವದಕ್ಕೆ ಸ್ಥಲ, ಜಲ, ಕಾಲಾವಧಿಗಳು ಹೇಗೆ ಅವಶ್ಯವೊ ಹಾಗೆ ಶಿವನನ್ನು ಕಾಣಲು, ನೆಮ್ಮದಿಯಿಂದ ಸಾಕ್ಷತ್ಕಾರವಾಗಲು ಪ್ರತಿಯೊಬ್ಬ ಮಾನವನು ಅದರಲ್ಲೂ ವೀರಶೈವನು ಶಿವಾದ್ವೈತ ರೂಪವಾದ, ಲಿಂಗಾಂಗ ಸಾಮರಸ್ಯ ರೂಪವಾದ ''ಶಿವದೀಕ್ಷೆ'' ''ವೀರ ಮಾಹೇಶ್ವರ ದೀಕ್ಷೆ'' ಯನ್ನು ಹೊಂದಲೇಬೇಕೆಂದೂ, ಇದರಿಂದ ಮಾನವ ಕೋಟಿಗೆ ಜಯವಾಗುತ್ತದೆ. ನಿಜವಾದ ಸುಖ ಶಾಂತಿಯು ನೆಲೆಸುತ್ತದೆ. ಮತ್ತು ಭಾರತ ಮಾತೆಯ ಪವಿತ್ರ ಗರ್ಭದಲ್ಲಿ ಜನಿಸಿ ಬಂದದ್ದು ಸಾರ್ಥವಾಗುತ್ತದೆ ಎಂಬುದನ್ನು ನಿಸಂದೇಹವಾಗಿ ಹೇಳಬಹುದು ಎಂದು ಬಂದಂಥ ಸಕಲ ಭಕ್ತರಿಗೆ ಬೋಧೆ ಮಾಡುತ್ತ ಹೋದ ಹೋದಲ್ಲಿ, ಗ್ರಾಮ ಗ್ರಾಮಗಳಲ್ಲಿ, ಸೀಮೆ ಸೀಮೆಗಳಲ್ಲಿ ಸಂಚರಿಸಿ ಉಕ್ಕಿದ ಆನಂದದಿ ಭಕ್ತರ ಮೇಲಣ ವಾತ್ಸಲ್ಯದಿಂದ ತಾಯಿ ತನ್ನ ಭಾಗ್ಯದ ಮಗುವಿಗೆ ಮಮತೆಯಿಂದ, ನೇಹದಿಂದ ಹೇಳಿ ಸಂತೈಸುವಂತೆ ಮನನಂಬುಗುವಂತೆ ಇಂಥ ಗಂಭೀರ ಅರ್ಥಗರ್ಭಿತ ಮಹತ್ವಪೂರ್ಣ ತತ್ತ್ವರೂಪ ಉಕ್ಕಿನ ಕಡಲೆಗಳನ್ನು ತಮ್ಮ ಅಮೋಘ ಅನುಭಾವಾಮೃತ ರಸಾಯನದಿಂದ ಪಂಚಪಕ್ವಾನ್ನವನ್ನೇ ಮಾಡಿ ಉಣಿಸಿ ತಣಿಸಿದಂತೆ ಬೋಧಿಸುತ್ತಾರೆ. ತತ್ ಪರಿಣಾಮವಾಗಿ ಸಂಸಾರದಂದುಗದಲ್ಲಿ ಬೆಂದು ಬೆಂಡಾಗಿ ಘಾಸಿಗೊಂಡು ದಿಕ್ಕು ತೋಚದೆ ಧಾವಿಸಿ ಬಂದ ಸಾವಿರಾರು ಜನ ನಿಜಸುಖಾಮೃತ ಪಿಪಾಸುಗಳಿಗೆ ಸಂದರ್ಶನ ಸದ್ಬೋಧೆಯಿತ್ತು ಸಂತೈಸುತ್ತಿರುವರು. ಇದು ಶ್ರೀಗಳವರ ಸತ್ಯ-ಶುದ್ಧ ಕಾಯಕವಾಗಿ ಬಿಟ್ಟಿದೆ. ಇದನ್ನು ಅನುಲಕ್ಷಿಸಿ ಶ್ರೀಗಳು ವ್ಯಕ್ತಿ-ವ್ಯಕ್ತಿಗಳನ್ನು ಶೋಧಿಸಿ ತಮ್ಮ ಅಂತಃಕರಣ ತಪಃಕಿರಣಗಳಿಂದ ಪರಿಪೂತ ಗೊಳಿಸಿ, ಕರುಣಾಮೃತದಿಂದ ಪರಿಮಾರ್ಜಿಸಿ ಅಮರ ಶಕ್ತಿಗಳನ್ನಾಗಿಸಿ, ವ್ಯಕ್ತಿ ವ್ಯಕ್ತಿಯ ಶಕ್ತಿಯೆ ಸಮಷ್ಟಿ ಸಮಾಜ, ಉನ್ನತ, ಮಹಾ ಮೇರು, ಸರ್ವಾಂಗ ಸುಂದರ ಸಮಾಜ ನಿರ್ಮಾಣವೇ ಶ್ರೀಗಳ ಉದ್ದೇಶವಾಗಿದೆ. ಸಮಾಜದ ಹಿತ ಸಾಧನೆಯನ್ನೇ ಕುರಿತು ನಿತ್ಯವೂ ಅವರು ಚಿಂತಿಸುತ್ತಿದ್ದಾರೆ.

ಶ್ರೀ ಮದ್ವೀರಶೈವ ಶಿವಯೋಗಮಂದಿರದಲ್ಲಿ ಪ್ರಮಥರ ಹಸು ಮಕ್ಕಳಂತಿರುವ ಸಾಧಕರಿಗೆ ಶ್ರೀಗಳು ಅವರ ಪೋಷಣೆ ಪಾಲನೆಗಾಗಿ ಹಳ್ಳಿ ಹಳ್ಳಿಗೆ ಭಿಕ್ಷಾಟನೆ ಗೆಂದು ದಯ ಮಾಡಿಸಿದರೆ ಅಲ್ಲಲ್ಲಿ ಸದ್ಭಕ್ತರು ಆನಂದದ ಭರದಲ್ಲಿ ಧನ-ಧಾನ್ಯಗಳನ್ನು ಕೊಡುವ ಭಕ್ತರು ಹೆಚ್ಚು ಸಲ್ಲಿಸ ಹೋದರೆ, ಇಷ್ಟೇಕೆ ಅಪ್ಪಾ, ಇದಿಷ್ಟೇ ಸಾಕು, ಇದು ನಿನಗೆ ಆಶೀರ್ವಾದವಿರಲಿ, ಎಂದು ಕೆಲವೇ ಭಾಗವನ್ನು ಸ್ವೀಕರಿಸಿ ಹರಸುತ್ತಾರೆ. ಅದು ಸೂಕ್ತ, ಭ್ರಮರವು ಪುಷ್ಪದೊಳಗಿನ ಮಧುವನ್ನು ಈಂಟುವಾಗ ಪಾನ ಮಾಡಲು ಹೂಗಳ ಮೇಲೆ ಕುಳಿತರೂ, ಹೂವಿಗೆ ಭಾರವಾಗದಂತೆ ವ್ಯವಹರಿಸುವಂತೆ ಶ್ರೀಗಳು ಯಾರಿಗೂ ಭಾರವಾಗದಂತೆ ಭಿಕ್ಷಾಟನ ಲೀಲೆಗೈಯುತ್ತಾರೆ. ಅಂತೆಯೇ ಅವರ ಭಿಕ್ಷೆಯು ಭಿ-ಕ್ಷಾ-ಭಯಂ ಸಂಸಾರ ತಾಪತ್ರಯೋದ್ಭೂತ ಭಯಂ, ಕ್ಷೀಯತೇ ಅನಯಾ-ಇತಿ-ಭಿಕ್ಷಾ ಎಂದೇ ಜನವು ಭಾವಿಸಿ ಕೃತಾರ್ಥರಾಗುತ್ತಲಿದ್ದಾರೆ. ಮಾನವದ ಕುಲ ಮೂಲ ಸಂಬಂಧದಂತಿರುವ ವಿದ್ಯಾರ್ಥಿಗಳ, ಅಲ್ಲದೆ ಅವಿಮುಕ್ತಕ್ಷೇತ್ರವಾಗಿರುವ ಶ್ರೀ ಶಿವಯೋಗಮಂದಿರದಲ್ಲಿ ಆ ಪರಂಜ್ಯೋತಿಯ ಕಿರಣಗಳಂತಿ ರುವ ಭಾವೀ ವೀರಶೈವ ಧರ್ಮ ಗುರುಗಳಾದ ಶ್ರೀ ಶಿವಯೋಗ ಸಾಧಕರ ಪೋಷಣೆಗಾಗಿ ಪಾಮರರನ್ನು ಪಾವನರನ್ನಾಗಿಸುವ ಭಿಕ್ಷಾಟನ ಲೀಲೆಯನ್ನು ಸಹಜ ಸೌಹಾರ್ದ ಸೌಜನ್ಯ ಭಾವದಿಂದಲೇ ಶ್ರೀಗಳು ನಡೆಸುತ್ತಿದ್ದಾರೆ. ಕೆಲ ಸಮಯ ಮಳೆ- ಬೆಳೆಗಳ ಕುಗ್ಗು-ನುಗ್ಗುಗಳನ್ನರಿತು ಭಿಕ್ಷೆಗೆ ಹೋಗುವುದನ್ನು ನಿಲ್ಲಿಸಿದರೆ ಆ ಗ್ರಾಮದ ಭಕ್ತ ಪ್ರಮುಖರು ಬಂದು ಆಗ್ರಹದಿಂದ ಕರೆದದ್ದೂ, ಕರೆಯುವದೂ ಉಂಟು.

ಶಿವಯೋಗಮಂದಿರದಲ್ಲಿ ಪರಮಪೂಜ್ಯ ಶ್ರೀ ನಿ. ಪ್ರ. ಸದಾಶಿವ ಶಿವಯೋಗಿಗಳು-

ಸರ್ವಲೋಕೋಪಕಾರಾಯ । ಯೋದೇವಃ ಪರಮೇಶ್ವರಃ ॥
ಚರತ್ಯತಿಥಿರೂಪೇಣ । ನಮಸ್ತೇ ಜಂಗಮಾತ್ಮನೇ ॥

ಎಂಬಂತೆ ಅವತರಿಸಿ ಶಿವರೂಪಿ ಜಂಗಮಪುಂಗವರಾಗಿ ಕಂಗೊಳಿಸುತ್ತ ದಾಸೋಹಂ ಭಾವದಿ ನೆಲೆಸಿದ್ದಾರೆ. ಅವರ ಅಂತಃಕರಣ ಹೇಳಲಸಾಧ್ಯ; ಅದು ಅನುಪಮ ವಾದುದು. ವೀರ ವಿರಕ್ತ ಮಹಾಸ್ವಾಮಿಗಳ ಪ್ರಮಥರ ಸಮೂಹದಲ್ಲಿ ಅಗ್ರಗಣ್ಯರಾಗಿ ''ಜಿತೇಂದ್ರಿಯಂ ಬುದ್ಧಿಮತಾಂ ವರಿಷ್ಟಂ'' ಎಂಬಂತೆ ವಿರಾಗಿಗಳೂ, ಜಿತಾಕ್ಷರೂ, ತಪೋಧನರೂ, ತೇಜಸ್ವಿಗಳೂ ಆಗಿದ್ದಾರೆ.

ಸಮಯವನ್ನು ಸೂಚಿಸುವ ಘಡಿಯಾರವು ಒಮ್ಮೊಮ್ಮೆ ಹಿಂದೆ ಮುಂದೆ ಹೋಗಬಹುದು. ಜಗಚ್ಚಕ್ಷುವಾದ ಸೂರ್ಯನು ಬೇಸರಪಟ್ಟು ಆಲಸ್ಯಕ್ಕೆ ಆಮಂತ್ರಣ ಕೊಟ್ಟು ಹಿಂದೆ ಮುಂದೆ ಹೋಗಬಹುದು. ಕಾಲ ಕಾಲಕ್ಕೆ ಉದಯಾಸ್ತಗಳನ್ನು ವ್ಯತ್ಯಾಸ ಮಾಡಬಹುದು, ಮಾಡುತ್ತಾನೆ. ಆದರೆ ಶ್ರೀಗಳು ತ್ರಿಕಾಲ ಲಿಂಗಪೂಜಾನುಷ್ಠಾನಗಳ ವೇಳೆಗಳು ಮಾತ್ರ ಎಷ್ಟೂ ಹಿಂದು ಮುಂದಾಗುವಂತಿಲ್ಲ, ಎಂಥ ಪ್ರಸಂಗದಲ್ಲಿಯೂ ವ್ಯತ್ಯಾಸವಾದದ್ದಿಲ್ಲ. ಯಾವ ಯಾವ ಕಾರ್ಯವನ್ನು ಯಾವಾಗ ನಡೆಸಬೇಕೊ ನಡೆದೇ ತೀರಬೇಕು. ನಡೆದಿವೆ, ನಡೆಯುತ್ತಿವೆ.

ಶ್ರೀಗಳಿನ್ನೂ ಮಂದಿರದಲ್ಲಿ ಚಿಕ್ಕ ವಟುವಿರವಾಗ ಆ ಕಾಲದ ವೃದ್ಧರು ಇವರನ್ನು ಸಿಟ್ಟಿಗೆಬ್ಬಿಸಬೇಕು, ಅಳಿಸಬೇಕೆಂದು ಅದೆಷ್ಟು ಚೇಷ್ಟೆ ಕಟಪಟಿ ಕೊಟ್ಟರೂ, ಹಾಸ್ಯಗೈದರೂ ಮುಗುಳ್ನಗೆಯಿಂದಲೆ ನಿಂತು ಬಿಡುತ್ತಿದ್ದರಂತೆ. ದೇಶ–ವಿದೇಶದ ಭಕ್ತ ಜನಾವಳಿಯು ದರ್ಶನಕ್ಕೆಂದು ಬಂದರೆ ಇವರ ಘನ ತೇಜಸ್ಸನ್ನು ಕಂಡು ಮಂತ್ರ ಮುಗ್ಧರಾಗುತ್ತಾರೆ. ಮಹೋನ್ನತ ನಿಲವು ಆಜಾನುಬಾಹು, ಎಪ್ಪತ್ತೆರಡರ ಅಂಚಿನಲ್ಲಿ ಅಡಿಯಿಟ್ಟರೂ ಇಪ್ಪತ್ತೈದರ ನವಯುವಕನಂತೆ ಹಸನ್ಮುಖಿಯಾಗಿ ಮುಗುಳ್ನಗೆಯ ಮಂದಹಾಸದ ಹೊನಲನ್ನೆ ಹರಿಸುತ್ತಾರೆ. ಶ್ರೀಗಳ ಹಸನ್ಮುಖವು ಮಂದಹಾಸವು ದರ್ಶನಾರ್ಥಿ ಭಕ್ತಕೋಟಿಗೆ ಈವರೆಗೂ ಕಲ್ಯಾಣ ನೀಡಿದಂತೆ ಇನ್ನು ಮುಂದೂ ನೀಡಲೆಂದು ಹಾರೈಸಿ ಬಡವನ ಮಿಡಿ–ನುಡಿಗಳನ್ನು ಪೂಜ್ಯರ ಅಡಿದಾವರೆಗಳಲ್ಲಿ ಅರ್ಪಿಸಲಾಗಿದೆ.

■■

# ಹುಬ್ಬಳ್ಳಿಯ ಡಾ. ಮೂಜಗಂ

• ಶ್ರೀ ಶಿವಯೋಗಿ ದೇವರು, ಬೆಳಗಾವಿ

ಹಾಸನ ಜಿಲ್ಲೆ ಅರಸೀಕೆರೆ ತಾಲೂಕಿನ ಕಣಕಟ್ಟೆ ಎಂಬ ಹೋಬಳಿ ಹತ್ತಿರದ ಪುಟ್ಟ ಹಳ್ಳಿ ಸಸಿವಾಳದಲ್ಲಿ ೧೯೨೭ರಲ್ಲಿ ಮರುಳಸಿದ್ಧಯ್ಯ ಮತ್ತು ಚನ್ನವ್ವ ದಂಪತಿಗಳ ಮಗುವಾಗಿ ಜನಿಸಿದ ಮಹಾಂತೇಶ, ಹುಬ್ಬಳ್ಳಿ ಮೂರುಸಾವಿರಮಠದ ಜಗದ್ಗುರು ಗಂಗಾಧರ ರಾಜ ಯೋಗೀಂದ್ರ ಮಹಾಸ್ವಾಮಿಗಳಾಗಿ ಬೆಳೆದದ್ದು ಅಪೂರ್ವ ಇತಿಹಾಸ, ಶಿವಯೋಗ ಮಂದಿರ, ಕಾಶಿ ಮೊದಲಾದೆಡೆ ಅಧ್ಯಯನ ಪೂರೈಸಿದ, ಮೂಜಗಂ ಅವರ ಅವಿರತ ಶ್ರಮದ ಫಲವಾಗಿ ಮೂರುಸಾವಿರಮಠವು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಕ್ಷೇತ್ರಗಳಲ್ಲಿನ ಅಪೂರ್ವ ಸಾಧನೆಯಿಂದ ಇಡೀ ರಾಜ್ಯದ, ಅದರಲ್ಲೂ ಮುಖ್ಯವಾಗಿ ಉತ್ತರ ಕರ್ನಾಟಕದ ಭಕ್ತಜನರ ಪಾಲಿಗೆ ಕಾಮಧೇನುವೇ ಆಗಿದೆ.

ಕೋಮು ಭಾವನೆಗಳ ವಿಷಯದಲ್ಲಿ ಅತ್ಯಂತ ಸೂಕ್ಷ್ಮ ಎಂದೇ ಪರಿಗಣಿಸಲ್ಪಟ್ಟಿರುವ ಹುಬ್ಬಳ್ಳಿಯ ಹಿಂದೂ-ಮುಸ್ಲಿಂ ಬಾಂಧವರಲ್ಲಿ ಸಾಮರಸ್ಯ ಮೂಡಿಸುವಲ್ಲಿ ಜಗದ್ಗುರುಗಳು ಬಹಳ ಶ್ರಮಿಸುವ ಮೂಲಕ ಭಾವೈಕ್ಯದ ಹರಿಕಾರರೆನಿಸಿದ್ದರು.

ದೇಶದ, ನಾಡಿನ ಅಭಿವೃದ್ಧಿಗೆ ಶೈಕ್ಷಣಿಕ ಪ್ರಗತಿ ಬಹು ಮುಖ್ಯ ಎಂದು ಬಲವಾಗಿ ನಂಬಿದ್ದ ಸ್ವಾಮೀಜಿ, ಉತ್ತರ ಕರ್ನಾಟಕದ ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಕೊಡುಗೆಯಿಂದಾಗಿ ಶೈಕ್ಷಣಿಕ ಕ್ರಾಂತಿಯನ್ನೇ ಮಾಡಿದ್ದರು. ಮಹಿಳಾ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡುತ್ತಿದ್ದ ಸ್ವಾಮೀಜಿ ಮಹಿಳೆಯರಿಗಾಗಿಯೇ ಪ್ರತ್ಯೇಕ ಮಹಾವಿದ್ಯಾಲಯವೊಂದನ್ನು ಮೊಟ್ಟಮೊದಲು ಸ್ಥಾಪನೆ ಮಾಡುವ ಮೂಲಕ ತಮ್ಮ ಸಾಮಾಜಿಕ ಕಾಳಜಿ ಪ್ರದರ್ಶಿಸಿದ್ದರು.

ಜಗದ್ಗುರು ಮೂರುಸಾವಿರಮಠ ವಿದ್ಯಾವರ್ಧಕ ಸಂಘವನ್ನು ಹುಟ್ಟು ಹಾಕಿದ್ದ ಜಗದ್ಗುರುಗಳು, ಅದರಡಿಯಲ್ಲಿ ಪ್ರಾಥಮಿಕ ಶಾಲೆಯಿಂದ ಹಿಡಿದು, ತಾಂತ್ರಿಕ, ಆಯುರ್ವೇದ, ಪದವಿ ಶಿಕ್ಷಣ ಮಹಾವಿದ್ಯಾಲಯಗಳನ್ನು ಸ್ಥಾಪಿಸಿ, ತನ್ಮೂಲಕ ಶೈಕ್ಷಣಿಕ ಕ್ರಾಂತಿಗೆ ನಾಂದಿ ಹಾಡಿದ್ದರು.

ಸಾರ್ವಜನಿಕ ಆರೋಗ್ಯದ ಬಗೆಗೂ ತೀವ್ರ ಕಾಳಜಿ ಹೊಂದಿದ್ದ ಸ್ವಾಮೀಜಿ ಬೆಳಗಾವಿ ಜಿಲ್ಲೆಯ ಘಟಪ್ರಭಾದಲ್ಲಿ ಆಸ್ಪತ್ರೆಯೊಂದನ್ನು ನಿರ್ಮಿಸಿದ್ದಲ್ಲದೇ ಇತ್ತೀಚಿನಲ್ಲಿಯೇ ನಿಸರ್ಗ ಚಿಕಿತ್ಸಾ ಕೇಂದ್ರವೊಂದನ್ನು ಉದ್ಘಾಟಿಸುವ ಯೋಜನೆ ಹಾಕಿಕೊಂಡಿದ್ದರು. ಕೋಟ್ಯಂತರ ರೂ. ವೆಚ್ಚದಲ್ಲಿ ಘಟಪ್ರಭೆಯಲ್ಲಿ ಸಿದ್ಧಗೊಳ್ಳುತ್ತಿರುವ ನಿಸರ್ಗ ಚಿಕಿತ್ಸಾ ಕೇಂದ್ರ ಮುಂದಿನ ತಿಂಗಳು ಉದ್ಘಾಟನೆಗೊಳ್ಳಲು ಸಜ್ಜಾಗುತ್ತಿದೆ.

ಹುಕ್ಕೇರಿ ತಾಲೂಕಿನ ಶಿರಢಾಣ ಗ್ರಾಮದಲ್ಲಿ ವಸತಿ ಶಾಲೆಯೊಂದನ್ನು ಆರಂಭಿಸಿದ್ದ ಶ್ರೀಗಳು, ಅದರ ಏಳ್ಗೆಗಾಗಿ ಹಗಲಿರುಳು ಶ್ರಮಿಸುತ್ತಿದ್ದರು. ಶ್ರೀಗಳ ಅಪೂರ್ವ ಸಾಧನೆಯನ್ನು ಗಮನಿಸಿ ಕರ್ನಾಟಕ ವಿಶ್ವವಿದ್ಯಾಲಯವು ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿತ್ತಲ್ಲದೇ ಹಲವಾರು ಸಂಘ-ಸಂಸ್ಥೆಗಳು ಮೂಜಗಂ ಅವರಿಗೆ ಹತ್ತು ಹಲವು ಪ್ರಶಸ್ತಿ ನೀಡಿ ಗೌರವಿಸಿದ್ದವು.

ಮೂಜಗಂ ಕಾವ್ಯನಾಮದಿಂದ ಆಧುನಿಕ ಕನ್ನಡ ಸಾಹಿತ್ಯಕ್ಕೆ ಮೌಲಿಕ ಕೃತಿಗಳನ್ನು ನೀಡಿ ಖ್ಯಾತಿ ಪಡೆದಿದ್ದರು. ಮಠಾಧೀಶರಾಗಿ ಸಾಹಿತ್ಯ, ಸಂಸ್ಕೃತಿಯ ಸಂವರ್ಧನೆಗೆ ಅಪರಿಮಿತ ಸೇವೆ ಸಲ್ಲಿಸಿದ್ದ ಮೂಜಗಂ ಸ್ವತಃ ಕವಿಗಳು, ವಚನಕಾರರೂ ಆಗಿದ್ದರು. ಆಧುನಿಕ ವಚನಕಾರರಲ್ಲಿ ಎದ್ದು ಕಾಣುವ ಹೆಸರು ಹೊಂದಿದ್ದ ಮೂಜಗಂ ಆಧುನಿಕ ಸರ್ವಜ್ಞರೆಂದೇ ಗುರುತಿಸಲ್ಪಟ್ಟವರು.

ಸರ್ವಜ್ಞನ ತ್ರಿಪದಿಗಳನ್ನು ಹೋಲುವ ನಾಲ್ಕು ಸಾವಿರಕ್ಕೂ ಮೇಲ್ಪಟ್ಟು ವಚನಗಳನ್ನು ಪೂರ್ಣಜ್ಞ ಅಂಕಿತದಲ್ಲಿ ರಚನೆ ಮಾಡಿದ್ದಾರೆ. ಇವರ ವಚನಗಳ ಮೇಲೆ ಬಸವಾದಿ ಶರಣರ ಪ್ರಭಾವ ಗಾಢವಾಗಿದ್ದು, ಸಮಾಜದಲ್ಲಿ ಕಂಡು ಬಂದ ಲೋಪ-ದೋಷಗಳನ್ನು ತಮ್ಮ ವಚನಗಳ ಮೂಲಕ ವ್ಯಕ್ತಪಡಿಸಿ ಸಾಮಾಜಿಕ ಕಳಕಳಿ ಮೆರೆದಿದ್ದಾರೆ.

ಪೂಜ್ಯಶ್ರೀಗಳು ಶಿವಯೋಗಮಂದಿರದ ಅಧ್ಯಕ್ಷರಾಗಿ ಅನೇಕ ಕಾರ್ಯಯೋಜನೆಗಳನ್ನು ಜಾರಿಗೆ ತಂದರು. ಇವರು ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿಯೇ ೧೭ನೇ ಅಖಿಲ ಭಾರತ ವೀರಶೈವ ಮಹಾಸಭೆಯ ಅಧಿವೇಶನವು ಶಿವಯೋಗಮಂದಿರದಲ್ಲಿ ನಭೂತೋ ನಭವಿಷ್ಯತಿ ಎಂಬಂತೆ ಜರುಗಿತು. ಖ್ಯಾತ ಶಿಕ್ಷಣ ತಜ್ಞ,ರ‍್ಯಾಂಗ್ಲರ್ ಡಾ. ಡಿ.ಸಿ. ಪಾವಟೆ ಅವರು ಈ ಅಧಿವೇಶನದ ಅಧ್ಯಕ್ಷರಾಗಿದ್ದರು. ಶ್ರೀಗಳು ಹಾನಗಲ್ಲ ಕುಮಾರ ಶಿವಯೋಗಿಗಳ ಶತಮಾನೋತ್ಸವ ಕಾರ್ಯಕ್ರಮವನ್ನು ಅದ್ದೂರಿಯಾಗಿ ಜರುಗಿಸಿದ್ದರು.

ಸಾಹಿತಿಯಾಗಿ ಮೂವತ್ತಕ್ಕಿಂತಲೂ ಹೆಚ್ಚು ಕೃತಿಗಳನ್ನು ರಚಿಸಿರುವ ಮೂಜಗಂ, ಕನ್ನಡ ನಾಡಿನ ಅನೇಕ ವಿದ್ವಾಂಸರ ೫೦೦ಕ್ಕೂ ಹೆಚ್ಚಿನ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಪೂಜ್ಯಶ್ರೀ ೨೭-೫-೨೦೦೩ ರಂದು ಲಿಂಗೈಕ್ಯರಾದರು. ■■

# ಶಿರಸಿಯ ಪೂಜ್ಯಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು

• ಶ್ರೀ ಎಸ್. ಬಿ. ಹಿರೇಮಠ, ಶಿರಸಿ

ಪೂಜ್ಯ ಶ್ರೀ ಗುರುಸಿದ್ಧ ರಾಜಯೋಗೀಂದ್ರರು ಸನ್ ೧೯೧೩ನೇ ಇಸ್ವಿಯಲ್ಲಿ ಬಿಜಾಪೂರ ಜಿಲ್ಲೆಯ ಬಸವನಬಾಗೇವಾಡಿ ತಾಲೂಕಿನ ಸಾಸನೂರ ಗ್ರಾಮದವರಾದ ವೇ. ಶಾಂತಯ್ಯನವರು ತಾಯಿ ದಾನಮ್ಮನವರ ಹಿರಿಯ ಮಗನಾಗಿ ಜನಿಸಿದ ಇವರು ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿಯೇ ಮುಗಿಸಿ ಮುಂದೆ ಶ್ರೀ ಮದ್ವೀರಶೈವ ಶಿವಯೋಗಮಂದಿರದಲ್ಲಿ ಧಾರ್ಮಿಕ ಸಂಸ್ಕೃತ ಮತ್ತು ಯೋಗಿಕ ಶಿಕ್ಷಣವನ್ನು ಅಭ್ಯಾಸ ಮಾಡಿದ ಇವರು ತಮ್ಮ ೨೩ನೇ ವಯಸ್ಸಿನಲ್ಲಿ ೧೯೩೬ರಲ್ಲಿ ಶಿರಸಿಯ ಶ್ರೀ ಉಣ್ಣೇಮಠದ ಪೀಠಾಧಿಪತಿಗಳಾಗಿ ಪೀಠಾರೋಹಣ ಮಾಡಿದರು. ಕಾಲಕ್ರಮೇಣ ಉಣ್ಣೇಮಠವನ್ನು ಬಿಟ್ಟು ಊರ ಹೊರಗಿನ ಪಾಳು ಬಿದ್ದ ಚೌಕಿಮಠಕ್ಕೆ ಆಗಮಿಸಿ ಅದನ್ನು ಈಗಿನ ಬಣ್ಣದಮಠವನ್ನಾಗಿ ಪರಿವರ್ತಿಸಿದರು. ಸನ್ ೧೯೩೬ ರಿಂದ ೧೯೯೬ ರವರೆಗೆ ಸತತ ೬೦ ಸಂವತ್ಸರಗಳವರೆಗೆ ತಮ್ಮ ಅವಿರತ ಶ್ರಮ ಹಾಗೂ ದೀರ್ಘ ತಪಸ್ಸಿನ ಶಕ್ತಿಯಿಂದ ಶ್ರೀಮಠವನ್ನು ಅಭಿವೃದ್ಧಿಗೊಳಿಸಿದರು. ಶ್ರೀ ಮಠವು ಬರೀ ಕಟ್ಟಡದಿಂದ ಶೋಭಿಸುವಂತೆ ಮಾಡುವದಲ್ಲದೆ ಧರ್ಮ, ಸಂಸ್ಕೃತಿ, ಭಾವೈಕ್ಯ ಬೆಳಗುವ ನಂದಾಜ್ಯೋತಿಯನ್ನಾಗಿಸಿದರು. ಮಲೆನಾಡಿನ ಒಡಲಸಿರಿಯಲ್ಲಿ ಸಿರಿ ಸಂಪಿಗೆಯ ಕಂಪು ಬೀರುವಲ್ಲಿ ಶ್ರೀಗಳ ಶ್ರಮ ಇದೆ ಎನ್ನುವದನ್ನು ಮರೆಯುವಂತಿಲ್ಲ.

"ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು. ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು. ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ಪಲಿಂಗ ಮಿಡಿನಾಗ ನೋಡೆಂದ ನಮ್ಮ ಕೂಡಲ ಸಂಗಮದೇವ" ಅಣ್ಣ ಬಸವಣ್ಣನವರ ಈ ವಚನ ಸಂದೇಶವನ್ನೇ ಮೈಗೂಡಿಸಿಕೊಂಡು ಬಾಳಿದವರು, ಬೆಳಗಿದವರು ಸಮಾಜಕ್ಕೆ ಬೆಳಕು ನೀಡಿದವರು. ಶ್ರೀ ಗುರುಗಳ ಮಾತು ಮಾಣಿಕ್ಯ ಮೌನ ಬಂಗಾರವೆನಿಸಿದ್ದವು. ಅವರ ವಾಣಿ ಅಮೃತವಾಣಿ, ಅವರ ನಡೆ ಸಮಾಜಕ್ಕೆ ಹಿಡಿದ ಕನ್ನಡಿ. ಅವರ ಬಾಳು ನಾಡಿಗೆ ಆದರ್ಶ. ನಾಡಿನ ಮಠಾಧಿಪತಿಗಳಿಗೆ ಮಾರ್ಗದರ್ಶಕರು, ಆದರ್ಶಪ್ರಿಯರು, ಗೌರವಾನ್ವಿತರೂ ಎನಿಸಿದವರಾಗಿದ್ದವರು. ಶಾಪಾನುಗ್ರಹ ಶಕ್ತಿಯುಳ್ಳವರಾಗಿದ್ದ ಪೂಜ್ಯರು ಅನೇಕ ಭಕ್ತರ ನಾನಾ ಬಗೆಯ ಸಂಕಟಗಳನ್ನು ಲಿಂಗಪೂಜಾನಿಷ್ಠೆ ಹಾಗೂ ತಪಶಕ್ತಿಯಿಂದ ಪರಿಹಾರ ಮಾಡಿದ ಅದೆಷ್ಟೋ ನಿದರ್ಶನಗಳಿವೆ.

ಶ್ರೀಗಳು ವಿದ್ಯೆ ವಿನಯಗಳ ಹೇಮಕೂಟ, ಬೇಡುವ ಕೈ ಅವರದಾಗಿರಲಿಲ್ಲ, ನೀಡುವ ಕೈ ಅವರದಾಗಿತ್ತು. ದೀನ ದಲಿತರನ್ನು ಹತ್ತಿರ ಮಾಡಿಕೊಂಡು ಅವರ ಸುಖ ದುಃಖಗಳನ್ನು ಆಲಿಸಿ ಕನಿಕರಪಟ್ಟು ತೆರೆದ ಮನಸ್ಸಿನಿಂದ ತೆರೆದ ಹಸ್ತದಿಂದ ಸಹಾಯ ಮಾಡಿದವರು, ಪತಿತರನ್ನು ಪಾವನ ಮಾಡಿದವರು, ದುಡಿತವೇ ದುಡ್ಡಿನ ತಾಯಿ, ಕಾಯಕವೇ ಕೈಲಾಸವೆನ್ನುವದನ್ನು ಮನವರಿಕೆ ಮಾಡಿಕೊಟ್ಟವರು, ನಿಸ್ಸಹಾಯಕರಿಗೆ ಸಹಾಯ ಮಾಡಿದವರು, ಬಡವಿದ್ಯಾರ್ಥಿಗಳಿಗೆ ನೆರವಿತ್ತು ನೆಮ್ಮದಿಗೊಂಡವರು, ಪೂಜ್ಯರ ಕೃಪಾಶೀರ್ವಾದದ ಬಲದಿಂದ ನಾಡಿನಲ್ಲಿಯ ಅನೇಕ ಬಡ ವಿದ್ಯಾರ್ಥಿಗಳು ಇಂದು ಸಮಾಜದಲ್ಲಿ ಗೌರವಾನ್ವಿತರಾಗಿ ಉನ್ನತ ಹುದ್ದೆಗಳನ್ನು ಪಡೆದುಕೊಂಡಿದ್ದಾರೆ. ಪೂಜ್ಯರ ಅಪ್ಪಣೆಯಂತೆ ಈಗಲೂ ಕೂಡಾ ಶ್ರೀಮಠದಲ್ಲಿ ಸಾಧ್ಯವಾದಷ್ಟು ಬಡವಿದ್ಯಾರ್ಥಿಗಳಿಗೆ ಉಚಿತ, ಊಟ, ವಸತಿ, ಶಿಕ್ಷಣವನ್ನು ನೀಡಲಾಗುತ್ತಿದೆ.

ಪೂಜ್ಯರ ಕರಸಂಜಾತರೆನಿಸಿದ ಪೂಜ್ಯಶ್ರೀ ಶಿವಲಿಂಗ ಮಹಾಸ್ವಾಮಿಗಳು ಈಗಿನ ಬಣ್ಣದಮಠದ ಮಠಾಧಿಪತಿಗಳು. ಇವರು ಗುರುಗಳು ಹಾಕಿಕೊಟ್ಟ ಮಾರ್ಗದಲ್ಲಿ ಮುನ್ನಡೆಯುತ್ತಿದ್ದಾರೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಶ್ರೀಮಠದಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ. ಇವರು ವೀರಶೈವ ಧರ್ಮದ ವೇದಾಂತವನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ. ಆಚಾರ-ವಿಚಾರ ಸದಾಚಾರಕ್ಕೆ ಚ್ಯುತಿ ಬರದಂತೆ ನಡೆಯುತ್ತಿದ್ದಾರೆ. ಲಿಂಗಪೂಜಾನಿಷ್ಠರೂ. ಸತ್ಯ ಶುದ್ಧ ಕಾಯಕಯೋಗಿಗಳು ಆಗಿರುವ ಇವರು ವಿದ್ಯಾಪ್ರೇಮಿಗಳು ಹೌದು. ಇವರು ಈ ಮಠವಲ್ಲದೆ ಇದರ ಶಾಖಾಮಠವಾದ ಹಂದಿಗನೂರಿನಲ್ಲಿಯೂ ಕೂಡಾ ಬಡ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣದ ವ್ಯವಸ್ಥೆ ಕಲ್ಪಿಸಿದ್ದಾರೆ.

■■

# ಹೊಸಪೇಟೆಯ ಪೂಜ್ಯಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು

• ಡಾ. ಬಿ. ಎ. ಮಲ್ಲಾಪುರ, ಧಾರವಾಡ

ಅಂದು–ಇಂದು–ಮುಂದೂ ಕೂಡ ಮಠಗಳು, ಸಮಾಜದ ಚಲನಶೀಲ ಶಕ್ತಿಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದರೆ ಮಾತ್ರ ಸಮಾಜಸ್ವಾಸ್ಥ್ಯ ಸರಿಯಾಗಿರುತ್ತದೆ. ಹಾಗಿಲ್ಲದೆ ಹೋದರೆ ಸಮಾಜ ರೋಗಗ್ರಸ್ತವಾಗಿ ಸಾಯುವ ಸ್ಥಿತಿಗೆ ಬಂದು ತಲುಪುತ್ತದೆ. ಲಿಂ. ಶ್ರೀ ಕುಮಾರಸ್ವಾಮಿಗಳವರ ಕಾಲದಲ್ಲಿ ಸಮಾಜ ಆ ಮಟ್ಟಕ್ಕೆ ಬಂದು ಮುಟ್ಟಿತ್ತು ಗುಟುಗು ಜೀವ ಹಿಡಿದಿತ್ತು ಸಮಕಾಲೀನ ಸಮಸ್ಯೆಗಳಿಗೆ ತಕ್ಷಣ ಸ್ಪಂದಿಸುವ ಜಾಯಮಾನದ ಸಂವೇದನಾಶೀಲ ಕುಮಾರಸ್ವಾಮಿಗಳವರು, ಮಠಗಳು ಸಮಾಜ–ಧರ್ಮ–ಸಂಸ್ಕೃತಿ ಸಮ್ಮುಖವಾಗಬೇಕಾದರೆ ಮತ್ತು ಜನಪರವಾಗಬೇಕಾದರೆ, ಅವುಗಳಿಗೆ ಅತ್ಯಂತ ಯೋಗ್ಯವಾದ ಸ್ವಾಮಿಗಳನ್ನು ನೇಮಿಸುವುದು ತುಂಬಾ ಅಗತ್ಯವೆಂಬ ನಿರ್ಧಾರಕ್ಕೆ ಬಂದುದು ಬಹಳ ಮಹತ್ವದು. ಅಷ್ಟಕ್ಕೇ ನಿಲ್ಲದೆ ಆ ಅಗತ್ಯವನ್ನು ಪೂರೈಸುವ ನಿಟ್ಟಿನಲ್ಲಿ ಅವರು ಮಾಡಿದ ಹರಸಾಹಸ ಮತ್ತು ಪ್ರಾಮಾಣಿಕ ಪ್ರಯತ್ನದ ಮೂರ್ತರೂಪವೆ ಶ್ರೀ ಶಿವಯೋಗಮಂದಿರ ಮಹಾಸಂಸ್ಥೆ. ಅದು ಸಾಮೂಹಿಕ ಸಮ್ಮತಿಯ ಮುದ್ರೆಯೊಂದಿಗೆ ರೂಪುಗೊಂಡುದನ್ನು ಯಾರೂ ಮರೆಯಬಾರದು.

ಲಿಂ. ಶ್ರೀ ಕುಮಾರಸ್ವಾಮಿಗಳ ಕನಸಿನ ಕೂಸಾದ, ಆ ಅತ್ಯಪೂರ್ವ ಶಿವಯೋಗಮಂದಿರದ ಶ್ರೀ ಕಮ್ಮಟದಲ್ಲಿ ಸಿದ್ಧಗೊಂಡ ಹಲವಾರು ಸ್ವಾಮಿಗಳು ಕರ್ನಾಟಕದ ಉದ್ದಗಲಕ್ಕೂ ಹರವಿಕೊಂಡಿರುವ ಲಿಂಗಾಯತ ಮಠಗಳಿಗೆ ಅಧಿಪತಿಗಳಾಗಿ, ಕಾರ್ಯ ನಿರ್ವಹಿಸುತ್ತಿದ್ದಾರೆ. ಅವರಲ್ಲಿ ಹನ್ನೆರಡನೆಯ ಶತಮಾನದ ಬಸವಾದಿ ಶರಣ ಪ್ರಣೀತ ಮತ್ತು ಹಾನಗಲ್ಲ ಲಿಂ. ಶ್ರೀ ಕುಮಾರ ಸ್ವಾಮೀಜಿ ಪ್ರವರ್ತಿತ ಸಮಾಜೋಧಾರ್ಮಿಕ ಧ್ಯೇಯೋದ್ದೇಶಗಳನ್ನು ಸಾಧಿಸುವ ನಿಟ್ಟಿನಲ್ಲಿ ತಮ್ಮನ್ನು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿರುವ ಕೆಲವೇ ಸ್ವಾಮಿಗಳಲ್ಲಿ ಜಗದ್ಗುರು ಕೊಟ್ಟೂರೇಶ್ವರಸ್ವಾಮಿ ಮಠ ಸಮುಚ್ಚಯದ ಅಧಿಪತಿಗಳಾಗಿರುವ, ಪೂಜ್ಯಶ್ರೀ ಸಂಗನಬಸವ ಸ್ವಾಮಿಗಳವರದು ಬಹುದೊಡ್ಡ ಹೆಸರು. ಘಟದಿಂದ ಮಠವೇ ವಿನಾ ಮಠದಿಂದ ಘಟವಾಗಬಾರದೆಂಬ ಅರ್ಥಪೂರ್ಣ ಮಾತಿಗೆ ಪೂಜ್ಯಶ್ರೀಗಳ ಜೀವನ ಒಂದು ವ್ಯಾಖ್ಯಾನದಂತಿದೆ. ಬಸವಣ್ಣ ಕೂಡಲಸಂಗಮದೇವನ ರಾಜತೇಜ ದಲ್ಲಿದ್ದರೆ ಪೂಜ್ಯ ಜ. ಸಂಗನಬಸವ ಮಹಾಸ್ವಾಮಿಗಳು ಲಿಂ. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳವರ ರಾಜತೇಜದಲ್ಲಿದ್ದಾರೆ.

ಜಮಖಂಡಿ ತಾಲೂಕಿನ ಬಿದರೆ ಗ್ರಾಮದಲ್ಲಿ ೧೯೩೭ರಲ್ಲಿ ಜನಿಸಿದ ಪೂಜ್ಯಶ್ರೀಸಂಗನಬಸವ ಮಹಾಸ್ವಾಮಿಗಳವರ ತಂದೆ ಸ್ವತಂತ್ರ ಮಠದ ಶ್ರೀ ಬಸವಲಿಂಗಯ್ಯನವರು. ತಾಯಿ ಗುರಮ್ಮನವರು. ಶಿವಯೋಗ ಮಂದಿರ ಸ್ಥಾಪಕರಾದ ಪೂಜ್ಯ ಲಿಂ. ಹಾನಗಲ್ಲ ಕುಮಾರ ಸ್ವಾಮಿಗಳಿಗೆ ಜಂಗಮಾಶ್ರಮವಿತ್ತ ತ್ರಿಕಾಲ ಪೂಜಾ ನಿಷ್ಠ ಮಹಾತಪಸ್ವಿ ಬಿದಿರೆಯ ಕುಮಾರ ಸ್ವಾಮಿಗಳವರು ಜನಿಸಿದ ಪವಿತ್ರವಂಶದಲ್ಲಿಯೆ ಶ್ರೀಗಳ ತಂದೆ ಬಸವಲಿಂಗಯ್ಯನವರು ಜನಿಸಿದ್ದು ಅವಶ್ಯ ಗಮನಿಸಬೇಕಾದ ಅಂಶ.

ಚಿಕ್ಕವರಿರುವಾಗಲೆ ತಾಯಿಯನ್ನು ಕಳೆದುಕೊಂಡ ಸಂಗನಬಸವರು, ಬೈಲಹೊಂಗಲದ ಕುಂಬಾರಗೇರಿ ಮಠದ ಶಿವಬಸಯ್ಯ ನವರ ಆಶ್ರಯದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿದರು. ಕೆಲದಿನ ಹಾಲಕೆರೆ ಅನ್ನದಾನೀಶ್ವರಮಠದ ಶಾಲೆಯಲ್ಲೂ ಓದಿದರು. ಇವರು ಬಾಲಕರಾಗಿದ್ದಾಗ ನಡೆದ ಒಂದು ಘಟನೆ ಇಲ್ಲಿ ಉಲ್ಲೇಖನೀಯ. ತಂದೆ ಬಸವಲಿಂಗಯ್ಯನವರು ಇವರನ್ನು ಒಮ್ಮೆ ಹಾವೇರಿಯ ಮಹಾತಪಸ್ವಿ ಪೂಜ್ಯಶ್ರೀ ಶಿವಬಸವಸ್ವಾಮಿಗಳ ದರ್ಶನಕ್ಕೆ ಕರೆದೊಯ್ದಿದ್ದರಂತೆ. ಅವರು ಬಾಲಕನ ಸಲ್ಲಕ್ಷಣ ಗಳನ್ನು ನೋಡಿ, ದಯಾದೃಷ್ಟಿ ಬೀರಿ, ಸಂತೋಷದಿಂದ ಅವನ ತಲೆಯ ಮೇಲೆ ತಮ್ಮ ಹಸ್ತವನ್ನಿಟ್ಟು ಹರಸಿದರಂತೆ. ಇದು ನನ್ನ ದೃಷ್ಟಿಯಲ್ಲಿ ತುಂಬಾ ಮಹತ್ವದ ಘಟನೆ. ಪುಣ್ಯ ಪುರುಷರ ಅಂತಹ ಹಸ್ತಮಸ್ತಕ ಸ್ಪರ್ಶರೂಪದ ಆಶೀರ್ವಾದ ಕೆಲವರಿಗೆ ಮಾತ್ರ ಅವರವರ ಪುಣ್ಯ ವಿಶೇಷದಿಂದ ದೊರೆಯುತ್ತದೆ. ಶ್ರೀ ಸಂಗನ ಬಸವರಿಗೆ ಬಾಲಕರಿದ್ದಾಗಲೆ ಅದು ದೊರೆತದ್ದು ಒಂದು ಯೋಗಾಯೋಗ. ಭವಿಷ್ಯದ ಸಂಕೇತವಾದ ಪೂಜ್ಯರ ಆಶೀರ್ವಾದ ಫಲಿಸಿತೋ ಎಂಬಂತೆ ಸಂಗನಬಸವರನ್ನು ಜಮಖಂಡಿಯ ವಿರಕ್ತಮಠಕ್ಕೆ ನೇಮಿಸಿ, ಮುಂದಿನ ಅಭ್ಯಾಸಕ್ಕಾಗಿ ಅವರನ್ನು ಶಿವಯೋಗ ಮಂದಿರಕ್ಕೆ ಸೇರಿಸಲಾಯಿತು.

ಶ್ರೀ ಸಂಗನಬಸವರು ಹನ್ನೆರಡು ವರ್ಷ ಶ್ರೀ ಶಿವಯೋಗಮಂದಿರದಲ್ಲಿದ್ದು ಒಬ್ಬ ಆದರ್ಶ ಸ್ವಾಮಿಗಿರಬೇಕಾದುದೆಲ್ಲವನ್ನೂ ಅವಗತ ಮಾಡಿಕೊಂಡರು. ಶಿವಯೋಗ ಸಾಧನೆಗೆ ತಮ್ಮನ್ನು ಪರಿಪೂರ್ಣ ಒಡ್ಡಿಕೊಂಡರು. ಹಾಗೆಯೇ ಕನ್ನಡ, ಇಂಗ್ಲೀಷ, ಸಂಸ್ಕೃತ ಮತ್ತು ಹಿಂದೀ ಭಾಷೆಗಳ ಅಭ್ಯಾಸದ ಜೊತೆಗೆ ವಚನಶಾಸ್ತ್ರ, ತತ್ವಶಾಸ್ತ್ರ, ಯೋಗಶಾಸ್ತ್ರದಂತಹ ಆಧ್ಯಾತ್ಮಿಕ ವಿಷಯಗಳಲ್ಲಿಯೂ ಪ್ರವೇಶ ಪಡೆದರು. ತಪೋವನ ಸದೃಶ ಶಿವಯೋಗಮಂದಿರದ ಆ ನಿಸರ್ಗ ಸುಂದರ ಪರಿಸರ, ಹಲವಾರು ಪೂಜ್ಯರ, ಶಿವಯೋಗಿಗಳ ಸಂಪರ್ಕ ಸನ್ನಿಧಾನಗಳು, ಶ್ರೀ ಸಂಗನಬಸವ ಸ್ವಾಮಿಗಳವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರ ವಾಡಿದವು. ಪೂಜ್ಯ ಲಿಂ. ಹಾನಗಲ್ ಕುಮಾರ ಸ್ವಾಮಿಗಳವರ ಬಗೆಗಿನ ಅನನ್ಯ ಭಕ್ತಿಗೆ ಬೀಜಾರೋಪಣವಾದುದು ಇಲ್ಲಿಯೆ.

ಧರ್ಮತತ್ವ, ದರ್ಶನಶಾಸ್ತ್ರ, ವಿವಿಧ ಸಿದ್ಧಾಂತದಂತಹ ಗೂಢ ವಿಷಯಗಳ ತಲಸ್ಪರ್ಶಿ ಅಧ್ಯಯನದ ಬಗೆಗೆ ತೀವ್ರ ಬಯಕೆ ಶ್ರೀಗಳಲ್ಲಿರುವುದನ್ನು ತಿಳಿದು ಅವರನ್ನು ಹೆಚ್ಚಿನ ಅಭ್ಯಾಸಕ್ಕಾಗಿ ಕಾಶಿಗೆ ಕಳಿಸುವ ವ್ಯವಸ್ಥೆ ಮಾಡಲಾಯಿತು. ಅಲ್ಲಿ ಅವರು ತಮ್ಮ ಆಸಕ್ತಿಯ ವಿಷಯಗಳಾದ ದರ್ಶನಶಾಸ್ತ್ರ, ವ್ಯಾಕರಣಶಾಸ್ತ್ರಗಳನ್ನು ಆಳವಾಗಿ ಅಭ್ಯಸಿಸಿ, ಕಾಶೀ ವಿಶ್ವವಿದ್ಯಾಲಯದಿಂದ 'ಕಾವ್ಯ ತೀರ್ಥ' 'ವೇದಾಂತಾಚಾರ್ಯ' 'ಯೋಗ ತಂತ್ರಾಚಾರ್ಯ' ಪದವಿಗಳನ್ನು ಪ್ರಥಮದರ್ಜೆಯಲ್ಲಿ ಪಡೆಯುವ ಜೊತೆಗೆ ಹಿಂದಿಯಲ್ಲಿಯೂ ಎಂ.ಎ. ಪದವಿ ಪಡೆದರು. ಇಷ್ಟಿದ್ದರೂ ಅದನ್ನು ಯಾರ ಮುಂದೆಯೂ ತೋರಿಸಿಕೊಡದ ಅಪರೂಪದ ಜಾಯಮಾನ ಅವರದು.

ಶಿವಯೋಗಮಂದಿರದಲ್ಲಿ ಆಧ್ಯಾತ್ಮಶಕ್ತಿಯನ್ನು ಬೆಳಸಿಕೊಂಡ ಪೂಜ್ಯರು, ಕಾಶಿಯಲ್ಲಿ ತತ್ವಶಾಸ್ತ್ರದ ವಿವಿಧ ಶಾಖೆಗಳಲ್ಲಿ ಅಪಾರ ಪರಿಣತಿ ಗಳಿಸಿ ಹುಬ್ಬಳ್ಳಿಯ ಸುಪ್ರಸಿದ್ಧ ಮೂರುಸಾವಿರಮಠಕ್ಕೆ ಬಂದರು. ಅಲ್ಲಿ ಮೂರುಸಾವಿಮಠದ ಅಧಿಪತಿಗಳಾದ ಜ.ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರ ಪಟ್ಟಾಭಿಷೇಕದ ದ್ವಾದಶ ವರ್ಷದ ಮಹೋತ್ಸವ (೧೯೬೧-೬೨) ನೆರವೇರಲಿತ್ತು, ಅದರ ಕ್ರಿಯಾಶೀಲ ಕಾರ್ಯದರ್ಶಿಯಾಗಿ ಅತ್ಯಂತ ಉತ್ಸಾಹದಿಂದ ಕಾರ್ಯನಿರ್ವಹಿಸಿದ ಶ್ರೀ ಸಂಗನಬಸವ ಸ್ವಾಮಿಗಳ ಕರ್ತೃತ್ವ ಶಕ್ತಿಯನ್ನು ಗುರುತಿಸಿ ಅವರನ್ನು ಯಾವುದಾದರೂ ಸುಪ್ರಸಿದ್ಧ ಮಠಕ್ಕೆ ಸ್ವಾಮಿಯನ್ನಾಗಿ ಮಾಡಿದರೆ ಸಮಾಜೋದ್ಧಾರ ನಿಶ್ಚಿತವೆಂದು ಆಲೋಚಿಸಿ ಆ ದಿಶೆಯಲ್ಲಿ ಡಾ. ಮೂಜಗಂ ಗಮನ ಹರಿಸಿದರು.

ಯೋಗಾಯೋಗವೆಂಬಂತೆ ಅಂತಹ ಒಂದು ಸಂದರ್ಭ ಬೇಗನೆ ಒದಗಿಬಂತು. ಹಂಪಿ, ಹೊಸಪೇಟೆ, ಬಳ್ಳಾರಿಗಳಲ್ಲಿ ಪ್ರಮುಖ ಶಾಖೆಗಳನ್ನು ಹೊಂದಿರುವ ಕೊಟ್ಟೂರು ಸ್ವಾಮಿಗಳ ಸಂಸ್ಥಾನಮಠ, ಆ ಭಾಗದ ಸುಪ್ರಸಿದ್ಧಮಠ. ಅದಕ್ಕೆ ಐದುನೂರು ವರ್ಷಗಳ ಇತಿಹಾಸವಿದೆ. ಅದಕ್ಕೆ ಅರಸರು, ನಾಯಕರು ವಿವಿಧ ಬಗೆಯ ದಾನ-ದತ್ತಿಗಳನ್ನಿತ್ತ ಬಗ್ಗೆ ದಾಖಲೆಗಳಿವೆ. ಆದುದರಿಂದ ಒಂದು ಕಾಲಕ್ಕೆ ಅದು ಬಹಳ ಶ್ರೀಮಂತ ಮತ್ತು ಪ್ರಭಾವಿ ಮಠವಾಗಿತ್ತು, ಪ್ರಾಯಃ ಅದರ ಹದಿನೆಂಟನೆ ಅಧಿಕಾರಿಗಳಾಗಿರ ಬಹುದಾದ ಜ. ಕೊಟ್ಟೂರು ಸ್ವಾಮಿಗಳು, ಆ ಭಾಗದ ವಿದ್ಯಾಭಿವೃದ್ಧಿಗಾಗಿ, ಬಳ್ಳಾರಿಯ ವೀರಶೈವ ವಿದ್ಯಾವರ್ಧಕ ಸಂಘಕ್ಕೆ ಸುಮಾರು ಹತ್ತು ಲಕ್ಷ ರೂಪಾಯಿ ಬೆಲೆಯ ೪೬೩ ಎಕರೆ ಜಮೀನನ್ನು ಕೊಟ್ಟಿರುವುದು ಗಮನಿಸಬೇಕಾದ ಅಂಶ. ಅವರ ಅನಂತರ ಪಟ್ಟಕ್ಕೆ ಬಂದ ಶ್ರೀಗಳು ಲಿಂಗೈಕ್ಯರಾದುದರಿಂದ ೨ ವರ್ಷಗಳವರೆಗೆ ಯಾರೂ ಅಧಿಕಾರಿಗಳಾಗಿರಲಿಲ್ಲ. ಭಕ್ತರು ಮತ್ತು ಆಸಕ್ತ ಸ್ವಾಮಿಗಳು ಒಬ್ಬ ಸಮರ್ಥ ಸ್ವಾಮಿಯ ಹುಡುಕಾಟದಲ್ಲಿದ್ದು ಮೂರುಸಾವಿರಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಸ್ವಾಮಿಗಳ ಬಳಿ ಬಂದು ಆ ಬಗ್ಗೆ ನಿವೇದಿಸಿಕೊಂಡರು. ರೋಗಿ ಬಯಸಿದ್ದೂ ಹಾಲು ಅನ್ನ, ವೈದ್ಯ ಹೇಳಿದ್ದೂ ಹಾಲು ಅನ್ನ ಎಂಬಂತಾಯಿತು. ತಮ್ಮಲ್ಲಿಯೇ ಇದ್ದ ಶ್ರೀಸಂಗನಬಸವಸ್ವಾಮಿಗಳತ್ತ ಜಗದ್ಗುರುಗಳು ಬೆರಳು ತೋರಿದರು. ಅಪೂರ್ವ ಜಂಗಮ ಲಕ್ಷಣದಿಂದ ಶೋಭಿಸುತ್ತಿದ್ದ ನೈಷ್ಠಿಕ ಬ್ರಹ್ಮಚಾರಿ, ಘನವಿದ್ವಾಂಸ, ನಯವಿನಯ ಸಂಪನ್ನ ಶ್ರೀಸಂಗನಬಸವಸ್ವಾಮಿಗಳು ಅವರಿಗೆ ಒಪ್ಪಿತವಾದರು.

ಮುಂದಿನ ಘಟನೆಗಳೆಲ್ಲ ಚಕಚಕನೆ ನಡೆದುಹೋದವು. ಕಪನಳ್ಳಿಯ ಶಾಖಾ ಶಿವಯೋಗಮಂದಿರದ ಮಹಾತಪಸ್ವಿ ಶ್ರೀ ರುದ್ರಮುನಿಸ್ವಾಮಿಗಳು ಸಂಗನಬಸವ ಸ್ವಾಮಿಗಳಿಗೆ "ಚಿನ್ಮಯ ದೀಕ್ಷೆ" ನೀಡಿದರೆ, ವಳಬಳ್ಳಾರಿಮಠದ ಅನುಪಮ ತಪಸ್ವಿ ಶ್ರೀ ಚೆನ್ನಬಸವ ತಾತನವರು, ಹುಬ್ಬಳ್ಳಿಯ ಮೂರು ಸಾವಿರಮಠದ ಪೂಜ್ಯ ಗಂಗಾಧರ ರಾಜಯೋಗೀಂದ್ರ ಸ್ವಾಮಿಗಳವರ ಸನ್ನಿಧಾನದಲ್ಲಿ "ನಿರಂಜನದೀಕ್ಷೆ" ದಯಪಾಲಿಸಿದರು. ತದನಂತರ ಪೂಜ್ಯ ಶ್ರೀ ಸಂಗನಬಸವ ಮಹಾಸ್ವಾಮಿಗಳು, ೫೦೦ ವರ್ಷದ ಭವ್ಯ ಪ್ರಾಚೀನ ಪರಂಪರೆಯ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನಮಠದ ಹತ್ತೊಂಬತ್ತನೆಯ ಪೀಠಾಧಿಕಾರಿಗಳಾಗಿ, ೧೯೬೨ ಜೂನ್ ಒಂದನೆಯ ದಿನಾಂಕದಂದು ಜಯಘೋಷದ ಮಧ್ಯೆ ಅಧಿಕಾರ ಸ್ವೀಕರಿಸಿದರು. ಉತ್ಸವಾದಿಗಳು ಅತ್ಯಂತ

ಸಂಭ್ರಮದಿಂದ ಅಂದು ನೆರವೇರಿದವು. ಅಂದಿನಿಂದ ಇಂದಿನವರೆಗೆ ತಮ್ಮ ಕರ್ತೃತ್ವಶಕ್ತಿ ಸಂಘಟನಾ ಶಕ್ತಿ ಮತ್ತು ಸಂಯೋಜಕ ಶಕ್ತಿಗಳೆಂಬ ಶಕ್ತಿತ್ರಯಗಳ ಬಲದಿಂದ ಶ್ರೀಮಠದ ಇತಿಹಾಸದಲ್ಲಿ ಹೊಸ ಹೊಸ ಆಯಾಮಗಳನ್ನು ತೆರೆಯುತ್ತ ಪೂಜ್ಯಶ್ರೀ ಸಂಗನಬಸವಸ್ವಾಮಿಗಳವರು ಪವಾಡ ಸದೃಶ ಕಾರ್ಯಗಳನ್ನೆಸಗುತ್ತ ಎಲ್ಲ ಧರ್ಮೀಯರ ಗೌರವಾದರಗಳಿಗೆ ಭಾಜನರಾಗಿದ್ದಾರೆ.

ಗ್ರಾಮೀಣ ಪ್ರದೇಶದಲ್ಲಿ ಅತ್ಯದ್ಭುತ ಶೈಕ್ಷಣಿಕ ಕ್ರಾಂತಿಯನ್ನೆಸಗಿದ ಹಾಲಕೆರೆಯ ಶ್ರೀ ಅನ್ನದಾನೀಶ್ವರ ಸಂಸ್ಥಾನಮಠದ ಪೀಠಾಧಿಕಾರಿಗಳಾಗಿದ್ದ ಪೂಜ್ಯ ಶ್ರೀ ಗುರು ಅನ್ನದಾನೀಶ್ವರ ಮಹಾಸ್ವಾಮಿಗಳವರ ಲಿಂಗೈಕ್ಯ ನಂತರ, ಆ ಶ್ರೀಮಠಕ್ಕೆ ಒಂದು ಬಗೆಯ ಮಂಕು ಹಿಡಿದಂತಾಗಿತ್ತು, ಆ ಮಂಕನ್ನು ತೆಗೆದುಹಾಕಿ ಶ್ರೀಮಠವು ಪುನರ್ ಪ್ರಜ್ವಲಿಸುವಂತೆ ಮಾಡುವ ಕ್ಷಮತೆ, ಪೂಜ್ಯಶ್ರೀ ಸಂಗನಬಸವಸ್ವಾಮಿಗಳಲ್ಲಿ ಮಾತ್ರ ಇದೆ ಎಂದು ಭಾವಿಸಿದ ಆ ಮಠದ ಭಕ್ತರು ಮತ್ತು ಆ ಮಠದ ಬಗ್ಗೆ ಕಾಳಜಿ ಇರಿಸಿಕೊಂಡಿದ್ದ ಒಬ್ಬಿಬ್ಬ ಹಿರಿಯ ಸ್ವಾಮಿಗಳು ಸೇರಿ, ಅವರನ್ನೇ ಹಾಲಕೆರೆಯ ಸಂಸ್ಥಾನಮಠಕ್ಕೆ ಅಧಿಕಾರಿಗಳನ್ನಾಗಿ ಮಾಡಿದರು. (೨೭-೮-೧೯೮೭). ಮಾಡಬೇಕಾದ ಕರ್ತವ್ಯಕ್ಕೆ ಎಂದೂ ಬೆನ್ನು ತೋರಿಸದ ಧೀಮಂತ ವ್ಯಕ್ತಿತ್ವದ ಶ್ರೀ ಸಂಗನಬಸವ ಮಹಾ ಸ್ವಾಮಿಗಳು, ಅದನ್ನು ಸ್ವಾಮಿಕಾರ್ಯವೆಂದು ಸ್ವೀಕರಿಸಿ, ಇಮ್ಮಡಿ, ಮುಮ್ಮಡಿ ಹುರುಪು, ಹುಮ್ಮಸಿನಿಂದ ಸಮಾಜೋಧಾರ್ಮಿಕ ಹಾಗೂ ಶೈಕ್ಷಣಿಕ ಕಾರ್ಯಗಳಲ್ಲಿ ತಮ್ಮನ್ನು ಪೂರ್ಣ ರೂಪದಲ್ಲಿ ತೊಡಗಿಸಿಕೊಂಡಿದ್ದಾರೆ. ಹಾಲಕೆರೆಯ ಶ್ರೀಮಠ ಗ್ರಹಣ ಬಿಟ್ಟ ಸೂರ್ಯನಂತೆ ಪ್ರಜ್ವಲಿಸುತ್ತ ಭಕ್ತವೃಂದವನ್ನು ಆಕರ್ಷಿಸುತ್ತಲಿದೆ. ಆ ಪ್ರದೇಶದ ಜನ ಅವರನ್ನು ನಡೆದಾಡುವ ದೇವರೆಂದು ಭಾವಿಸಿ ಮುಗಿದ ಕೈ ಬಾಗಿದ ತಲೆಯಾಗಿ ಶ್ರೀಗಳಿಗೆ ತಮ್ಮ ಭಕ್ತಿ ಭರಿತ ನಮನಗಳನ್ನು ಸಲ್ಲಿಸುತ್ತಿದ್ದಾರೆ.

**ಸರ್ವಧರ್ಮಸಮಾನ ದೃಷ್ಟಿ ಮತ್ತು ಧಾರ್ಮಿಕ ಸೌಹಾರ್ದತೆಯ ಹರಿಕಾರರು :**

ಎಲ್ಲ ಧರ್ಮೀಯರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಶ್ರೀಗಳವರ ವಿಧಾನ ಅನುಕರಣೀಯವೂ ವಿಶಿಷ್ಟವೂ ಆಗಿದೆ. ಶ್ರೀ ಕೊಟ್ಟೂರು ಸ್ವಾಮಿ ಸಂಸ್ಥಾನ ಮಠ ಮತ್ತು ಹಾಲಕೆರೆಯ ಶ್ರೀ ಅನ್ನದಾನೀಶ್ವರ ಸಂಸ್ಥಾನ ಮಠ, ಈ ಮಠದ್ವಯಗಳ ಅಧಿಕಾರ ವಹಿಸಿಕೊಂಡ ಕೂಡಲೇ ಅವರು ಮಾಡಿದ ಮೊದಲ ಕೆಲಸವೆಂದರೆ, ಎಲ್ಲ ಧರ್ಮದವರ ಮನೆಗೆ ಸ್ವತಃ ಹೋಗಿ, "ಎಲ್ಲ ಧರ್ಮದವರೂ ಸಮಾನರು ಅವರೆಲ್ಲ ಒಬ್ಬನೇ ದೇವನ ಮಕ್ಕಳು", ಎಂಬ ಸಂದೇಶವಿತ್ತು ಮಠದ ಬಗ್ಗೆ ತಮ್ಮ ಬಗ್ಗೆ ಅವರೆಲ್ಲರಲ್ಲಿ ವಿಶ್ವಾಸ ಚಿಗುರುವಂತೆ ಮಾಡಿದರು. ಇಂದಿನ ದಿನಮಾನಗಳಲ್ಲಿ ಇದು ತುಂಬಾ ಮಹತ್ವದ್ದು

**ಬಸವಪುರಾಣ ಪ್ರವಚನಕ್ಕೆ ಹೊಸದಿಕ್ಕು ಹೊಸ ಆಯಾಮವಿತ್ತವರು :**

ಪೂಜ್ಯಶ್ರೀಗಳವರು ಮಾಡಿದ ಒಂದು ಅನುಪಮ ಮಹತ್ವದ ಕಾರ್ಯವೆಂದರೆ ಭೀಮಕವಿಯ ಬಸವಪುರಾಣದ ಪ್ರವಚನ ಪರಂಪರೆಗೆ ಒಂದು ಹೊಸತನವನ್ನು ತಂದುಕೊಟ್ಟದ್ದು ಇದು ಅವರ ಸಮಕಾಲೀನ ಪ್ರಜ್ಞೆಯ ದ್ಯೋತಕವಾಗಿದೆ. "ಸರ್ವಧರ್ಮ ಧೇನು ನಿವಹಕ್ಕೆ ಆಡುಂಬೊಲಂ ಬೆಳ್ವೊಲಂ" ಎಂಬ ಶಾಸನೋಕ್ತ ಮಾತನ್ನು ಕಲುಷಿತ ವಾತಾವರಣದ ಇಂದಿನ ದಿನಮಾನಗಳಲ್ಲಿ ಸಾಕಾರಗೊಳಿಸಲು ಸಂಕಲ್ಪಿಸಿದರು. ತಾವು ಮಾಡಿದ ಆ ಮಹಾಸಂಕಲ್ಪದ ಪ್ರಕಾರ ಬಸವ ಪುರಾಣದ ಒಟ್ಟು ಹನ್ನೆರಡು ಪ್ರವಚನಗಳನ್ನು ಹನ್ನೆರಡು ಬೇರೆ ಬೇರೆ ಊರುಗಳಲ್ಲಿ ಒಂದೊಂದು ವರ್ಷ ಕನಿಷ್ಠ ೬೩ ದಿನ ಗರಿಷ್ಠ ತೊಂಬತ್ತೈದು ದಿನ ಬಹಳ ಅದ್ದೂರಿಯಿಂದ ನಡೆಸುವುದಾಗಿತ್ತು. ಅಂತಹ ಮೊದಲ ಬಸವಪುರಾಣ ಪ್ರವಚನ ನಡೆದದ್ದು ಹೊಸಪೇಟೆಯ ಅವರ ಶ್ರೀಮಠದಲ್ಲಿ ೧೯೮೩ರಲ್ಲಿ.

ಪೂಜ್ಯ ಶ್ರೀಗಳವರು ಜಗದ್ಗುರು ಕೊಟ್ಟೂರುಸ್ವಾಮಿ ಸಂಸ್ಥಾನ ಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡದ್ದು ೧೯೭೨ರಲ್ಲಿ ೧೯೮೩ಕ್ಕೆ ಹನ್ನೊಂದು ತುಂಬಿ ೧೨ಕ್ಕೆ ಪ್ರವೇಶದ ವರ್ಷ ಎಂದರೆ ದ್ವಾದಶ ವರ್ಷದ ಆರಂಭ. ಇತರ ಬಹುತೇಕ ಸ್ವಾಮಿಗಳಂತೆ ಶ್ರೀಗಳು ಅದನ್ನು ಅದ್ದೂರಿಯಿಂದ ಆಚರಿಸಿಕೊಳ್ಳಲು ಬಯಸದೆ, ಬಸವಪುರಾಣ ಪ್ರವಚನದ ತಮ್ಮ ಯೋಜನೆಯನ್ನು ಕಾರ್ಯರೂಪಕ್ಕಿಳಿಸಲು ಬಯಸಿದರು. ಪ್ರಸಿದ್ಧಿ ಪ್ರಚಾರಗಳಿಗೆ ಎಳ್ಳಷ್ಟೂ ಮನಸ್ಸು ಮಾಡದ ಅವರ ವ್ಯಕ್ತಿತ್ವದ ಒಂದು ಮಹತ್ವದ ಅಂಶವನ್ನು ಇಲ್ಲಿ ಗುರುತಿಸಬಹುದಾಗಿದೆ.

ಹೊಸಪೇಟೆಯ ಶ್ರೀಮಠದಲ್ಲಿ ನಡೆದ ಬಸವಪುರಾಣದ ಮೊದಲ ಪ್ರವಚನ (೧೯೮೩) ಸಂಸ್ಮರಣೀಯವಾದುದು ಮತ್ತು ಸದಾಕಾಲ ಜನಮನದಲ್ಲಿ ಅಚ್ಚೊತ್ತಿದಂತೆ ಇರುವಂತಹದು. ಅದು ತೊಂಬತ್ತೈದು ದಿನ ನಡೆಯಿತು. ಪ್ರತಿಕಾಂಡದ ಆರಾಧನಾ ಸಂದರ್ಭದಲ್ಲಿ ಸ್ವತಃ ಶ್ರೀಗಳು ಹಳ್ಳಿಹಳ್ಳಿಗಳಿಗೆ ಹೋಗಿ, ಪುರಾಣ ಕೇಳಲು ಮತ್ತು ಬಸವ ಪ್ರಸಾದ ಸ್ವೀಕರಿಸಲು ಬರುವಂತೆ ಎಲ್ಲ ಧರ್ಮದವರಿಗೂ ಆಮಂತ್ರಣವೀಯುತ್ತಿದ್ದರು. ದೇಶದ ಪ್ರಗತಿಗೆ ಇಂದಿನ ದಿನಗಳಲ್ಲಿ ಮತೀಯ ಸೌಹಾರ್ದ ಅತ್ಯಗತ್ಯ.

ಅದನ್ನು ಎಲ್ಲ ಧರ್ಮದವರ ಹೃದಯ ಹೊಲದಲ್ಲಿ ಬಿತ್ತಿ ಬೆಳೆಯುವ ವಾತಾವರಣವನ್ನು ನಿರ್ಮಿಸುವುದು ಸ್ವಾಮಿಗಳಾದವರ ಮುಖ್ಯ ಕರ್ತವ್ಯವೆಂಬ ಪ್ರಗತಿಪರ ವಿಚಾರ ಶ್ರೀಗಳದು. ಮುಂದೆ ಬೇರೆ ಬೇರೆ ಊರುಗಳಲ್ಲಿ ನಡೆದ ಬಸವ ಪುರಾಣ ಪ್ರವಚನದ ಸಂದರ್ಭದಲ್ಲಿಯೂ ಇದು ಮುಂದುವರಿಯಿತು. ಇದರ ಅಂಗವಾಗಿ ವಿಶೇಷ ಉಪನ್ಯಾಸಗಳು, ಅಯ್ಯಾಚಾರ, ಲಿಂಗದೀಕ್ಷೆ, ಸಮಾಜಕ್ಕೆ ಗಣನೀಯ ಸೇವೆಸಲ್ಲಿಸಿದ ಮಹನೀಯರಿಗೆ ಮತ್ತು ವಿದ್ವಾಂಸರಿಗೆ ಸನ್ಮಾನ, ಎಲ್ಲ ಧರ್ಮಕ್ಕೆ ಸೇರಿದ ಜೋಡಿಗಳ ಸಾಮೂಹಿಕ ವಿವಾಹ-ಮುಂತಾದ ಇನ್ನೂ ಹಲವಾರು ಕಾರ್ಯಕ್ರಮಗಳು "ಅಭೂತಪೂರ್ವವೆಂಬಂತೆ" ನೆರವೇರಿದವು.

ಹಾಲಕೆರೆಯ ಶ್ರೀ ಅನ್ನದಾನೀಶ್ವರ ಸಂಸ್ಥಾನ ಮಠದ ಅಧಿಕಾರ ವಹಿಸಿಕೊಂಡ ಒಂದೆರಡು ತಿಂಗಳಲ್ಲಿಯೆ (೪-೧೧-೮೭) ಬಸವಪುರಾಣ ಪ್ರವಚನ ಮತ್ತು ಬಸವ ಪ್ರಸಾದ ವಿತರಣೆಯ ಮಹಾಕಾರ್ಯವನ್ನು ಬಹುದೊಡ್ಡ ಪ್ರಮಾಣದಲ್ಲಿ ಹಮ್ಮಿಕೊಂಡು, ಅತ್ಯಂತ ಯಶಸ್ವಿ ರೀತಿಯಲ್ಲಿ ಪೂರೈಸಿದುದು ಅವರ ಸಂಘಟನಾ ಶಕ್ತಿಯ ಸಂಕೇತ. ಬಸವ ಜ್ಯೋತಿಯ ಮೆರವಣಿಗೆ, ಅದಕ್ಕೆ ಜನತೆ ಸ್ಪಂದಿಸಿದ ರೀತಿ, ತಮ್ಮ ತಮ್ಮ ಊರುಗಳನ್ನು ತಳಿರು ತೋರಣಗಳಿಂದ ಸಿಂಗರಿಸಿ ಬಸವ ಜ್ಯೋತಿಯನ್ನು ಸ್ವಾಗತಿಸಿದ ಆ ಸಂಭ್ರಮ ಎಲ್ಲವೂ ಅನನ್ಯ. ಇಲ್ಲಿ ಎಲ್ಲ ಧರ್ಮದವರು ಮನದುಂಬಿ, ಎದೆದುಂಬಿ, ಬಸವೋತ್ಸವದಲ್ಲಿ ಭಾಗವಹಿಸಿದ್ದು ಒಂದು ವಿಶೇಷ. ಕರ್ನಾಟಕದಲ್ಲಂತೂ ಸರಿಯೆ ಕರ್ನಾಟಕದ ಆಚೆಯ ಆಂಧ್ರಪ್ರದೇಶದಲ್ಲಿಯೂ ಬಸವ ಪುರಾಣ ಪ್ರವಚನವನ್ನು ಕನ್ನಡ ಮತ್ತು ತೆಲಗು ಭಾಷೆಯಲ್ಲಿ ಶ್ರೀಶೈಲದಲ್ಲಿ ಏರ್ಪಡಿಸಿದ್ದು ದೊಡ್ಡ ಸಾಹಸ.

ಇಂತಹ ಬೃಹತ್ ಕಾರ್ಯಗಳಿಗೆಲ್ಲ ಶ್ರೀಗಳವರು ಜೋಳಿಗೆ ಹಾಕಿ ಭಿಕ್ಷೆಗೆ ಹೋಗುತ್ತಿರಲಿಲ್ಲವೆಂಬುದು ಅವಶ್ಯ ಗಮನಿಸ ಬೇಕಾದ ಅಂಶ. ಸ್ವಾಮಿಗಳವರಲ್ಲಿ ಅವರು ತಮಗಾಗಿ ಮಾಡುತ್ತಿರುವ ಕಾರ್ಯಗಳಲ್ಲಿ ಅಪಾರ ನಂಬಿಕೆಯನ್ನಿಟ್ಟ ಜನರು ಸ್ವಯಂ ಪ್ರೇರಣೆಯಿಂದಲೆ ಭಕ್ತಿಯ ಕಾಣಿಕೆಯನ್ನು ತಮ್ಮ ತಮ್ಮ ಯೋಗ್ಯತಾನುಸಾರ ಸಲ್ಲಿಸಿ, ಶ್ರೀಗಳ ಕಾರ್ಯ ಸಾಂಗಗೊಳ್ಳಲು ಕಾರಣರಾಗುತ್ತಿದ್ದರು.

**ಸಂಚಾರಿ ಬಸವ ಪುರಾಣ ಪ್ರವಚನದ ಪ್ರವರ್ತಕರು :**

ನಿಜವಾದ ಅರ್ಥದಲ್ಲಿ ಇದೊಂದು ಹೊಸಯೋಜನೆ. ಇದಕ್ಕೊಂದು ಹಿನ್ನಲೆಯಿದೆ. ಬಳ್ಳಾರಿ ಜಿಲ್ಲೆಯ ನಾಲ್ಕು ತಾಲೂಕು ಗಳಲ್ಲಿ ಬರಗಾಲ ಕಾಣಿಸಿಕೊಂಡಾಗ ತಿಂಗಳಗಟ್ಟಲೆ ಬಸವಪುರಾಣ ಪ್ರವಚನ ನಡೆಸುವುದು ಸರಿಯಲ್ಲವೆಂದು ಭಾವಿಸಿದ ಶ್ರೀಗಳು ಹಳ್ಳಿಗಳ ಪ್ರಮಾಣಕ್ಕೆ ತಕ್ಕಂತೆ ಒಂದೋ ಎರಡೋ ದಿವಸ ಪುರಾಣ ನಡೆಸಿ ಮುಂದಿನ ಊರಿಗೆ ಹೋಗುವ ಹೊಸ ಹಾದಿಯನ್ನು ಹುಡುಕಿದರು. ಅದೇ ಸಂಚಾರಿ ಬಸವ ಪುರಾಣ. ಜನರಿಗೂ ಭಾರವಾಗದ ತಮ್ಮ ಉದ್ದೇಶವೂ ಈಡೇರುವ ಯೋಜನೆಯಿದು. ಬರಗಾಲವಿದ್ದ ಬಳ್ಳಾರಿ ಜಿಲ್ಲೆಯ ಆ ನಾಲ್ಕು ತಾಲೂಕುಗಳ ಅರವತ್ತಾರು ಹಳ್ಳಿಗಳಲ್ಲಿ ಅಂತಹ ಕಠಿಣ ಪರಿಸ್ಥಿತಿಯಲ್ಲಿಯೂ ಬಸವಪುರಾಣ ಪ್ರವಚನ ನಡೆದುದು, ಶ್ರೀಗಳವರ ಪ್ರಭಾವದ ದ್ಯೋತಕವಾಗಿದೆ.

ಹೀಗೆ ಸಂಚಾರಿ ಬಸವಪುರಾಣ ಮಾಧ್ಯಮದ ಮೂಲಕವೂ ಎಲ್ಲ ಮತ ಬಾಂಧವರು ಸಾಮೂಹಿಕವಾಗಿ ಬಸವಪ್ರಸಾದ ಸ್ವೀಕರಿಸುವ ಅವಕಾಶವನ್ನು ಹಳ್ಳಿಗರಿಗೆ ಶ್ರೀಗಳು ಒದಗಿಸಿಕೊಟ್ಟ ಕಾರಣದಿಂದಾಗಿ, ಅವರೆಲ್ಲ ತಮ್ಮಲ್ಲಿದ್ದ ಭೇದ ಭಾವವನ್ನು ಮರೆತು ಸೌಹಾರ್ದಯುತ ಜೀವನ ಸಾಗಿಸಲು ಅನುಕೂಲವಾಯಿತು. ಸಾಂಪ್ರದಾಯಿಕತೆಯನ್ನು ಉಳಿಸಿಕೊಂಡೂ ಆಧುನಿಕತೆಯನ್ನು ಹೇಗೆ ಸಾಧಿಸಬಹುದೆಂಬುದಕ್ಕೆ ಸಂಚಾರಿ ಬಸವ ಪುರಾಣ ಪ್ರವಚನ ಒಂದು ಉತ್ತಮ ಉದಾಹರಣೆಯಾಗಿದೆ. ಶ್ರೀಗಳು ಇದನ್ನು ಸಾಧಿಸಿ ಉಳಿದ ಸ್ವಾಮಿಗಳಿಗೆ ಉದಾಹರಣೆಯಾದರು.

**ಆಧುನಿಕ ಅಗತ್ಯಕ್ಕೆ ತಕ್ಕ ಶಿಕ್ಷಣ ಸಂಸ್ಥೆಗಳ ಸ್ಥಾಪನೆ :**

ಪೂಜ್ಯ ಶ್ರೀ ಸಂಗನಬಸವ ಸ್ವಾಮಿಗಳವರ ಒಂದು ವೈಶಿಷ್ಟ್ಯವೆಂದರೆ ಹೊಸ ಶಿಕ್ಷಣ ಕೇಂದ್ರಗಳನ್ನು ಆರಂಭಿಸುವ ಪೂರ್ವದಲ್ಲಿ ಅವುಗಳ ಅಗತ್ಯತೆಯ ಬಗ್ಗೆ ಪರ್ಯಾಲೋಚಿಸಿ ಕಾರ್ಯಪ್ರವೃತ್ತರಾಗುವುದು. ಕಲೆ, ವಿಜ್ಞಾನ, ವಾಣಿಜ್ಯ ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ, ಪದವಿ ಕಾಲೇಜುಗಳು ಸಾಕಷ್ಟಿರುವುದುರಿಂದ, ಅಂತಹ ಕಾಲೇಜುಗಳನ್ನು ಹೊಸದಾಗಿ ಆರಂಭಿಸುವುದಕ್ಕೆ ಶ್ರೀಗಳಿಗೆ ಆಸಕ್ತಿ ಕಡಿಮೆ.

'ಶ್ರೀ ಕೊಟ್ಟೂರೇಶ್ವರ ಔದ್ಯೋಗಿಕ ತರಬೇತಿ ಕೇಂದ್ರ', 'ಕಿವುಡರ ಮೂಕರ ವಸತಿ ಶಾಲೆ', 'ಶ್ರೀ ಬಸವೇಶ್ವರ ಪ್ರಾಥಮಿಕ ಶಾಲೆ', 'ಆಯುರ್ವೇದ ಕೇಂದ್ರ', ಜೂನಿಯರ್ ಕಾಲೇಜ, ಪ್ರಕೃತಿ ಚಿಕಿತ್ಸಾ ಕೇಂದ್ರ', 'ಬಿದರಿ ಕುಮಾರೇಶ್ವರ ಸಂಗೀತ

ಪಾಠಶಾಲೆ', ಶಿಶುವಿಹಾರ–ಇತ್ಯಾದಿಗಳ ಪ್ರಾರಂಭಕ್ಕೆ ಪೂಜ್ಯ ಶ್ರೀಗಳು ಒತ್ತು ಕೊಟ್ಟಿರುವುದನ್ನು ಗಮನಿಸಬಹುದು : ಆಯುರ್ವೇದ ಕೇಂದ್ರದಲ್ಲಿ ರೋಗಿಗಳ ರೋಗ ಪರೀಕ್ಷೆಯ ಜೊತೆಗೆ, ಪುಕ್ಕಟೆ ಔಷಧೋಪಚಾರ ಮತ್ತು ಪ್ರಸಾದದ ವ್ಯವಸ್ಥೆಯನ್ನು ಮಾಡಲಾಗುತ್ತದೆ. ಬಸವೇಶ್ವರ ಪ್ರಾಥಮಿಕ ಶಾಲೆಯು ನೀತಿಯ ನೆಲಗಟ್ಟಿನ ಮೇಲೆ ಮಕ್ಕಳ ವ್ಯಕ್ತಿತ್ವವನ್ನು ರೂಪಿಸುವ ಉದ್ದೇಶವನ್ನು ಹೊಂದಿದೆ. ಇಲ್ಲಿ ಸಾಮಾನ್ಯ ವಿಷಯಗಳ ಕಲಿಕೆಯ ಜೊತೆಗೆ ನಮ್ಮ ದೇಶದ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳಾದ, ಸರ್ವ ಧರ್ಮ ಸಮಾನದೃಷ್ಟಿ, ಸಹಕಾರ ಮನೋಭಾವನೆ, ಮತೀಯ ಸೌಹಾರ್ದತೆ ಮತ್ತು ಸಮನ್ವಯತೆ ಇತ್ಯಾದಿ ಆದರ್ಶ ಜೀವನ ಮೌಲ್ಯಗಳನ್ನು ರೂಢಿಸಿಕೊಳ್ಳಲು ತರಬೇತಿ ನೀಡಲಾಗುತ್ತದೆ.

ವಿದ್ಯಾರ್ಥಿಗಳ ಶೈಕ್ಷಣಿಕ ದತ್ತು ಸ್ವೀಕಾರ ಯೋಜನೆ :

ಶ್ರೀಗಳವರು ಕೈಗೆತ್ತಿಕೊಂಡ ಇನ್ನೊಂದು ಉಲ್ಲೇಖನೀಯ ಯೋಜನೆಯೆಂದರೆ, ಪ್ರತಿಭಾವಂತ ಗ್ರಾಮೀಣ ಬಡವಿದ್ಯಾರ್ಥಿಗಳನ್ನು ಶೈಕ್ಷಣಿಕವಾಗಿ ದತ್ತು ತೆಗೆದುಕೊಂಡು (ಪ್ರತಿವರ್ಷ ೨೦ರಿಂದ ೨೫) ಅವರಿಗೆ ಊಟ, ವಸತಿ, ವಸ್ತ್ರ, ಪುಸ್ತಕಾದಿಗಳನ್ನಿತ್ತು ಎಸ್.ಎಸ್.ಎಲ್.ಸಿ.ವರೆಗೆ ಪುಕ್ಕಟೆಯಾಗಿ ಓದಿಸುವುದು. ನಿಜಕ್ಕೂ ಇತರ ಸ್ವಾಮಿಗಳಿಗೆ ಇದೊಂದು ಅನುಕರಣೀಯ ಕಾರ್ಯ.

ಗಡಿನಾಡಿನಲ್ಲಿರುವ ಕನ್ನಡ ಮಕ್ಕಳಿಗೆ, ಕನ್ನಡ ಮಾಧ್ಯಮದಲ್ಲಿಯೆ ಶಿಕ್ಷಣ ಒದಗಿಸುವ ಉದ್ದೇಶದಿಂದ ಹೊನ್ನಳ್ಳಿಯಲ್ಲಿ (ಸಿರಗುಪ್ಪ ತಾಲೂಕು) ಪ್ರಾಥಮಿಕ ಶಾಲೆಯೊಂದನ್ನು ಆರಂಭಿಸಿ ೨೫೦ ಜನ ಮಕ್ಕಳಿಗೆ ಉಚಿತ ಶಿಕ್ಷಣ, ವಸತಿ ಮತ್ತು ಪ್ರಸಾದದ ವ್ಯವಸ್ಥೆ ಮಾಡಲಾಗಿದೆ. ಇದು ಕನ್ನಡ ನಾಡು ಮತ್ತು ನುಡಿಗಳ ಬಗ್ಗೆ ಶ್ರೀಗಳಲ್ಲಿರುವ ಅಭಿಮಾನ ಹಾಗೂ ಆಸಕ್ತಿಗಳನ್ನು ಎತ್ತಿ ತೋರಿಸುತ್ತದೆ.

ಮೌಲಿಕ ಕನ್ನಡ ಗ್ರಂಥಗಳ ಪ್ರಕಾಶನ :

ಕನ್ನಡ ಸಾಹಿತ್ಯದ ಉಳಿವು ಮತ್ತು ಬೆಳವಣಿಗೆಗಳ ಬಗ್ಗೆ ಶ್ರೀಗಳಿಗೆ ಅಪಾರ ಆಸಕ್ತಿ 'ಕೊಟ್ಟೂರು ಸ್ವಾಮಿ ಗ್ರಂಥಮಾಲೆ' ಹಾಲಕೆರೆ ಅನ್ನದಾನೀಶ್ವರ ಗ್ರಂಥಮಾಲೆ 'ಮಹಾಕವಿ ಹರಿಹರ ಸ್ಮಾರಕ ಸಂಶೋಧನ ಕೇಂದ್ರ ಗ್ರಂಥ ಮಾಲೆ'–ಇವುಗಳ ಮೂಲಕ 'ವಿಜಯಕಲ್ಯಾಣ' 'ಹರಿಹರನ ಸಮಗ್ರ ಕೃತಿಗಳ ಪದಕೋಶ. 'ಹಂಪೆ–ಒಂದು ಪರಿಚಯ'ದಂತಹ ಸಂಶೋಧನ ಕೃತಿಗಳನ್ನು ಹರಿಹರನ ಪ್ರಮುಖ ರಗಳೆಗಳನ್ನು 'ರಸಿಕ ಚಕ್ರಿ ಹರಿಹರ ದೇವ'ದಂತಹ ವಿಮರ್ಶಾಕೃತಿಗಳನ್ನು ಮಹಾತ್ಮರ ಜೀವನ ಚರಿತ್ರೆಗಳನ್ನು ಪ್ರಕಟಿಸಿದ್ದಾರೆ.

ರೈತರಿಗೆ ಕೃಷಿ ವಿಜ್ಞಾನದಲ್ಲಾದ ಹೊಸ ಶೋಧನೆಯ ಪರಿಚಯ :

ರೈತರೇ ದೇಶದ ಬೆನ್ನೆಲುಬೆಂಬುದನ್ನು ಗಟ್ಟಿಯಾಗಿ ನಂಬಿರುವ ಪೂಜ್ಯ ಶ್ರೀಗಳು ಗ್ರಾಮೀಣ ರೈತರತ್ತಲೂ ತಮ್ಮ ಗಮನ ಹರಿಸಿದ್ದಾರೆ. ಬಸವ ಪುರಾಣ ಪ್ರವಚನದ ಮಂಗಲ ಕಾರ್ಯ ಸಂದರ್ಭದಲ್ಲಿ ರೈತರ ಸಮಾವೇಶಗಳನ್ನು ಏರ್ಪಡಿಸಿ ನೀರು ನಿರ್ವಹಣೆ, ಸಾವಯವ ಕೃಷಿ, ಚೆಕ್‌ಡ್ಯಾಂ ನಿರ್ಮಾಣ, ಮಳೆ ನೀರಿನ ಕೊಯ್ಲು ಇತ್ಯಾದಿ ಆಧುನಿಕ ವಿಷಯಗಳ ಬಗ್ಗೆ ವಿದ್ವಾಂಸರಿಂದ ಉಪನ್ಯಾಸ, ವಿಚಾರಗೋಷ್ಠಿ, ಪ್ರಾತ್ಯಕ್ಷಿಕೆಗಳನ್ನು ವ್ಯವಸ್ಥೆಗೊಳಿಸುವ ಮೂಲಕ ರೈತರ ಜ್ಞಾನದ ಕ್ಷಿತಿಜವನ್ನು ವಿಸ್ತರಿಸಿದ್ದಾರೆ. ಪರಿಸರ ಸಂರಕ್ಷಣೆ ಕೋಮು ಸೌಹಾರ್ದತೆಯಂತಹ ಪ್ರಚಲಿತ ವಿಷಯಗಳ ಬಗ್ಗೆ ಶಿಬಿರಗಳನ್ನು ಏರ್ಪಡಿಸಿರುವುದು ಶ್ರೀಗಳ ಪ್ರಗತಿಪರ ವಿಚಾರದತ್ತ ಬೆಳಕು ತೋರಿಸುತ್ತದೆ.

ಮಠಗಳ ಪುನರುದ್ಧಾರ :

ಪೂಜ್ಯ ಶ್ರೀಗಳು ಕೊಟ್ಟೂರು ಸ್ವಾಮಿ ಸಂಸ್ಥಾನ ಮಠದ ಅಧಿಕಾರವನ್ನು ವಹಿಸಿಕೊಂಡಾಗ ಅದರ ಸ್ಥಿತಿ ತುಂಬಾ ಚಿಂತಾಜನಕವಾಗಿತ್ತು ಅದರ ಹಲವಾರು ಶಾಖಾಮಠಗಳಲ್ಲಿ ಸಮಾಜೋ–ಧಾರ್ಮಿಕ ಚಟುವಟಿಕೆಗಳು ನಿಂತು ಹೋಗಿದ್ದವು. ಶ್ರೀಮಠದ ಆಸ್ತಿಯನ್ನು ಕೆಲವರು ಅಕ್ರಮವಾಗಿ ವಶಪಡಿಸಿಕೊಂಡಿದ್ದರು. ಹಿಂದಿನ ಸ್ವಾಮಿಗಳು ಮಾಡಿದ ಸಾಲವನ್ನು ತೀರಿಸುವಂತೆ ಸಾಲಗಾರರು ಸಾಲುಗಟ್ಟಿ ನಿಂತಿದ್ದರು. ಕೆಲವರಂತೂ ಶ್ರೀಮಠದ ಬೆಲೆ ಬಾಳುವ ವಸ್ತುಗಳನ್ನು ಹಡಪ್ ಮಾಡಿಕೊಂಡಿದ್ದರು. ಹೀಗಾಗಿ ಒಂದು ಕಾಲಕ್ಕೆ ಲಕ್ಷಗಟ್ಟಲೆ ಇದ್ದ ಶ್ರೀಮಠದ ಉತ್ಪನ್ನ ವರ್ಷಕ್ಕೆ ಕೇವಲ ಎಂಟು ಹತ್ತು ಸಾವಿರಕ್ಕೆ ಇಳಿದಿತ್ತು ಆದರೂ ಶ್ರೀಗಳು ಎದೆಗೆಡಲಿಲ್ಲ. ತುಂಬಾ ಸಮಾಧಾನ ಚಿತ್ತದಿಂದ ಅವರೊಡನೆ ವ್ಯವಹರಿಸಿ, ಅವರ ವಿಶ್ವಾಸವನ್ನು ಗಳಿಸುತ್ತ ಮೊದಲು ಮಾಡಿದ ಕಾರ್ಯವೆಂದರೆ, ಅಕ್ರಮ ಸಾಗುವಳಿದಾರರಿಂದ ಶ್ರೀಮಠದ ಜಮೀನುಗಳನ್ನು ಮಾತುಕತೆಯ ಮೂಲಕ ಬಿಡಿಸಿಕೊಂಡು ಸ್ವತಃ

ಸಾಗುವಳಿ ಆರಂಭಿಸಿದ್ದು, ತತ್ಫಲವಾಗಿ ಮಠದ ಉತ್ಪನ್ನ ವರ್ಷದಿಂದ ವರ್ಷಕ್ಕೆ ಹೆಚ್ಚಾಗತೊಡಗಿತು. ಸಮಾಧಾನದ ನಿಟ್ಟುಸಿರು ಬಿಟ್ಟ ಶ್ರೀಗಳು ತಮ್ಮ ಸಮಾಜೋ–ಧಾರ್ಮಿಕ ಕಾರ್ಯಗಳಿಗೆ ಶ್ರೀಕಾರ ಹಾಕಿದರು. ತದನಂತರದ ದಿನಗಳಲ್ಲಿ ಶ್ರೀಗಳು ಕರ್ಣಧಾರತ್ವ ವಹಿಸಿದ ಹಾಲಕೆರೆಯ ಶ್ರೀ ಅನ್ನದಾನೀಶ್ವರ ಸಂಸ್ಥಾನಮಠ ಹಲವಾರು ಕಾರಣಗಳಿಂದ ತನ್ನ ತೇಜಸ್ಸನ್ನು ಕಳೆದು ಕೊಂಡಿತ್ತು, ಪ್ರಳಯ ಕಾಲದ ಮೇಘಗಳನ್ನು ಪ್ರಭಂಜನನು ಹೊಡೆದೋಡಿಸುವಂತೆ, ಆ ಮಠಕ್ಕೆ ಗಾಢವಾಗಿ ಮುಸುಕಿದ ಆತಂಕದ ಕಾರ್ಮೋಡಗಳನ್ನು ಭಕ್ತರ ವಿಶ್ವಾಸ ಸಹಕಾರದಿಂದ ದೂರಮಾಡಿ ಅದು ಪುನರಪಿ ಪ್ರಜ್ವಲಿಸುವಂತೆ ಪೂಜ್ಯಶ್ರೀಗಳು ಮಾಡಿದ್ದು ನಿಜಕ್ಕೂ ಒಂದು ಹರಸಾಹಸ. ಹೊಸಪೇಟೆ ಬಳ್ಳಾರಿ ಮತ್ತು ಇತರ ಕೆಲವು ಶಾಖಾ ಮಠಗಳನ್ನು ನವೀಕರಣಗೊಳಿಸಿ ಅವುಗಳಿಗೆ ಹೊಸ ರೂಪ ಕೊಡುವ ಪುನರುದ್ಧಾರ ಕಾರ್ಯದಲ್ಲಿ ಶ್ರೀಗಳು ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇವೆಲ್ಲವುಗಳ ಜೊತೆಗೆ ಪೂಜ್ಯರು ಬೇರೆ ಬೇರೆ ಸಮಾಜೋಧಾರ್ಮಿಕ ಸಂಘ ಸಂಸ್ಥೆಗಳ ಜೊತೆಗೆ ಘನೀಭೂತ ಸಂಬಂಧ ವಿರಿಸಿಕೊಂಡಿರುವುದು ಗಮನಾರ್ಹ. ಅಖಿಲ ಭಾರತ ವೀರಶೈವ ಮಹಾಸಭೆಯ ಬಳ್ಳಾರಿ ಜಿಲ್ಲಾ ಘಟಕದ ಅಧ್ಯಕ್ಷರಾಗಿ, ಕೂಡಲಸಂಗಮ ಅಭಿವೃದ್ಧಿ ಮಂಡಳಿಯ ಸದಸ್ಯರಾಗಿ, ತಮ್ಮನ್ನು ರೂಪಿಸಿದ ಶ್ರೀಶಿವಯೋಗ ಮಂದಿರ ಸಂಸ್ಥೆಯ ವಿಶ್ವ ಮಂಡಳಿಯ ಅಧ್ಯಕ್ಷರಾಗಿ, ಸುತ್ತೂರು ಮಠದ ಪೂಜ್ಯಶ್ರೀಗಳು ಹೊಸಪೇಟೆಯಲ್ಲಿ ಏರ್ಪಡಿಸಿದ್ದ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನದ ಕರ್ಣಧಾರತ್ವ ವಹಿಸಿ ಅತ್ಯಂತ ಉತ್ಸಾಹದಿಂದ ಕೆಲಸ ಮಾಡಿದ್ದಾರೆ.

■■

# ಮುಂಡರಗಿ ಶ್ರೀ ಜ. ಡಾ. ಅನ್ನದಾನೀಶ್ವರ ಮಹಾಸ್ವಾಮಿಗಳು

• ವಿಜಯಶ್ರೀ ಎಂ. ಹಿರೇಮಠ

ಮೃಡಗಿರಿಯ ಸಂಸ್ಥಾನ ಮಠ, ನಾಡಿನ ವೀರಶೈವ ಮಠಗಳಲ್ಲಿ ಅತ್ಯಂತ ಪ್ರಸಿದ್ಧವಾದುದೂ. ಭವ್ಯ ಪರಂಪರೆಯುಳ್ಳ ಈ ಮಠದ ಹತ್ತನೆಯ ಪೀಠಾಧಿಪತಿಗಳೇ ಅನ್ನದಾನೀಶ್ವರ ಮಹಾಸ್ವಾಮಿಗಳು. ನುಡಿದಂತೆ ನಡೆದವರು. ಆಚಾರ–ವಿಚಾರ ಸಂಪನ್ನರು. ಬರಿ ಪೀಠಾಧಿಕಾರಿಗಳಾಗಿ ಉಳಿಯದೆ ಸಾಹಿತಿಗಳಾಗಿ ಬೆಳೆದು ಕನ್ನಡ ಸಾಹಿತ್ಯದ ಸಿರಿಯನ್ನು ಸಿರಿವಂತಗೊಳಿಸಿದ ಮಹಾಮೇಧವಿಗಳು. 'ಸಕಲ ಜೀವಾತ್ಮರಿಗೂ ಲೇಸನೇ ಬಯಸುವ' ಮಣಿಹ ಹೊತ್ತವರು. ತ್ರಿಭಾಷಾ ಪಂಡಿತರಾದ ಪೂಜ್ಯರು ಸಾಹಿತ್ಯದ ವಿವಿಧ ಆಯಾಮಗಳನ್ನು ಅರಗಿಸಿಕೊಂಡು ವಿಶಿಷ್ಟ ಕೊಡುಗೆಯನ್ನಿತ್ತವರು. ಕವಿಗಳಾಗಿ, ಸಂಪಾದಕರಾಗಿ, ರಚಿಸಿದವರು. ಅಗಮ್ಯ ಪಾಂಡಿತ್ಯ ಪ್ರತಿಭೆಯುಳ್ಳ ಶ್ರೀಗಳು ನಿಂತುದೇ ಕೈಲಾಸ, ನುಡಿದುದೆ ಮಂತ್ರ.

ಪೀಠಾಧಿಪತಿಗಳಾದಂದಿನಿಂದ ಇಂದಿನವರೆಗೂ ಮುಂಡರಗಿ ಭಾಗದ ಸರ್ವತೋಮುಖ ಅಭಿವೃದ್ಧಿಗಾಗಿ ಅಹರ್ನಿಶ ಜೀವ ತೇಯ್ದವರು. ಏನೆಲ್ಲ ಎಡರು ತೊಡರುಗಳು ಬಂದರೂ ಅಚಲರಾಗಿ ನಿಂತ ವೀರ ವಿರಾಗಿಗಳು. ಧಾರ್ಮಿಕ, ಸಾಹಿತ್ಯಿಕ, ಶೈಕ್ಷಣಿಕ, ಸಾಮಾಜಿಕ ಕ್ಷೇತ್ರಕ್ಕೆ ಅಮೂಲ್ಯವಾದ ಕೊಡುಗೆಗಳನ್ನಿತ್ತಿದ್ದಾರೆ. "ಚಲಿಸುವ ಅನುಭವ ಮಂಟಪ"ವೆಂದೇ ಪ್ರಖ್ಯಾತರಾದ ಪೂಜ್ಯರು ತಮ್ಮನ್ನು ತಾವು ರಚನಾತ್ಮಕವಾಗಿ ತೊಡಗಿಸಿಕೊಂಡಿದ್ದಾರೆ. "ಶಿವಯೋಗಿಯ ಶರೀರಂ ವ್ಯಥಾ ಸವೆಯಲಾಗದು" ಎಂಬ ಮಾತಿನಂತೆ ನಡೆದವರು. ಮಾತೃ ಹೃದಯಿಗಳು, ವಾತ್ಸಲ್ಯಮಯರು, 'ಅನ್ನದಾನೀಶ'ರೆಂಬ ಅಭಿಧಾನವನ್ನು ಸಾರ್ಥಕಗೊಳಿಸಿಕೊಂಡ ಸಾಧಕರಿವರು.

"ಪರೋಪಕಾರಾಯ ಫಲಂತಿ ವೃಕ್ಷಾಃ
ಪರೋಪಕಾರಾಯ ವಹಂತಿ ನದ್ಯಃ
ಪರೋಪಕಾರಾಯ ವಹಂತಿ ಗಾವಃ
ಪರೋಪಕಾರಾರ್ಥಮಿದಂ ಶರೀರಂ"

ಎಂಬ ಶ್ಲೋಕದಂತೆ ಸದಾ ಸಮಾಜದ ಒಳಿತನ್ನೇ ಬಯಸಿದವರು.

ಶ್ರೀಗಳು ಮುಂಡರಗಿ ಶ್ರೀಮಠದ ದಶಮ ಪೀಠಾಧಿಪತಿಗಳಾಗಿ ಹಿಂದಿನ ಪೀಠಾಧಿಪತಿಗಳ ದಿವ್ಯ ಪರಂಪರೆಯನ್ನು ಮುನ್ನಡೆಸುತ್ತ ಬಂದವರು. ಕಲ್ಲಿಗೆ ಕಾಮಧೇನು ನೀರಿಗೆ ನಿಧಾನ. ಅನ್ನಕ್ಕೆ ಅಭಾವ ಎಂಬ ಮಾತಿಗೆ ಪೂರಕವಾದ ಮುಂಡರಗಿಯು ಇಂದು ಇಷ್ಟು ಪ್ರಸಿದ್ಧಿಯನ್ನು ಪಡೆಯಲು ಶ್ರೀಗಳು ಮಾಡಿದ ಹೋರಾಟ ಅಪಾರ, ಅಪ್ರತಿಮ. ಶೈಕ್ಷಣಿಕ, ಸಾಹಿತ್ಯಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಸಾಕಷ್ಟು ಮುನ್ನಡೆಯನ್ನು ಸಾಧಿಸಿದ ಯಶಸ್ಸು ಮುಂಡರಗಿ ಶ್ರೀ ಜ. ಡಾ. ಅನ್ನದಾನೀಶ್ವರ ಮಹಾಸ್ವಾಮಿಗಳದಾಗಿದೆ. ಕ್ರಿ.ಶ. ೧೯೬೯ರಲ್ಲಿ ಶ್ರೀಮಠದ ಶೂನ್ಯಸಿಂಹಾಸನವನ್ನು ಅಲಂಕರಿಸಿದ ಪೂಜ್ಯ ಜಗದ್ಗುರುಗಳು ಆದರ್ಶಗಳನ್ನಿಟ್ಟುಕೊಂಡು ಮುನ್ನಡೆದವರು. ಎಲ್ಲ ಭಾಗದ ಜನರಿಗೂ ತಮ್ಮ ಕೈಲಾದ ಸಹಾಯ – ಸಹಕಾರ ನೀಡುತ್ತ ಬಂದಿದ್ದಾರೆ. ಜಂಗಮ ಪದವನ್ನು ಸಾರ್ಥಕಪಡಿಸಿಕೊಂಡು ದಣಿವರಿಯದ ದುಡಿಮೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಭಕ್ತಿ, ಜ್ಞಾನ, ವೈರಾಗ್ಯ, ಸೇವಾನುರಾಗ, ಅಂತಃಕರಣ, ಮಾತೃಹೃದಯಿ, ವಾತ್ಸಲ್ಯಮಯಿಯಾಗಿದ್ದಾರೆ.

ಶೈಕ್ಷಣಿಕ ಸಾಧನೆ : ತ್ರಿಭಾಷಾ ಪಂಡಿತರೂ, ವಾಙ್ಮಯ ಕೃಷಿಕರೂ ಆದ ಪೂಜ್ಯರು ಶಿಕ್ಷಣ ಪ್ರೇಮಿಗಳು. ಶಿಕ್ಷಣದಿಂದಲೇ ಸಮಾಜದ ಸುಧಾರಣೆ ಎಂಬ ಸತ್ಯವನ್ನರಿತು ಶಿಕ್ಷಣ ಸಂಸ್ಥೆಗಳನ್ನು ಹುಟ್ಟು ಹಾಕಿ ಬೆಳೆಸುತ್ತ ನಡೆದಿದ್ದಾರೆ. ೧೯೨೫ರಲ್ಲಿಯೇ ಮೊಳಕೆಯೊಡೆದಿದ್ದ ವಿದ್ಯಾಸಮಿತಿ ಪೂಜ್ಯ ಜಗದ್ಗುರುಗಳ ಅವಿರತ ಪ್ರಯತ್ನದಿಂದ ಕವಲೊಡೆದು ಹೆಮ್ಮರವಾಗಿ ವಿದ್ಯಾದಾಹಿಗಳಾದ ವಿದ್ಯಾರ್ಥಿಗಳಿಗೆ ನೆಮ್ಮದಿಯ ನೆರಳು ನಿಡಿದೆ. ಸಂಸ್ಕೃತ ಪಾಠಶಾಲೆ, ಪ.ಪೂ. ಕಾಲೇಜುಗಳನ್ನು ಸ್ಥಾಪಿಸಿದ್ದಾರೆ. ಉನ್ನತ ಶಿಕ್ಷಣದ ಅಗತ್ಯತೆಯನ್ನು ಅರಿತ ಶ್ರೀಗಳು ಮಹಾವಿದ್ಯಾಲಯಗಳನ್ನು ಕೂಡ ಸಂಸ್ಥಾಪಿಸಿದ್ದಾರೆ. ತಾಂತ್ರಿಕ ವೃತ್ತಿಪರ ವಿದ್ಯಾಲಯಗಳ ಅಗತ್ಯತೆಯನ್ನರಿತು ಅವುಗಳನ್ನು ಸ್ಥಾಪಿಸಿದರು. ಈ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣ ಪಡೆದ ಅನೇಕರು ನಾಡಿನ ಶ್ರೇಷ್ಠ ಅಧಿಕಾರಿಗಳೂ, ಸಾಹಿತಿಗಳೂ ಆಗಿ ರೂಪುಗೊಂಡಿದ್ದಾರೆ.

ವೈಶಾಲ್ಯತೆಯನ್ನು ಹೊಂದಿದ ನಮ್ಮ ಶಿಕ್ಷಣರಂಗಕ್ಕೆ ಮುಂಡರಗಿ ಶ್ರೀಗಳ ಕಾಣಿಕೆ ವಿಶಿಷ್ಟವಾದುದಾಗಿದೆ. ಶ್ರೀ ಅನ್ನದಾನೀಶ್ವರ ವಿದ್ಯಾಸಮಿತಿಯ ಅಡಿಯಲ್ಲಿ ಹನ್ನೆರಡು ಪ್ರೌಢಶಾಲೆಗಳು, ಮೂರು ಪದವಿಪೂರ್ವ ಕಾಲೇಜುಗಳು, ಒಂದು ಐ.ಟಿ.ಐ. ಕಾಲೇಜು ಶಿಕ್ಷಣ ನಡೆಯುತ್ತಿದ್ದು ಟಿ.ಸಿ.ಎಚ್. (ಡಿ.ಎಡ್.) ಹಾಗೂ ಬಿ.ಎಡ್. ಶಿಕ್ಷಣ ಆರಂಭಿಸಲು ಸರಕಾರ ಅನುಮೋದನೆ ನೀಡಿದೆ.

ಶಿಕ್ಷಣ ಸಂಸ್ಥೆಗಳ ಜೊತೆ ಜೊತೆಗೆ ಎಲ್ಲ ಶಿಕ್ಷಣ ಸಂಸ್ಥೆಗಳಿಗೆ ಹೊಂದಿಕೊಂಡೇ ಪ್ರಸಾದ ನಿಲಯ ಹಾಗೂ ವಸತಿ ಶಾಲೆಗಳನ್ನು ಸ್ಥಾಪಿಸಿ ಬಡವಿದ್ಯಾರ್ಥಿಗಳ ಬಾಳು ಬೆಳಗಿದ್ದಾರೆ.

ಸಾಹಿತ್ತಿಕ ಸಾಧನೆ : ನಮ್ಮ ನಾಡಿನ ಅನೇಕ ವೀರಶೈವ ಮಠಗಳು, ಮಠಾಧೀಶರು ಸಮಾಜದ ಒಳಿತಿಗಾಗಿ ಶ್ರಮಿಸುತ್ತಲಿದ್ದಾರೆ. ಸಾಹಿತ್ಯದ ಮೂಲಕ ಸಮಾಜ ಸುಧಾರಿಸುವ ಹೊಣೆ ಹೊತ್ತಿದ್ದಾರೆ. ಅಂಥ ವಿರಳ ಮಠಗಳ ಮಠಾಧೀಶರಲ್ಲಿ ಮುಂಡರಗಿಯ ಪೂಜ್ಯ ಅನ್ನದಾನೀಶ್ವರ ಮಹಾಸ್ವಾಮಿಗಳ ಹೆಸರು ಅಗ್ರಪಂಕ್ತಿಯಲ್ಲಿ ವಿರಾಜಮಾನವಾಗಿದೆ. ಪ್ರತಿಭಾ ಸಂಪನ್ನರು, ಪರಿಶ್ರಮಿಗಳೂ, ಸತತಾಧ್ಯಯನಶೀಲರೂ ಆದ ಶ್ರೀಗಳು ಸಾಕಷ್ಟು ಸಾಹಿತ್ಯಕೃಷಿ ಗೈದಿದ್ದಾರೆ. ತ್ರಿಭಾಷಾ ಪಂಡಿತರಾದ ಪೂಜ್ಯರು ಸಮಾಜ ಸುಧಾರಣೆಯ ಕೈಂಕರ್ಯ ಹೊತ್ತವರು. ಮೌಲಿಕ ಸಾಹಿತ್ಯ ನೀಡಿ ಉಪಕರಿಸಿದ್ದಾರೆ. ಧರ್ಮ, ತತ್ತ್ವ, ಸಾಹಿತ್ಯಗಳ ತ್ರಿವೇಣಿ ಸಂಗಮವಾದ ಅವರ ಕೃತಿಗಳು ಸಮಾಜವನ್ನು ಬೆಳಕಿನತ್ತ ಕೈಹಿಡಿದುಕೊಂಡು ಹೋಗುವ ಪ್ರಾಜ್ವಲ್ಯಮಾನವಾದ ದೀವಿಗೆಗಳು. ಶ್ರೀಗಳು ಲೌಕಿಕ–ಅಲೌಕಿಕ ಸಾಹಿತ್ಯ ಕೃಷಿಗೈದಿದ್ದಾರೆ. ಸಹೃದಯರು ಅರಗಿಸಿಕೊಳ್ಳಬಹುದಾದ ಭಾಷೆ, ಶೈಲಿ, ತಂತ್ರ ಶ್ರೀಗಳದ್ದಾಗಿದೆ. ಜನರ ಬಾಳು ಹಸನಾಗಲೆಂದು ಬರೆದವರು ಪೂಜ್ಯರು. ಎಂಬತ್ತೈದಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ರಚಿಸಿ ಕನ್ನಡ ಸಾರಸ್ವತ ಲೋಕವನ್ನು ಸಿರಿವಂತಗೊಳಿಸಿದ್ದಾರೆ. ವಚನ, ಸಂಪಾದನ, ವಿಮರ್ಶೆ, ಚುಟುಕು, ಪ್ರಬಂಧ, ಪ್ರವಾಸ ಸಾಹಿತ್ಯ, ಜೀವನ ಚರಿತ್ರೆ, ನವ್ಯ ಕಾವ್ಯ – ಹೀಗೆ ಹಲವಾರು ಸಾಹಿತ್ಯ ಪ್ರಕಾರಗಳಲ್ಲಿ ಅವರ ಕೃತಿಗಳು ರಚನೆಯಾಗಿವೆ. ಇವರ ಕೃತಿಗಳು ಕನ್ನಡ ಮರಾಠಿ, ಹಿಂದಿ ಭಾಷೆಗಳಿಗೂ ಅನುವಾದಗೊಂಡಿವೆ. ಸ್ವತಃ ಗ್ರಂಥರಚನೆ ಮಾಡುವುದಷ್ಟೇ ಅಲ್ಲ ನಾಡಿನ ಅನೇಕ ಸಾಹಿತಿಗಳ ಕೃತಿಗಳನ್ನು ಶ್ರೀ ಜಗದ್ಗುರು ಅನ್ನದಾನೀಶ್ವರ ಗ್ರಂಥಮಾಲೆಯಿಂದ ಪ್ರಕಟಿಸುತ್ತಲಿದ್ದಾರೆ. ಶ್ರೀಮಠದ ಪ್ರಕಾಶನ ಸಂಸ್ಥೆಯಿಂದ ೧೮೦ಕ್ಕೂ ಹೆಚ್ಚು ಕೃತಿಗಳು ಬೆಳಕು ಕಂಡಿರುವುದು ಶ್ಲಾಘನೀಯ. ರಾಷ್ಟ್ರೀಯ ಮಟ್ಟದ, ವಿಶ್ವವಿದ್ಯಾಲಯ ಮಟ್ಟದ ವಿಚಾರ ಸಂಕಿರಣಗಳಲ್ಲಿ ಸಂಶೋಧನಾತ್ಮಕ ಪ್ರಬುದ್ಧ ಪ್ರಬಂಧಗಳನ್ನು ಮಂಡಿಸಿದ್ದಾರೆ. ಸಂಸ್ಕೃತ ಭಾಷೆಯ ಮೇಲೆ ಪ್ರಭುತ್ವ ಹೊಂದಿದ ಶ್ರೀಗಳಿಗೆ ಸಂಸ್ಕೃತ ಭಾಷೆ ನೀರು ಕುಡಿದಷ್ಟು ಸರಳ.

ಸಮಾಜದ ಶ್ರೇಯೋಭಿವೃದ್ಧಿಗಾಗಿ ಪೂಜ್ಯರು ಹಲವಾರು ಅರ್ಥಪೂರ್ಣ ಯೋಜನೆಗಳನ್ನು ಹಾಕಿಕೊಂಡಿದ್ದಾರೆ. ಅವುಗಳಲ್ಲಿ ಶ್ರೀ ಜಗದ್ಗುರು ಅನ್ನದಾನೀಶ್ವರ ಪ್ರಚಾರೋಪನ್ಯಾಸ ಮಾಲೆಯೂ ಒಂದು. ೧೯೯೦ರಲ್ಲಿ ಸಂಸ್ಥಾಪಿಸಿದ ಈ ಉಪನ್ಯಾಸಮಾಲೆಯ ಅಡಿಯಲ್ಲಿ ಅನೇಕ ವಿದ್ವಾಂಸರಿಂದ ಉಪನ್ಯಾಸಗಳನ್ನು ಮಾಡಿಸಿ ಶಿವಶರಣರನ್ನು ಕುರಿತ ಊಹಾಪೋಹಗಳಿಗೆ ಪೂರ್ಣವಿರಾಮ ದೊರೆಯುವಂತೆ ಮಾಡಿದ್ದಾರೆ. ಚನ್ನಬಸವಣ್ಣನವರನ್ನು ಕುರಿತು ಉಳವಿಯಲ್ಲಿ, ಅಲ್ಲಮಪ್ರಭುಗಳನ್ನು ಕುರಿತು ಬನವಾಸಿಯಲ್ಲಿ, ಅಕ್ಕಮಹಾದೇವಿಯನ್ನು ಕುರಿತು ಶಿಕಾರಿಪುರದಲ್ಲಿ, ಕುಮಾರ ಮಹಾಶಿವಯೋಗಿಗಳನ್ನು ಕುರಿತು ನಂದಿಕೇಶ್ವರದಲ್ಲಿ, ಸಿದ್ಧರಾಮ ಶಿವಯೋಗಿಗಳನ್ನು ಕುರಿತು ಸೊಲ್ಲಾಪುರದಲ್ಲಿ, ಬಸವಣ್ಣನವರನ್ನು ಕುರಿತು ಬಸವನ ಬಾಗೇವಾಡಿಯಲ್ಲಿ, ನಿಜಗುಣರನ್ನು ಕುರಿತು ಮಹಾಲಿಂಗಪುರದಲ್ಲಿ ಹಾಗೂ ದ್ಯಾಂಪೂರ ಚನ್ನಕವಿಗಳನ್ನು ಕುರಿತು ಕುಕನೂರಿನಲ್ಲಿ ವಿದ್ವತ್ಪೂರ್ಣ ವಿಚಾರಗೋಷ್ಠಿಗಳನ್ನು ಏರ್ಪಡಿಸಿ ಶರಣರ, ಅಜ್ಞಾತ ಕವಿಗಳ ದಿವ್ಯ ಚರಿತ್ರೆಗಳನ್ನು ನಾಡವರಿಗೆ ನೀಡಿ ಕೀರ್ತಿಭಾಜನರಾಗಿದ್ದಾರೆ. ಆ ಎಲ್ಲ ಗೋಷ್ಠಿಗಳ ಪ್ರಬಂಧಗಳನ್ನು ಪೂಜ್ಯರು ಸಂಪಾದಿಸಿ ಪ್ರಕಟಿಸಿದ್ದಾರೆ.

ಸಾಮಾಜಿಕ ಸಾಧನೆ : ಆಧುನಿಕತೆಯ ಮುಸುಕನ್ನು ಧರಿಸಿ ಆವೇಶದ ಆವೇಗದಲ್ಲಿ ನಡೆದಿರುವ ಸಮಾಜವನ್ನು ಸುಧಾರಿಸಲು ಕಂಕಣಬದ್ಧರಾದವರು. ಜನಜೀವನ ಅಸ್ತವ್ಯಸ್ತವಾಗಿ, ಮಾನವೀಯತೆ ಮರೆಯಾಗಿ, ಮಾನವ ದಾನವನಾಗುತ್ತಿದ್ದಾನೆಂಬ ನೋವು ಪೂಜ್ಯರದು. ಅಂತೆಯೇ ಸಮಾಜೋದ್ಧಾರದ ಅನೇಕ ಕೆಲಸಗಳನ್ನು ಕೈಕೊಂಡಿದ್ದಾರೆ. ಬರಗಾಲ ಪ್ರದೇಶದ ಕಡುಬಡವರಿಗೆ ಉಚಿತ ಸಾಮೂಹಿಕ ವಿವಾಹ. ವಿಧವಾ ವಿವಾಹಗಳನ್ನು ಏರ್ಪಡಿಸಿದ ವೈಚಾರಿಕ ಮನೋಭಾವದ ಪೂಜ್ಯರವರು. ಜನಸಾಮಾನ್ಯರಿಗೂ ಅನೂಕೂಲವಾಗಲೆಂದು ಕಲ್ಯಾಣ ಮಂಟಪ ಕಟ್ಟಿಸಿದ್ದಾರೆ. ಕೋಟ್ಯಾಂತರ ಬೆಲೆಬಾಳುವ ಭೂಮಿಯನ್ನು ಸಮಾಜಕ್ಕೆ ಅರ್ಪಿಸಿದ್ದಾರೆ.

ನೂತನ ವ್ಯವಸಾಯ ಪದ್ಧತಿಯನ್ನು ಪರಿಚಯಿಸುವುದಕ್ಕಾಗಿ ಶ್ರೀಮಠದಲ್ಲಿ ವೈಜ್ಞಾನಿಕ ಒಕ್ಕಲುತನ, ತೋಟಗಾರಿಕೆ, ರೇಷ್ಮೆ ಕೃಷಿ ಸಾವಯವಗೊಬ್ಬರ, ಆಧುನಿಕ ಕೃಷಿ ಉಪಕರಣಗಳ ಬಳಕೆ, ವಿಧಾನ ಕುರಿತು ತಂತ್ರಜ್ಞರಿಂದ ಪ್ರಾಯೋಗಿಕ ಉಪನ್ಯಾಸಗಳನ್ನು ಏರ್ಪಡಿಸಿ ಸ್ವತಃ ಕೃಷಿಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಪಶುಸಂಗೋಪನಾ ರೀತಿ, ಉಚಿತ ಪಶುಚಿಕಿತ್ಸೆ, ಪಶುಪ್ರದರ್ಶನ ಗಳನ್ನೇರ್ಪಡಿಸಿ ಪ್ರೋತ್ಸಾಹ ನೀಡಿ ರೈತರ ಬಾಳಿನ ದೇವರಾಗಿದ್ದಾರೆ. ಶ್ರೀಮಠದಲ್ಲಿ ಉಚಿತ ಆರೋಗ್ಯ ತಪಾಸಣೆ ಶಿಬಿರಗಳು, ನೇತ್ರ ಚಿಕಿತ್ಸೆ, ಉಚಿತ ಔಷಧಿ ವಿತರಣಾ ಕಾರ್ಯಕ್ರಮಗಳನ್ನು ನೆರವೇರಿಸುತ್ತಿದ್ದಾರೆ. ಸ್ವತಃ ಯೋಗಸಾಧಕರಾದ ಪೂಜ್ಯರು ಯೋಗ ಪರಿಣತರನ್ನು ಆಮಂತ್ರಿಸಿ ಪ್ರಾತ್ಯಕ್ಷಿಕೆಯೊಂದಿಗೆ ಉಪನ್ಯಾಸಗಳನ್ನೇರ್ಪಡಿಸಿ ಅನುಕೂಲ ಮಾಡಿಕೊಟ್ಟಿದ್ದಾರೆ.

ಧಾರ್ಮಿಕ ಸಾಧನೆ : ಸಕಲ ಧರ್ಮಗಳಲ್ಲಿ ಕಂಡುಬರುವ ನಿತ್ಯ ಸತ್ಯ ತತ್ತ್ವಗಳನ್ನು ಮೇಳೈಸಿಕೊಂಡು ದೇವರನ್ನೊಲಿಸಿಕೊಳ್ಳುವುದು ಮಾನವನ ಗುರಿ. ಈ ವಿಶಾಲಭಾವವನ್ನು ಜನಮನಕ್ಕೆ ಬೋಧಿಸಿದ ಸಮನ್ವಯದ ಹರಿಕಾರ ಜಗದ್ಗುರು ಡಾ. ಅನ್ನದಾನೀಶ್ವರ ಮಹಾಸ್ವಾಮಿಗಳು. ಧರ್ಮಾಧಿಕಾರಿಯಾಗಿ ಪೂಜ್ಯರು ಅನೇಕ ಧಾರ್ಮಿಕ ಕಾರ್ಯಗಳನ್ನು ಮಾಡಿದ್ದಾರೆ. ಮಾಡುತ್ತಲಿದ್ದಾರೆ.

ಪ್ರತಿವರ್ಷ ಮಾಘಶುದ್ಧ ತ್ರಯೋದಶಿಯಂದು ಲಿಂ. ಎಂಟನೆಯ ಜಗದ್ಗುರುಗಳ ಪುಣ್ಯಾರಾಧನೆಯ ಅಂಗವಾಗಿ ರಥೋತ್ಸವದ ಹೆಸರಿನಲ್ಲಿ ಹಲವಾರು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತ ಬಂದಿದ್ದಾರೆ. ಜಾತಿ-ಮತ-ಪಂಥಗಳೆನ್ನದೆ ಜನರು ಪಾಲ್ಗೊಂಡು ಅನುಭಾವದ ಅಮೃತವನ್ನು ಸವಿಯುತ್ತಾರೆ. ಸರ್ವಧರ್ಮಗಳ ಧರ್ಮಗುರುಗಳಿಂದ ಸದ್ವಿಚಾರಗಳನ್ನು ಉಣಬಡಿಸುತ್ತಾರೆ. ಇದು ಪೂಜ್ಯರ ಸಮನ್ವಯ ಮನೋಭಾವದ ದ್ಯೋತಕವಾಗಿದೆ.

ಆಧ್ಯಾತ್ಮವಿಲ್ಲದ ಆಧುನಿಕತೆ ಅಪೂರ್ಣವಾಗುತ್ತದೆಂಬ ಕಾರಣಕ್ಕೆ ಶಿವದೀಕ್ಷಾ ಸಂಸ್ಕಾರವನ್ನು ನೀಡುತ್ತ ಬಂದಿದ್ದಾರೆ. ಶಿವಾನುಭವ ತರಬೇತಿಯನ್ನು ನೀಡುತ್ತಲಿದ್ದಾರೆ. ಸಂಕೀರ್ಣಗೊಳ್ಳುತ್ತಿರುವ ಸಮಾಜದಲ್ಲಿ ಮನುಷ್ಯರು ನೆಮ್ಮದಿ ಕಳೆದುಕೊಳ್ಳುತ್ತಲಿದ್ದಾರೆ. ಅಂಥ ಮನುಷ್ಯರಿಗೆ ದಾರಿದೀಪವೇ ಸದಾಚಾರಗಳನ್ನು ಬೋಧಿಸುವ ಶಿವಾನುಭವ. ಪ್ರತಿತಿಂಗಳ ಪೌರ್ಣಿಮೆಗೊಮ್ಮೆ ಶಿವಾನುಭವ ನಡೆಯುತ್ತದೆ. ವೀರಶೈವರಲ್ಲಿ ಗುರು ವಿರಕ್ತರೆಂಬ ಭೇದಗಳನ್ನು ಹೊಡೆದೋಡಿಸಲು ಯತ್ನಿಸುತ್ತಿರುವ ಕೆಲವೇ ಕೆಲವು ಮಠಾಧೀಶರಲ್ಲಿ ಪೂಜ್ಯರೂ ಒಬ್ಬರಾಗಿದ್ದಾರೆ. ಹಲವಾರು ಗುರುವರ್ಗದ ಮಠಾಧೀಶರು ಶ್ರೀಗಳ ಆತಿಥ್ಯ ಪಡೆದಿದ್ದಾರೆ. ೧೯೬೭ರಲ್ಲಿ ಶಿವಯೋಗಮಂದಿರದ ಅಧ್ಯಕ್ಷಸ್ಥಾನ ವಹಿಸಿಕೊಂಡು ಶ್ರೀಗಳು ಮಾಡಿದ ಸಾಧನೆ ಅವಿಸ್ಮರಣೀಯ. ಪೂಜ್ಯರು ತಾವು ಅಧ್ಯಯನ ಮಾಡಿದ ಶಿವಯೋಗ ಮಂದಿರವನ್ನು ಸರ್ವರೀತಿಯಿಂದಲೂ ಅಭಿವೃದ್ಧಿ ಪಡಿಸಿದ್ದಾರೆ. ಮುಂಡರಗಿಯ ಶಾಖಾಮಠಗಳಲ್ಲಿ ಯೂ ಧಾರ್ಮಿಕ – ಸಾಂಸ್ಕೃತಿಕ ಚಟುವಟಿಕೆಗಳು ಅವ್ಯಾಹತವಾಗಿ ನಡೆದು ಆ ಭಾಗದ ಭಕ್ತರ ಬೇಡಿಕೆಗಳನ್ನೀಡೆರಿಸುವ ಜಾಗ್ರತ ಸ್ಥಳಗಳಾಗಿವೆ, ಆ ಮಠಗಳು.

■■

॥ ಓಂ ಶ್ರೀಗುರು ಬಸವಲಿಂಗಾಯ ನಮಃ ॥







# ಅಖಿಲ ಭಾರತ ವೀರಶೈವ ಮಹಾಸಭೆ

ಮತ್ತು

# ಶ್ರೀ ಮದ್ವೀರಶೈವ ಶಿವಯೋಗಮಂದಿರ ಸಂಸ್ಥೆ

# ಶತಮಾನೋತ್ಸವ

ದಿನಾಂಕ : ೦೯-೦೪-೨೦೧೦ ರಿಂದ ೧೩-೦೪-೨೦೧೦ ರ ವರೆಗೆ

## ಆದರದ ಆಮಂತ್ರಣ



ಸ್ಥಳ

ಶ್ರೀ ಕುಮಾರೇಶ್ವರ ಮಹಾಮಂಟಪ

ಶ್ರೀ ಮದ್ವೀರಶೈವ ಶಿವಯೋಗ ಮಂದಿರ ಸಂಸ್ಥೆ, ಶಿವಯೋಗ ಮಂದಿರ

ತಾ: ಬಾದಾಮಿ ಜಿ: ಬಾಗಲಕೋಟ

# ಅಖಿಲ ಭಾರತ ವೀರಶೈವ ಮಹಾಸಭೆ








ಅಜ್ಞಾನ, ದಾರಿದ್ರ್ಯಗಳಿಂದ ಬಳಲುತ್ತಿದ್ದ ವೀರಶೈವ/ಲಿಂಗಾಯತರ ಅಭಿವೃದ್ಧಿಗಾಗಿ ಲಿಂ. ಹಾನಗಲ್ಲ ಕುಮಾರ ಮಹಾಸ್ವಾಮಿಗಳು ೧೯೦೪ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆಯನ್ನು ಸ್ಥಾಪಿಸಿದರು. ಲಿಂ. ತ್ಯಾಗವೀರ ಲಿಂಗರಾಜ ದೇಸಾಯಿಯವರನ್ನು ಮೊದಲುಗೊಂಡು ಈ ವರೆಗೆ ೨೦ ಜನ ಅಧ್ಯಕ್ಷರು ಮಹಾಸಭೆಯ ಚುಕ್ಕಾಣಿಯನ್ನು ಹಿಡಿದು ಮುನ್ನಡೆಸಿದ್ದಾರೆ. ಪ್ರಸ್ತುತ ಅಧ್ಯಕ್ಷರಾಗಿರುವ ಶ್ರೀ ಭೀಮಣ್ಣ ಖಂಡ್ರೆಯವರ ಅವಿಶ್ರಾಂತ ಪರಿಶ್ರಮದ ಫಲವಾಗಿ ಮಹಾಸಭೆಯು ಐಂಭತ್ತುಸಾವಿರಕ್ಕಿಂತಲೂ ಅಧಿಕ ಸದಸ್ಯರನ್ನು, ಭವ್ಯ ಮತ್ತು ಸುಸಜ್ಜಿತವಾದ ನೂತನ ಕಟ್ಟಡವನ್ನು ಹೊಂದಿರುವುದು ಐತಿಹಾಸಿಕ ದಾಖಲೆ ಎನಿಸಿದೆ.

ನಮ್ಮ ಧರ್ಮ ಮತ್ತು ಸಮಾಜದ ಪ್ರಾತಿನಿಧಿಕ ಸಂಸ್ಥೆಯಾಗಿರುವ ಅಖಿಲ ಭಾರತ ವೀರಶೈವ ಮಹಾಸಭೆಯು ವರ್ಗ ಮತ್ತು ವರ್ಣಭೇದವನ್ನು ನಿರಾಕರಿಸುತ್ತ ನಮ್ಮ ದೇಶದ ಐಕ್ಯತೆ ಹಾಗು ಸಮಗ್ರತೆಯನ್ನು, ಜನಪರ ಚಳವಳಿ ಹಾಗು ಹೋರಾಟಗಳ ಮೂಲಕ ಸರ್ವಜನಾಂಗದ ಹಿತವನ್ನು ಸಾಧಿಸಿದೆ. ಜಾತಿ ಆಧಾರಿತ ಮೀಸಲಾತಿಯನ್ನು ಪ್ರತಿಪಾದಿಸುವ ಹಾವನೂರು ಆಯೋಗ, ವೆಂಕಟಸ್ವಾಮಿ ಆಯೋಗ ಹಾಗು ಮಂಡಲ ಆಯೋಗಗಳ ಪೂರ್ವಾಗ್ರಹ ಪೀಡಿತ ವರದಿಯನ್ನು ಬಲವಾಗಿ ಪ್ರತಿಭಟಿಸಿ ವೀರಶೈವ/ಲಿಂಗಾಯತರಿಗೆ ನ್ಯಾಯ ದೊರಕಿಸುವಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸಿದೆ. ಧರ್ಮಗುರುಗಳಲ್ಲಿರುವ ಸೈದ್ಧಾಂತಿಕ ಮತ್ತು ಸಾಂಪ್ರದಾಯಿಕ ವಿಚಾರಗಳಲ್ಲಿ ಸಮನ್ವಯತೆಯನ್ನು ಸಾಧಿಸಲು ಪರಿಶ್ರಮಿಸಿದೆ.




ಮಹಾನುಭಾವಿಗಳಾದ ಶಿವಶರಣರ ಚಾರಿತ್ರ್ಯಕ್ಕೆ ಕಳಂಕವನ್ನುಂಟು ಮಾಡುವ ಕೃತಿಗಳನ್ನು ಸರಕಾರದಿಂದ ಮುಟ್ಟುಗೋಲು ಹಾಕಿ[illegible] ಪರಂಪರೆಯನ್ನು ಸಂರಕ್ಷಿಸುವ ಕಾರ್ಯ ಮಾಡಿದೆ. ಸಾರ್ವಜನಿಕ ಜನಗಣತಿಯಲ್ಲಿ ಬೌದ್ಧ, ಜೈನ, ಹಿಂದೂಗಳಂತೆ ವೀರಶೈವ/ಲಿಂಗಾಯತ ಸಮುದಾಯಕ್ಕೂ ವಿಶಿಷ್ಟ ಕಾಲಂ ಹಾಗು ಸಂಕೇತ ನೀಡುವಂತೆ ಕೇಂದ್ರ ಸರಕಾರದ ಗೃಹ ಇಲಾಖೆಯನ್ನು ಒತ್ತಾಯಿಸುತ್ತ ಬಂದಿದೆ. ಜನ ಜಾಗೃತಿ ಅಭಿಯಾನದ ಮೂಲಕ ಮಹಾಸಭೆಯ ಪ್ರಮುಖರು ರಾಜ್ಯಾದ್ಯಂತ ಸಂಚರಿಸಿ ನಮ್ಮ ಸಮಾಜದ ಅಭಿವೃದ್ಧಿಗೆ ಪರಿಶ್ರಮಿಸಿದ್ದಾರೆ.




ರಾಜಕೀಯ ಸ್ವಾರ್ಥಕಾರಣವಾಗಿ 'ಅಂಗದ ಮೇಲೆ ಲಿಂಗ ಧರಿಸಿದ ಏಕ ಸಂಸ್ಕೃತಿ' ಇಂದು ಪಂಗಡ-ಉಪಪಂಗಡಗಳಲ್ಲಿ ಒಡೆದು ಹೋಗುತ್ತಿರುವುದನ್ನು ತಡೆದು ನಿಲ್ಲಿಸುವ ಹಾಗೆಯೇ ಏಕೀಕೃತ ಸದೃಢ ಸಮಾಜ ನಿರ್ಮಿಸುವ ಸತ್ಕಾರ್ಯವನ್ನು ಅಖಿಲ ಭಾರತ ವೀರಶೈವ ಮಹಾಸಭೆ ನಿರಂತರ ಮುಂದುವರಿಸಿದೆ. ಕೃಷಿತಜ್ಞರನ್ನೊಳಗೊಂಡ ಕೃಷಿ ಸಮಿತಿ ಮತ್ತು 'ಕೃಷಿಕಾಯಕ' ತ್ರೈಮಾಸಿಕ ಪತ್ರಿಕೆಯ ಮೂಲಕ ಲಿಂಗಾಯತ ಧರ್ಮೀಯರ ಪ್ರಧಾನ ಕಾಯಕವಾದ ಕೃಷಿಗೆ ಉತ್ತೇಜನ ನೀಡಿದೆ. ಜೊತೆಗೆ ಕೈಗಾರಿಕಾರಂಗ ಹಾಗು ವಾಣಿಜ್ಯ ಕ್ಷೇತ್ರದ ಅಭಿವೃದ್ಧಿಗೂ ಶ್ರಮಿಸುತ್ತಿದೆ. ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದಾಗಿ ಮತಾಂತರಕ್ಕೆ ಒಳಗಾಗುತ್ತಿರುವ ದುರ್ಬಲರಿಗೆ ಆತ್ಮಸ್ಥೈರ್ಯ ತುಂಬುತ್ತಿದೆ. ಕೃಷಿಯ ಆಧಾರಸ್ತಂಭವಾಗಿರುವ ಗೋವಂಶದ ರಕ್ಷಣೆಗೆ ಗೋಹತ್ಯೆ ನಿಷೇಧ ಕಾನೂನು ಜಾರಿಗೊಳಿಸಲು ಸರಕಾರವನ್ನು ಒತ್ತಾಯಿಸುತ್ತಿದೆ. ಜಗತ್ತಿನ ಮೂಲೆಮೂಲೆಗಳಲ್ಲಿ ವ್ಯಾಪಿಸಿದ ವೀರಶೈವ/ಲಿಂಗಾಯತರ ಪರಸ್ಪರ ಸಂಪರ್ಕ, ಸಂಸ್ಕೃತಿ, ಸಂಸ್ಕಾರಗಳ ಅಭಿವೃದ್ಧಿಗಾಗಿ ವೆಬ್‌ಸೈಟ್ ಮೂಲಕ ಮಹಾಸಭೆಯು ಪ್ರಯತ್ನಿಸುತ್ತಿದೆ.




ಸಾರ್ಥಕ ೧೧೦ ವರ್ಷಗಳನ್ನು ಕಂಡಿರುವ ಅಖಿಲ ಭಾರತ ವೀರಶೈವ ಮಹಾಸಭೆಯು ಪ್ರಸ್ತುತ ಭೀಮಣ್ಣ ಖಂಡ್ರೆಯವರ ವರೆಗೆ ೨೦ ಜನ ಕ್ರಿಯಾಶೀಲ ಅಧ್ಯಕ್ಷರ ಸೇವಾ ಪರಂಪರೆಯನ್ನು ಹೊಂದಿ ಸಮಾಜದ ಗೌರವಾದರಕ್ಕೆ ಪಾತ್ರವಾಗಿದೆ. "ಸಾಧಿಸಿದ್ದು ಸಾಸಿವೆಯಷ್ಟು, ಸಾಧಿಸಬೇಕಾದದ್ದು ಸಾಗರದಷ್ಟು" ಎಂಬ ವಿನೀತಭಾವದೊಂದಿಗೆ ವೀರಶೈವ/ಲಿಂಗಾಯತರ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗು ಸಾಂಸ್ಕೃತಿಕ ಅಭಿವೃದ್ಧಿಗೆ ನಿರಂತರ ಶ್ರಮಿಸುತ್ತಿರುವ ಅಖಿಲ ಭಾರತ ವೀರಶೈವ ಮಹಾಸಭೆಯು ತನ್ನದೇ ಉತ್ಪತ್ತಿಯಾಗಿರುವ ಮತ್ತು ಮಠಾಧೀಶರ ಐಕ್ಯತೆ ತರಬೇತಿ ಕೇಂದ್ರವೆಂಬ ಖ್ಯಾತಿಯನ್ನು ಹೊಂದಿರುವ ಬದಾಮಿ ತಾಲೂಕಿನ ಶಿವಯೋಗಮಂದಿರದಲ್ಲಿ ಆಚರಿಸಿಕೊಳ್ಳಲಿರುವ ಶತಮಾನೋತ್ಸವ ಸಮಾರಂಭ ಸಮಸ್ತ ವೀರಶೈವ/ಲಿಂಗಾಯತರ ಅಭಿಮಾನದ ಹಾಗು ಸಂಭ್ರಮದ ಸಮಾರಂಭವಾಗಿದೆ. ಬನ್ನಿ, ನಾವೆಲ್ಲ ಸಮಾರಂಭದಲ್ಲಿ ಅಭಿಮಾನದಿಂದ ಪಾಲ್ಗೊಂಡು ಸಮಾರಂಭವನ್ನು ಯಶಸ್ವಿಗೊಳಿಸೋಣ.











ದಿನಾಂಕ ೦೯-೦೪-೨೦೧೦ ಶುಕ್ರವಾರ

ಮಧ್ಯಾಹ್ನ ೧೧-೦೦ ಗಂಟೆಗೆ



೧೦೦

## ಉದ್ಘಾಟನೆ

| | |
|---|---|
| ದಿವ್ಯ ಸಾನ್ನಿಧ್ಯ | : ಕರ್ನಾಟಕ ರತ್ನ, ತ್ರಿವಿಧ ದಾಸೋಹಿ, ಶತಾಯುಷಿ<br>ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು<br>ಶ್ರೀ ಸಿದ್ಧಗಂಗಾಮಠ, ತುಮಕೂರು<br>ಪೂಜ್ಯಶ್ರೀ ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು<br>ಜಗದ್ಗುರು ವೀರಸಿಂಹಾಸನಮಠ, ಸುತ್ತೂರು<br>ಪೂಜ್ಯಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು<br>ಜ್ಞಾನಯೋಗಾಶ್ರಮ ವಿಜಾಪುರ<br>ಪೂಜ್ಯಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು<br>ಅಧ್ಯಕ್ಷರು, ಶಿವಯೋಗಮಂದಿರ ಸಂಸ್ಥೆ |
| ಪ್ರಾರ್ಥನೆ | : ಶಿವಯೋಗಮಂದಿರ ಸಂಸ್ಥೆಯ ವಟುಸಾಧಕರಿಂದ |
| ಸ್ವಾಗತ | : ಶ್ರೀ ಪಿ. ಸಿ. ಗದ್ದಿಗೌಡರ ಸಂಸದರು<br>ಅಧ್ಯಕ್ಷರು, ಶತಮಾನೋತ್ಸವ ಸ್ವಾಗತ ಸಮಿತಿ |
| ಪ್ರಸ್ತಾವನೆ | : ಶ್ರೀ ಗೊ. ರು. ಚನ್ನಬಸಪ್ಪ<br>ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು |
| ಉದ್ಘಾಟನೆ | : ಶ್ರೀಮತಿ ಸೋನಿಯಾಗಾಂಧಿ<br>ಅಧ್ಯಕ್ಷರು, ಅಖಿಲ ಭಾರತ ಕಾಂಗ್ರೆಸ್ ಸಮಿತಿ ಹಾಗೂ ಯು.ಪಿ.ಎ. |
| ಸ್ಮರಣ ಸಂಚಿಕೆ ಬಿಡುಗಡೆ | : ಶ್ರೀ ಬಿ. ಎಸ್. ಯಡಿಯೂರಪ್ಪ<br>ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ |
| ಮುಖ್ಯ ಅತಿಥಿಗಳು | : ಡಾ. ಎಂ. ವೀರಪ್ಪ ಮೊಯಿಲಿ<br>ಸನ್ಮಾನ್ಯ ಕೇಂದ್ರ ಕಾನೂನು ಸಚಿವರು, ದೆಹಲಿ<br>ಇವರಿಂದ 'ದೀಪ ಹಚ್ಚಿದ ದಾನಿಗಳು' ಗ್ರಂಥ ಬಿಡುಗಡೆ<br>ಶ್ರೀ ರಮೇಶ ಜಿಗಜಿಣಗಿ ಸಂಸದರು, ವಿಜಾಪುರ<br>ಶ್ರೀ ಎಂ. ವಿ. ರಾಜಶೇಖರನ್<br>ವಿಧಾನ ಪರಿಷತ್ ಸದಸ್ಯರು, ಮಾಜಿ ಕೇಂದ್ರ ಸಚಿವರು |
| ಅಧ್ಯಕ್ಷತೆ | : ಶ್ರೀ ಭೀಮಣ್ಣ ಖಂಡ್ರೆ<br>ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ (ರಿ) |
| ಆಶೀರ್ವಚನ | : ದಿವ್ಯ ಸಾನ್ನಿಧ್ಯ ವಹಿಸಿರುವ ಪೂಜ್ಯ ಶ್ರೀಗಳವರಿಂದ |
| ವಂದನಾರ್ಪಣೆ | : ಶ್ರೀ ವೀರಣ್ಣ ಚರಂತಿಮಠ, ಶಾಸಕರು<br>ಪ್ರಧಾನ ಕಾರ್ಯದರ್ಶಿ, ಶತಮಾನೋತ್ಸವ ಸ್ವಾಗತ ಸಮಿತಿ |
| ನಿರ್ವಹಣೆ | : ಡಾ. ಬಸವರಾಜ್ ಜಗಜಂಪಿ, ಬೆಳಗಾವಿ |

**ಮಹಾದಾಸೋಹ ಭಕ್ತಿಸೇವೆ**

ಶ್ರೀ ಎಚ್. ಆರ್. ರಂಗನಗೌಡರು, ಮಹಾದಾನಿಗಳು, ಹೊಸಪೇಟೆ

ಶ್ರೀ ದೀಪಕ್‌ಕುಮಾರಸಿಂಗ್, ದಿಲೀಪ್‌ಸಿಂಗ್, ಪ್ರವೀಣಸಿಂಗ್,

ಸಾಯಿಕೃಷ್ಣ ಮಿನರಲ್ ಪ್ರೈ. ಲಿ., ಮಹಾದಾನಿಗಳು, ಹೊಸಪೇಟೆ



ದಿನಾಂಕ ೦೯-೦೪-೨೦೧೦ ಶುಕ್ರವಾರ

ಮಧ್ಯಾಹ್ನ ೨-೦೦ ಗಂಟೆಗೆ

## ನೈಸರ್ಗಿಕ ಚಿಕಿತ್ಸಾ ಕೇಂದ್ರದ ಅಡಿಗಲ್ಲು ಸಮಾರಂಭ

ದಿವ್ಯ ಸಾನ್ನಿಧ್ಯ : ಪೂಜ್ಯಶ್ರೀ ಜಗದ್ಗುರು ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಜಗದ್ಗುರು ವೀರಸಿಂಹಾಸನಮಠ, ಸುತ್ತೂರು
ಪೂಜ್ಯಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳು
ಜ್ಞಾನಯೋಗಾಶ್ರಮ ವಿಜಾಪುರ
ಪೂಜ್ಯಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು
ಅಧ್ಯಕ್ಷರು, ಶಿವಯೋಗಮಂದಿರ ಸಂಸ್ಥೆ

ಅಧ್ಯಕ್ಷತೆ : ಶ್ರೀ ಸಿ. ಎಂ. ಉದಾಸಿ
ಸನ್ಮಾನ್ಯ ಲೋಕೋಪಯೋಗಿ ಸಚಿವರು

ಶಂಕುಸ್ಥಾಪನೆ : ಶ್ರೀ ಬಿ. ಎಸ್. ಯಡಿಯೂರಪ್ಪ
ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ

ಮುಖ್ಯ ಅತಿಥಿಗಳು : ಡಾ. ಎಂ. ವೀರಪ್ಪ ಮೊಯಿಲಿ
ಸನ್ಮಾನ್ಯ ಕೇಂದ್ರ ಕಾನೂನು ಸಚಿವರು, ದೆಹಲಿ
ಶ್ರೀ ಅರವಿಂದ ಲಿಂಬಾವಳಿ
ಸನ್ಮಾನ್ಯ ಉನ್ನತ ಶಿಕ್ಷಣ ಸಚಿವರು
ಶ್ರೀ ಗೋವಿಂದ ಕಾರಜೋಳ
ಸನ್ಮಾನ್ಯ ಸಣ್ಣ ನೀರಾವರಿ ಸಚಿವರು
ಶ್ರೀ ಜಿ. ಎಂ. ಸಿದ್ಧೇಶ್ವರ
ಸಂಸದರು ದಾವಣಗೆರೆ
ಶ್ರೀ ಪ್ರಲ್ಹಾದ ಜೋಶಿ
ಸಂಸದರು ಧಾರವಾಡ

ಗ್ರಂಥ ಬಿಡುಗಡೆ : ನ್ಯಾಯಮೂರ್ತಿ ಶಿವರಾಜ ಪಾಟೀಲ
ನಿವೃತ್ತ ನ್ಯಾಯಮೂರ್ತಿ ಸರ್ವೋಚ್ಚ ನ್ಯಾಯಾಲಯ
('ವೀರಶೈವ ಮಹಾಸಭೆ ನಡೆದು ಬಂದ ದಾರಿ' ಗ್ರಂಥ ಬಿಡುಗಡೆ)
ಶ್ರೀ ಎಂ. ಪಿ. ಪ್ರಕಾಶ್
ಮಾಜಿ ಉಪಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ
('ಶಿವಯೋಗ ಮಂದಿರ ಶತಸಂವತ್ಸರ' ಗ್ರಂಥ ಬಿಡುಗಡೆ)

ಆಶೀರ್ವಚನ : ಪರಮಪೂಜ್ಯರ ಆಶೀರ್ವಚನ

ವಂದನಾರ್ಪಣೆ : ಶ್ರೀ ಎಂ. ಕೆ. ಪಟ್ಟಣಶೆಟ್ಟಿ ಶಾಸಕರು
ಕಾರ್ಯಾಧ್ಯಕ್ಷರು, ಶತಮಾನೋತ್ಸವ ಸ್ವಾಗತ ಸಮಿತಿ

ನಿರ್ವಹಣೆ : ಡಾ. ಗುರುದೇವಿ ಹುಲೆಪ್ಪನವರಮಠ ಬೆಳಗಾವಿ

ದಿನಾಂಕ ೦೯-೦೪-೨೦೧೦ ಶುಕ್ರವಾರ

ಮಧ್ಯಾಹ್ನ ೪-೦೦ ಗಂಟೆಗೆ



## ಶೈಕ್ಷಣಿಕ ಸಮಾವೇಶ

ದಿವ್ಯ ಸಾನ್ನಿಧ್ಯ : ಪೂಜ್ಯಶ್ರೀ ಜಗದ್ಗುರು ಡಾ. ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು
ತರಳಬಾಳು ಬೃಹನ್ಮಠ, ಸಿರಿಗೆರೆ

ಪೂಜ್ಯಶ್ರೀ ಡಾ. ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ ಸಂಸ್ಥಾನ ಭಾಲ್ಕಿ,

ಪೂಜ್ಯಶ್ರೀ ಸಿದ್ಧರಾಮ ಮಹಾಸ್ವಾಮಿಗಳು ರುದ್ರಾಕ್ಷಿಮಠ, ನಾಗನೂರು-ಬೆಳಗಾವಿ.

ಪೂಜ್ಯಶ್ರೀ ಗುರುಸಿದ್ಧ ಮಹಾಸ್ವಾಮಿಗಳು ಕಾರಂಜಿಮಠ, ಬೆಳಗಾವಿ.

ಪೂಜ್ಯಶ್ರೀ ಗುರುಪಾದಲಿಂಗ ಮಹಾಸ್ವಾಮಿಗಳು ವಿರಕ್ತಮಠ, ಮುತ್ನಾಳ-ಬೆಟಬಲಾದ

ನೇತೃತ್ವ : ಪೂಜ್ಯಶ್ರೀ ಡಾ. ಶರಣಬಸಪ್ಪ ಅಪ್ಪ ಶ್ರೀ ಶರಣಬಸವೇಶ್ವರ ಸಂಸ್ಥಾನ, ಗುಲಬುರ್ಗಾ

ಉದ್ಘಾಟನೆ : ಡಾ. ಪ್ರಭಾಕರ ಕೋರೆ ರಾಜ್ಯಸಭಾ ಸದಸ್ಯರು
ಕಾರ್ಯಾಧ್ಯಕ್ಷರು, ಕೆ.ಎಲ್.ಇ.ಸಂಸ್ಥೆ, ಬೆಳಗಾವಿ

ಅಧ್ಯಕ್ಷತೆ : ಡಾ. ಶಾಮನೂರು ಶಿವಶಂಕರಪ್ಪ ಶಾಸಕರು
ಕಾರ್ಯದರ್ಶಿ, ಬಾಪೂಜಿ ವಿದ್ಯಾಸಂಸ್ಥೆ, ದಾವಣಗೆರೆ

ಮುಖ್ಯ ಅತಿಥಿಗಳು : ಶ್ರೀ ವೀರಣ್ಣ ಮತ್ತಿಕಟ್ಟಿ ಸಭಾಪತಿಗಳು, ಕರ್ನಾಟಕ ವಿಧಾನಪರಿಷತ್
('ಸುಕುಮಾರ ಬೆಳಗು' ಗ್ರಂಥ ಬಿಡುಗಡೆ)

ಡಾ. ಎನ್. ಪ್ರಭುದೇವ್ ಉಪಕುಲಪತಿಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಉಪನ್ಯಾಸ : ಡಾ. ಎಸ್. ಆರ್. ಗುಂಜಾಳ ಗ್ರಂಥಾಲಯ ವಿಜ್ಞಾನ ಪ್ರಾಧ್ಯಾಪಕರು (ನಿ.), ಧಾರವಾಡ

ವಿಷಯ : 'ಲಿಂಗಾಯತ ಸಮಾಜದ ಶಿಕ್ಷಣ ಸೇವೆ'

ಉಪನ್ಯಾಸ : ಡಾ. ವೀರಣ್ಣ ರಾಜೂರ ಸಂಯೋಜಕರು.
ಶ್ರೀ ಬಸವೇಶ್ವರ ಅಧ್ಯಯನಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ವಿಷಯ : 'ಲಿಂಗಾಯತ ಸಮಾಜದ ಶಿಕ್ಷಣ ತಜ್ಞರು'

ಸನ್ಮಾನಿತರು : ಶ್ರೀ ಶಿವಾನಂದ ಕೌಜಲಗಿ ಮಾಜಿ ಸಚಿವರು
ಅಧ್ಯಕ್ಷರು, ಕೆ.ಎಸ್.ಇ. ಸಂಸ್ಥೆ, ಬೆಳಗಾವಿ

ಶ್ರೀ ಎಂ. ಬಿ. ಪಾಟೀಲ ಶಾಸಕರು
ಅಧ್ಯಕ್ಷರು, ಬಿ.ಎಲ್.ಡಿ.ಇ.ಸಂಸ್ಥೆ, ಬಿಜಾಪುರ

ಶ್ರೀ ವೀರಣ್ಣ ಚರಂತಿಮಠ ಶಾಸಕರು
ಕಾರ್ಯಾಧ್ಯಕ್ಷರು, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟೆ

ಶ್ರೀ ಎಸ್. ಇಂದುಶೇಖರ ಅಧ್ಯಕ್ಷರು, ವೀರಶೈವ ವಿದ್ಯಾವರ್ಧಕ ಸಂಘ, ಬಳ್ಳಾರಿ

ಶ್ರೀ ಶಶಿಲ ಜಿ. ನಮೋಶಿ ಎಂ.ಎಲ್.ಸಿ.
ಅಧ್ಯಕ್ಷರು, ಹೈದರಾಬಾದ ಕರ್ನಾಟಕ ಶಿಕ್ಷಣ ಸಂಸ್ಥೆ, ಗುಲಬರ್ಗಾ

ಶ್ರೀ ಈಶ್ವರ ಖಂಡ್ರೆ ಶಾಸಕರು, ಅಧ್ಯಕ್ಷರು, ಶಾಂತಿವರ್ಧಕ ಶಿಕ್ಷಣ ಸಂಸ್ಥೆ, ಭಾಲ್ಕಿ

ನಿರ್ವಹಣೆ : ಡಾ. ಎಸ್. ಶಿವಾನಂದ ಹೊಸಪೇಟೆ.

ಪ್ರೊ. ಸಿ. ಜಿ. ಮಠಪತಿ ಸಿಪ್ಪರಗಿ (ಬೆಳಗಾವಿ)



ದಿನಾಂಕ ೦೯-೦೪-೨೦೧೦ ಶುಕ್ರವಾರ | ಸಾಯಂಕಾಲ ೬-೦೦ ಗಂಟೆಗೆ

## ವಿಶೇಷೋಪನ್ಯಾಸ

ದಿವ್ಯ ಸಾನ್ನಿಧ್ಯ : ಪೂಜ್ಯಶ್ರೀ ಮಲಯ ಶಾಂತಮುನಿ ಶಿವಾಚಾರ್ಯ ಮಹಾಸ್ವಾಮಿಗಳು
ಮೇಲಣಗವಿ ವೀರಸಿಂಹಾಸನಮಠ, ಶಿವಗಂಗೆ
ಪೂಜ್ಯಶ್ರೀ ಡಾ. ಕೊಟ್ಟೂರು ಮಹಾಸ್ವಾಮಿಗಳು ಕಲ್ಮಠ ಗಂಗಾವತಿ
ಪೂಜ್ಯಶ್ರೀ ಸಿದ್ಧಮಲ್ಲ ಶಿವಾಚಾರ್ಯ ಮಹಾಸ್ವಾಮಿಗಳು ಕಲ್ಮಠ, ಚಿಂಚನಸೂರು
ಪೂಜ್ಯಶ್ರೀ ಗುರುಪಾದ ಸ್ವಾಮಿಗಳು ಗುಳಗಂಜಿಮಠ, ರೋಣ.

ಅಧ್ಯಕ್ಷತೆ : ಶ್ರೀ ಚಂದ್ರಕಾಂತ ಬೆಲ್ಲದ ಶಾಸಕರು, ಧಾರವಾಡ
ಅಧ್ಯಕ್ಷರು, ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು

ಉಪನ್ಯಾಸ : ಶ್ರೀಮತಿ ಚನ್ನಕ್ಕ ಪಾವಟೆ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ವಿಷಯ : 'ವೀರಶೈವ ಮಹಾಸಭೆ ನಡೆದು ಬಂದ ದಾರಿ'

ಮುಖ್ಯ ಅತಿಥಿಗಳು : ಶ್ರೀ ಎ. ಎಸ್. ಸದಾಶಿವಯ್ಯ IFS, (Retd.)
ಅಧ್ಯಕ್ಷರು, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಬೆಂಗಳೂರು

ಸನ್ಮಾನಿತರು : ಶ್ರೀ ಎಂ. ಸಚ್ಚಿದಾನಂದಮೂರ್ತಿ IAS (Retd)
ಶ್ರೀ ಎಂ. ಸುಬ್ರಮಣ್ಯಂ IAS (Retd)
ಶ್ರೀ ಬಿ. ಎಸ್. ಮುದ್ದಪ್ಪ IAS (Retd) ಕೋಶಾಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ
ಶ್ರೀ ಎಸ್. ಬಿ. ಮುದ್ದಪ್ಪ IAS (Retd) ನಿವೃತ್ತ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ
ಉಪಾಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ(ರಿ)
ಶ್ರೀ ಬಿ. ಎಸ್. ಪಾಟೀಲ IAS (Retd) ನಿವೃತ್ತ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ
ಶ್ರೀ ಹೆಚ್. ಕೆ. ಶಿವಾನಂದ IAS (Retd) ಅಧ್ಯಕ್ಷರು, ಗುಬ್ಬಿ ತೋಟದಪ್ಪ ಚಾರಿಟೇಬಲ್ ಟ್ರಸ್ಟ್
ಶ್ರೀ ಬಿ. ಎನ್. ಬೆಟಕೆರೂರ IAS (Retd)
ಕಾರ್ಯನಿರ್ವಾಹಕ ಕಾರ್ಯದರ್ಶಿ, ಜೆ.ಎಸ್.ಎಸ್.,ಮಹಾವಿದ್ಯಾಪೀಠ, ಮೈಸೂರು
ಶ್ರೀ ಬಿ. ಎ. ಕಟ್ಟಿ IAS (Retd)
ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಳಗಾವಿ ಜಿಲ್ಲಾ ಘಟಕ
ಶ್ರೀ ಕೋಟಿಲಿಂಗನಗೌಡ IAS (Retd)
ಶ್ರೀ ಈಶ್ವರಪ್ಪ IAS (Retd)
ಶ್ರೀ ಬಿ. ಹೆಚ್. ಮಂಜುನಾಥ IAS (Retd)
ಶ್ರೀ ಸದಾಶಿವಯ್ಯ IAS (Retd)
ಶ್ರೀ ಎಲ್. ರೇವಣಸಿದ್ಧಯ್ಯ IPS (Retd)
ಶ್ರೀ ಎಂ. ಡಿ. ಮಹದೇವ IFS (Retd)
ಶ್ರೀ ಜಿ. ಎನ್. ಬಿಲಗನ್ನವರ IFS (Retd)
ಶ್ರೀ ಎಸ್. ಪರಮೇಶ್ವರಪ್ಪ IFS (Retd)
ಶ್ರೀ ಬಿ. ಕೆ. ಜಗದೀಶ್‌ಚಂದ್ರ IFS (Retd)
ಶ್ರೀ ಕೆ. ಎನ್. ಜಯಲಿಂಗಪ್ಪ ಮಾಜಿ ಅಧ್ಯಕ್ಷರು, ಎಫ್.ಕೆ.ಸಿ.ಸಿ.ಐ.

ನಿರ್ವಹಣೆ : ಶ್ರೀ ಕುಮಾರದೇವರು ರಾಜೂರು ಪ್ರೊ. ಶ್ರೀಕಾಂತ ಶಾನವಾಡ ಬೆಳಗಾವಿ

ಪ್ರಾಯೋಜಕರು : ಶ್ರೀ ಜವಳಗೇರಿ ವೆಂಕಟರಾವ್ ನಾಡಗೌಡ ಶಾಸಕರು, ಸಿಂಧನೂರು

ದಿನಾಂಕ ೦೯-೦೪-೨೦೧೦ ಶುಕ್ರವಾರ

ಸಾಯಂಕಾಲ ೭-೦೦ ಗಂಟೆಗೆ

## ಸಾಂಸ್ಕೃತಿಕ ಕಾರ್ಯಕ್ರಮಗಳು

ದಿವ್ಯ ಸಾನ್ನಿಧ್ಯ : ಪದ್ಮಭೂಷಣ ಡಾ. ಪುಟ್ಟರಾಜ ಕವಿ ಗವಾಯಿಗಳವರು
ವೀರೇಶ್ವರ ಪುಣ್ಯಾಶ್ರಮ, ಗದಗ

ಉದ್ಘಾಟನೆ : ನಾಡೋಜ ಡಾ. ಏಣಗಿ ಬಾಳಪ್ಪ ಬೆಳಗಾವಿ

ಅಧ್ಯಕ್ಷತೆ : ಶ್ರೀ ದೇವರಾಯ ನಾಡೇಪಲ್ಲಿ ಉಪಾಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ

ಮುಖ್ಯ ಅತಿಥಿಗಳು : ಶ್ರೀ ಲಿಂಗನಗೌಡ ಮಲಹಾರ ಕಾರಡ್ಡಿ ಯಾದಗಿರಿ
ಉಪಾಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭಾ
ಶ್ರೀ ಜಿ. ಎಸ್. ಪಾಟೀಲ ಮಾಜಿ ಶಾಸಕರು ರೋಣ.
ಶ್ರೀ ಕೆ. ಎನ್. ಪುಟ್ಟಬುದ್ಧಿ ಮೈಸೂರು ಕಾರ್ಯದರ್ಶಿ, ಅಖಿಲ ಭಾರತ ವೀರಶೈವ ಮಹಾಸಭಾ
ಶ್ರೀ ಎನ್.ಬಸವರಾಜ ಗುಡಗೇರಿ ಕಲಾವಿದರು
ಶ್ರೀಮತಿ ಬಿ. ಜಯಶ್ರೀ ರಾಜ್ಯಸಭಾ ಸದಸ್ಯರು ಗಾಯಕರು ಮತ್ತು ಕಲಾವಿದರು

ಸಂಚಾಲಕರು : ಡಾ. ಬಸವರಾಜ ಮಲಶೆಟ್ಟಿ ಹೊಸಪೇಟೆ

## ಶತಮಾನೋತ್ಸವದ ಸಂಸ್ಮರಣ ಗ್ರಂಥಗಳ ಬಿಡುಗಡೆ

**"ಬೆಳಗಿನೊಳಗಣ ಬೆಳಗು"**
ಪ್ರಧಾನ ಸಂಪಾದಕರು : ಡಾ. ಬಿ. ಕೆ. ಹಿರೇಮಠ, ಬಾಗಲಕೋಟ
ಬಿಡುಗಡೆ : ಪೂಜ್ಯಶ್ರೀ ಸಿದ್ಧರಾಮ ಮಹಾಸ್ವಾಮಿಗಳು, ರುದ್ರಾಕ್ಷಿಮಠ ನಾಗನೂರು-ಬೆಳಗಾವಿ

**"ವಾರಿಧಿ ಮೈದೆಗೆದರೆ"**
ಸಂಪಾದಕರು : ಡಾ. ಎಸ್. ಶಿವಾನಂದ, ಹೊಸಪೇಟೆ.
ಬಿಡುಗಡೆ : ಪೂಜ್ಯಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಸುವರ್ಣಗಿರಿ ವಿರಕ್ತಮಠ ಒಳಬಳ್ಳಾರಿ.

**"ಶಿವಯೋಗಮಂದಿರ ಕಿರಣ"**
ಸಂಪಾದಕರು : ಶ್ರೀ ಕುಮಾರ ದೇವರು, ರಾಜೂರು.
ಬಿಡುಗಡೆ : ಪೂಜ್ಯಶ್ರೀ ರೇವಣಸಿದ್ಧ ಮಹಾಸ್ವಾಮಿಗಳು, ಶಾಖಾಶಿವಯೋಗಮಂದಿರ, ಕಪನಳ್ಳಿ

**"ಶ್ರೀ ಕುಮಾರಶಿವಯೋಗಿಗಳು"**
ದ್ಯಾಂಪುರ ಚನ್ನಕವಿ ವಿರಚಿತ ಶ್ರೀ ಕುಮಾರೇಶ್ವರ ಪುರಾಣದ ಗದ್ಯಾನುವಾದ
ಸಂಪಾದಕರು : ಡಾ. ಬಿ. ವಿ. ಮಲ್ಲಾಪುರ, ಧಾರವಾಡ.
ಬಿಡುಗಡೆ : ಪೂಜ್ಯಶ್ರೀ ಬೋದೀಶ್ವರ ಮಹಾಸ್ವಾಮಿಗಳು, ಸಂಸ್ಥಾನಮಠ ಪೋಸಳ್ಳಿ.

**"ಮಹಾತೇಜೋಮೂರುತಿ ಪೂಜ್ಯ ಸದಾಶಿವ ಮಹಾಸ್ವಾಮಿಗಳು"**
ಸಂಪಾದಕರು : ಡಾ. ಪಂಚಾಕ್ಷರಿ ಹಿರೇಮಠ, ಧಾರವಾಡ.
ಬಿಡುಗಡೆ : ಪೂಜ್ಯಶ್ರೀ ಶಿವಬಸವ ಮಹಾಸ್ವಾಮಿಗಳು, ವಿರಕ್ತಮಠ ಶೇಡಗಿ.

### ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು

ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳು ಅಖಿಲ ಭಾರತ ವೀರಶೈವ ಮಹಾಸಭೆಯನ್ನು ಸ್ಥಾಪಿಸಿ ಅದರ ೭-೮ ಅಧಿವೇಶನಗಳಲ್ಲಿ ಪ್ರತ್ಯಕ್ಷ ಪಾಲ್ಗೊಂಡು ಮಾಡಿ ಜನದಲ್ಲಿ ಜಾಗೃತಿಯನ್ನುಂಟು ಮಾಡಿದರು. ಧಾರ್ಮಿಕ ಕಾರ್ಯಗಳಲ್ಲಿ ಅವರು ಅತ್ಯಂತ ಉತ್ಸುಕರಾದ್ದರಿಂದ ಮಹಾಸಭೆಯ ಜಾಗೃತಿಯ ಮೂಲಕ ಶಿವಯೋಗಮಂದಿರವೆಂಬ ಮಹತ್ವದ ಸಂಸ್ಥೆಯನ್ನು ಸ್ಥಾಪಿಸಿದರು. ಇವೆರಡು ಅವರು ಮಾಡಿದ ಐತಿಹಾಸಿಕ ಕಾರ್ಯಗಳಾಗಿವೆ.

– ಮಹಾಪಿತಾಮಹ ಡಾ. ಫ. ಗು. ಹಳಕಟ್ಟಿ



ದಿನಾಂಕ ೧೦-೦೪-೨೦೧೦ ಶನಿವಾರ ‍ ‍ ‍ ‍ ಬೆಳಿಗ್ಗೆ ೧೦-೦೦ ಗಂಟೆಗೆ

## ಸಾಹಿತ್ಯ ಸಮಾವೇಶ

ದಿವ್ಯ ಸಾನ್ನಿಧ್ಯ : ಪೂಜ್ಯಶ್ರೀ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು
ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ
ಪೂಜ್ಯಶ್ರೀ ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು ಬೆಕ್ಕಿನ ಕಲ್ಮಠ, ಶಿವಮೊಗ್ಗ
ಪೂಜ್ಯಶ್ರೀ ಡಾ. ಅಭಿನವ ಕುಮಾರ ಚೆನ್ನಬಸವ ಮಹಾಸ್ವಾಮಿಗಳು ಹಿರೇಮಠ, ಜಮಖಂಡಿ
ಪೂಜ್ಯಶ್ರೀ ಚನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳು ಚನ್ನಬಸವೇಶ್ವರ ಸಂಸ್ಥಾನಮಠ, ಹಾರಕೂಡ
ಪೂಜ್ಯಶ್ರೀ ಡಾ. ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳು ಚರಂತಿಮಠ, ಕೆರೂರ

ಉದ್ಘಾಟನೆ : ನಾಡೋಜ ಡಾ. ಚನ್ನವೀರ ಕಣವಿ ಖ್ಯಾತ ಕವಿಗಳು ಧಾರವಾಡ.

ಅಧ್ಯಕ್ಷತೆ : ಡಾ. ಎ. ಮುರಿಗೆಪ್ಪ ಉಪಕುಲಪತಿಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ

ಮುಖ್ಯ ಅತಿಥಿಗಳು : ಶ್ರೀ ಉಮೇಶ್ ವಿ. ಕತ್ತಿ ತೋಟಗಾರಿಕೆ ಮತ್ತು ಬಂದೀಖಾನೆ ಸಚಿವರು, ಕರ್ನಾಟಕ ಸರ್ಕಾರ
ಶ್ರೀ ಸಿ. ಸಿ. ಪಾಟೀಲ ಶಾಸಕರು, ನರಗುಂದ ಮಾನ್ಯ ಮುಖ್ಯಮಂತ್ರಿಗಳ ಸಂಸದೀಯ ಕಾರ್ಯದರ್ಶಿಗಳು

ಉಪನ್ಯಾಸ : ಡಾ. ಗುರುಲಿಂಗ ಕಾಪಸೆ ಹಿರಿಯ ವಿದ್ವಾಂಸರು. ಧಾರವಾಡ.

ವಿಷಯ : 'ವಿಶ್ವ ಸಾಹಿತ್ಯಕ್ಕೆ ವೀರಶೈವರ ಕೊಡುಗೆ'

ಉಪನ್ಯಾಸ : ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯ ಮಾಜಿ ಅಧ್ಯಕ್ಷರು. ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

ವಿಷಯ : 'ವಚನ ಸಾಹಿತ್ಯದ ವಿಶ್ವ ಸಂದೇಶ'

ಗ್ರಂಥ ಬಿಡುಗಡೆ : ಮಹಾಜಂಗಮ ಹಾನಗಲ್ಲ ಕುಮಾರ ಶಿವಯೋಗಿಗಳು : ಜೀವನ ಮತ್ತು ಸಾಧನೆ
ಲೇ: ಡಾ. ಜಿ. ಕೆ. ಹಿರೇಮಠ

ಅತಿಥಿಗಳು : ಶ್ರೀ ಚಂದ್ರಕಾಂತ ಭಾವುರಾವ್ ಖೈರೆ ಸಂಸದರು, ಔರಂಗಾಬಾದ್, ಮಹಾರಾಷ್ಟ್ರ
ಶ್ರೀ ಪ್ರಕಾಶ ಹುಕ್ಕೇರಿ ಶಾಸಕರು, ಚಿಕ್ಕೋಡಿ
ಶ್ರೀ ವಿ. ಎಸ್. ಪಾಟೀಲ ಶಾಸಕರು, ಯಲ್ಲಾಪುರ
ಶ್ರೀ ಶಂಕರಪಾಟೀಲ ಮುನೇನಕೊಪ್ಪ ಶಾಸಕರು, ನವಲಗುಂದ
ಶ್ರೀ ಸಿದ್ಧನಗೌಡ ಚಿಕ್ಕನಗೌಡ್ರ ಶಾಸಕರು, ಕುಂದಗೋಳ
ಶ್ರೀ ಸುರೇಶಗೌಡ ಪಾಟೀಲ ಶಾಸಕರು, ಬ್ಯಾಡಗಿ
ಶ್ರೀ ಜಿ. ಶಿವಣ್ಣ ಶಾಸಕರು, ರಾಣೇಬೆನ್ನೂರು
ಶ್ರೀ ಬಿ. ಸಿ. ಪಾಟೀಲ ಶಾಸಕರು, ಹಿರೇಕೆರೂರು
ಶ್ರೀ ಶ್ರೀಶೈಲಪ್ಪ ವಿ. ಬಿದರೂರು ಶಾಸಕರು, ಗದಗ
ಶ್ರೀ ಕಳಕಪ್ಪ ಬಂಡಿ ಶಾಸಕರು, ರೋಣ
ಶ್ರೀ ದಿಲೀಪ್ ಗಂಗಾಧರ ಸೋಪಾಲ್ ಶಾಸಕರು, ಬಾರ್ಸಿ, ಮಹಾರಾಷ್ಟ್ರ
ಶ್ರೀ ವಿನಯಕುಮಾರ ದೇಶಮುಖ್ ಶಾಸಕರು, ಸೊಲ್ಲಾಪುರ, ಮಹಾರಾಷ್ಟ್ರ
ಶ್ರೀ ರಮೇಶ ಭೂಸನೂರು ಶಾಸಕರು, ಸಿಂದಗಿ.
ಶ್ರೀ ಸಿ. ಎಸ್. ನಾಡಗೌಡ ಶಾಸಕರು, ಮುದ್ದೇಬಿಹಾಳ
ಶ್ರೀ ಎ. ಎಸ್. ಪಾಟೀಲ ನಡಹಳ್ಳಿ ಶಾಸಕರು, ದೇವರಹಿಪ್ಪರಗಿ
ಶ್ರೀ ಸಿದ್ದು ಸವದಿ ಶಾಸಕರು, ತೇರದಾಳ
ಶ್ರೀ ಸಿದ್ಧರಾಮಪ್ಪ ಪಾಟೀಲ ಶಾಸಕರು, ಅಕ್ಕಲಕೋಟೆ, ಮಹಾರಾಷ್ಟ್ರ
ಶ್ರೀ ರಾಹುಲ ಬೋಂದ್ರೆ ಶಾಸಕರು, ಚಿಕಳಿ, ಮಹಾರಾಷ್ಟ್ರ
ಶ್ರೀ ಮೋಹನ ಲಿಂಬಿಕಾಯಿ ಎಂ.ಎಲ್.ಸಿ. ಹುಬ್ಬಳ್ಳಿ.

ನಿರ್ವಹಣೆ : ಶ್ರೀ ಬಸವರಾಜ ಭಗವತಿ ಬಾಗಲಕೋಟ ‍ ಪ್ರೊ. ಎ. ತಿಮ್ಮನಗೌಡರು, ಬಳ್ಳಾರಿ.

ಮಹಾದಾಸೋಹ ಭಕ್ತಿಸೇವೆ : ಡಾ. ಶಾಮನೂರು ಶಿವಶಂಕರಪ್ಪನವರು ಶಾಸಕರು ಮತ್ತು ಕುಟುಂಬ ವರ್ಗ, ಮಹಾದಾನಿಗಳು, ದಾವಣಗೆರೆ

